# ಮುದ್ರಾ ಮಂಜೂಷವು

# MUDRA MANJUSHA

OR THE STORY OF

## CHANDRAGUPTA AND CHANAKYA

REVISED AND EDITED

BY THE LATE

JOHN STEPHENSON

WESLEYAN MISSIONARY

FOURTH EDITION, REVISED AND CORRECTED

Mysore:

THE WESLEYAN MISSION PRESS

1912

## PREFACE TO THE FIRST EDITION

THIS work is a translation, by Kempunārāyaṇa, of the Sanskrit Drama, variously entitled Mudra Rākshasa, Mudra Manjūsha, and the History of Chandragupta and Chānakya.

It has been selected as a Text Book for young men aspiring to University honours, and, in accordance with a recent minute of Government on the unsatisfactory character of native literature, really objectionable parts have been omitted, extravagances sobered down, and tedious details condensed, so as to utilize a really valuable narrative.

The History consists of a well-arranged plot to secure the Kingdom of Magadha to Chandragupta, by the overthrow of the rightful heirs, which is eventually accomplished through the intrigues of the Brahman Chānakya.

As a literary work the style is good, the varied incidents interesting, abounding in references to Hindu customs, and the book may be read with advantage by Europsans as well as native students.

TUMKUR, J. S.

*January, 1873.*

# CONTENTS

---

# ಮುದ್ರಾಮಂಜೂಷವು

---

## ಶ್ಲೋಕ

ಮಹಃಪಾಯಾನ್ಮಹೀಶೂರ | ಕೃಷ್ಣರಾಜೇಪ್ಸಿತಾರ್ಥದಂ ||
ಮಹಾಬಲಾದ್ರಿನಿಲಯಂ | ಮಹೇಶಾರ್ಧಾಂಗರೂಪಿವಃ ||

---

### ಅವತರಣಿಕೆ

ಸಕಲ ಶ್ರೇಯಸ್ಸನ್ನೂ ಅಪೇಕ್ಷಿಸುವ ಅರಸರೂ ಮಂತ್ರಾಲೋಚನಾಪೇಕ್ಷಿಗಳಾದ ಮಂತ್ರಿಗಳೂ ಅವಶ್ಯವಾಗಿ ವಿಚಾರಿಸಿ, ತಿಳಿದು, ನಡೆಯುವುದಕ್ಕೆ ಯೋಗ್ಯವಾಗಿರುವಂತೆ, ಕಾಮಂದಕಾದಿಮುನಿಗಳಿಂದ ಹೇಳಲ್ಪಟ್ಟ ದಂಡನೀತಿ ಶಾಸ್ತ್ರಪ್ರಯೋಗದಲ್ಲಿ ಪ್ರವೀಣನಾದ ಚಾಣಕ್ಯನೆಂಬ ಬ್ರಾಹ್ಮಣಶ್ರೇಷ್ಠನು ತನಗೆ ಅವಮಾನವನ್ನು ಮಾಡಿದ ನವನಂದರನ್ನು ಕಪಟದಿಂದ ನಿಗ್ರಹಿಸಿ, ಶರಣಾಗತನಾದ ಚಂದ್ರಗುಪ್ತನಿಗೆ ಆ ನಂದರಾಜ್ಯಾಧಿಪತ್ಯವನ್ನು ಉಂಟುಮಾಡಿದನೆಂದು, ಸಂಕ್ಷೇಪವಾಗಿ ಪುರಾಣದಲ್ಲಿ ಹೇಳಿದ ಕಥೆಯನ್ನು ಈಗ ಕೆಂಪುನಾರಾಯಣನೆಂಬ ಕವಿಯು ಕರ್ಣಾಟ ಭಾಷೆಯಿಂದ ವಿಸ್ತರಿಸಿ, ಆ ಇದಕ್ಕೆ ಮುದ್ರಾಮಂಜೂಷವೆಂಬ ಪೆಸರಿಟ್ಟು ಪೇಳ್ವೆನದೆಂತೆನೆ.

# ಕಥಾ ಪ್ರಾರಂಭವು

## ಪ್ರಥಮಾಶಯ ಪ್ರಾರಂಭವು

### ನಂದೋತ್ಪತ್ತಿ

ಈ ಧರಣೀ ಮಂಡಲದೊಳಿರ್ಪ ಐವತ್ತಾರು ದೇಶಂಗಳೊಳ್ ಬಹು ರಮಣೀಯವೂ ಸಕಲ ವಿದ್ವಜ್ಜನಶೋಭಿತವೂ ಆದ ಗೌಡದೇಶದೊಳ್ ಪ್ರವಹಿಸುತ್ತಿರುವ ಗಂಗಾನದೀತೀರದೊಳ್ ಸರ್ವಸಂಪತ್ಸಮೃದ್ಧವಾದ ಪಾಟಲೀಪುರಮೆಂಬುದೊಂದು ಪಟ್ಟಣಂ ಕಂಗೊಳಿಸುತ್ತಿರ್ಪುದು. ಆ ನಗರಕ್ಕೆ ಕುಸುಮಪುರಮೆಂದೂ ಪೆಸರುಂಟು.

ಆ ಪುರದೊಳ್, ಚಂದ್ರವಂಶ ಪರಂಪರಾಪ್ರಾಪ್ತನಾಗಿ ಬಂದ ಸರ್ವಾರ್ಥಸಿದ್ಧಿಯೆಂಬೋರ್ವರಾಯಂ ರತ್ನಸಿಂಹಾಸನಾರೂಢನಾಗಿ ಧರ್ಮದಿಂ ರಾಜ್ಯಭರಣಮಂ ಗೆಯ್ಯುತ್ತಿರ್ದಂ.

ಈ ರಾಯಂಗೆ ಸಕಲ ವಿದ್ಯಾಭ್ಯಾಸದಿಂದತಿಸೂಕ್ಷ್ಮಮಾದ ಬುದ್ಧಿಯುಳ್ಳ ವಕ್ರನಾಸನೆಂಬವನೇ ಮೊದಲಾದ ಅಷ್ಟಮಂತ್ರಿಗಳಿರ್ಪರು ; ಅವರೊಳ್ ಸಂಧಿವಿಗ್ರಹಿಯಾದ ಅಮಾತ್ಯರಾಕ್ಷಸನೆಂಬುವನು ಯಾವಾಗಲೂ ಆ ರಾಯಂಗೆ ಶುಭವನ್ನೇ ಮಾಡುತ್ತಿರ್ಪನು.

ಆ ರಾಯಂ ಸಿಂಹಬಲನೇ ಮುಂತಾದ ಅಷ್ಟಸೇನಾನಾಯಕರಿಂ ರಕ್ಷಿತಮಾದ ಚತುರಂಗಸೇನೆಗಳಿಂ ಪರಿವೃತನಾಗಿ ಸಕಲ ರಾಜ್ಯಭಾರಮಂ ಅಮಾತ್ಯರಾಕ್ಷಸನಲ್ಲಿರಿಸಿ, ಕೃತಕೃತ್ಯನಾಗಿ ತನ್ನ ಅಂತಃಪುರ ಸ್ವಾಮಿನಿಯಾದ ಸುನಂದಾದೇವಿಯೆಂಬ ಪಟ್ಟಮಹಿಷಿಯೊಡನೆಯುಂ, ರತಿ ದೇವಿಯಂತೆ ಪರಮಸೌಂದರ್ಯಶಾಲಿನಿಯೂ ಬಹು ಪ್ರೇಮಾಸ್ಪದಳೂ ಆಗಿರ್ಪ ಮುರಾದೇವಿಯೆಂಬ ಸಾಮಾನ್ಯಸ್ತ್ರೀಯೊಡನೆಯುಂ, ಭೋಗಾಸಕ್ತನಾಗಿ ಸುಖದಿಂದಿರುತ್ತಿರ್ದಂ.

ಅಮಾತ್ಯರಾಕ್ಷಸನೋ ಎಂದೊಡೆ, ತನ್ನ ಪ್ರಜ್ಞಾಬಲದಿಂ ಅನೇಕ ದೇಶದ ಅರಸರಂ ಜಯಿಸಿ, ಕೆಲವು ನಾಡಿನ ಅರಸರೊಡನೆ ಸ್ನೇಹದಿಂದಲೂ ಕೆಲವರೊಳ್

ಉದಾಸೀನತೆಯಿಂದಲೂ ಇರ್ದು, ಸುನೀತಿಯಿಂ ಪ್ರಜಾಪರಿಪಾಲನಂಗೆಯ್ಯುತ್ತ, ರಾಜ್ಯ ಕೋಶಂಗಳನ್ನಭಿವರ್ಧಿಸುತ್ತ, ಸರ್ವಾರ್ಥಸಿದ್ಧಿಯಿಂ ಸಕಲ ಸಾಮಂತ ರಾಜಕಿರೀಟ ಖಚಿತ ರತ್ನ ಪ್ರಭಾಸೀರಾಜಿತ ಚರಣಯುಗಳನನ್ನಾಗಿಮಾಡಿ, ಸುಖದಿಂ ಪೋಷಿಸುತ್ತಿರ್ದಂ.

ಇಂತಪ್ಪಾರಾಯಂ ತನಗೆ ಮಕ್ಕಳಿಲ್ಲದೆ, ಚಿಂತಾಕ್ರಾಂತನಾಗಿರ್ಪಲ್ಲಿ, ಬಂದಾನೊಂದು ದಿನಂ ದ್ವಾರಪಾಲಕಂ ರಾಯನ ಚರಣಸನ್ನಿಧಿಯನ್ನೈದಿ, ಸಾಷ್ಟಾಂಗಪ್ರಣಾಮಂಗೈದು—ಸ್ವಾಮಿ, ಸೂರ್ಯನಂತೆ ಮಹಾ ತೇಜಸ್ವಿಗಳಾದ ವೀತಿಹೋತ್ರರೆಂಬ ಮುನಿಶ್ರೇಷ್ಠರ್ ಈರ್ವರ್ಶಿಷ್ಯರೊಡಗೂಡಿ ಬಂದು, ನನ್ನಂ ಕುರಿತು ತಮ್ಮ ಆಗಮನವಂ ರಾಜಸನ್ನಿಧಿಯೊಳ್ ಅರುಹೆಂದು ಪೇಳಲು; ಆ ಮಹಾತ್ಮರ ಮಾತನ್ನುಲ್ಲಂಘಿಸಲಾಗದೆಂದು ಶೀಘ್ರದಿಂ ಸನ್ನಿಧಿಯನ್ನೈದಿ ಬಿನ್ನವಿಸಿದೆನು. ಮುಂದಾಣತಿಯಾದಂತೆ ನಡೆವೆನೆನಲಾರಾಯಂ ಕಂಚುಕಿಯ ವಾಕ್ಯಮಂ ಕೇಳ್ದು, ಪರಮ ಸಂತೋಷಭರಿತನಾಗಿ ಸಿಂಹಾಸನದಿಂ ಝುಗ್ಗನೆದ್ದು ಮಂತ್ರಿ ಪುರೋಹಿತರೊಡಗೂಡಿ ಬಂದು, ಮುನೀಶ್ವರಂಗಭಿವಂದಿಸಿ, ದಯೆಮಾಡಬೇಕೆಂದು ಹಸ್ತಲಾಘವಮನಿತ್ತು, ಅಂತಃಪುರದ ಸಮೀಪದೊಳಿರ್ಪ ಮಣಿಮಂಟಪಕ್ಕೆ ಬಿಜಯಂಗೈಸಿ, ಮಹಾ ರತ್ನಪೀಠದೊಳ್ಕುಳ್ಳಿರಿಸಿ, ಪಟ್ಟದ ರಾಣಿಯಾದ ಸುನಂದಾದೇವಿಯೊಡನೆಯುಂ ಸಾಮಾನ್ಯಸ್ತ್ರೀಯಾದ ಮುರಾದೇವಿಯೊಡನೆಯುಂ ಕೂಡಿ, ಆ ಮುನಿವರ್ಯರ್ಗೆ ಪಾದಪ್ರಕ್ಷಾಳನಾದಿ ಷೋಡಶೋಪಚಾರಂಗೆಯ್ದು, ಅವರ ಪಾದೋದಕಮಂ ತನ್ನ ಶಿರದೊಳಂ ತನ್ನುಭಯರಾಜ್ಞಿಯರ ಶಿರದೊಳಂ ಪ್ರೋಕ್ಷಿಸಲು; ಆ ಪಾದೋದಕಬಿಂದುಗಳೊಳ್ ಒಂಭತ್ತು ಬಿಂದುಗಳ್ ಪಟ್ಟದ ರಾಣಿಯಾದ ಸುನಂದಾದೇವಿಯ ಶಿರದೊಳ್ ಕ್ಷಣಮಾತ್ರಂ ನಿಂತು, ಒಡನೆಯೇ ಜಗುಳಿಬಿದ್ದುವು. ಸಾಮಾನ್ಯಸ್ತ್ರೀಯಾದ ಮುರಾದೇವಿಯ ಶಿರದೊಳ್ ಒಂದು ಬಿಂದುಮಾತ್ರ ನಿಶ್ಚಲವಾಗಿ ನಿಂತಿತು. ಇದನ್ನಾರಾಯಂ ಕಂಡು, ಮುನಿಶ್ರೇಷ್ಠರಂ ಕುರಿತು—ಎಲೈ ಮುನಿವರ್ಯರೇ, ತಮ್ಮ ಪಾದೋದಕ ಬಿಂದುಗಳೊಳ್ ಒಂಭತ್ತು ಬಿಂದುಗಳ್ ವಿನಯಾತನವಾದ ಪಟ್ಟದ ರಾಣಿಯ ಶಿರದೊಳ್ ಕ್ಷಣಮಾತ್ರಂ ನಿಂತು, ಜಗುಳಿ ಬೀಳಲುಂ, ಸಾಮಾನ್ಯಸ್ತ್ರೀಯ ಶಿರದೊಳೊಂದು ಬಿಂದು ಸ್ಥಿರವಾಗಿ ನಿಲ್ಲಲುಂ ಕಾರಣವೇನೆಂದು ಬಿನ್ನವಿಸಲಾರಾಯಂಗೆ ಮುನಿವರ್ಯ ನಿಂತೆಂದಂ—

ಅಯ್ಯಾ, ಮಹಾರಾಜನೇ, ಅದರ ಕಾರಣಮಂ ಕೇಳುವುದಂತಿರಲಿ; ಮಕ್ಕಳಪೇಕ್ಷೆಯುಳ್ಳ ನಿನಗೆ ಬಿಂದುಗಳ ಲೆಕ್ಕದ ಪ್ರಕಾರವೇ ಪಟ್ಟದ ರಾಣಿಯಲ್ಲಿ ಒಂಭತ್ತು ಮಕ್ಕಳುಂ, ನಿನ್ನ ಪ್ರಿಯಪತ್ನಿಯಾದ ಸಾಮಾನ್ಯ ಸ್ತ್ರೀಯಲ್ಲಿ ಒಬ್ಬ ಕುವರನುಂ ಪುಟ್ಟುವರ್. ಆಕಾಶದೊಳ್ ಪ್ರಕಾಶಿಪ ಒಂದೇ ಚಂದ್ರಮಂಡಲಂ ಜಲತರಂಗಗಳಲ್ಲಿ ಪ್ರತಿಬಿಂಬಿಸಿ, ಬಹು ಬಿಂಬಂಗಳಂತೆ ತೋರಿ, ತರಂಗವು ನಿಂತ ಮೇಲೆ ಪುನಃ ಒಂದೇ ಬಿಂಬವಾಗಿ ತೋರುವಂತೆ ಆ ಉದಕಬಿಂದು ಚಲಿಸದೆ ನಿಂತಿತು. ಇನ್ನು ನಮ್ಮಾಶ್ರಮಮಂ ಕುರಿತು ತೆರಳು ವೆವು. ಸನ್ಮತನಾಗು. ಹೀಗೆಂದು ಆ ಮುನಿವರ್ಯಂ ಪೇಳ್ದ ಮಾತಿಗೆ ರಾಯಂ— ಎಲೈ, ಮಹಾನುಭಾವರೇ, ವೇದ ಸದೃಶವಾದ ತಮ್ಮ ವಾಕ್ಯದಿಂ ನಾನು ಬಹು ಪುತ್ರಯುಕ್ತನಾಗುವೆನು. ಅದರೊಳ್ಸಂದೇಹಮಿಲ್ಲ. ಈ ಕಲಿಯುಗದೊಳುಂ ತಮ್ಮಂಥಾ ಮಹಾತ್ಮರು ನನ್ನ ಮನೆಯಂ ಪವಿತ್ರಂಗೆಯ್ದು, ನನಗೆ ದರ್ಶನವಂ ಕೊಟ್ಟ ಕಾರ್ಯಮೇನೆಂದು ಬಿನ್ನವಿಸಲಾರಾಯಂಗೆ ಮುನಿಪೋತ್ತಮಂ - ನಾವು ಮಹೋದಯ ಪುಣ್ಯಕಾಲ ಸ್ನಾನಾರ್ಥವಾಗಿ ಪ್ರಯಾಗಕ್ಷೇತ್ರಕ್ಕೆ ಹೋಗಿದ್ದು, ಅಲ್ಲಿಂ ಕಾಶೀಕ್ಷೇತ್ರಮನ್ಯೈದಿ, ವಿಶ್ವೇಶ್ವರಸೇವೆಯಂ ಗೆಯ್ದು, ಈ ಕಲಿಯುಗ ದೊಳುಂ ಧರ್ಮದಿಂ ರಾಜ್ಯಪರಿಪಾಲನಂ ಗೆಯ್ವ ನಿನ್ನಂ ಕೇಳಿ, ನೋಡಲಪೇಕ್ಷೆ ಯಿಂ ಬಂದು, ನೋಡಿ ಸಂತುಷ್ಟರಾದೆವು. ಸುಖದಿಂದಿರೆಂದು ಆಶೀರ್ವದಿಸಿ, ಮಣಿಪೀಠದಿಂದೆದ್ದು, ಮರಳಿ ರಾಯನ ಹಸ್ತಲಾಘವದಿಂದ ಬಾಗಿಲ್ವರೆಗೂ ಬಂದು, ಶಿಷ್ಯರೀರ್ವರ್ವೆರಸಿ, ಅದೃಶ್ಯನಾದಂ.

ಆ ಬಳಿಕಾಭೂಪತಿಯು ಸಂತೋಷಭರಿತನಾಗಿ ತನ್ನಾಸ್ಥಾನ ಮಂಟಪ ವನ್ನೈದಿದನು.

ಅನಂತರದೊಳಾತನ ಪ್ರಿಯಪತ್ನಿಯಾದ ಮುರಾದೇವಿಯು ಆ ಮುನಿಯ ಪ್ರಸಾದದಿಂದ ಆ ದಿನ ಮೊದಲುಗೊಂಡು ಗರ್ಭವಂ ಧರಿಸಿ, ಪುತ್ರನಂ ಪ್ರಸವಿ ಸಲು; ರಾಯಂ ಆ ಶಿಶುವಿಗೆ ಮೌರ್ಯನೆಂದು ನಾಮಕರಣಮಂ ಗೆಯ್ದಂ.

ಮತ್ತು ಕೆಲವು ಕಾಲದ ಮೇಲೆ ಪಟ್ಟಮಹಿಷಿಯಾದ ಸುನಂದಾದೇವಿಯುಂ ಕ್ರಮವಾಗಿ ಒಂಭತ್ತು ಕುವರರಂ ಪೆತ್ತಳು. ಆ ರಾಯನು ಆ ಕುವರರೊಳ್ ಪ್ರಥಮಂಗೆ ನಂದನೆಂದುಂ, ದ್ವಿತೀಯಂಗೆ ಸುನಂದನೆಂದುಂ, ತೃತೀಯಂಗೆ ಉಪ ನಂದನೆಂದುಂ, ಚತುರ್ಥಂಗೆ ಪ್ರನಂದನೆಂದುಂ, ಪಂಚಮಂಗೆ ಲೋಕನಂದನೆಂದುಂ, ಷಷ್ಠಂಗೆ ಕುರುನಂದನೆಂದುಂ, ಸಪ್ತಮಂಗೆ ಪ್ರಿಯನಂದನೆಂದುಂ, ಅಷ್ಟಮಂಗೆ

ಮಿತ್ರನಂದನೆಂದುಂ, ನವಮಂಗೆ ವಿನಂದನೆಂದುಂ, ಹೀಗೆ ಸರ್ವರಿಗೂ ನಂದಶಬ್ದ ಪೂರ್ವಕವಾಗಿ ನಾಮಕರಣಂಗಳಂ ಮಾಡಿದಂ.

ಆ ಬಳಿಕ ದಿನದಿನದೊಳುಂ ಬಿದಿಗೆಯ ಚಂದ್ರನಂತೆ ಬೆಳೆಯುತ್ತಿರ್ಪ ಕುವರರಂ ನೋಡಿ, ಪೂರ್ಣಿಮಾ ಚಂದ್ರದರ್ಶನದಿಂ ಕಡಲಂತೆ ಸಂತೋಷ ದಿಂದುಕ್ಕಿ, ಸುಖದಿಂದಿರ್ದನೆಂಬಲ್ಲಿಗೆ ಶ್ರೀಮದ್ರಾಜಾಧಿರಾಜ ಬಿರುದೆಂತೆಂಬರ ಗಂಡ ಶ್ರೀಮಹಿಶೂರ ನರಪತಿ ಶ್ರೀಕೃಷ್ಣರಾಜೇಂದ್ರಾಶ್ರಿತ ಹೊಯಿಸಣಿಗ ಕುಲಸಂಜಾತ ನಾರಾಯಣಶರ್ಮ ವಿರಚಿತಮಪ್ಪ ಮುದ್ರಾಮಂಜೂಷಮೆಂಬ ಗ್ರಂಥದೊಳ್ ನಂದೋತ್ಪತ್ತಿ ಕಥನಮೆಂಬ ಪ್ರಥಮಾಶಯಸಮಾಪ್ತವು.

---

## ದ್ವಿತೀಯಾಶಯ ಪ್ರಾರಂಭವು.

---

### ಚಂದ್ರಗುಪ್ತ ಬಂಧ ವಿಮೋಚನೆ.

ಅನಂತರದೊಳ್ ಸರ್ವಾರ್ಥಸಿದ್ಧಿರಾಜಂ ಕೆಲವು ಕಾಲದ ಮೇಲೆ ಪ್ರವರ್ಧಮಾನನೂ ಪ್ರಿಯಪತ್ನೀಪುತ್ರನೂ ಆದ ಮೌರ್ಯನಿಗೆ ಸಕಲ ವಿದ್ಯಾಭ್ಯಾಸಮಂ ಮಾಡಿಸಿದ ಮೇಲೆ ಪ್ರಬುದ್ಧನಾಗಿ ವಿನಯಾದಿಗುಣಸಂಪನ್ನನಾದಾತಂಗೆ ಅನೇಕ ಕನ್ಯಾರತ್ನಗಳಂ ಮದುವೆಯಂ ಮಾಡಿಸಿ, ಸಿಂಹಾಸನಾರೋಹಣವೊಂದನ್ನುಳಿದು, ಇತರ ಸರ್ವಾಧಿಕಾರಂಗಳ ವಿಚಾರಮಂ ಮಾಡುವಂತೆ ನೇಮಿಸಲು ; ಆ ಮೌರ್ಯನು ಪ್ರಜಾನಿಕರಕ್ಕೆ ಸಮ್ಮತನಾಗಿ, ವೃದ್ಧಮಂತ್ರಿಗಳ ಪುತ್ರರಿಗೆ ಬುದ್ಧಿಯಂ ಹೇಳುತ್ತ, ಸರ್ವರಿಗೂ ಯಥಾಯೋಗ್ಯವಾದ ಅಧಿಕಾರಂಗಳಂ ನೇಮಿಸಿ, ಅವರಿಂದ ಆಗುವ ಕಾರ್ಯನಿರ್ವಾಹಮಂ ಸಮಯಾನುಸಾರವಾಗಿ ತಿಳಿಯುತ್ತ, ಪರಂಪರೆಯಿಂದ ಶೂರರಾಗಿ ಬಂದವರೂ ತನಗೆ ಸಮಾನ ವಯಸ್ಕರೂ ಆದ ಸಿಂಹಬಲ, ಬಾಗುರಾಯಣ, ಭದ್ರಭಟ, ಡಿಂಗಿರಾತ, ಬಲಗುಪ್ತ ವಿಜಯವರ್ಮ, ಲೋಹಿತಾಕ್ಷ, ಪುರುಷದತ್ತರೆಂಬ ಜನಗಳಿಗೆ ಸೇನಾಧಿಪತ್ಯವಂ ನೇಮಿಸಿ, ಅವರನ್ನು ಹಗೆಗಳ ಪಾಳೆಯದ ಮೇಲೆ ಕಳುಹಿಸುತ್ತ, ಪೂರ್ವ ಸಂಚಿತ ಧನವನ್ನಪೇಕ್ಷಿಸದೆ, ಪುಷ್ಟರಾದ ಪ್ರಜೆಗಳಿಂದ ಬಹು ಧನಗಳನ್ನಾರ್ಜಿಸಿ, ಅವುಗಳನ್ನು ರಾಜ್ಯತಂತ್ರದ ವೆಚ್ಚಕ್ಕೆ ಒದಗಿಸುತ್ತ, ತಂದೆಗೆ ಆಯಾಸವಿಲ್ಲದಂತೆ ರಾಜ್ಯವಿಚಾರವಂ ಮಾಡುತ್ತ, ನಂದರಂ ಕಂಡರೆ ಸ್ವಾಮಿ ಭಕ್ತಿ

ಯಿಂದ ನಡೆಯುತ್ತ, ರಾಕ್ಷಸನಿಗೂ ಸಮ್ಮತನಾಗಿ ಇರಲು; ಆ ರಾಯಂ ಕೆಲವು ಕಾಲದ ಮೇಲೆ ಪಟ್ಟಮಹಿಷೀಪುತ್ರರಾದ ನವನಂದರು ಪ್ರವರ್ಧಮಾನರಾದುದಂ ನೋಡಿ, ಅವರನ್ನಮಾತ್ಯರಾಕ್ಷಸನ ವಶವಂ ಮಾಡಲು; ಆತನು ಆ ನಂದರಿಗೆ ಸಕಲ ವಿದ್ಯಾಭ್ಯಾಸವಂ ಮಾಡಿಸಿ, ವಿವಾಹಕ್ಕೆ ಯೋಗ್ಯವಯಸ್ಕರಾದುದಂ ನೋಡಿ, ಅವರವರ ಇಚ್ಛಾನುಸಾರವಾಗಿ ಯಥೋಚಿತ ರಾಜಕುಲ ಕನ್ಯಾರತ್ನಗಳನ್ನು ಮದುವೇ ಮಾಡಿಸಿದನು.

ಆ ಬಳಿಕ ಪ್ರಿಯ ಪತ್ನೀಪುತ್ರನಾದ ಮೌರ್ಯನಿಗೆ ತನ್ನ ಬಹು ಪತ್ನಿಯರಲ್ಲಿ ಚಂದ್ರಗುಪ್ತ ಮೊದಲಾದ ನೂರು ಮಂದಿ ಮಕ್ಕಳು ಹುಟ್ಟಿದರು.

ಅನಂತರದಲ್ಲಿ ರಾಕ್ಷಸನು ನಂದರಿಗೆ ಸಕಾಲದಲ್ಲಿ ಶಸ್ತ್ರವಿದ್ಯಾಭ್ಯಾಸವಂ ಮಾಡಿಸಲು ; ಖಡ್ಗ ಬಾಣ ಮುಂತಾದ ಸಮಸ್ತಾಯುಧ ವಿದ್ಯೆಗಳಲ್ಲಿಯೂ ಉಂಟಾದ ಅವರ ನಿಪುಣತೆಯಂ ನೋಡಿ, ಆ ರಾಯಂ ಸಕಲರ ಸಮ್ಮತಿಯಿಂದ ಜ್ಯೇಷ್ಠನಾದ ನಂದನನ್ನು ಸಿಂಹಾಸನದ ಮೇಲೆ ಕುಳ್ಳಿರಿಸಿ, ಯೌವರಾಜ್ಯಾಭಿಷೇಕವಂ ಮಾಡಿಸಿ, ಉಳಿದ ಮಕ್ಕಳುಂ ಪ್ರಭುತ್ವಕ್ಕೆ ಯೋಗ್ಯರಾದುದರಿಂದ ಜ್ಯೇಷ್ಠನು ಹೇಳಿದಂತೆ ಕನಿಷ್ಠರು ಕೇಳುತ್ತ, ಕನಿಷ್ಠರು ವಿಜ್ಞಾಪಿಸಿದಂತೆ ಜ್ಯೇಷ್ಠರು ಒಡಂಬಡುತ್ತ, ಎಲ್ಲರೂ ಐಕಮತ್ಯಂ ತಪ್ಪದೆ, ಅಧಿಪತ್ಯವಂ ಮಾಡುವಂತೆ ಕುಮಾರರಾದ ನಂದರಿಗೆ ನೇಮಿಸಿ, ವೇಳವೇಳೆಗಳಲ್ಲಿ ಅವರಿಗೆ ಬುದ್ಧಿಯಂ ಹೇಳುವಂತೆ ರಾಕ್ಷಸನಿಗೆ ನೇಮಿಸಲು; ಹಾಗೆ ಅವರು ರಾಕ್ಷಸನಲ್ಲಿ ಪೂರ್ಣ ವಿಶ್ವಾಸವನ್ನಿಟ್ಟು, ಆತನು ಹೇಳಿದಂತೆ ನಡೆಯುತ್ತಿದ್ದರು.

ಅನಂತರದಲ್ಲಿ ರಾಯನು ತನಗೆ ಯೌವನವು ಗಳಿತವಾಗಿ ಬರುತ್ತಿರಲು; ದಿನದಿನವೂ ಪರಲೋಕಸಾಧನವಾದ ಪುಣ್ಯಕಥಾಶ್ರವಣವಂ ಮಾಡುತ್ತ, ಮಹಾದಾನಪೂರ್ವಕವಾಗಿ ತತ್ವಜ್ಞಾನಸಂಪನ್ನರಾದ ಬ್ರಾಹ್ಮಣರ ಪೂಜೆಯಂ ಮಾಡುತ್ತಿದ್ದನು. ಆ ಬಳಿಕ ಮೌರ್ಯನು ನಂದರಲ್ಲಿ ಭೃತ್ಯಭಾವದಿಂದಿರುತ್ತ, ಪ್ರವರ್ಧಮಾನರಾದ ಚಂದ್ರಗುಪ್ತನೇ ಮೊದಲಾದ ತನ್ನ ಮಕ್ಕಳಿಗೆ ಸಕಲ ವಿದ್ಯೆಗಳಂ ಕಲಿಸುವಂತೆ ವಿದ್ಯಾಗುರುಗಳಿಗೆ ನೇಮಿಸಲು, ಆ ಗುರುಗಳು ಹೇಳಿದಂತೆ ಚಂದ್ರಗುಪ್ತಾದಿಗಳು ಸಕಲ ವಿದ್ಯೆಗಳಲ್ಲಿಯೂ ನಿಪುಣರಾಗಿಯೂ ಆಯುಧ ವಿದ್ಯಾವಿಶಾರದರಾಗಿಯೂ ಇರುತ್ತಿರಲು ; ಕೆಲವು ದಿವಸಗಳ ಮೇಲೆ ನಂದರು ಶೌರ್ಯದಲ್ಲಿ ತಮಗಿಂತ ಹೆಚ್ಚಾಗಿಯೂ ನೀತಿಯಲ್ಲಿ ವೃದ್ಧಮಂತ್ರಿಗಳಿಗೆ ಸಮಾನ

ರಾಗಿಯೂ ಪ್ರಜೆಗಳ ಸಮೂಹಕ್ಕೆ ಸಮ್ಮತರಾಗಿಯೂ ಇರುವ ಮೌರ್ಯಪು ತ್ರರಂ ನೋಡಿ, ಮನದೊಳ್ಮತ್ಸರಂಗೊಂಡು, ತಮ್ಮೊಳಗೆ ತಾವು ಆಲೋಚಿಸಿ, ಶೂದ್ರ ಸ್ತ್ರೀ ಪುತ್ರನಾದ ಮೌರ್ಯನ ಕುಮಾರಕರು ನಮಗೆ ಜ್ಞಾತಿಗಳಾಗಿ, ಸಕಲ ವಿದ್ಯೆಗಳಲ್ಲಿಯೂ ನಮಗಿಂತಲೂ ಅಧಿಕರಾಗಿ, ಹೆಚ್ಚಿ ಬರುವ ಪರಾಕ್ರಮ ಮುಳ್ಳವರಾಗಿದ್ದಾರೆ. ಇವರ ಉಪಾಯ ಕೌಶಲ್ಯವಂ ನೋಡಿದರೆ, ಕೆಲವು ಕಾಲದ ಮೇಲೆ ನಮ್ಮ ದೇಶವನ್ನೂ ಪ್ರಭುತ್ವವನ್ನೂ ಅಪೇಕ್ಷಿಸುವಂತೆ ತೋರುತ್ತಿದೆ. ಆದುದರಿಂದ ಯಾವ ಉಪಾಯದಿಂದಾದರೂ ಇವರಂ ಈಗಲೆ ನಿಗ್ರಹಿಸಬೇಕು; ಈ ಭಾಗದಲ್ಲಿ ನಾವು ಉಪೇಕ್ಷೆಯಂ ಮಾಡಿದೆವಾದರೆ ಮುಂದೆ ಇವರ ದೆಸೆಯಿಂದ ನಮಗೆ ಮಹಾನರ್ಥವು ಸಂಭವಿಸುವುದೆಂದು ನಿಶ್ಚಯಿಸಿ, ಅಮಾತ್ಯರಾಕ್ಷಸನಂ ಕರೆಯುಕಳುಹಿಸಿ, ಏಕಾಂತದೊಳಾತಂಗೆ ಈ ವಿಷಯಮಂ ತಿಳುಹಿಸಲು; ಆ ರಾಕ್ಷಸನಿಂತೆಂದನು–

ಅಯ್ಯಾ, ರಾಜಕುಮಾರಕರುಗಳಿರಾ, ನಿಷ್ಕಾರಣವಾದ ಮತ್ಸರದಿಂದ ಸಾತ್ವಿಕರಾದ ಈ ಮೌರ್ಯರಂ ಸಂಹರಿಸಿದರೆ, ಲೋಕದಲ್ಲಿ ಅಪಖ್ಯಾತಿಯುಂಟಾಗಿ, ಪ್ರಜೆಗಳೆಲ್ಲರುಂ ನಿಮ್ಮಲ್ಲಿ ವಿಶ್ವಾಸವಂ ಬಿಡುವರು. ಇದೇ ಅನರ್ಥಕ್ಕೆ ಕಾರಣ ವಾಗುವುದು. ಇದಲ್ಲದೆ, ನಿಮಗೆ ದೈವಸಹಾಯವೂ ತಪ್ಪೀತು; ಮೌರ್ಯಪುತ್ರರು ನಿಮಗೆ ಮುಂದೆ ಶತ್ರುಗಳಾದಾರೆಂಬ ನಿಶ್ಚಯವಿದ್ದರೆ, "ಕಳ್ಳಾ ಕಳ್ಳಾ ಹುಲೀ ಇರಿ" ಎಂಬ ಲೋಕದ ಗಾದೆಯಂತೆ, ಮುಂದೆ ಶತ್ರುಗಳ ದೆಸೆಯಿಂದ ನಿಮಗೆ ಅಶಕ್ಯವಾಗಿ ಬಂದೊದಗಿದ ಕಾರ್ಯಕ್ಕೆ ಈ ಮೌರ್ಯರಂ ಉಬ್ಬಿಸಿ, ಕಳುಹಿಸಿ, ಆ ಹಗೆಗಳ ಮುಖದಿಂದಲೇ ಅವರ ನಿಗ್ರಹವಂ ಮಾಡಿಸಿದರೆ, ನಿಮಗೆ ಲೋಕಾಪ ವಾದಮುಂಟಾಗದು. ಶತ್ರುನಿಗ್ರಹವೂ ಆಗುವುದು. ಹೀಗೆಂದು ಹೇಳಿದ ರಾಕ್ಷಸನಂ ಕುರಿತು ವಿನಂದನೆಂಬವನು—

ಅಯ್ಯಾ, ಅಮಾತ್ಯರೇ, ಜ್ಞಾತಿಗಳಿಗೆ ಪರಸ್ಪರಮತ್ಸರವೂ ಅದಕ್ಕೆ ಪ್ರತೀಕಾರವನ್ನು ಮಾಡೋಣವೂ ಎಂಬುವುದು ಲೋಕ ಪ್ರಸಿದ್ಧವು. ಇದು ನಮ್ಮ ಚಂದ್ರವಂಶಸ್ಥರೂ ಪೂರ್ವಿಕರೂ ಆದ ಅರಸುಗಳಲ್ಲಿ ವಿಶೇಷವಾಗಿ ನಡೆದಿರುವುದು. ಅದಂತಿರಲಿ ; ದೇಹದಲ್ಲಿ ಹುಟ್ಟಿದ ರೋಗವು ಅಪಥ್ಯಸೇವಾ ಸಮಯದಲ್ಲಿ ವೃದ್ಧಿಯಂ ತಾಳಿ, ಶರೀರವಂ ಹೇಗೆ ನಾಶವಂ ಮಾಡುವುದೋ, ಅದೇ ರೀತಿಯಾಗಿ ಒಂದು ಕುಲದಲ್ಲಿ ಹುಟ್ಟಿದವರಾದರೂ ಮತ್ಸರಿಗಳಾದರೆ ಸಮಯವನ್ನರಿತು ಪ್ರತಿಪಕ್ಷನಂ ನಾಶಗೊಳಿಸುವರು. ಮತ್ತು ಕೊರಳಿಗೆ

ಸುತ್ತಿದ್ದ ಹಾವನ್ನು ತನ್ನ ಉದ್ಯಾನದ ಹಾವೆಂದು ಅದರಲ್ಲಿ ವಿಶ್ವಾಸವಂ ಮಾಡದೆ, ಯಾವ ಉಪಾಯದಿಂದಾದರೂ ಆ ಸರ್ಪವಂ ನಿಗ್ರಹಿಸಿ, ಸುಖಿಯಾದ ಪುರುಷನಿಗೆ ಹಾವನ್ನು ಕೊಂದ ದೋಷಾಪವಾದಗಳು ದೇವ ಬ್ರಾಹ್ಮಣ ಪೂಜೆಯಿಂದ ಪರಿಹರಿಸಿಕೊಳ್ಳುವುದಕ್ಕೆ ಹೇಗೆ ಶಕ್ಯವಾಗುವುವೋ ಅದೇ ರೀತಿಯಲ್ಲಿ ಮೌರ್ಯನಿಗ್ರಹದಿಂದ ಬಂದ ದೋಷಾಪವಾದಗಳು ಮಹಾದಾನಾಚರಣೆಯಿಂದಲೂ ಧರ್ಮದಿಂ ಪ್ರಜಾಪಾಲನೆಯಿಂದಲೂ ಪರಿಹರಿಸುವುದಕ್ಕೆ ಶಕ್ಯವಾದಾವು ಎಂದು ಹೇಳಿದನು.

ಆ ಬಳಿಕ ರಾಕ್ಷಸನು ಮುಂಚೆ ಹೇಳಿದ ಮಾತಿಗೆ ಸಮ್ಮತನಾದಂತೆ ತೋರಿದ ಕುರುನಂದನಂ ಕುರಿತು ಉಪನಂದನು—ಎಲೈ, ತಮ್ಮನೇ, ಈ ಅಮಾತ್ಯರು ಹೇಳಿದಂತೆ ಮೌರ್ಯರಂ ಉಬ್ಬಿಸಿ, ಹಗೆಗಳ ಮೇಲೆ ಕಳುಹಿಸಿದ ಕಾಲದಲ್ಲಿ ಇವರು ಹಗೆಗಳಿಂದ ಕೊಲ್ಲಲ್ಪಟ್ಟರೆ, ನಮಗೆ ಕಾರ್ಯ ಜಯವಾಗುವುದು. ಹಾಗಾಗದೆ, ಈ ಮೌರ್ಯರಿಂದಲೇ ಆ ಹಗೆಗಳು ಜಿತರಾದರೆ, ಲೋಕದಲ್ಲಿ ಇವರಿಗೆ ಮಹಾ ಶೂರರೆಂಬ ಯಶಸ್ಸು ಬಂದು, ನಾವು ಮಾಡಿದ ಆಲೋಚನೆಗೆ ಮೌರ್ಯರ ಅಭಿವೃದ್ಧಿಯೇ ಫಲವಾಗುವುದೆಂದು ಹೇಳಿದನು.

ಆಗ ಮಿತ್ರನಂದನು—ಮೌರ್ಯರಂ ಶತ್ರುಗಳ ಮೇಲೆ ಕಳುಹಿಸುವಲ್ಲಿ ಮನಸ್ವಿಗಳಾದವರು ಹೋದಾರು; ಅವರು ಶತ್ರುಗಳಿಂ ಸಂಹೃತರಾದರೆ ಉಳಿದವರು ನಮಗೆ ಮಿತ್ರರಾದಾರೇ ? ಎಂದನು.

ಆ ಬಳಿಕ ನಂದನು—ಅಯ್ಯಾ, ಅಮಾತ್ಯರೇ, ಈ ಕಲಿಯುಗದಲ್ಲಿ ಶೂದ್ರವೃತ್ತಿಯಿಂದ ಬ್ರಾಹ್ಮಣರಿಗೆ ಜೀವನವೂ ರಾಜಬೀಜದಿಂದ ಹುಟ್ಟಿದವರಿಗೆ ರಾಷ್ಟ್ರಾಧಿಪತ್ಯವೂ ಉಂಟಾಗುವುದೆಂದು ಶಾಸ್ತ್ರಸಿದ್ಧವು. ಶೂರರಾದ ನಮ್ಮ ಮೌರ್ಯರು ಸೇನಾಸಮೇತರಾಗಿ ಶತ್ರುಗಳ ಮೇಲೆ ನಡೆದರೆ, ಎಂಥಾ ದುರ್ಜಯರಾದ ಶತ್ರುಗಳಾದರೂ ಇವರಿಂದಲೇ ಕೊಲ್ಲಲ್ಪಡುವರು. ಆಗ ಮಹಾ ಶೂರರರೆಂದು ಪ್ರಸಿದ್ಧಿಯಂ ಪಡೆದು, ಸೇನಾರಂಜಕರಾಗಿ, ಜ್ಞಾತಿಗಳೂ ಆಗಿರುವ ಮೌರ್ಯರಿಗೆ ಪ್ರಭುತ್ವಮಂ ಮತ್ತೊಬ್ಬರು ಕೊಡಬೇಕೇ? ಅವರು ನಿಂತಲ್ಲಿಯೇ ಪಟ್ಟಣವಾಗುವುದು ; ಪ್ರಜೆಗಳು ಅವರನ್ನೇ ಅನುವರ್ತಿಸುವರು ; ಕಡೆಗೆ ನಮ್ಮ ಹಗೆಗಳೆಲ್ಲರೂ ಅವರಿಗೆ ಮಿತ್ರರಾಗುವರು ಎಂದು ಹೇಳಿದನು.

ಅನಂತರದಲ್ಲಿ ರಾಕ್ಷಸನು ಅವರೆಲ್ಲರ ಮಾತಂ ಕೇಳ್ದು—ಅಯ್ಯಾ, ರಾಜಕುಮಾರಕರುಗಳಿರಾ, ರಾಜೋತ್ತಮನಾದ ಸರ್ವಾರ್ಥಸಿದ್ಧಿಯ ಅಧಿಪತ್ಯದಲ್ಲಿ

ರುವ ಪ್ರಜಾ ಪರಿವಾರಗಳಲ್ಲಿ ವೃದ್ಧರ ಮುಂದೆ ಬಾಲಕರಿಗೆ ಸಾವು ಇಂದಿನವ ರೆಗೂ ಉಂಟಾದುದಿಲ್ಲ. ನೀವು ಸತ್ಪುತ್ರರಾಗಿರುವುದರಿಂದ ಎಂದೂ ದುಃಖವನ್ನು ಅರಿಯದ ನಿಮ್ಮ ತಂದೆಗೆ ಮುಂದಾದರೂ ಪುತ್ರಶೋಕವು ಬಾರದಂತೆ ನೀವು ಆತನ ಜೀವಾವಧಿ ಆದರಿಸಿದರೆ, ಸರ್ವಾರ್ಥಸಿದ್ಧಿಯು ಸತ್ಸಂತಾನಮುಳ್ಳವನೆಂದು ಬಂದ ಯಶಸ್ಸು ನಿಮ್ಮದಲ್ಲವೇ? ನಿಮ್ಮ ಯಶಸ್ಸನ್ನೇ ಅಪೇಕ್ಷಿಸುತ್ತ, ಭೃತ್ಯ ಭಾವದಲ್ಲಿರುವ ನನಗೆ ತೋರಿದ ರೀತಿಯಿಂದ ನಿಮಗೆ ವಿಜ್ಞಾಪಿಸಿದೆನು. ಇದರ ಮೇಲೆ ನಿಮ್ಮ ಚಿತ್ತಬಂದಂತೆ ಮಾಡಬಹುದು ಎನಲು; ಆ ಮಾತಿಗೆ ಮರಳಿ ವಿನಂದನು—

ಅಯ್ಯಾ, ಅಮಾತ್ಯರೇ, ಮೌರ್ಯರ ನಿಗ್ರಹವು ನಿಮಗೆ ಸಮ್ಮತವಿಲ್ಲದೇ ಇದ್ದರೆ, ಈ ಅಭಿಪ್ರಾಯವನ್ನು ನಿಮ್ಮ ಮನಸ್ಸಿನಲ್ಲಿಯೇ ಇಡತಕ್ಕದು. ಇದೇ ನಿಮ್ಮಿಂದ ನಮಗೆ ಆಗುವ ಮಹೋಪಕಾರವು ಎಂದು ಹೇಳಿ, ತನ್ನ ಅಣ್ಣಂದಿರನ್ನು ಕುರಿತು—

ಎಲೈ ಅಣ್ಣಾಜಿಗಳಿರಾ, ಈ ಯೋಚನೆಯು ಈ ಅಮಾತ್ಯರಲ್ಲಿ ಮಾಡತ ಕ್ಕದಲ್ಲವು; ನಮ್ಮ ಯೋಚನೆಯು ನಮ್ಮಲ್ಲೇ ಇರಬೇಕಲ್ಲದೆ, ಇದನ್ನು ವೃದ್ಧ ರಿಗೆ ಹೇಳಿದರೆ ಅವರು ಸಮ್ಮತಿಸರು ಎಂದು ಹೇಳಲಾಗಿ; ಆ ಮಾತಿಗೆ ಎಲ್ಲರೂ ಒಡಂಬಟ್ಟು, ತಮ್ಮ ತಮ್ಮ ಅರಮನೆಗಳಿಗೆ ತೆರಳಿದರು.

ಆ ಬಳಿಕ ರಾಕ್ಷಸನು ತನ್ನ ಮನಸ್ಸಿನಲ್ಲಿ—ಈ ನಂದರು ನಿರಪರಾಧಿಗ ಳಾದ ಮೌರ್ಯ ಪುತ್ರರನ್ನು ಅಕಾರಣವಾಗಿ ಸ್ವಲ್ಪ ದಿವಸಗಳಲ್ಲೇ ಕೊಲ್ಲುವವ ರಾಗಿದ್ದಾರೆ; ಆ ಸಮಯದಲ್ಲಿ ನಾನು ಈ ಪಟ್ಟಣದಲ್ಲೇ ಇದ್ದರೆ, ನಂದರಿಗೆ ಬೇಕಾದವನಾಗಿ ಇರುವುದರಿಂದ ಈ ಮಹದಪವಾದಕ್ಕೆ ನಾನೂ ಭಾಗಿಯಾಗು ವೆನು. ಆದುದರಿಂದ ನಾನು ವ್ಯಾಜಾಂತರವನ್ನವಲಂಬಿಸಿ, ಈ ಪಟ್ಟಣವಂ ಬಿಟ್ಟು, ಎಲ್ಲಿಯಾದರೂ ಇರಬೇಕೆಂದು ನಿಶ್ಚಯಿಸಿ, ತನ್ನ ಮನೆಗೆ ಬಂದನು.

ಆ ಮರುದಿವಸ ನಂದರು ತಮ್ಮೊಳು ತಾವೇ ಆಲೋಚಿಸಿ, ದಾರುವರ್ಮ ನೆಂಬ ಶಿಲ್ಪಿಯಂ ಕರಿಸಿ, ಪಟ್ಟಣದ ಹೊರಗಣ ಉದ್ಯಾನದಲ್ಲಿ ವಿಸ್ತಾರವಾಗಿ ರಾಜ ಯೋಗ್ಯವಾದ ಒಂದು ಮನೆಯನ್ನೂ ಅದರ ಕೆಳಗೆ ನೆಲಮಾಳಿಗೆಯನ್ನೂ ಮಾಡಿ, ಆ ಮನೆಯ ಮುಂದುಗಡೆಯಲ್ಲಿ ದಿವ್ಯ ಸರೋವರವನ್ನೂ ಅದರ ಸುತ್ತಲೂ ಪುಷ್ಪಫಲಭರಿತವಾದ ಲತಾ ವೃಕ್ಷಗಳನ್ನೂ ಕಲ್ಪಿಸಿ, ಅಲ್ಲೇ ಕಾದಿರುವಂತೆ ಆತ ನಿಗೆ ನೇಮಿಸಿ ಕಳುಹಿಸಲು; ಆ ಶಿಲ್ಪಿಯು ಅದೇ ಮೇರೆಗೆ ಸಕಲವನ್ನೂ ಮಾಡಿ, ಕಾದುಕೊಂಡಿದ್ದನು.

ಆ ಮೇಲೆ ಬಂದಾನೊಂದು ದಿವಸ ರಾಜಪೌರಾಣಿಕನು ವಿನಂದನ ಸಮೀಪಕ್ಕೆ ಬಂದು, ಕೈ ಮುಗಿದು—ಅಯ್ಯಾ, ರಾಜಪುತ್ರನೇ, ವೃದ್ಧ ಮಹಾರಾಜರ ಸನ್ನಿಧಿಯಲ್ಲಿ ಮಹಾಭಾರತ ಪುರಾಣವು ಇಂದಿಗೆ ಸಮಾಪ್ತವಾಗುತ್ತಿದೆ. ಮಂಗಳಾಚರಣದರ್ಶನಕ್ಕೆ ತಾವೂ ದಯಮಾಡಬೇಕು ಎನಲು, ಆಗ ವಿನಂದನು ತನ್ನ ಮನಸ್ಸಿನಲ್ಲಿ—ನಮ್ಮ ತಂದೆಯು ಈ ಪುರದಲ್ಲಿಯೇ ಇರುವಾಗ ಮೌರ್ಯಪುತ್ರ ನಿಗ್ರಹವಂ ಮಾಡಕೂಡದು ; ಆದುದರಿಂದ ತಂದೆಯು ಈ ಪುರದಿಂದ ಹೊರಟು ಹೋಗುವಂತೆ ಉಪಾಯವಂ ಮಾಡಿಸಿ, ಆ ಸಮಯದಲ್ಲಿ ಇವರಂ ಸಂಹರಿಸಬೇಕೆಂದು ನಿಶ್ಚಯಿಸಿ, ಪೌರಾಣಿಕನಂ ಕುರಿತು—ಅಯ್ಯಾ, ಪೌರಾಣಿಕನೇ, ಮಂಗಳಾಚರಣದರ್ಶನಕ್ಕೂ ಬರುತ್ತೇವೆ; ನೀನು ಬೇಡಿದುದನ್ನೂ ಕೊಡುತ್ತೇವೆ. ಅದಂತಿರಲಿ ; ನಾಳೆ ಮೊದಲುಗೊಂಡು ನಮ್ಮ ಮಾತಾಪಿತೃಗಳ ಸನ್ನಿಧಿಯಲ್ಲಿ ಪ್ರಯಾಗಕ್ಷೇತ್ರಮಹಿಮೆಯ ಶ್ರವಣವನ್ನು ಚನ್ನಾಗಿ ಮಾಡಿಸುವವನಾಗು ; ಅರ್ಧೋದಯ ಪುಣ್ಯಕಾಲ ಪ್ರಾಪ್ತವಾಗುತ್ತಿರಲು, ಆ ಪ್ರಯಾಗದಲ್ಲಿ ಮಾಘಸ್ನಾನವು ಮಹಾ ಪುಣ್ಯಕರವೆಂಬರ್ಥವಂ ನೀನು ತಿಳಿದಿರುವಿಯಷ್ಟೆ ? ನಮಗೆ ನೀನು ಮುಖ್ಯಾಶ್ರಿತನು ; ಹೋಗಿಬಾರೆಂದು ಕಳುಹಿಸಿದನು. ಅದೇ ರೀತಿಯಲ್ಲಿ ಆ ದಿನ ಮಾಡಿದ ಭಾರತ ಪೂರ್ತಿ ಮಂಗಳಾಚರಣೆಯಲ್ಲಿ ಬಹು ದ್ರವ್ಯ ದಕ್ಷಿಣೆಗಳಂ ಪಡೆದು, ಸಂತುಷ್ಟನಾದ ಆ ಪೌರಾಣಿಕನು ವೃದ್ಧರಾಜನ ಸಮೀಪದಲ್ಲಿ ಕಾಶೀಕಾಂಡ ಪುರಾಣ ಶ್ರವಣವನ್ನು ಮಾಡಿಸುತ್ತಾ, ಪ್ರಯಾಗ ಮಹಿಮೆಯನ್ನು ವಿಶೇಷವಾಗಿ ಹೇಳುತ್ತಿರಲು, ಅದರಲ್ಲಿ ಮಾಘಮಾಸಸ್ನಾನವು ಮಹಾ ಫಲಪ್ರದವೆಂಬ ವಾಕ್ಯವನ್ನು ಕೇಳಿ, ವಿಶ್ವಾಸ ಹುಟ್ಟಿ, ತಾನು ಪ್ರಯಾಗಕ್ಕೆ ಹೋಗಬೇಕೆಂದು ಆ ರಾಯನು ಮನಸ್ಸಿನಲ್ಲಿ ನಿಶ್ಚಯಿಸಿದನು. ಆಗ ನಂದರು ತಮಗೆ ಮೌರ್ಯಪುತ್ರರಲ್ಲಿರುವ ಮಾತ್ಸರ್ಯವನ್ನು ಪ್ರಕಟಮಾಡದೆ, ಅವರು ಸಂಪಾದಿಸಿರುವ ಆಯುಧ ವಿದ್ಯಾಕೌಶಲವನ್ನು ನೋಡಿ, ಸಂತೋಷಪಟ್ಟವರಂತೆ ತೋರಿಸಿಕೊಂಡು, ತಮ್ಮಲ್ಲಿ ಅವರಿಗೆ ವಿಶ್ವಾಸವು ಅಧಿಕವಾಗುವ ಹಾಗೆ ಅವರನ್ನು ವಸ್ತ್ರಭೂಷಣ ವಾಹನಾದಿಗಳಿಂದ ಸನ್ಮಾನಿಸುತ್ತ, ಆಯುಧ ವಿದ್ಯಾಕುಶಲರೂ ಶೂರರೂ ಆದ ನೂರು ಮಂದಿ ಮಕ್ಕಳು ನಮಗಿರುವಲ್ಲಿ ಈ ಲೋಕದೊಳಗೆ ನಮಗೆ ಯಾರು ತಾನೇ ಸಮಾನರು ಎಂದು ಹೇಳಿಕೊಳ್ಳುತ್ತ, ಸ್ವಜನಾಭ್ಯುದಯ ಸಂತೋಷವಂ ಕಪಟವಾಗಿ ನಟಿಸುತ್ತ, ಅವರನ್ನು ನಿಗ್ರಹಿಸುವುದಕ್ಕೆ ಸಮಯವನ್ನು ನಿರೀಕ್ಷಿಸುತ್ತ ಇದ್ದರು. ಹೀಗಿರುವಲ್ಲಿ ಮತ್ತೊಂದು

ದಿವಸ ವೃದ್ಧರಾಜನು—ತಾನು ಪತ್ನೀ ಪರಿವಾರ ಸಮೇತನಾಗಿ ಮಾಘಸ್ನಾನ
ಕ್ಕೋಸ್ಕರ ಪ್ರಯಾಗಕ್ಕೆ ಹೋಗಬೇಕಾಗಿದೆ; ಅಲ್ಲಿಗೆ ಬೇಕಾದ ವಸ್ತುಗಳಂ
ಜೊತೆಗೊಳಿಸುವುದೆಂದು, ನಂದರಿಗೆ ಹೇಳಿ ಕಳುಹಿಸಲು; ಆ ಮಾತಿಗೆ ನಂದರು
ಸಮ್ಮತಿಪಟ್ಟು, ಈ ಅರ್ಥವನ್ನು ಅಮಾತ್ಯರಾಕ್ಷಸನಿಗೆ ತಿಳುಹಿಸಲು; ಆ ಪುರವಂ
ಬಿಟ್ಟು, ಮತ್ತೊಂದು ಸ್ಥಳಕ್ಕೆ ಹೋಗಬೇಕೆಂದು ಮೊದಲೇ ಯೋಚಿಸುತ್ತಿದ್ದ
ಅಮಾತ್ಯರಾಕ್ಷಸನು ನಂದರನ್ನು ಕುರಿತು—

ಅಯ್ಯಾ, ರಾಜಕುಮಾರರುಗಳಿರಾ, ಮಾಘಸ್ನಾನಾರ್ಥವಾಗಿ ನಿಮ್ಮ ತಂದೆ
ಯವರು ಪತ್ನಿಯರೊಡನೆ ಪ್ರಯಾಗಕ್ಕೆ ಹೋಗಿ ಬರುವುದು ಯುಕ್ತವೇ ಸರಿ;
ವೃದ್ಧರಾದ ಮಾತಾಪಿತೃಗಳು ಅಂತಃಪುರದ ಸ್ತ್ರೀಜನರು ಸಹ ಹೋಗಿ ಬರುವ
ವಿಷಯದಲ್ಲಿ ಅಲ್ಲಿ ಆಗತಕ್ಕ ಪ್ರಯೋಜನಂಗಳಿಗೆ ನೀವೇ ಸಂಗಡಿಗರಾಗಿರಬೇಕು,
ಇಲ್ಲದಿದ್ದರೆ ನಾನಾದರೂ ಇರಬೇಕು; ಹಾಗಲ್ಲದೆ ಈ ಸಂದರ್ಭದಲ್ಲಿ ಮತ್ತೊಬ್ಬ
ಅಧಿಕಾರಿಯನ್ನು ಕಳುಹಿಸುವುದು ಪ್ರಶಸ್ತವಲ್ಲವು. ನಿಮ್ಮ ಅಪ್ಪಣೆಯಾದರೆ
ನಾನೇ ಸಂಗಡ ಹೋಗಿ ಬರುವೆನೆಂದು ಹೇಳಿದ ರಾಕ್ಷಸನ ವಚನವಂ ಕೇಳಿ;
ನಂದರು ಒಡಂಬಟ್ಟು—ಅಯ್ಯಾ, ಅಮಾತ್ಯನೇ, ಜೋಕ್ಕಸದಿಂದ ಬೇಕಾದ ವಸ್ತು
ಗಳಂ ತೆಗೆಯಿಸಿಕೊಂಡು, ವೃದ್ಧ ಮಹಾರಾಜನ ಸಂಗಡ ನೀನೇ ಹೋಗಿ ಬಾ
ಎಂದು ಕಳುಹಿಸಲು; ಆಗ ರಾಕ್ಷಸನು ಬೇಕಾದ ವಸ್ತುಗಳಂ ತೆಗೆದುಕೊಂಡು
ಪತ್ನೀಪರಿವಾರ ಸಮೇತನಾಗಿ ಪ್ರಯಾಣ ಮಾಡಿರುವ ಸರ್ವಾರ್ಥಸಿದ್ಧಿರಾಜನ
ಸಂಗಡ ಪ್ರಯಾಗಕ್ಕೆ ಹೊರಟು ಹೋದನು.

ಆಗ ನಂದರು ತಮ್ಮ ತಂದೆಯನ್ನು ಸಾಗ ಕಳುಹಿಸಿ ಬಂದು, ಇನ್ನು
ಕಾಲವಿಳಂಬವಂ ಮಾಡಬಾರದೆಂದು ನಿಶ್ಚಯಿಸಿ, ಆ ಮರುದಿವಸವೇ ತಮಗೆ
ಮೃಗಗಳ ಬೇಟೆಗೆ ಪ್ರಯಾಣವೆಂದು ವರ್ತಮಾನವಂ ಪುಟ್ಟಿಸಿ, ಬೇಟೆಗಾರರಂ
ಬಲೆ ಮೊದಲಾದ ಸಾಮಗ್ರಿಯೊಡನೆ ಮೊದಲೇ ಕಳುಹಿಸಿ, ಪುರೋದ್ಯಾನವನ
ದಲ್ಲಿ ಪಾಕವನ್ನು ಸಿದ್ಧಮಾಡಿಕೊಂಡಿರುವಂತೆ ಭಾಣಸಿಗಳಿಗೆ ನೇಮಿಸಿ ಕಳು
ಹಿಸಿ, ಆ ಬಳಿಕ ಮೌರ್ಯನನ್ನೂ ಅವನ ಮಕ್ಕಳೆಲ್ಲರನ್ನೂ ಕರೆಯ ಕಳು
ಹಿಸಿ, ಉತ್ತಮಾಶ್ವಂಗಳಂ ಜೊತೆಗೊಳಿಸಿ ನಿಲ್ಲಿಸಿ, ಮೌರ್ಯನಿಗೆ—

ಅಯ್ಯಾ, ಅಣ್ಣಾಜಿಗಳಿರಾ, ಮೃಗಗಳ ಬೇಟೆಯಲ್ಲಿ ಬಹಳ ಆಶ್ಚರ್ಯ
ಉಂಟೆಂದು ಕೇಳಿದ್ದೇವೆ; ಈ ದಿವಸ ನಾವೆಲ್ಲರೂ ಮೃಗಗಳ ಬೇಟೆಯಂ ಮಾಡಿ
ಬಂದು, ಪುರದ ಹೊರಗಣ ಉದ್ಯಾನವನದಲ್ಲಿ ಇಳಿದು, ರಾಜಕುಮಾರರೊಡ

ನೆಯೂ ಮಿತ್ರರೊಡನೆಯೂ ಕೂಡಿ, ಭೋಜನವಂ ಮಾಡಿ, ವಿನೋದಗೋಷ್ಠಿಯಲ್ಲಿ ಇದ್ದು, ನಾಳಿನ ದಿವಸ ಪಟ್ಟಣಕ್ಕೆ ಬರಬೇಕೆಂದು ಪ್ರಯತ್ನಿಸಿದ್ದೇವೆ; ನೀವೂ ಇದಕ್ಕೆ ಸಮ್ಮತಿಸಬೇಕು. ವೃದ್ಧರಾಜರು ಇಲ್ಲಿಗೆ ಬಂದ ಬಳಿಕ ಇದಕ್ಕೆ ಸಮ್ಮತಿಸುವರೋ ಇಲ್ಲವೋ; ಈಗಲೇ ಹೊರಡಬೇಕೆಂದು ಹೇಳುತ್ತಿರಲು; ನಂದರ ಹೃದಯದ ಕಪಟವನ್ನರಿಯದೇ ಇರುವ ಮೌರ್ಯನು ಆ ಮಾತಿಗೆ ಒಡಂಬಟ್ಟು, ಪುತ್ರಸಮೇತನಾಗಿ ವಾಹನವನ್ನೇರಿ, ನಂದರ ಸಂಗಡ ಹೋದನು. ಅನಂತರದಲ್ಲಿ ಎಲ್ಲರೂ ಮೃಗಗಳ ಬೇಟೆಯನ್ನಾಡಿ ಶಾಂತರಾಗಿ, ಅಲ್ಲಿಂದ ಪುರೋದ್ಯಾನಕ್ಕೆ ಬಂದು, ಅತಿ ಶೀತಳವಾಗಿಯೂ ರಮಣೀಯವಾಗಿಯೂ ಇರುವ ಮರದ ನೆಳಲುಗಳಲ್ಲಿದ್ದು ವಿಶ್ರಮಿಸಿಕೊಂಡು, ವಿನೋದದಿಂ ಜಲಕ್ರೀಡೆಯನ್ನಾಡಿ, ವಸ್ತ್ರಾಭರಣ ಗಂಧಮಾಲಿಕಾದಿಗಳಿಂದೆಲ್ಲರುಂ ಅಲಂಕೃತರಾಗಿ, ಭೋಜನಶಾಲೆಗೆ ಹೋದರು. ಆಗ ನಂದರು ತಮ್ಮ ಬಂಧುಮಿತ್ರ ಜನಗಳನ್ನು ಮೊದಲೇ ಮೇಲ್ಗಡೆಯಲ್ಲಿ ಮಾಡಿದ ಭೋಜನ ಪಙ್ಕ್ತಿಗಳಲ್ಲಿ ಕುಳ್ಳಿರಿಸಿ—ನಮ್ಮ ಬಂಧುಮಿತ್ರರು ಕುಳಿತುಕೊಳ್ಳುವುದಕ್ಕೆ ಈ ಸ್ಥಳವೇ ಯೋಗ್ಯವು; ನಮ್ಮ ಮನೆಯ ಜನಕ್ಕೆಲ್ಲಾ ಕೆಳಗಿನ ಅಂತರ್ಗೃಹದಲ್ಲಿ ಎಡೆಗಳಂ ಹಾಕಿರೆಂದು ಪರಿಚಾರಕರಿಂ ಹಾಕಿಸಿ, ಇಲ್ಲಿ ಎಲ್ಲರೂ ಕುಳಿತುಕೊಳ್ಳಿರಿ ಎಂದು ಪುತ್ರಸಮೇತನಾದ ಮೌರ್ಯನಂ ಆ ನೆಲಮಾಳಿಗೆಯಲ್ಲಿ ಕುಳ್ಳಿರಿಸಿ, ತಾವೂ ಅಲ್ಲೇ ಕುಳಿತುಕೊಳ್ಳುವವರಂತೆ ನಟಿಸಿ, ಮೇಲಕ್ಕೆ ಹೋಗುತ್ತಾ ಬರುತ್ತಾ ಇದ್ದು, ಪದಾರ್ಥಂಗಳಂ ಬಡಿಸಿದ ಮೇಲೆ ಭೋಜನವಾಗಲೆಂದು ಹೇಳಿ, ತಾವು ಮೇಲುಪಙ್ಕ್ತಿಯ ವಿಚಾರಣೆಯನ್ನು ಮಾಡುವವರಂತೆ ಕೆಳಗಣ ಪಙ್ಕ್ತಿಯಲ್ಲಿ ಕುಳ್ಳಿರದೆ ಹೊರಗೆ ನಿಂತು, ಮೌರ್ಯರು ಕುಳಿತಿರ್ದ ನೆಲಮಾಳಿಗೆಯ ಬಾಗಿಲಂ ಶೀಘ್ರವಾಗಿ ಮುಚ್ಚಿಸಿ, ಆ ದ್ವಾರಕ್ಕೆ ತಮ್ಮ ಕೈ ಮೊಹರವಂ ಮಾಡಿ, ಜನಾಪವಾದಕ್ಕೆ ಭೀತರಾಗದೆ, ಪರಲೋಕಭೀತಿಯಂ ಗಣನೆಗೆ ತಾರದೆ, ಖಡ್ಗಪಾಣಿಗಳಾದ ದೂತರಂ ಆ ಬಾಗಿಲಲ್ಲಿ ಕಾವಲಿಟ್ಟು, ಆ ದೂತರಂ ಕರೆದು—ಎಲೈ ದೂತರುಗಳಿರಾ, ನೀವು ಅನ್ನೋದಕಂಗಳಂ ತಂದುಕೊಡುತ್ತಿರುವುದರಿಂದ ಕಾರಾಗೃಹದಲ್ಲಿರುವ ಮೌರ್ಯರು ಇನ್ನೂ ಜೀವಂತರಾಗಿದ್ದಾರೆಂಬಂತೆ ಜನರಿಗೆ ತೋರ್ಪಡಿಸುತ್ತಾ, ಇವರೆಲ್ಲರೂ ಒಳಗೆ ಮೃತರಾದ ವರ್ತಮಾನವಂ ನಮಗೆ ರಹಸ್ಯವಾಗಿ ತಿಳಿಸತಕ್ಕದು ಎಂದು ಅವರಿಗೆ ನೇಮಿಸಿ, ನಂದರು ಇಂದಿಗೆ ತಮ್ಮ ಶತ್ರುನಾಶನವಾಯ್ತೆಂದು ತಮ್ಮೊಳು ತಾವು ಮಾತನಾಡಿಕೊಳ್ಳುತ್ತಾ, ತಮ್ಮ ತಮ್ಮ ವಾಹನಂಗಳನ್ನೇರಿ ಪುರಕ್ಕೆ ಬಂದರು.

ಅನಂತರದಲ್ಲಿ ಕಾರಾಗೃಹವಂ ಕಾದಿದ್ದ ದೂತರು ಮೌರ್ಯಪುತ್ರರಿಗೆ ಅನ್ನೋದಕವಂ ಕೊಟ್ಟೂ ಕೊಡದಂತೆ ಮಾಡುತ್ತ ಬಂದುದರಿಂದ ಅವರು ಹಸಿವು ಬಾಯಾರಿಕೆಗಳಿಂದ ಪೀಡಿತರಾಗಿ ಕೃಶರಾಗಿ, ದಿನದಿನಕ್ಕೆ ಎಂಟು ಹತ್ತು ಜನದ ಮೇರೆಗೆ ಸತ್ತುಹೋಗಲು ; ಮತ್ತೊಂದು ಗವಾಕ್ಷದಿಂದ ದೂತರು ನೋಡಿ, ಮೌರ್ಯರೆಲ್ಲರೂ ಮೃತರಾದರೆಂದು ತಮ್ಮೊಳು ತಾವು ಮಾತನಾಡಿಕೊಳ್ಳುತ್ತಿರಲು ; ಒಳಗೆ ಜೀವವಂತನಾಗಿದ್ದ ಚಂದ್ರಗುಪ್ತನು ಆ ದೂತರು ಆಡಿಕೊಳ್ಳುವ ಮಾತಂ ಕೇಳಿ—ಎಲೈ, ಭಟರುಗಳಿರಾ, ಈ ಸೆರೇ ಸಿಕ್ಕಿದ ಜನರಲ್ಲಿ ನಾನು ಒಬ್ಬ ಹೊರತು, ಮಿಕ್ಕವರೆಲ್ಲರೂ ಮೃತರಾದರು ; ನನಗೂ ಮೂರು ನಾಲ್ಕು ದಿವಸಗಳಲ್ಲಿ ವಿಪರ್ಯಾಸ ಬರುವಂತೆ ತೋರುತ್ತಿದೆ ; ನಾನು ಇನ್ನು ಜೀವಿಸಲಾರೆನು. ನನ್ನೊಬ್ಬನನ್ನಾದರೂ ಶವಗಂಧಭೂಯಿಷ್ಠವಾದ ಈ ಸ್ಥಳದಿಂದ ತೆಗೆದು, ಮತ್ತೊಂದು ಕಾರಾಗೃಹದಲ್ಲಿ ಇಟ್ಟರೆ, ನೆಮ್ಮದಿಯಿಂದ ಪ್ರಾಣಂಗಳಂ ಬಿಡುವೆನು. ನಿಮಗೆ ಕರುಣವಿದ್ದರೆ ಈ ಅರ್ಥವನ್ನು ನಂದರ ಸನ್ನಿಧಿಯಲ್ಲಿ ಬಿನ್ನೈಸಿರಿ ಎಂದು ಹೇಳಲು ; ಆ ವಾಕ್ಯವಂ ಕೇಳಿ, ದೂತರು ಬಂದು ರಹಸ್ಯವಾಗಿ ನಂದರಿಗೆ ಕೈ ಮುಗಿದು—

ಜೀಯಾ, ಉದ್ಯಾನಕಾರಾಗೃಹದಲ್ಲಿ ಕೂಡಿದ್ದವರೊಳಗೆ ಮೌರ್ಯನೂ ಅವನ ಪುತ್ರರಲ್ಲಿ ಚಂದ್ರಗುಪ್ತನು ಹೊರತು ಉಳಿದವರೆಲ್ಲರೂ ಮೃತರಾದರು. ಆತನೂ ಮೂರು ನಾಲ್ಕು ದಿವಸಗಳಲ್ಲಿ ಸಾಯುವವನಾಗಿದ್ದಾನೆ. ನನ್ನನ್ನು ಬಹು ಶವಗಂಧಮಯವಾದ ಈ ಸ್ಥಳದಿಂದ ತೆಗೆದು, ಮತ್ತೊಂದು ಕಾರಾಗೃಹದಲ್ಲಿಯಾದರೂ ಇಟ್ಟರೆ, ಅಲ್ಲಿ ಸ್ವಸ್ಥದಿಂ ಪ್ರಾಣವಂ ಬಿಟ್ಟೇನೆಂದು ಬಹುವಾಗಿ ಪಾದಕ್ಕೆ ಅಡ್ಡಬಿದ್ದು, ಬಿನ್ನೈಸಿದನೆಂದು ತಮಗೆ ಅರಿಕೆಮಾಡುವಂತೆ ನಮ್ಮಂ ಕುರಿತು ಹೇಳಿದನು. ಇದಕ್ಕೆ ಅಪ್ಪಣೆ ಏನೆನಲು ; ಆ ಮಾತನ್ನು ಕೇಳಿ, ನಂದರು ಮನಸ್ಸಿನಲ್ಲಿ ಬಹು ಸಂತೋಷ ಪಟ್ಟು—ಇನ್ನು ಮೇಲೆ ಹೊದ ವಾಸನೆಯು ಊಚಿಗೆ ಬಂದರೆ, ಜನರ ಹಾಹಾಕಾರವು ಹೆಚ್ಚುವುದು. ಚಂದ್ರಗುಪ್ತನೆಂಬ ಒಬ್ಬನು ಮಾತ್ರ ಜೀವವಂತನಾಗಿದ್ದಾನಂತೆ. ಅವನು ಸಹಿತವಾಗಿ ಕಾರಾಗೃಹಕ್ಕೆ ಅಗ್ನಿಪ್ರವೇಶವಂ ಮಾಡಿಸುವುದು ಯುಕ್ತವಲ್ಲವೆಂದು ನಿಶ್ಚಯಿಸಿ, ಆ ದೂತರಂ ನೋಡಿ—

ಎಲೈ ದೂತರುಗಳಿರಾ, ಚಂದ್ರಗುಪ್ತನು ಮೂರು ನಾಲ್ಕು ದಿವಸಗಳಲ್ಲಿ ಮೃತನಾಗುವನೆಂದು ತೋರಿದರೆ, ಅವನಂ ಆ ಕಾರಾಗೃಹದಿಂದೀಚೆಗೆ ತೆಗೆದು, ಆ ಗೃಹಕ್ಕೆ ಅಗ್ನಿಪ್ರವೇಶವಂ ಮಾಡಿಸಿ, ಆತನಂ ಮತ್ತೊಂದು ಕಾರಾಗೃಹ

ದಲ್ಲಿರಿಸಿ, ಅನ್ನೋದಕವಂ ಕೊಡುತ್ತ, ಆತನು ಪ್ರಾಣವಂ ಬಿಟ್ಟರೆ, ಆ ವರ್ತಮಾನವನ್ನು ನಮಗೆ ತಿಳುಹಿಸತಕ್ಕದು ಎಂದು ನೇಮಿಸಿ ಕಳುಹಿಸಲು ; ಆ ದೂತರು ಹಾಗೇ ಚಂದ್ರಗುಪ್ತನನ್ನು ಮತ್ತೊಂದು ಕಾರಾಗೃಹದಲ್ಲಿಟ್ಟು, ಅನ್ನೋದಕವಂ ಕೊಟ್ಟು, ಮೊದಲಿನ ಕಾರಾಗೃಹಕ್ಕೆ ಅಗ್ನಿಪ್ರವೇಶವನ್ನು ಮಾಡಿದರು. ಆ ಬಳಿಕ ನಂದರು ತಮ್ಮೊಳು ತಾವು ಆಲೋಚಿಸಿ—

ಪುತ್ರಸಮೇತನಾದ ಮೌರ್ಯನು ಮೃತವಾದ ವರ್ತಮಾನವಂ ನಮ್ಮ ತಂದೆಯು ಮತ್ತೊಬ್ಬರ ಮುಖದಿಂದ ಯಥಾರ್ಥವಾಗಿ ತಿಳಿದರೆ, ನಮ್ಮನ್ನು ಮಹಾ ದ್ರೋಹಿಗಳೆಂದು ನಮ್ಮ ಮುಖಾವಲೋಕನವಂ ಮಾಡದೆ, ಪುತ್ರಶೋಕದಿಂದ ಇದ್ದ ಸ್ಥಳದಲ್ಲಿಯೇ ಮೃತನಾದಾನು. ಆದುದರಿಂದ ಮೌರ್ಯ ಪುತ್ರರು ತಮ್ಮಿಂದ ತಾವೇ ವಿಪತ್ತಂ ತಂದುಕೊಂಡರು ಎಂದು ಮೊದಲೇ ಪತ್ರಿಕಾಮುಖದಿಂದ ತಿಳುಹಿಸಬೇಕೆಂದು ನಿಶ್ಚಯಿಸಿ, ಪ್ರಕೃತೋಚಿತವಾಗಿ ತಂದೆಗೆ ಕಾಗದವಂ ಬರೆಯಿಸಿ, ಅದನ್ನು ಆಪ್ತರಾದ ದೂತರ ಕೈಯಲ್ಲಿ ಕೊಟ್ಟು ಕಳುಹಿಸಿದರು. ಅಷ್ಟರಲ್ಲಿಯೇ ಪ್ರಯಾಗದಲ್ಲಿ ವಾಸವಂ ಮಾಡುತ್ತಿರುವ ಸರ್ವಾರ್ಥಸಿದ್ಧಿರಾಜನ ಪ್ರಿಯ ಪತ್ನಿಯಾದ ಮುರಾದೇವಿಯು ಮಾಡುತ್ತಿರುವ ಪೂಜಾಭಕ್ತಿಗಳಿಗೆ ಸುಪ್ರೀತಳಾದ ಭಾಗೀರಥೀದೇವಿಯು ನಿತ್ಯದಲ್ಲಿಯೂ ಮುರಾದೇವಿಯ ಸ್ವಪ್ನದಲ್ಲಿ ಸುವಾಸಿನೀರೂಪದಿಂದ ಬಂದು, ನನ್ನ ಮನೆಗೆ ಬಾರೆಂದು ಮುರಾದೇವಿಯಂ ಕರೆಯುತ್ತಿರಲು ; ಆಕೆಯು ಆ ಅರ್ಥವಂ ಪತಿಗೆ ತಿಳುಹಿಸಿ, ಮತ್ತೊಂದು ದಿನ ತ್ರಿವೇಣಿಯಲ್ಲಿ ಸ್ನಾನವಂ ಮಾಡಿ, ಭಾಗೀರಥಿಯಂ ಪೂಜಿಸಿ, ನನ್ನಂ ಕೃತಾರ್ಥಳಂ ಮಾಡೆಂದು ಪ್ರಾರ್ಥಿಸಿದಳು. ಅವಳ ಮನೋನಿಶ್ಚಯಕ್ಕೆ ಪ್ರಸನ್ನಳಾದ ಗಂಗಾದೇವಿಯು ಎಲ್ಲರೂ ನೋಡುವಂತೆ ತನ್ನ ದಿವ್ಯ ಹಸ್ತದಿಂದ ಆ ಮುರಾದೇವಿಯ ಹಸ್ತವಂ ಹಿಡಿದು, ಕರೆದುಕೊಂಡು, ಆ ನದಿಯಲ್ಲೇ ಅದೃಶ್ಯಳಾದಳು. ಈ ಆಶ್ಚರ್ಯವಂ ನೋಡಿ, ಅಲ್ಲಿದ್ದ ಜನರು ಹೋಗಿ, ಆ ಅರ್ಥವಂ ಸರ್ವಾರ್ಥಸಿದ್ಧಿರಾಜನಿಗೆ ತಿಳುಹಿಸಲು ; ಆತನು ಆ ವಾಕ್ಯವಂ ಕೇಳಿ, ಮುರಾದೇವಿಯು ಭಾಗೀರಥಿಯಲ್ಲಿ ಶರೀರವನ್ನೊಪ್ಪಿಸಿ ಧನ್ಯಳಾದಳು ; ಅವಳ ಜನ್ಮವು ಸಫಲವಾಯಿತೆಂದು ಹೇಳಿ, ಪತ್ನೀವಿಯೋಗಕ್ಕೆ ಮಾತ್ರ ದುಃಖಪಡುತ್ತ, ರಾಕ್ಷಸನಂ ಕುರಿತು—

ಅಯ್ಯಾ, ಅಮಾತ್ಯನೇ, ಈ ಮುರಾದೇವಿಯ ವರ್ತಮಾನವಂ ನಮ್ಮ ಪುತ್ರನಾದ ಮೌರ್ಯನಿಗೆ ನೀನೇ ಬರೆಯಿಸಿ, ಕಳುಹಿಸುವವನಾಗು ; ಆತನ ಮುಖ

ಸಮಾಧಾನವಂ ಮಾಡುವಂತೆ ಚಿರಂಜೀವಿಗಳಾದ ನಂದರಿಗೂ ಬರೆಯಿಸಿ ಕಳುಹಿಸು. ಮತ್ತು ನಾವು ಇನ್ನು ಎಂಟು ದಿವಸಗಳೊಳಗೆ ಬರುತ್ತಿದ್ದೇವೆ ಎಂದು, ಬರೆಯ ತಕ್ಕದು ಎನಲು; ಆಗ ರಾಕ್ಷಸನು ಅದರಂತೆ ಪ್ರಯಾಗದಲ್ಲಿ ನಡೆದ ಸಕಲ ವರ್ತಮಾನವನ್ನೂ ಬರೆದು, ಅದನ್ನು ದೂತರ ಮುಖದಿಂದ ಪಾಟಲೀಪುರಕ್ಕೆ ಕಳುಹಿಸಿ, ಮುರಾದೇವಿಗೆ ಪರಲೋಕಾರ್ಥವಾಗಿ ಬಹು ಬ್ರಾಹ್ಮಣ ಸಂತರ್ಪ ಣಾದಿ ಕರ್ಮವಂ ಮಾಡುತ್ತಿದ್ದನು.

ಈ ಸಂದರ್ಭದಲ್ಲಿಯೇ ದೂತರು ನಂದರು ಬರೆಸಿ ಕಳುಹಿಸಿದ ಕಾಗದ ವನ್ನು ತಂದು, ವೃದ್ಧರಾಜನ ಮುಂದಿರಿಸಿ, ಕೈಮುಗಿಯಲು; ಸಮೀಪದಲ್ಲಿದ್ದ ರಾಕ್ಷಸನು ಆ ಕಾಗದವನ್ನು ಬಿಚ್ಚಿ ನೋಡುವಲ್ಲಿ—

ಶ್ರೀಮತು, ಅಪ್ಪಾಜಿಯವರ ಪಾದಪದ್ಮಂಗಳಿಗೆ—ಬಾಲಕ ವಿನೋದನು ಮಾಡುವ ಬಿನ್ನಹ. ನೀವು ಇಲ್ಲಿಂದ ಚಿತ್ತೈಸಿದ ಬಳಿಕ ಇಲ್ಲಿ ನಡೆದ ಅನರ್ಥವಂ ಹೇಳುವುದಕ್ಕೆ ಶಕ್ಯವಲ್ಲ; ಏನೆಂದರೆ, ಒಂದು ದಿವಸ ಮೌರ್ಯಪುತ್ರರು ಮೃಗ ಗಳ ಬೇಟೆಯನ್ನು ಆಡಬೇಕೆಂದು ನಮ್ಮನ್ನು ನಿರ್ಬಂಧಪಡಿಸಲು; ನಾವೆಲ್ಲರೂ ಹೋಗಿ, ಮೃಗಗಳ ಬೇಂಟೆಯಂ ಮಾಡಿದ ಮೇಲೆ ವಿಶ್ರಾಂತ್ಯರ್ಥವಾಗಿ ಪುರದ ಉದ್ಯಾನದಲ್ಲಿ ನಿಂತು, ಅಲ್ಲಿಯೇ ಪಾಕವಂ ಮಾಡಿಸಿ, ನಾವು ಪುಷ್ಪವಾಟಿಕೆಯಂ ನೋಡುತ್ತಿರುವ ಸಮಯದಲ್ಲಿ ಮೌರ್ಯಪುತ್ರರು ಹಸಿವಂ ಸಹಿಸಲಾರದೆ, ನಾವು ಪಙ್ತಿಗೆ ಬರುವುದಕ್ಕೆ ಮುಂಚಿತವಾಗಿಯೇ ಅಲ್ಲಿ ಮಾಡಿದ ಭಕ್ಷ್ಯಗಳಂ ಭಕ್ಷಿಸಿ, ತೀವ್ರವಾದ ಕಾಪಿಶಾಯಿನವೆಂಬ ಮದ್ಯವಂ ತರಿಸಿ, ಅಮಿತವಾಗಿ ಪಾನವಂ ಮಾಡಿದುದರಿಂದ ದೇಹಸ್ಮೃತಿ ತಪ್ಪಿ, ಪಾಕಶೇಷವಂ ಎಂಜಲು ಮಾಡಿ, ಪಾಚಕರಂ ಪ್ರಹರಿಸಿ, ಒಬ್ಬರೊಬ್ಬರು ಬಡಿದಾಡುತ್ತಾ, ಹೋರಾಡುತ್ತಾ, ಅಲ್ಲಿ ಜೀರ್ಣವಾದ ಸ್ತಂಭಂಗಳಿಗೆ ಬೇರೆ ಕಂಬಗಳನ್ನು ಕೊಡುವುದಕ್ಕೆ ನಿಲ್ಲಿಸಿದ್ದ ಸನ್ನೆಮರಗಳಿಗೆ ಬಂಧಿಸಿದ್ದ ಹಗ್ಗಗಳಂ ಹರಿದು, ಆ ಮರಗಳಿಗೆ ಕಯ್ಯಂ ನೀಡಲು, ಅವು ಸಡಲಿ ಬೀಳುವಷ್ಟರಲ್ಲಿಯೇ ಮಕ್ಕಳ ಕೋಲಾಹಲವಿದೇನೆಂದು ಮೌರ್ಯನು ಒಳಪೊಕ್ಕನು. ಆಗಲೇ ಭಾರವಾಸಿಯಾದ ಮೇಲಿನಂತಸ್ತು ಮುರಿದು, ಮೇಲೆ ಬಿದ್ದುದರಿಂದ ಮೌರ್ಯನೂ ಅವನ ಪುತ್ರರಲ್ಲಿ ಚಂದ್ರಗುಪ್ತನೊಬ್ಬನು ಹೊರತು ಮಿಕ್ಕವರೆಲ್ಲರೂ ಸತ್ತುಹೋದರು. ಅವನಿಗೂ ಬಹು ಘಾತ ತಗು ಲಿರುವುದರಿಂದ ಆತನು ಸಹ ಮುಂದೆ ಜೀವಿಸುವುದು ಸಂಶಯವೆಂದು ತೋರುತ್ತದೆ. ಎಂದಿಗೂ ಅಗಲದೇ ಇದ್ದ ಮೌರ್ಯಪುತ್ರರಂ ನೀಗಡಿಸಿ, ಸಂಹರಿಸಿ, ನಮ್ಮನ್ನು

ಮಾತ್ರ ಉಳಿಸಿರುವ ದೈವಸಂಕಲ್ಪಕ್ಕೆ ಎಷ್ಟು ಆಶ್ಚರ್ಯಪಡಬೇಕು! ತಾವು ಇಲ್ಲಿ ಇಲ್ಲದುದರಿಂದ ಎಷ್ಟುಮಂದಿ ಧೈರ್ಯವನ್ನು ಹೇಳಿದಾಗ್ಯೂ ನಮ್ಮ ಮನಸ್ಸಿನಲ್ಲಿ ಹುಟ್ಟಿರುವ ಭೀತಿಯು ಅಡಗುವುದಿಲ್ಲ. ಅಪ್ಪಣೆಯಾದರೆ ನಾವೂ ಅಲ್ಲಿಗೆ ಬರುತ್ತಿದ್ದೇವೆ. ಈ ವರ್ತಮಾನವನ್ನು ಬರೆವುದಕ್ಕೆ ಭೀತಿ ಚಿಂತಾವಿಷ್ಟರಾದಾಗ್ಯೂ ಹಾಗೆ ಬರೆಯದಿದ್ದರೆ ಸನ್ನಿಧಿಯಲ್ಲಿ ಪೂರ್ಣಾಪರಾಧಿಗಳಾದೇವೆಂಬ ಶಂಕೆಯಿಂದ ಬರೆದು ಬಿನ್ನೈಸಿದೆವು.

ಹೀಗೆಂದು ಬರೆದಿರುವ ಓಕ್ಕಣೆಯನ್ನು ರಾಕ್ಷಸನು ಓದಿಕೊಂಡು, ತನ್ನ ಮನದಲ್ಲಿ ಆಶ್ಚರ್ಯಪಟ್ಟು, ಆಲೋಚಿಸುತ್ತಾ—ಅಕಟಕಟಾ! ನಂದರು ಮೌರ್ಯರಲ್ಲಿ ನಿಷ್ಕಾರಣವಾಗಿ ಮತ್ಸರವನ್ನು ಮಾಡಿದಂತೆಯೇ ರಾಯನು ಪಟ್ಟಣದಲ್ಲಿ ಇಲ್ಲದ ವೇಳೆಯಲ್ಲಿ ಅವರೆಲ್ಲರಂ ಕಪಟದಿಂದ ಸಂಹರಿಸಿ, ಲೋಕಾಪವಾದಕ್ಕೆ ಪಾತ್ರರಾದರು. ಇನ್ನು ಮೇಲೆ ಅವರಿಗೆ ದೈವಬಲ ಒದಗದು. ಪ್ರಜೆಗಳಿಗೆ ಇವರಲ್ಲಿ ಅನುರಾಗವು ತಪ್ಪೀತು! ಮಾಡುವುದೇನು? ಇದರ ಹಾನಿ ವೃದ್ಧಿ ಏನಿದ್ದರೂ ಇವರನ್ನೇ ಹೊಂದುವುದು. ಇವರಲ್ಲಿ ಉಂಟಾದ ದೋಷದಲ್ಲಿಯೇ ದೃಷ್ಟಿ ಇಟ್ಟು, ನಾವು ಇವರನ್ನು ಉಪೇಕ್ಷಿಸಿದರೆ, ಬಹುಕಾಲದಿಂದ ಸಂರಕ್ಷಿಸಿದ ವೃದ್ಧರಾಜಂಗೆ ಬಹಳ ದುಃಖ ಉಂಟಾಗುವುದು. ಇದಲ್ಲದೆ ಈತನು ತನ್ನ ಮಕ್ಕಳಿಗೆ ನನ್ನಿಂದಲೇ ಯಶೋವೃದ್ಧಿಯು ಆಗುವುದೆಂದು ನಂಬಿಕೊಂಡಿದ್ದಾನೆ. ಆದುದರಿಂದ ನಾನು ಇದರ ಮೂಲವನ್ನು ಅರಿಯದವನಂತೆ ಈ ರಾಯನನ್ನು ಸಮಾಧಾನಗೊಳಿಸಿ, ಪುರಕ್ಕೆ ಕರೆದುಕೊಂಡು ಹೋಗಬೇಕೆಂದು ನಿಶ್ಚಯಿಸಿ, ಖಿನ್ನನಾಗಿ ಕಾಗದವನ್ನು ಓದಿಹೇಳುವುದಕ್ಕೆ ಉಪಕ್ರಮಿಸಿ, ಗದ್ಗದಸ್ವರದೊಡನೆ ಕೂಡಿ, ಬಹು ಕಷ್ಟದಿಂದ ಓದುತ್ತಿರಲು, ರಾಯಂ ರಾಕ್ಷಸನಂ ಕುರಿತು—ಏನಯ್ಯಾ ಅಮಾತ್ಯನೇ, ಕಾಗದವಂ ನೋಡಿ, ಬಹು ಚಿಂತಿಸುತ್ತಾ, ಖಿನ್ನ ಹೃದಯನಾಗಿ ಇರುವೆ? ನಮ್ಮ ಪಟ್ಟಣದಲ್ಲಿ ಅರಿಷ್ಟವೇನಾದರೂ ಉಂಟಾಯಿತೋ? ಅಥವಾ ನಮ್ಮ ಪುತ್ರರು ಅನ್ಯೋನ್ಯ ಕಲಹದಿಂದ ವಿಪತ್ತನ್ನೇನಾದರೂ ತಂದುಕೊಂಡರೋ? ಇದರ ಅರ್ಥವನ್ನರುಹುವನಾಗು ಎನಲು; ಆ ಮಾತಿಗೆ—ಸ್ವಾಮಿ, ದೈವವಿಲಾಸ! ಇದರ ಅರ್ಥವಿನ್ನೇನು? ಪುತ್ರಸಮೇತನಾದ ಮೌರ್ಯನಿಗೆ ವಿಪತ್ತು ಸಂಭವಿಸಿತಂತೆ ಎಂದು ಹೇಳಿ, ಆ ಕಾಗದದ ಒಕ್ಕಣೆಯನ್ನು ಓದಿ ತಿಳಿಸಿದನು. ಅದಂ ಕೇಳಿದ ಮಾತ್ರದಲ್ಲೇ ರಾಯನು ಮೂರ್ಛಾಗತನಾಗಿ ಬೀಳಲು; ಕೂಡಲೇ ಸುನಂದಾದೇವಿಯು ಬಂದು, ಶೈತ್ಯೋಪಚಾರದಿಂದ ಸಮಾಧಾನಗೊಳಿ

ಸಿದ ಮೇಲೆ ಚೇತರಿಸಿಕೊಂಡು—ಮುರಾದೇವಿಯು ಪುಣ್ಯಶಾಲಿನಿಯಾದ ಕಾರಣ ದಿಂದ ಈ ಪುತ್ರಶೋಕವನ್ನು ಕಾಣದೆ ತ್ರಿವೇಣಿಯಲ್ಲಿ ತನ್ನ ಶರೀರವನ್ನು ಒಪ್ಪಿಸಿ ಸ್ವರ್ಗಸ್ಥಳಾದಳು. ನಾನು ನಿರ್ಭಾಗ್ಯನಾದುದರಿಂದ ಈ ಪುತ್ರಶೋಕಕ್ಕೆ ಪಾತ್ರ ನಾದೆನು. ಹಾ ! ಮೌರ್ಯನೇ ! ನಿನಗೆ ಪುತ್ರಸಮೇತವಾಗಿ ಇಂಥಾ ದುರ್ಮರಣವು ಪ್ರಾಪ್ತವ ಯಿತೇ ! ಎಂದು ಬಹಳವಾಗಿ ಪ್ರಲಾಪಿಸಿ ಅಮಾತ್ಯನಂ ಕುರಿತು—

ಎಲೈ, ಅಮಾತ್ಯನೇ, ಈ ನಂದರು ಬರೆದು ಇರುವ ಪ್ರಕಾರವೇ ನಡೆದು ಇದ್ದೀತೋ ? ಅಥವಾ ದೈವಯೋಗದಿಂದೇನಾದರೂ ನಂದರಿಗೆ ಮೌರ್ಯರಲ್ಲಿ ಮಾತ್ಸರ್ಯ ಹುಟ್ಟಿ ಅಥವಾ ಮತ್ತೊಂದು ಪ್ರಕಾರದಿಂದ ಮೌರ್ಯರಿಗೆ ಮರಣ ಸಂಭವಿಸಿತೋ ? ಯೋಚಿಸಿ ಹೇಳೆನಲು ; ರಾಯನ ಮಾತಂ ಕೇಳಿ ಅಮಾತ್ಯನು—

ಜೀಯಾ, ಈ ಭಾಗದಲ್ಲಿ ನನಗೂ ತಮ್ಮಂತೆ ಸಂದೇಹವೇ ಹೊರತು ಹೀಗೇ ಸರಿಯೆಂದು ಹೇಳುವುದಕ್ಕೆ ಆಗುವುದಿಲ್ಲ. ದೈವಸಂಕಲ್ಪಕ್ಕೆ ಯಾರು ಮಾ ಡತಕ್ಕುದೇನು ? ನನಗೆ ಈ ಕೆಲಸವು ಹೀಗೆಯೇ ನಡೆದು ಇದೆ ಎಂಬ ನಿಶ್ಚಯವು ತೋರದೆ ನಾನಾವಿಧವಿಕಲ್ಪವು ತೋರುತ್ತಿದೆ. ಪ್ರಾಣಿಗಳಲ್ಲಿ ದೈವಸಂಕಲ್ಪವು ಯಾವ ಸಮಯದಲ್ಲಿ ಹೇಗೆ ಪರಿಣಮಿಸುವುದೋ ಅದನ್ನು ಮನುಷ್ಯಮಾತ್ರ ರಾದವರು ತಿಳಿಯಕೂಡದು. "ಕಸ್ಯಸೌಖ್ಯಂ ನಿರಂತರಂ" ಎಂಬಂತೆ ಈ ಸಂಸಾ ರದಲ್ಲಿ ಯಾರಿಗೆ ತಾನೇ ಸರ್ವದಾ ಸೌಖ್ಯವುಂಟು ? ಸುಖದುಃಖಗಳು ಮಿಶ್ರ ವಾಗಿಯೇ ಇರುವುವು. ಇದಕ್ಕೋಸ್ಕರವೇ ಜ್ಞಾನಿಗಳು ಈ ಸಂಸಾರವನ್ನು ತಿರಸ್ಕರಿಸಿ ಶಾಂತರಾಗಿರುವರು ಎಂಬಿವು ಮೊದಲಾದ ವಚನಗಳಿಂದ ಸಮಾಧಾ ನಂಗೊಳಿಸಲು ; ರಾಯನು ತ್ರಿವೇಣೀಸಂಗಮದೊಳ್ ಸ್ನಾನಂಗೆಯ್ದು ಲೋ ಕಾಂತರಸ್ಥನಾದ ಮೌರ್ಯನಿಗೆ ತಿಲೋದಕಮಂ ಕೊಟ್ಟು ಪತ್ನೀಪರಿವಾರ ಸಮೇತನಾಗಿ ನಿಜಪುರವನ್ನೈದಿದನು.

ಈ ರಾಯನು ಬಂದ ಬಳಿಕ ಮೌರ್ಯನ ಮರಣವಾರ್ತೆಯು ದೇಶಾಂತರ ದಲ್ಲೆಲ್ಲಾ ಪ್ರವರ್ತಿಸಿದ ಕೆಲವು ಕಾಲದ ಮೇಲೆ ನಂದಕಾಪಟ್ಯವು ಗತಾನುಗತಿಕ ವಾಗಿ ವೃದ್ಧರಾಜನ ಕಿವಿಗೂ ಬೀಳಲು ; ರಾಯನು ಸಮೀಪಕ್ಕೆ ಬಂದು ಇದ್ದ ರಾಕ್ಷಸನಂ ಕುರಿತು—ಈ ಪ್ರಕಾರ ಜ್ಞಾತಿದ್ರೋಹಮಂ ಮಾಡಿದ ನಂದರ ಮುಖಾವಲೋಕನವಂ ಮಾಡಕೂಡದು. ನಿಗ್ರಹಪಾತ್ರರಾದಿವರಂ ನಿಗ್ರಹಿಸ ಬೇಕು. ಇಲ್ಲವೇ ನಾವಾದರೂ ತಪೋವನಪ್ರವೇಶವಂ ಮಾಡಬೇಕೇ ಹೊರತು ಇಂಥಾ ದುಷ್ಟರ ಸಹವಾಸದಲ್ಲಿ ಇರಬಾರದು ಎಂದು ಹೇಳಲು ; ರಾಕ್ಷಸನುಕೇಳಿ—

ತಾವು ಅಪ್ಪಣೆಯನ್ನು ಕೊಡಿಸಿದುದು ಯುಕ್ತವೇ ಸರಿ. ಆದರೂ ಈಗ ತಾವು ತಪೋವನವಂ ಪ್ರವೇಶಿಸಿದರೆ ತಮ್ಮನ್ನು ಬಿಟ್ಟು ನಾನು ಒಂದು ಕ್ಷಣಮಾತ್ರವೂ ಇಲ್ಲಿ ಇರತಕ್ಕವನಲ್ಲ. ನಾವಿಬ್ಬರೂ ಹೊರಟು ಹೋದರೆ ಹಗೆಗಳು ಮೌರ್ಯರ ಸಂಹಾರದಿಂದ ನಂದರಲ್ಲಿ ಅವಿಶ್ವಾಸಿಗಳಾಗಿರುವ ಮಂತ್ರಿ ಸೇನಾಧಿಪತಿಗಳೇ ಮುಂತಾದವರಲ್ಲಿ ಭೇದವಂ ಹುಟ್ಟಿಸಿ ಈ ನಂದರಿಗೆ ಹಾನಿಯುಂಟಾಗುವಂತೆ ಮಾಡಿದರೆ ಆ ಅಪಯಶಸ್ಸು ತಮಗಲ್ಲವೇ? ರಾಜ್ಯಾಧಿಪತ್ಯವು ಅವರ ಅಧೀನವಾಗಿರುವಲ್ಲಿ ಅವರಂ ನಿಗ್ರಹಿಸುವುದಕ್ಕೆ ತಾನೇ ಹೇಗೆ ಕೂಡೀತು? ಆದ ಕೆಲಸವು ಆಗಿಹೋಯಿತು. ಇವರನ್ನು ಎದುರು ಕೆಡವಿಕೊಳ್ಳದೆ ತಾವು ಮಕ್ಕಳಲ್ಲಿ ಅವಿಶ್ವಾಸಿಗಳಾಗಿದ್ದೀರೆಂಬ ಅರ್ಥವನ್ನೂ ಜನರಿಗೆ ತೋರ್ಪಡಿಸದೆ ಇದನ್ನು ತಾವು ಅರಿಯದವರಂತೆ ಕೆಲವು ಕಾಲ ಇರಬೇಕು. ಇದಲ್ಲದೆ ಈಗ ಮೌರ್ಯಪುತ್ರನಾದ ಚಂದ್ರಗುಪ್ತನಂ ಕಾರಾಗೃಹದಿಂ ಬಿಡಿಸಿ ಆತನಿಗೆ ದೊಡ್ಡದಾದ ಅಧಿಕಾರವಂ ಕೊಡಿಸಿದರೆ ಮೌರ್ಯನಲ್ಲಿ ಅನುರಕ್ತರಾಗಿದ್ದ ಉದ್ಯೋಗಸ್ಥರು ಚಂದ್ರಗುಪ್ತನಿಗೂ ನಂದರಿಗೂ ಭೇದವಂ ಹುಟ್ಟಿಸಿ ತಾವು ಚಂದ್ರಗುಪ್ತನಿಗೆ ಸಹಾಯರಾಗಿ ನಂದರಿಗೆ ಹಾನಿಯನ್ನುಂಟುಮಾಡುವರು. ಮತ್ತು ಎಲ್ಲಿಯಾದರೂ ಜೀವಿಸಿಕೊಳ್ಳಲಿ ಎಂದು ಚಂದ್ರಗುಪ್ತನನ್ನು ಈ ಊರಿನಿಂದ ಇನ್ನೆತ್ತಲೂ ಕಳುಹಿಸಲೂ ಕೂಡದು. ಏತಕ್ಕೆಂದರೆ ಆತನು ಹೊರಗೆ ಹೋದಲ್ಲಿ ಹಗೆಗಳು ಸಹಾಯರಾಗಿ ಅವನಂ ಕರೆದುಕೊಂಡು ನಂದರ ಮೇಲೆ ಯುದ್ಧಸನ್ನದ್ಧರಾಗಿ ಬಂದಾರು. ಆಗ ಮೌರ್ಯನಿಗೆ ಆಪ್ತರಾಗಿದ್ದ ಉದ್ಯೋಗಸ್ಥರೂ ಬಂದಾಗುವರು. ಹೀಗಾಗುವಲ್ಲಿ ನಂದರಿಗೆ ಹಾನಿಯುಂಟಾಗುವುದು. ನಂದರಲ್ಲಿ ಇದು ಒಂದು ದುರ್ಗುಣವೇ ಹೊರತು ಶೌರ್ಯ್ಯಾದಾರ್ಯಾದಿ ಸುಗುಣಗಳೇನೂ ಕಡಮೆ ಇಲ್ಲ. ಆದಕಾರಣ ಏನಾದರೂ ಒಂದು ವ್ಯಾಜದಿಂದ ಚಂದ್ರಗುಪ್ತನಂ ಕಾರಾಗೃಹದಿಂದ ಬಿಡಿಸಿ ಸ್ವಲ್ಪ ಜೀವನವಂ ಕಲ್ಪಿಸಿ ಆತನನ್ನು ಈ ಪುರದಲ್ಲಿಯೇ ನಿಲ್ಲಿಸಬೇಕು. ತಾವು ನಂದರ ಈ ದುರ್ಗುಣವನ್ನು ಮನಸ್ಸಿನಲ್ಲಿಟ್ಟು ಅವರಲ್ಲಿ ಉದಾಸೀನತೆಯಂ ತೋರಿಸಿದರೆ ಮಹಾನರ್ಥ ಉಂಟಾಗಿ ತಮ್ಮ ಯಶಸ್ಸಿಗೂ ವಂಶಕ್ಕೂ ಹಾನಿ ಸಂಭವಿಸುವುದು; ಹೀಗೆಂದು ಹೇಳಿದನು. ಇವು ಮೊದಲಾದ ರಾಕ್ಷಸನ ಮಾತುಗಳನ್ನು ವೃದ್ಧರಾಜಂ ಹಿತವೆಂದು ಎಣಿಸಿ ಅರಿಯದವನಂತಿರ್ದಂ.

ಆ ಬಳಿಕ ರಾಕ್ಷಸನು ನಂದರ ಈ ದೋಷಪರಿಹಾರಕ್ಕೋಸ್ಕರ ಆ ಪುರದಲ್ಲಿ ಗ್ರಾಮಶಾಂತಿಯಂ ಮಾಡಿಸಿ ದೇವಾಲಯಗಳಲ್ಲಿ ವಿಶೇಷವಾಗಿ ಅಭಿಷೇಕ

ಉತ್ಸವಾರಾಧನೆಗಳು ನಡೆಯಲೆಂದು ನೇಮಿಸಿ ಅನೇಕ ಲಕ್ಷ ಬ್ರಾಹ್ಮಣ ಸಂತ
ರ್ಪಣೆಯಂ ಮಾಡಿಸಿ ಮೌರ್ಯರಲ್ಲಿ ಅನುರಕ್ತರಾಗಿರ್ದ ಅಧಿಕಾರಿಗಳಿಗೆ ನಿಮಿ
ತ್ತಾಂತರದಿಂದ ಬಹುಮಾನವಂ ಮಾಡಿ ನಂದರಲ್ಲಿ ಈ ಜನರಿಗೆ ಅನುರಾಗವನ್ನು
ಹುಟ್ಟಿಸುತ್ತಿರುವಲ್ಲಿ ನಂದರು ರಾಕ್ಷಸನ ಕೌಶಲ್ಯದಿಂದ ತಮ್ಮ ತಂದೆಯು ತಮ್ಮ
ನ್ನು ಧಿಕ್ಕರಿಸದೆ ಏನೂ ಅರಿಯದವನಂತೆ ಇರುತ್ತಿರುವ ಭಾವವನ್ನು ನೋಡಿ
ರಾಕ್ಷಸನು ತಮಗೆ ಪರಮಾಪ್ತನು ಎಂದು ತಿಳಿದು ವಿಶ್ವಾಸಿಸುತ್ತ ರಾಜ್ಯಕಾರ್ಯ
ವೇನಿದ್ದರೂ ಅದನ್ನು ಆತನ ಮುಖದಿಂದಲೇ ಮಾಡಿಸುತ್ತ ಮೊದಲಿಗಿಂತಲೂ
ಅತ್ಯಧಿಕವಾಗಿ ದೇಶಗಳನ್ನೂ ಉಂಬಳಿಯನ್ನೂ ಕೊಟ್ಟು ಬಹು ಸನ್ಮಾನವಂ
ಮಾಡುತ್ತಿರಲು; ರಾಕ್ಷಸನು ಅದಕ್ಕೆ ಬಹು ಸಂತುಷ್ಟನಾಗಿ ನಿದ್ರಾಹಾರವಂ
ನೋಡದೆ ಮಾಡುತ್ತಿರುವ ರಾಜ್ಯತಂತ್ರವಿಚಾರವಂ ಕೇಳಿದ ಪರರಾಜರ ಹೃದಯ
ಗಳು ತಲ್ಲಣಿಸುತ್ತಿರ್ದುವು.

ಹೀಗಿರುತ್ತಿರಲು ಕೆಲವು ಕಾಲದ ಮೇಲೆ ದೇಶಾಂತರವಿಶೇಷವರ್ತಮಾನವಂ
ತಿಳಿದುಬಂದು ಹೇಳುವಂತೆ ಕಳುಹಿಸಲ್ಪಟ್ಟ ಪರ್ವತರಾಜನ ಗೂಢಚಾರರು
ಪಾಟಲೀಪುರಕ್ಕೆ ಬಂದು ಅಲ್ಲಿ ನಡೆದ ಮೌರ್ಯಸಂಹಾರವನ್ನೂ ಆದರ ಕಾರಣ
ವೆಲ್ಲವನ್ನೂ ಸಾಂಗವಾಗಿ ತಿಳಿದು ತ್ವರಿತದಿಂದ ಹೋಗಿ ಪರ್ವತರಾಜನಿಗೆ
ಕೈ ಮುಗಿದು ಅದೆಲ್ಲವಂ ಹೇಳಲು; ಆ ರಾಯನು ಕೇಳಿ ತಲೆಯಂ ತೂಗಿ ತನ್ನ
ಬಳಿಯಲ್ಲಿದ್ದ ಶಬರವರ್ಮನೆಂಬ ಮಂತ್ರಿಯಂ ಕುರಿತು—

ಅಯ್ಯಾ, ಮಂತ್ರಿಶ್ರೇಷ್ಠನೇ, ಪಾಟಲೀಪುರದಲ್ಲಿ ನಡೆದ ವಿಶೇಷವರ್ತಮಾ
ನವಂ ಕೇಳಿದೆಯಾ? ನಂದರು ಬುದ್ಧಿಹೀನರಾಗಿ ತಮಗೆ ಛಾಯಾನುವರ್ತಿಗಳಾ
ಗಿಯೂ ಭೃತ್ಯರಾಗಿಯೂ ಸ್ವಜನರಾಗಿಯೂ ಬಹು ಕಾರ್ಯಗಳಿಗುಪಯೋಗಿ
ಗಳಾಗಿಯೂ ಇದ್ದ ಮೌರ್ಯರಲ್ಲಿ ಅಕಾರಣದ್ವೇಷವಂ ಮಾಡಿ ಕಪಟದಿಂದ
ಅವರೆಲ್ಲರಂ ಸಂಹರಿಸಿದರಂತೆ. ಇದಂ ನೋಡುವಲ್ಲಿ ರಣಾಂಗಣಕ್ಕೆ ಹೋಗುವ
ಪುರುಷನು ತನ್ನ ಕೈಗತ್ತಿಯನ್ನು ತಾನೇ ಮುರಿದು ಬಿಸುಟಂತಾಯಿತು. ಇನ್ನು
ನಂದರು ಶೂರಸ್ವಜನರುಳ್ಳವರೆಂಬ ಭೀತಿಯು ಶತ್ರುರಾಜರಿಗೆ ತಪ್ಪಿಹೋಯಿತು.
ಜೀವನಾರ್ಥವಾಗಿ ಸಂಬಳಕ್ಕೆ ಇರುವ ಜನರು ಎಷ್ಟು ಆಪ್ತರಾದರೂ ಸ್ವಜನ
ರಂತಹರೇ? ಬಹುಜನರುಳ್ಳವರೆಂಬ ಯಶಸ್ಸಿಗಿಂತಲೂ ಇಹದಲ್ಲಿ ಮತ್ತೊಂದು
ಪುರುಷಾರ್ಥವುಂಟೇ? ಅಮಾತ್ಯರಾಕ್ಷಸನು ಅವರಿಗೆ ಮಂತ್ರಿಯಾಗಿದ್ದಾಗ್ಯೂ

ಇಂಥಾ ನೀಚಕೃತ್ಯಕ್ಕೆ ಒಳಗಾಗಲಾರನು. ಆದರೆ ಅವನೂ ವೃದ್ಧರಾಜನೂ ಪಟ್ಟಣದಲ್ಲಿಲ್ಲದ ವೇಳೆಯಲ್ಲಿ ತಮ್ಮನ್ನು ನಂಬಿದ ಮೌರ್ಯರಂ ಕಪಟದಿಂದ ಸಂಹರಿಸಿ ಲೋಕಾಪವಾದಕ್ಕೆ ಪಾತ್ರರಾದರು. ಇದರಿಂದ ನಂದರು ಲೋಕದಲ್ಲಿ ಕಪಟಾಚರಣೆಯೇ ಪುರುಷಾರ್ಥದಾಯಕವೆಂದೂ ಆ ಆಚರಣೆಯಲ್ಲಿ ತಾವು ನಿಪುಣರೆಂದೂ ತಿಳಿದು ಇದ್ದಾರು. ಇಂಥವರಿಗೆ ಶತ್ರುಗಳ ಕಪಟೋಪಾಯದಿಂದಲೇ ಹಾನಿಯುಂಟಾಗುವುದು. ದೈವವಶದಿಂದ ಮೌರ್ಯರಲ್ಲಿ ಚಂದ್ರಗುಪ್ತನೆಂಬ ಒಬ್ಬನು ಮಾತ್ರ ಕಾರಾಗೃಹದಲ್ಲಿ ಜೀವವಂತನಾಗಿ ಇದ್ದಾನಂತೆ. ಆತನೇ ಸಮಯಾಂತರದಲ್ಲಿ ಇವರಿಗೆ ಶತ್ರುವಾದರೂ ಆದಾನು. ಇದರಿಂದ ಪ್ರಜೆಗಳಿಗೆ ಅವರಲ್ಲಿ ವಿಶ್ವಾಸ ತಪ್ಪಿ ಇದ್ದೀತು ಎಂದು ಹೇಳಲಾಗಿ ಶಬರವರ್ಮನು—

ಜೀಯಾ, ಅಪ್ಪಣೆಯನ್ನು ಪಾಲಿಸಿದರ್ಥವೆಲ್ಲವೂ ಸತ್ಯವೇ ಸರಿ. ಕಾರ್ಯದಕ್ಷನಾದ ಮೌರ್ಯರಲ್ಲಿ ಪ್ರಜೆಗಳಿಗೆ ಅನುರಾಗವೂ ಶತ್ರುಗಳಿಗೆ ಭೀತಿಯೂ ಉಂಟಾಗಿದ್ದಿತು. ಈ ಅರ್ಥವು ಆ ನಂದರಿಗೆ ತೋರಿಲ್ಲ. ಮೌರ್ಯವಧೆಯು ರಾಕ್ಷಸನಿಗೆ ಸಮ್ಮತವಾಗದಿದ್ದರೆ ಮುಖ್ಯಾಮಾತ್ಯನಾದ ರಾಕ್ಷಸನಿಗೂ ನಂದರಿಗೂ ಅಂತರಂಗಶುದ್ಧಿ ಇರುವುದಾಗಿ ಕಾಣುವುದಿಲ್ಲ. ಆತನು ತಟಸ್ಥಭಾವದಲ್ಲೇ ಇದ್ದಾನು. ಮೌರ್ಯನಿಂ ಪ್ರಸಿದ್ಧಿಗೆ ಬಂದ ಬಾಗುರಾಯಣಾದಿ ಸೇನಾಪತಿಗಳಿಗೆ ನಂದರಲ್ಲಿ ವಿಶ್ವಾಸವುಂಟಾಗಿರದು. ಜೀವನಾರ್ಥವಾಗಿ ಸ್ವಾಮಿಭೃತ್ಯರಂತೆ ಇದ್ದಾರು. ಚಂದ್ರಗುಪ್ತನೆಂಬವನಿಗೆ ದೈವಯೋಗದಿಂ ಬಂಧನಿವೃತ್ತಿಯಾದರೆ ಸಮಯಾಂತರದಲ್ಲಿ ಬಾಗುರಾಯಣಾದಿಗಳು ಆತನಿಗೆ ಸಹಾಯರಾದರೂ ಆಗಬಹುದು. ಇದೆಲ್ಲಾ ಪರರಾಜರಿಗೆ ಅವಕಾಶಸಮಯವು. ಆ ಪಾಟಲೀಪುರ ವಿಚಾರವು ಹೇಗಿದ್ದರೂ ಇರಲಿ ಎಂದು ನಾವು ಉದಾಸೀನರಾಗಿರುವುದು ರಾಜಧರ್ಮವಲ್ಲ. ಈಗ ನಂದರು ಬಹು ದೇಶಾಧಿಪತಿಗಳ ಕೈಯಿಂದ ಕಪ್ಪವಂ ತೆಗೆದುಕೊಳ್ಳುತ್ತ ಶರಣಾಗತರಲ್ಲಿ ಆಡಿದ ಅಭಯವಚನಮಂ ಮೀರುತ್ತ ಪರದೇಶಗಳಂ ಒತ್ತಿಕೊಳ್ಳುತ್ತ ಬಹಳವಾಗಿ ಹೆಚ್ಚಿ ಬರುವವರಾಗಿದ್ದಾರೆ. ನೆರೆಮನೆಯಲ್ಲಿ ಎದ್ದಿರುವ ಕಿಚ್ಚನ್ನು ಅಲ್ಲಿಯೇ ಕೆಡಿಸದಿದ್ದರೆ ಅದು ತನ್ನ ಮನೆಯನ್ನೂ ಹೇಗೆ ಸುಡುವುದೋ ಹಾಗೆಯೇ ಸಾಮಂತರು ಪ್ರಬಲರಾಗಿರುವಲ್ಲಿ ಅವರನ್ನು ನಿಗ್ರಹಿಸದಿದ್ದರೆ ನಮ್ಮ ದೇಶಗಳನ್ನು ಒತ್ತಿಕೊಳ್ಳದೆ ಇರುವರೇ? ಅರಸುಗಳಲ್ಲಿ ಯಾವ ವೇಳೆಯಲ್ಲಿ ಯಾರು ಶತ್ರುಗಳಾಗುವರೋ? ಮೇಘೋ

ದಯದಂತೆ ಒದಗುವ ರಾಜಕಾರ್ಯವು ತಿಳಿಯಲಶಕ್ಯವಾದುದರಿಂದ ಆ ಪಾಟಲೀ ಪುರದ ವರ್ತಮಾನವು ಪುನಃ ಚೆನ್ನಾಗಿ ನಮಗೆ ತಿಳಿಯುವಂತೆಯೂ ಆ ಪುರದ ಅಮಾತ್ಯರ ಬುದ್ಧಿಕೌಶಲ್ಯವಸ್ತುಪರಿಜ್ಞಾನಾದಿಗಳು ತಮ್ಮ ಚಿತ್ತಕ್ಕೆ ವೇದ್ಯ ವಾಗುವಂತೆಯೂ ಒಂದಾನೊಂದು ಕಪಟಶಿಲ್ಪವಂ ಮಾಡಿಸಿ ಚಾರರಿಂದ ಅದನ್ನು ಆ ಪುರಕ್ಕೆ ಕಳುಹಿಸಿ ಅದೆಲ್ಲವಂ ತಿಳಿಯಬೇಕೆನಲು; ಪರ್ವತೇಶ್ವರನು ಆ ವಾಕ್ಯಮಂ ಕೇಳಿ ಹಾಗೆ ಮಾಡಿಸಬಹುದೆಂದು ಹೇಳಿ ಅಂತಃಪುರಕ್ಕೆ ಹೋದನು.

ಆ ಬಳಿಕ ಶಬರವರ್ಮನು ಚತುರರಾದ ಶಿಲ್ಪಿಗಳಂ ಕರೆಯಕಳುಹಿಸಿ ಒಂದು ಪಂಜರವನ್ನೂ ಅದರಲ್ಲಿ ಕಪಟಸಿಂಹವನ್ನೂ ಮಾಡಿಸಿ ಆ ಪಂಜರಕ್ಕೆ ರಕ್ಷ ಕರಂ ನೇಮಿಸಿ ಅವರಿಗೆ ಅದರ ಉಪಾಯವಂ ತಿಳಿಸಿ ಕೆಲವು ಮಾತುಗಳನ್ನು ಹೇಳಿಕೊಟ್ಟು—ಈ ಪಂಜರವಂ ಪಾಟಲೀಪುರದ ಆಸ್ಥಾನದ ಬಳಿಯಲ್ಲಿ ಇಳುಹಿ ನಾನು ಹೇಳಿದ ರೀತಿಯಿಂ ಹೇಳಿಕೊಂಡು ಬೀದಿಯಲ್ಲಿ ಸಾರುತ್ತ ತಿರುಗುತ್ತಿದ್ದು ಇದರ ಪರೀಕ್ಷೆಯಂ ಯಾರು ಮಾಡುವರೋ ಅದನ್ನೂ ಅಲ್ಲಿನ ವಿಶೇಷ ವರ್ತಮಾನಗಳನ್ನೂ ತಿಳಿದುಕೊಂಡು ಬಂದು ಹೇಳಿರಿ ಎಂದು ಕಳುಹಿಸಲು; ಅವರು ಪಂಜರಸಹಿತರಾಗಿ ಪಾಟಲೀಪುರವನ್ನು ಕುರಿತು ಹೊರಟುಹೋದರು.

ಮತ್ತೊಂದು ದಿವಸದಲ್ಲಿ ಪರ್ವತರಾಜನು ಆಸ್ಥಾನಮಂಟಪದಲ್ಲಿರುವಾಗ ಗೂಢಚಾರರು ಬಂದು ಕೈಮುಗಿದು ನಿಂತುಕೊಂಡು—ಜೀಯಾ, ನಾವು ಲಂಪಾ ಕದೇಶಪ್ರಾಂತ್ಯಗಳಿಗೆ ಹೋಗಿದ್ದ ಚಾರರು. ಅಲ್ಲಿ ಕಂಡು ಕೇಳಿದ ವರ್ತಮಾ ನವನ್ನರುಹುವೆವು. ಅವಧರಿಸಬೇಕು. ಮೊದಲು ಪಾರ್ವತೇಯರ ಆಟ್ಟಳಿಗಳಂ ಸಹಿಸಲಾರದೆ ರಾಜ್ಯವಂ ಬಿಟ್ಟು ಓಡಿ ಹೋಗಿದ್ದ ಗಿರಿವರ್ಮನೆಂಬ ಅರಸ ನನ್ನು ಅಲ್ಲಿನ ಪೂರ್ವಿಕಾಪ್ತರಾದ ಅಧಿಕಾರಿಗಳು ಕರೆಯಕಳುಹಿಸಿ ಆತನ ಪಿತ್ರಾರ್ಜಿತವಾದ ಭಂಡಾರದ ರಹಸ್ಯವಂ ತಿಳುಹಿಸಲು; ಆದರಿಂದ ಅವನು ಮಹಾ ಧನಿಕನಾಗಿ ನಗ್ನದೇಶಾಧಿಪತಿಯೊಡನೆ ಮಿತ್ರತ್ವವಂ ಬಳಸಿ ಉಳಿದ ಸಾಮಂತ ರಾಜರ ಸಮ್ಮತಿಯಿಂದ ತನ್ನ ದೇಶಾಧಿಪತ್ಯವಂ ಮಾಡುತ್ತಿದ್ದಾನೆ. ಅವನ ಸುಗು ಣಂಗಳಾವುವೆಂದರೆ—

ಪರಸ್ತ್ರೀಮುಖಾವಲೋಕನಮಂ ವಿನಾಯಕಚತುರ್ಥೀಚಂದ್ರದರ್ಶನ ದಂತೆ ಭಾವಿಸುವನು. ನಿರಂತರದಲ್ಲಿಯೂ ವಿದ್ವಾಂಸರ ಸಮೂಹವನ್ನು ಸೇವಿಸು ವನು. ಪ್ರಜೆಗಳಂ ಮಕ್ಕಳಿಗಿಂತಲೂ ಹೆಚ್ಚಾಗಿ ಸಂರಕ್ಷಿಸುವನು. ಆತನ ದೇಶ

ದಲ್ಲಿ ನಾಸ್ತಿಕವಾದವೆಂಬುವುದು ಮೊಲದ ಕೊಂಬಿಗೆ ಸದೃಶವಾಗಿರುವುದು. ಅಪೂಜ್ಯರಿಗೆ ಪೂಜ್ಯತೆ ಎಂದಿಗೂ ಇಲ್ಲ. ಶೂರರಿಗಲ್ಲದೆ ಇತರರಿಗೆ ಸನ್ಮಾನ ದೊರಕದು. ಚೋರರಿಗೆ ನಿತ್ಯದಲ್ಲೂ ದಂಡನೆಯಹುದು. ವಂಚಕರಾದ ಕರಣಿಕರ್ಗೆ ಹಸ್ತಛೇದವಾಗುವುದು. ಪ್ರಜೆಗಳು ನ್ಯಾಯನೀತಿಗಳಂ ಮೀರದೆ ಇರುವರು. ಇಂಥಾ ರಾಯನು ಹೆಚ್ಚುತ್ತಿರುವ ಶೌರ್ಯದಿಂದ ನಮ್ಮ ಪಾರ್ವತೀಯರೊಡನೆ ಯುದ್ಧವನ್ನಪೇಕ್ಷಿಸಿ ಬರುವವನಾಗಿ ತೋರುತ್ತಿದೆ. ಅದಕ್ಕೆ ಸೂಚನೆ ನಿನಂದರೆ—ಅಲ್ಲಿನ ಕಾವಾಟದವರು ನಮ್ಮ ದೇಶಾಭಿಮುಖವಾಗಿರುವ ಮಾರ್ಗಗಳ ಹಳ್ಳ ತಿಟ್ಟುಗಳನ್ನು ಸಮ ಮಾಡುತ್ತಿರುವರು. ಇದು ಏಕೆಂದು ಕೇಳಿದರೆ ಅರಸನು ಮೃಗಗಳ ಬೇಂಟೆಯನ್ನಾಡಲು ಬರುವನೆಂಬುವರು. ಮಾರ್ಗಮಧ್ಯದಲ್ಲಿ ನದಿಗಳಂ ದಾಟುವುದಕ್ಕೆ ಬಹಳವಾಗಿ ಕಟ್ಟುತ್ತಿರುವ ಓಡೆಗಳಂ ನೋಡಿ ಇದು ಏನು ನಿಮಿತ್ತವಂದರೆ ಅರಸುಗಳು ಸ್ತ್ರೀಯರಿಂ ಸಮೇತರಾಗಿ ತೆಪ್ಪದುತ್ಸವಮನಾಡುವುದಕ್ಕಾಗಿ ಬರುವರೆಂಬರು. ಲಗ್ಗೆಯಂ ಹತ್ತುವ ನೂಲೇಣಿಗಳ ತಂಡವಂ ನೋಡಿ ಇವು ಯಾವ ಕಾರ್ಯಕ್ಕೆಂದು ಕೇಳಿದರೆ ಧಿಕ್ಕರಿಸುವರಲ್ಲದೆ ಪ್ರತ್ಯುತ್ತರವಂ ಹೇಳರು. ಆತನ ಸೀಮಾಂತದುರ್ಗಗಳಲ್ಲಿ ಯುದ್ಧಸಾಮಗ್ರಿಗಳು ಸಿದ್ಧವಾಗುತ್ತಿರುವುವು. ಜನಗಳು ಪ್ರಯಾಣಸನ್ನದ್ಧರಾಗಿರುವರು ಎಂದು ಬಿನ್ನೈಸಿದರು. ಈ ರೀತಿಯಾಗಿ ಹೇಳುತ್ತಿರುವ ಚಾರರ ವಾಕ್ಯವಂ ಕೇಳಿ ಆ ರಾಯನು ಶಬರವರ್ಮನ ಮುಖವಂ ನೋಡಿ—

ಏನೈ, ಅಮಾತ್ಯನೇ, ಪೂರ್ವವೈರವಂ ನೆನಸುತ್ತಿದ್ದ ಲಂಪಾಕಾಧಿಪತಿಗೆ ಒದಗಿರುವ ದೈವಬಲವಂ ನೋಡಿದೆಯಾ? ಆತನ ಚರಿತ್ರೆಯಂ ಕೇಳಿದರೆ ಪರರಾಜರಿಂ ಜಯಿಸಲು ಅಶಕ್ಯನೆಂದು ತೋರುತ್ತಿದೆ. ಇದಕ್ಕೇನು ಉತ್ತರವಂ ಹೇಳುವೆ? ಎನಲು; ಶಬರವರ್ಮನು—

ಜೀಯಾ, ಪೂರ್ವದಲ್ಲಿ ಚತುರ್ಬಲಹೀನನೆಂದು ನಾವು ಉಪೇಕ್ಷೆಯಂ ಮಾಡಿದುದಕ್ಕೆ ಈಗ ಇಂಥಾ ವರ್ತಮಾನವಂ ಕೇಳಬೇಕಾಯಿತು. ಎಷ್ಟು ಗುಣಸಂಪನ್ನನಾದರೂ ಆತನಿಗೆ ನೀತಿಜ್ಞರಾದ ಮಂತ್ರಿಗಳಿಲ್ಲದೆ ಇರುವುದರಿಂದ ಕಾರ್ಯವನ್ನು ನಿರ್ವಹಿಸಲಾರನು. ಪರರಾಜರೊಡನೆ ಯುದ್ಧವಂ ಬಯಸುತ್ತಿರುವ ನಮ್ಮ ಸೇನೆಗಳು ಹೊರಟರೆ ಅವನ ರಾಜ್ಯ ಸಾಮಗ್ರಿಗಳೆಲ್ಲವೂ ಒಂದು ದಿವಸವಾದರೂ ತರಹರಿಸಲಾರವು. ಇದಕ್ಕೆ ನನಗೆ ಅಪ್ಪಣೆಯಾದರೆ ಅವನ ಕೋಟೆ

ಕೊತ್ತಲಗಳನ್ನೂ ಕೆಡವಿ ನೆಲಸಮವಂ ಮಾಡಿ ಆ ಲಂಪಾಕಪತಿಯನ್ನು ಕೈಸೆರೆ ಯಾಗಿ ಹಿಡಿದು ತರುವೆನು. ಅಲ್ಲದಿದ್ದರೆ ಸೇನಾಸಂಪನ್ನನಾದ ಶೇಖರನಿಗಾದರೂ ಅಪ್ಪಣೆಯಾಗಬೇಕೆಂದು ವಿಜ್ಞಾಪಿಸಲು; ಆ ರಾಯನು—ಒಳ್ಳೆಯದು, ಆ ಲಂಪಾಕ ಪತಿಯ ಬರುವಿಕೆಯನ್ನೂ ಯುದ್ಧಾಭಿನಿವೇಶವನ್ನೂ ಇನ್ನೊಂದು ವೇಳೆ ತಿಳಿದು ಬಂದು ಚಾರರು ವಿಜ್ಞಾಪಿಸಿದ ಬಳಿಕ ಪ್ರಕೃತೋಚಿತವಂ ಮಾಡೋಣ ಎಂದು ಹೇಳಿ ತಾನು ಮಜ್ಜನಗೃಹಾಭಿಮುಖನಾದನು.

ಅನಂತರದಲ್ಲಿ ಶಬರವರ್ಮನು ಪುನಃ ಲಂಪಾಕಪತಿಯ ದೇಶಕ್ಕೆ ಚಾರರಂ ಕಳುಹಿಸಿ ತನ್ನ ಮನೆಗೆ ಹೋದನು.

ಇತ್ತಲಾ ಪಾರ್ವತೀಯರ ಪಟ್ಟಣದಿಂದ ಹೊರಟಿದ್ದ ಪಂಜರದವರು ಕೆಲವು ದಿವಸಗಳ ಮೇಲೆ ಪಾಟಲೀಪುರಕ್ಕೆ ಬಂದು ಆಸ್ಥಾನದ ಬಳಿಯಲ್ಲಿ ಆ ಪಂಜರವನ್ನಿಳುಹಿ ವಾದ್ಯಸಮೇತವಾಗಿ—ಈ ಪುರದಲ್ಲಿ ಯಾರಾದರೂ ಜಾಣರಿದ್ದರೆ ಅಮಾನುಷಕೃತವಾದ ಈ ಪಂಜರವನ್ನು ಭೇದಿಸದೆ ಇದರಲ್ಲಿರುವ ಸಿಂಹವನ್ನು ಜೀವಸಹಿತವಾಗಿ ಹೊರಗೆ ತೆಗೆಯುವವರಾಗಲಿ. ಅಂಥವರು ಇಲ್ಲದಿದ್ದರೆ ಈಗ ನೋಡಿದ ದೇಶಗಳ ಜನದಂತೆ ನಮಗೆ ಸನ್ಮಾನವಂ ಮಾಡಿ ಮುಂದಕ್ಕೆ ಅಪ್ಪಣೆಯಂ ಕೊಡುವವರಾಗಲಿ ಎಂದು ಭುಜಗಳನ್ನೆತ್ತಿಕೊಂಡು ಸಾರುತ್ತಿರಲು; ಆ ವಾಕ್ಯವಂ ಕೇಳಿ ಪುರದ ಜನವೆಲ್ಲಾ ನೆರೆದು ನೋಡಿ ಅದರ ರಹಸ್ಯವಂ ತಿಳಿಯಲಾರದೆ ಹೋಗುತ್ತಿದ್ದರು. ಆಗ ಅದಂ ಕಂಡ ರಾಜಭಟರು ಆಸ್ಥಾನದಲ್ಲಿ ಕುಳಿತಿರ್ದ ನಂದರಿಗೆ—

ಜೀಯಾ, ಕೆಲವು ಜನರು ಅಖಂಡವಾದ ಪಂಜರದಲ್ಲಿ ಜೀವಸಿಂಹವಂ ಕೂಡಿಕೊಂಡು ದೇಶಾಂತರದಿಂದ ಇಲ್ಲಿಗೆ ಬಂದು ಆಸ್ಥಾನದ ಬಳಿಯಲ್ಲಿ ಅದನ್ನು ಇಳುಹಿ—ಈ ಊರಲ್ಲಿ ಪ್ರೌಢರಿದ್ದರೆ ಪಂಜರವಂ ಖಂಡಿಸದೆ ಸಿಂಹವನ್ನು ಜೀವಸಹಿತವಾಗಿ ಹೊರಗೆ ತೆಗೆಯತಕ್ಕದೆಂದು ಸಾರಿ ಹೇಳುತ್ತಿರುವುದನ್ನು ಈ ಊರಲ್ಲಿರುವ ಜನರೆಲ್ಲಾ ಕೇಳಿ ಬಂದು ಆ ಪಂಜರವಂ ನೋಡಿ ಅದರ ವಿವರವಂ ತಿಳಿಯಲಾರದೆ ಸುಮ್ಮನೇ ಹಿಂದಿರುಗಿ ಹೋದರಲ್ಲದೆ ಅದರ ಪರೀಕ್ಷಕರು ಒಬ್ಬರೂ ಕಾಣಲಿಲ್ಲವೆಂದು ತಿಳಿಸಲು; ನಂದರು ಅದಂ ಕೇಳಿ ತಮ್ಮ ಮಂತ್ರಿಗಳೆಲ್ಲಾ ಹೋಗಿ ನೋಡಿ ಬರಲಿ ಎಂದು ಆಜ್ಞಾಪಿಸಿದರು. ಆ ಪ್ರಕಾರವೇ ಅಮಾತ್ಯರಾಕ್ಷಸನೊಬ್ಬನು ಹೊರತು ಮಿಕ್ಕವರೆಲ್ಲರೂ ಆ ಪಂಜರದ ಬಳಿಗೆ

ಹೋಗಿ ನೋಡಿ ಅದರ ವಿವರವು ತಮಗೂ ತಿಳಿಯದೆ ಸುಮ್ಮನೆ ಹಿಂದಿರುಗಿ ಬಂದು ನಂದರ ಬಳಿಯಲ್ಲಿ ನಿಂತರು. ಆಗ ಅಮಾತ್ಯರಾಕ್ಷಸನು ನಂದರಂ ಕುರಿತು—

ಅಯ್ಯಾ, ರಾಜಕುಮಾರಕರುಗಳಿರಾ, ಸಿಂಹಸಮೇತವಾದ ಪಂಜರವು ಅಮಾನುಷಕೃತವಾಗದು. ಮತ್ತೇನಂದರೆ ಇದು ನಮ್ಮೆಲ್ಲರ ಬುದ್ಧಿಪರೀಕ್ಷಾರ್ಥವಾಗಿ ಕಪಟಿಗಳಾದ ಪರರಾಜರು ನಿರ್ಮಿಸಿ ಕಳುಹಿಸಿರುವ ಕಪಟಶಿಲ್ಪವೆಂದು ತೋರುತ್ತಿದೆ. ಆಗಲಿ; ಈ ಪುರದ ಜನರು ಇನ್ನೂ ಬಹಳವಾಗಿ ಇರುವರು. ಯಾರಲ್ಲಿ ಬುದ್ಧಿಕೌಶಲ್ಯವು ಹೇಗಿರುವುದೋ? ನಮ್ಮ ಭಟರುಗಳು ಹೋಗಿ ರಾಜಬೀದಿಗಳಲ್ಲಿ ಸಾರುತ್ತಾ ಬರಲಿ. ಅದರ ಪರೀಕ್ಷಕರು ಯಾರಾದರೂ ದೊರೆತಾರು. ಎಲ್ಲರೂ ನೋಡಿದ ಬಳಿಕ ಆ ಪಂಜರವಂ ತರಿಸಿ ನಾವೇ ನೋಡೋಣ ಎಂದು ಹೇಳಿ ದೂತರ ಮುಖವನ್ನು ನೋಡಿ—ಎಲೈ, ಇದರ ಪರೀಕ್ಷಕರು ಈ ಪಟ್ಟಣದಲ್ಲಿ ಇದ್ದರೆ ಅವರಿಗೆ ರಾಜಸನ್ಮಾನವು ಆದೀತೆಂದು ನೀವು ಸಾರುತ್ತಾ ಇರುವಾಗ ಯಾರಾದರೂ ದೊರೆತರೆ ಅವರನ್ನು ಕರಕೊಂಡು ಬನ್ನಿರಿ ಎಂದು ಆಜ್ಞಾಪಿಸಲಾಗಿ ಅದೇ ಪ್ರಕಾರ ಅವರು ರಾಜಬೀದಿಯಲ್ಲಿ ಕೂಗುತ್ತ ಬರುತ್ತಿರಲು; ಸೆರೆಮನೆಯ ಬಾಗಿಲಲ್ಲಿ ನಿಂತಿದ್ದ ಚಂದ್ರಗುಪ್ತನು ಆ ದೂತರಂ ಕರೆದು—

ಎಲೈ, ದೂತರುಗಳಿರಾ, ಈ ಪಟ್ಟಣದಲ್ಲಿ ಆ ಪಂಜರಪರೀಕ್ಷಕರು ಯಾರೂ ದೊರಕಲಿಲ್ಲವೇ? ಎಂದು ಕೇಳಿದಾಗ್ಗೂ ಆ ದೂತರು ಆತನಿಗೆ ಪ್ರತ್ಯುತ್ತರವಂ ಹೇಳದೆ ಪುನಃ ನಂದರ ಸನ್ನಿಧಿಗೈದಿ ಕೈಮುಗಿದು—

ಬುದ್ಧೀ, ಅಪ್ಪಣೆಯ ಮೇರೆಗೆ ಪಟ್ಟಣದಲ್ಲೆಲ್ಲಾ ಸಾರಿದೆವು. ಈ ಪುರದ ಆಬಾಲವೃದ್ಧರೆಲ್ಲರೂ ಬಂದು ನೋಡಿ ಒಬ್ಬರಿಗೂ ಅದರ ಪರೀಕ್ಷೆ ತಿಳಿಯದೆ ಇದು ಅಮಾನುಷಕೃತವೇ ಸರಿ ಎಂದು ಹೇಳಿಕೊಂಡು ಹೋದರೆಂದು ಬಿನ್ನವಿಸಲು; ನಂದರು ಆಶ್ಚರ್ಯಪಟ್ಟು ತಾವೇ ಆ ಪಂಜರವಂ ತರಿಸಿ ನೋಡಿ ತಮಗೂ ಅದರ ವಿವರ ತಿಳಿಯದೆ ಪುನಃ ಆ ದೂತರಂ ಕುರಿತು—ಇಂಥಾ ದೊಡ್ಡದಾದ ಪಟ್ಟಣದಲ್ಲಿ ಇದರ ಪರೀಕ್ಷಕರು ಯಾರೂ ಇಲ್ಲದೆ ಹೋದರೇ? ಎಂದು ಕೇಳಲಾಗಿ—ಸ್ವಾಮಿ, ಯಾರೂ ಇಲ್ಲ. ಅವನಾರೋ ಕಾರಾಗೃಹದ ಬಾಗಿಲಲ್ಲಿ ನಿಂತಿದ್ದ ಒಬ್ಬನು ನಮ್ಮನ್ನು ಕುರಿತು—ಈ ಊರಲ್ಲಿ ಯಾರೂ ಅದರ ಪರೀಕ್ಷಕರು ದೊರಕಲಿಲ್ಲವೇ? ಎಂದು ಕೇಳಿದನಲ್ಲದೆ ಮತ್ತಾರೂ ಹೀಗೆ ಹಾಗೆ ಎಂಬುದಾಗಿ ಕೇಳಲಿಲ್ಲವೆಂದು ಬಿನ್ನೈಸಿದರು.

ಆ ಮಾತಿಗೆ ನಂದರು—ಅವನು ಬಲ್ಲವನಾಗಿರಬೇಕು. ಅದರ ಪರೀಕ್ಷೆಯಂ ಅವನು ತಿಳಿದು ಹೇಳಿದರೆ ಕಾರಾಗೃಹದಿಂದ ತಾನು ಬಿಡಿಸಲ್ಪಟ್ಟು ವಿಶೇಷ ಸನ್ಮಾನಕ್ಕೆ ಪಾತ್ರನಾಗುವನು. ಅವನಂ ಕರೆದುಕೊಂಡು ಬನ್ನಿರಿ ಎನ್ನಲು ; ಅಪ್ಪಣೆ ಎಂದು ಭಟರು ಅಲ್ಲಿಗೆ ಹೋಗಿ ಸೆರೆಮನೆಯಲ್ಲಿರುವ ಚಂದ್ರಗುಪ್ತನಂ ಕಂಡು ಮಹಾರಾಜರ ಅಪ್ಪಣೆಯಾಗಿದೆ. ಪಂಜರಪರೀಕ್ಷೆಯಂ ಮಾಡುವುದಕ್ಕೆ ಬನ್ನಿರಿ ಎಂಬುದಾಗಿ ಕರೆಯಲು; ಅವರ ಮಾತಿಗೆ—ಒಳ್ಳೆಯದು ಎಂದು ಚಂದ್ರಗುಪ್ತನು ಬರುತ್ತಿದ್ದನು. ಅಷ್ಟರೊಳಗೆ ರಾಕ್ಷಸನು ದೂರದಿಂದಲೇ ಆ ಪಂಜರವನ್ನು ನೋಡಿ ತನ್ನ ಮನಸ್ಸಿನಲ್ಲಿ ಆಲೋಚಿಸುತ್ತ—

ನಾನು ಈಗಲೇ ಇದನ್ನು ನೋಡಿ ಇದರ ಪರೀಕ್ಷೆಯು ನನ್ನಿಂದ ಆಗದೆ ಹೋಗಿ ಆ ಮೇಲೆ ಮತ್ತೊಬ್ಬನು ಬಂದು ತಿಳಿದು ಹೇಳಿದರೆ ಆಗ ನನಗೆ ಬಹಳ ಅವಮಾನ ಉಂಟಾಗುವುದು. ಅದಕಾರಣ ಈಗ ಹೋಗಿ ನೋಡುವುದು ಯುಕ್ತವಲ್ಲ. ಪ್ರಕೃತದಲ್ಲಿ ಯಾವನೋ ಕಾರಾಗೃಹದಿಂದ ಬರುತ್ತಾನಷ್ಟೆ! ಅವನು ಬಂದು ನೋಡಿ ತಿಳಿದು ಅದರ ಪರೀಕ್ಷೆಯಂ ಮಾಡಿ ಸನ್ಮಾನಿತನಾಗಿ ಹೋದರೆ ಹೋಗಲಿ. ಅದು ಅವನಿಂದಲೂ ಆಗದ ಪಕ್ಷಕ್ಕೆ ಆ ಮೇಲೆ ನಾನು ಹೋಗಿ ತಿಳಿದು ಹೇಳಿದರೆ ವಿಶೇಷ ಬಹುಮಾನವುಂಟಾಗುವುದು. ತಿಳಿಯದ ಪಕ್ಷದಲ್ಲಿ ಎಲ್ಲರಂತೆ ನಾನೂ ಆಗುವೆನೇ ಹೊರತು ಅಪಮಾನ ಬೇರೆ ಇಲ್ಲವೆಂದು ನಿಶ್ಚಯಿಸಿ ಸುಮ್ಮನೇ ಇದ್ದನು. ಅಷ್ಟರಲ್ಲೇ ನಂದರು ಮತ್ತೊಂದು ಸ್ಥಾನಕ್ಕೆ ಹೋದರು.

ಆಗ ಚಂದ್ರಗುಪ್ತನು ಬಂದು ಆ ಪಂಜರವಂ ನೋಡಿ ತನ್ನೊಳಗೆ—ಈ ಪಂಜರವು ಅಖಂಡವಾದ ಎರಕವಾಗಿದೆ. ಇದರಲ್ಲಿರುವ ಸಿಂಹವು ಪೋಷಕನು ಕೊಟ್ಟ ಮಾಂಸಕ್ಕೆ ಎರಗುತ್ತ ಹೊರಗಡೆಯಲ್ಲಿ ಅವನು ಪಂಜರವಂ ಬಳಸಿ ಬಂದರೆ ಅವನು ಬಂದ ಕಡೆಯಲ್ಲೆಲ್ಲಾ ಮಾಂಸಾಪೇಕ್ಷೆಯಿಂದ ಒಳಗೆ ತಾನೂ ಬಳಸಿ ಬರುತ್ತಿದೆ. ಪಂಜರವು ಅಖಂಡವಾಗಿಯೂ ಒಳಗಿನ ಸಿಂಹವು ಮಾಂಸಾಭಿಲಾಷಿಯಾಗಿಯೂ ಇರುವುದರಿಂದ ಇದು ಅಮಾನುಷಕೃತವೆಂದು ಹೇಳುವುದಕ್ಕೆ ಆಸ್ಪದವಾಯಿತು ಎಂದು ಯೋಚಿಸಿ ಅದರ ರಕ್ಷಕರು ಮಾಂಸ ಕೊಡುವುದನ್ನೂ ಆ ಸಿಂಹವು ಗ್ರಹಿಸುವುದನ್ನೂ ನೋಡಿ ಅದರ ಭಾವವಂ ತನ್ನ ಮನಸ್ಸಿಗೆ ತಂದುಕೊಂಡು ಸಮೀಪದಲ್ಲಿದ್ದ ರಾಜಭಟನಿಗೆ ಹೇಳಿ ಮಾಂಸಖಂಡವಂ ತರಿಸಿ

ಅವರಂತೆ ತಾನೂ ಅದಂ ಸಿಂಹಕ್ಕೆ ನೀಡಿ ಕೊಡಲಾಗಿ ಆ ಸಿಂಹವು ಮಾಂಸಾಭಿಮುಖವಾಗದೆ ಸುಮ್ಮನೆ ಇರಲು ಆ ಪಂಜರ ರಕ್ಷಕರಂ ನೋಡಿ—

ಏನಿರೈ, ನಾನು ಕೊಟ್ಟ ಮಾಂಸವನ್ನು ಈ ಸಿಂಹವು ಏಕೆ ಗ್ರಹಿಸಲಿಲ್ಲ? ಎಂದು ಕೇಳಲು; ಆ ಮಾತಿಗೆ ಪಂಜರರಕ್ಷಕರು ತಮ್ಮ ಮನದಲ್ಲಿ ಆತಂಕಪಡುತ್ತ—

ಅಯ್ಯಾ ನೋಟಕರೇ, ಸಿಂಹವು ಅಮಾನುಷಕೃತವಾದುದರಿಂದ ತನ್ನ ಉಪಾಸಕರ ಹಸ್ತಾಹಾರವಂ ಗ್ರಹಿಸುವುದಲ್ಲದೆ ಅನ್ಯರಂ ಭಾವಿಸುವುದುಂಟೇ? ಎಂದು ಕಪಟೋಕ್ತಿಯಂ ನುಡಿಯಲು; ಚಂದ್ರಗುಪ್ತನು—ಇದು ಅಪಲಾಪವಾಕ್ಯವೆಂದು ತಿಳಿದು ಪುನಃ ಯೋಚಿಸುತ್ತ—

ಈ ಪಂಜರವು ಅಖಂಡವಾದುದರಿಂದ ಇದರೊಳಗೆ ಜೀವಸಿಂಹವು ಹೇಗೆ ಹೋಗುವುದು? ಈ ಪಂಜರರಕ್ಷಕನು ಪಂಜರವಂ ಬಳಸಿ ಬರುತ್ತಿದ್ದರೆ ಈ ಸಿಂಹವು ಮಾಂಸವಂ ಕೊಡುವವನಲ್ಲಿ ಮಾಂಸಾಭಿಲಾಷೆಯಿಂದಲೋ ಎಂಬಂತೆ ಅವನು ಬಂದ ಕಡೆಗೆ ತಾನೂ ತಿರುಗುತ್ತಿರುವುದರಿಂದಲೂ ಅವನು ದೂರಸ್ಥನಾದರೆ ತಿರುಗುವ ಆಯಾಸದಿಂದಲೋ ಎಂಬುವ ಹಾಗೆ ಕಂಠವನ್ನಲುಗಿಸುತ್ತ ಶ್ವಾಸವನ್ನು ಬಿಡುವಂತೆ ಇರುವುದರಿಂದಲೂ ಪಂಜರರಕ್ಷಕನು ನೀಡಿಕೊಟ್ಟ ಮಾಂಸದಲ್ಲಿ ಆಸಕ್ತಿಯಿಂದಲೋ ಎಂಬಂತೆ ಬಾಲದ ತುದಿಯಂ ತಲೆಯಲ್ಲಿ ಕುಣಿಸುತ್ತ ಮಾಂಸವಂ ಕಚ್ಚುವುದರಿಂದಲೂ ಜೀವಸಿಂಹವೇ ಸರಿಯೆಂದು ತೋರುತ್ತಿದೆ. ಹೀಗಿದ್ದರೂ ಇದು ಜೀವಸಿಂಹವಾಗಲಾರದು. ಇದು ಅರಗು ಮೇಣ ಈ ಮುಖ್ಯವಾದ ಸರಿಗಳಿಂ ತೊಡೆಯಲ್ಪಟ್ಟ ಬಟ್ಟೆಗೆ ಸಿಂಹದ ರೋಮಂಗಳಂ ಹತ್ತಿಸಿ ಅದಂ ಚರ್ಮದಂತೆ ಮಾಡಿ ಹೊರಗಿದ್ದ ಪುರುಷನ ಕೌಶಲ್ಯದಿಂದ ಮಾಂಸವಂ ಕೊಡುವ ರಂಧ್ರಮುಖವಂ ಹಿಡಿದು ಅದರ ಅಸ್ಥಿಸ್ಥಾನಕ್ಕೆ ಕಬ್ಬಿಣದ ಸಲಾಕಿಗಳಂ ಜೋಡಿಸಿ ಬಾಲ ಕತ್ತುಗಳಿಗೆ ರೋಮ ಸಹಿತವಾದ ಉಕ್ಕಿನ ತಂತಿಗಳಂ ಜೊತೆಗೊಳಿಸಿ ಅಲ್ಲಿಗಲ್ಲಿಗೆ ಬಣ್ಣವಂ ಬರೆದು ಪೂರೈಸಿದ ಕೃತ್ರಿಮಸಿಂಹವಾಗಿರಬಹುದು. ಆದಾಗ್ಯೂ ಇನ್ನೊಂದು ಪರೀಕ್ಷೆಯಂ ಮಾಡುವೆನೆಂದು ದೂತರಂ ಕರೆದು ಅವರಂ ಆನೆಯ ಲಾಯಕ್ಕೆ ಕಳುಹಿಸಿ ಒಂದು ಮರಿಯಾನೆಯಂ ತರಿಸಿ ಅದರ ಕಣ್ಣುಗಳಂ ಕಟ್ಟಿಸಿ ಪಂಜರವಂ ಬಳಸಿ ಬರುವಂತೆ ಮಾಡಲು; ಅದನ್ನು ನೋಡಿ ಆ ಸಿಂಹವು ಅರ್ಭಟಿಸದೇ ಇದ್ದುದರಿಂದ ಇದು ಕಪಟಸಿಂಹವೆಂದು ನಿಸ್ಸಂದೇಹವಾಗಿ ತಿಳಿದುದಲ್ಲದೆ ಆ ಸಿಂಹವು ಚಲಿಸುವುದಕ್ಕೂ ಮಾಂಸವಂ ಚುಚ್ಚಿ

ಕೊಡುವುದಕ್ಕೂ ಸಾಧನವಾದ ಸಲಾಕಿಯಂ ಪಿಡಿದಿರುವ ಪಂಜರರಕ್ಷಕನಂ ನೋಡಿ—ಇದರ ತುದಿಯ ಮಾಂಸಕ್ಕೆ ಸಿಂಹವೆರಗಿ ಕಚ್ಚುವುದರಿಂದಲೂ ಸಲಾಕಿಯಂ ಪಿಡಿದಿರುವ ಈ ಪುರುಷನು ತಿರುಗಿದ ಕಡೆಗೆಲ್ಲಾ ಒಳಗೆ ಈ ಸಿಂಹವು ತಾನೂ ತಿರುಗುವುದರಿಂದಲೂ ಈ ಕೈಸಲಾಕಿಯು ಸೂಜಿಗಲ್ಲಿನ ಸತ್ವದಿಂ ಮಾಡಿರಬೇಕು. ಕಬ್ಬಿಣವನ್ನು ಹಿಡಿಯುವ ಧರ್ಮವು ಸೂಜಿಗಲ್ಲಿನ ಸ್ವಭಾವವು ಎಂದು ನಿಶ್ಚಯಿಸಿ ಆ ಪಂಜರರಕ್ಷಕನಂ ಕುರಿತು—

ಎಲೈ, ನಿನ್ನ ಕೈಸಲಾಕಿಯಂ ಬಿಟ್ಟು ಪಂಜರವಂ ಬಳಸಿ ಬಾರೆನಲು ಅವನು ಆ ವಾಕ್ಯವಂ ಕೇಳಿ ತನ್ನ ಮನಸ್ಸಿನಲ್ಲಿ—ಯಾರಿಗೂ ತಿಳಿಯದಿರುವ ಸಲಾಕಿಯ ಪರೀಕ್ಷೆಯಂ ಇವನು ತಿಳಿದನು! ಈತನು ಕಪಟಶಿಲ್ಪೋಪಾಯ ಪರೀಕ್ಷೆಯಲ್ಲಿ ಸಮರ್ಥನೆಂದು ತೋರುತ್ತಿದೆ! ನಮ್ಮ ಕಪಟವು ಈತನಿಂದ ಬಯಲಾಗುವುದು! ಈತನ ಆಕ್ಷೇಪಕ್ಕೆ ಹೀಗೆ ಹೇಳಬೇಕು ಎಂದು ನಿಶ್ಚಯಿಸಿ ಚಂದ್ರಗುಪ್ತನಂ ಕುರಿತು—

ಅಯ್ಯಾ ನೋಟಕರೇ, ಜನ್ಮಾರಭ್ಯ ಈ ಸಲಾಕಿಯ ತುದಿಯ ಮಾಂಸದಿಂದಲೇ ಬದುಕುವ ಈ ಸಿಂಹವು ಸಲಾಕಿಯಂ ಬಿಟ್ಟರೆ ಮಾಂಸದ ಆಶೆಯಂ ಬಿಟ್ಟು ಬರಿಗೈಯ್ಯಿಂದಿರುವ ನನ್ನನ್ನು ನೋಡಿ ಪೋಷಕವಿಶ್ವಾಸವಂ ತೋರದು ಸುಮ್ಮನಿರುವುದು. ಅದರಿಂದ ಸಲಾಕಿಯಂ ಬಿಡಕೂಡದು ಎಂದು ಹೇಳುವ ಪಂಜರರಕ್ಷಕನಂ ನೋಡಿ—

ಎಲೈ, ಪ್ರಿಯನೆದುರಿಗೆ ವಿಲಾಸವಂ ತೋರುವ ಜಾರಸ್ತ್ರೀಯಂತೆ ಸೂಜಿಗಲ್ಲಿನೆದುರಿಗೆ ಉಕ್ಕು ಕಬ್ಬಿಣ ಸಲಾಕಿ ಇವುಗಳ ಸಮೂಹದಿಂದ ಯುಕ್ತವಾದ ಈ ಕಪಟಸಿಂಹವು ಹಲವು ಪರಿಯಿಂ ಚಲಿಸುವುದು ಆಶ್ಚರ್ಯವೇನು? ಇದರಂತೆ ಅರಗು ಮೇಣಗಳು ಬೆಂಕಿಯ ಸೆಕೆಗೆ ಕರಗುವುವೆಂಬ ಅರ್ಥವು ಲೋಕಪ್ರಸಿದ್ಧವಲ್ಲವೆ? ಇನ್ನು ಈ ಕಪಟ ವಾಕ್ಯವಂ ಹೇಳುವುದನ್ನು ಸಾಕುಮಾಡು ಎಂದು ಚಂದ್ರಗುಪ್ತನು ಹೇಳಲಾಗಿ ಆ ಮಾತನ್ನು ಕೇಳಿ ಪಂಜರರಕ್ಷಕರು ನಾಚಿಕೆಯಿಂದ ತಲೆವಾಗಿ ಕೈಮುಗಿದು ತಾವು ಜಿತರಾದೆವೆಂದು ಹೇಳುತ್ತ ಸಲಾಕಿಯಂ ಚಂದ್ರಗುಪ್ತನಿಗೆ ಒಪ್ಪಿಸಲು—

ಆಗ ಚಂದ್ರಗುಪ್ತನು ತನ್ನ ಮನಸ್ಸಿನಲ್ಲಿ—ಇಂಥಾ ಕಪಟಶಿಲ್ಪವಾದ ಪಂಜರವಂ ದೇಶಾಂತರದಿಂದ ಪ್ರಯತ್ನಪೂರ್ವಕವಾಗಿ ತಂದು ಈ ಆಸ್ಥಾನದ ಒಳಿಯಲ್ಲಿ ಇಳುಹಿ ಸಾರುವುದಕ್ಕೆ ನಿಮಿತ್ತವನ್ನು ಯೋಚಿಸಿದರೆ—ಸಂದರು ಕಪ

ಟೋಪಾಯದಿಂದ ಮೌರ್ಯರಂ ಸಂಹರಿಸಿದರೆಂಬ ವಾರ್ತೆಯು ದೇಶಾಂತರಗಳಲ್ಲಿ ಪ್ರಸಿದ್ಧವಾದುದರಿಂದ ಅದಂ ಕೇಳಿ ಯಾರೋ ಪರರಾಜರು ಕಪಟಿಗಳಾದ ನಂದರ ವಿಡಂಬನಾರ್ಥವಾಗಿ ಅಶಕ್ಯವಾದ ಕಪಟಶಿಲ್ಪವಂ ರಚಿಸಿ ಇಲ್ಲಿನ ಜನರ ಬುದ್ಧಿ ಪರೀಕ್ಷಾರ್ಥವಾಗಿ ಕಳುಹಿಸಿದವರಾಗಿರಬೇಕು. ಇದರಿಂದ ನಂದರಂ ನಿಂದಿಸುವ ಪರರಾಜರುಂಟಾಗಿರುವರು. ಆ ಕಪಟವು ಇಲ್ಲಿ ಬಯಲಾದುದರಿಂದ ಕಪಟಿಗ ಳಾದ ಪರರಾಜರಂ ದಂಡಿಸುವುದಕ್ಕೆ ಶಕ್ತನಾದ ಅಮಾತ್ಯರಾಕ್ಷಸನು ಅವರ ಮುಖಭಂಗವಂ ಮಾಡುವುದಕ್ಕೆ ಈ ಪಂಜರರಕ್ಷಕರು ಅಮಾನುಷಕೃತ ವೆಂದು ರಾಜಾಸ್ಥಾನದಲ್ಲಿ ಸುಳ್ಳು ಹೇಳಿದುದನ್ನೇ ಅಪರಾಧವಾಗಿ ಎಣಿಸಿ ಇವರಿಗೆ ದಂಡನೆಯಂ ಮಾಡಿಸುವನು. ಆದರೆ ಈ ಪಂಜರದ ನಿಮಿತ್ತವಾಗಿ ನನಗೆ ಬಂಧ ವಿಮೋಚನವಾಗುವುದೆಂದು ತೋರುತ್ತಿದೆ. ಆದುದರಿಂದ ಈ ದೂತರ ದೇಶವಂ ತಿಳಿದು ಇವರಂ ಈಗಲೇ ಇಲ್ಲಿಂದ ಚದರಿ ಹೋಗುವಂತೆ ಮಾಡಬೇಕು. ಈ ಜನ ಗಳ ಭೂಷಣಗಳನ್ನೂ ಆಕಾರಗಳನ್ನೂ ನೋಡಿದರೆ ಪಾರ್ವತೀಯರಂತೆ ಕಾಣು ವರೆಂದು ತನ್ನಲ್ಲಿ ನಿಶ್ಚಯಿಸಿ—ನಿಮ್ಮ ದೇಶವು ಯಾವುದು ? ಎಂದು ಕೇಳಲು—

ಸ್ವಾಮಿ, ಗಟ್ಟಬೆಟ್ಟವಂ ಸೇರಿ ಪರರಿಂ ಜೀವಿಸುತ್ತ ಕಾಡಿನ ಜೋಗಿಗ ಳಂತೆ ತಿರುಗುವವರಿಗೆ ಇಂಥಾ ದೇಶವೆಂದು ಹೇಗೆ ಹೇಳೋಣ ಎಂದರು.

ಅದಂ ಕೇಳಿ ಚಂದ್ರಗುಪ್ತನು—ಇವರ ಮಾತಿನ ಗೂಢಾರ್ಥವನ್ನು ಯೋಚಿ ಸಿದರೆ ತಾವು ಪಾರ್ವತೀಯರೆಂದು ಸೂಚಿಸಿದಂತಾಯಿತು ಎಂದು ನಿಶ್ಚಯಿಸಿ ಆ ದೂತರ ಮುಖವಂ ಚೆನ್ನಾಗಿ ನೋಡಿ ಈಗಲೇ ಹೊರಟು ಹೋಗಿರೆಂದು ಕಣ್ಣು ಸನ್ನೆಯಿಂದ ಸೂಚಿಸಿದನು.

ಅದಂ ತಿಳಿದು ಆ ಪಂಜರರಕ್ಷಕರು—ತಾವು ಇಲ್ಲಿದ್ದರೆ ತಮಗೇನೋ ತೊಂದರೆ ಸಂಭವಿಸುವಹಾಗಿದೆ ಎಂದೂ ಇವನು ಚಂದ್ರಗುಪ್ತನಾಗಿರಬೇಕೆಂದೂ ನಿಶ್ಚಯಿಸಿ ಆ ಜನರ ಸಂದಣಿಯಲ್ಲಿ ತಮ್ಮ ಸಾಮಗ್ರಿಗಳಂ ಬಿಟ್ಟು ಬೈರಾಗಿಗಳ ವೇಷವನ್ನು ಧರಿಸಿ ಹೊರಟು ಹೋದರು.

ಆಗ ಚಂದ್ರಗುಪ್ತನು ರಾಜಭಟರಂ ನೋಡಿ—ಈ ಸಿಂಹವು ಪರೀಕ್ಷಿತವಾ ಯಿತು. ಕೃತ್ರಿಮವಾದುದರಿಂದ ಇದು ಜಡಸಿಂಹವು. ಈ ಅರ್ಥವಂ ಪ್ರಭು ಗಳಿಗೆ ಬಿನ್ನೈಸಿರಿ ಎಂದು ಹೇಳಲು ; ಅದಂ ಕೇಳಿ ದೂತರು ಹೋಗಿ ಅಲ್ಲಿ ಚಂದ್ರಗುಪ್ತನಿಂದ ನಡೆದುದನ್ನೂ ಆ ಪಂಜರರಕ್ಷಕರು ಜಿತರಾದೆವೆಂದು ಹೇಳಿ ದುದನ್ನೂ ನಂದರಿಗೆ ಅರುಹಲು ; ಅವರು ಅಲ್ಲಿಗೆ ಬಂದು ಪಂಜರಪರೀಕ್ಷಕನಂ ನೋಡಿ ಚಂದ್ರಗುಪ್ತನೆಂದು ತಿಳಿದು—

ಎಲೈ ಚಂದ್ರಗುಪ್ತನೇ, ಇದು ಜಡಸಿಂಹವೆಂದು ನೀನು ತಿಳಿದ ಬಗೆ ಹೇಗೆ? ಎನಲು, ಬುದ್ಧೀ, ಪರಾಂಬರಿಸಬೇಕೆಂದು ಬೆಂಕಿಯನ್ನು ಉರಿಮಾಡಿಸಿ ಅದರ ಸಮೀಪದಲ್ಲಿ ಆ ಪಂಜರವನ್ನು ಇಡಿಸಿದ ಕೂಡಲೇ ಸಿಂಹದ ಮೇಲೆ ತೊಡೆದಿದ್ದ ಅರಗುಮೇಣಗಳು ಕರಗಿ ಹೋಗಿ ಅಚ್ಚ ಕಬ್ಬಿಣದ ಸಲಾಕಿಗಳು ಮಾತ್ರ ನಿಲ್ಲಲು; ನಂದರು ಆಶ್ಚರ್ಯಪಟ್ಟು ತಮ್ಮ ನಗರದಲ್ಲಿ ಪಂಜರಪರೀಕ್ಷೆ ಆಯಿತೆಂಬುವುದರಲ್ಲಿ ಸಂತೋಷವೂ ಅದು ಚಂದ್ರಗುಪ್ತನಿಂದ ಆದುದಕ್ಕಾಗಿ ಮಹಾಬುದ್ಧಿಶಾಲಿಯಾದ ಶತ್ರುವು ಉಳಿದನೆಂಬುವುದರಲ್ಲಿ ವ್ಯಸನವೂ ಉಂಟಾಗಿ ಇವೆರಡರಿಂದ ಆಕುಲಿತವಾದ ಹೃದಯವುಳ್ಳವರಾಗಿರಲು; ವೃದ್ಧಮಂತ್ರಿಯಾದ ವಕ್ರನಾಸನು ನಂದರಂ ನೋಡಿ—

ಜೀಯಾ, ಯಾರಿಂದಲೂ ಶಕ್ಯವಾಗದ ಈ ಪಂಜರಪರೀಕ್ಷೆಯು ತಮ್ಮ ಮಗನಿಂದಲೇ ಆಯಿತೆಂದು ತಮ್ಮ ಕುಲಕ್ಕೆ ಲೋಕದಲ್ಲಿ ಬಹಳ ಖ್ಯಾತಿಯುಂಟಾಯಿತು, ಇಂಥಾ ಬುದ್ಧಿಶಾಲಿಯೂ ನಿಮ್ಮ ಬಂಧುವೂ ಆಗಿರುವ ಇವನನ್ನು ಕಾರಾಗೃಹದಿಂದ ಬಿಡಿಸಿ ಯಥೋಚಿತಾಧಿಕಾರವಂ ಕೊಡಿಸಿ ಸಂರಕ್ಷಿಸಿದರೆ ಮುಂದೆ ತಮ್ಮ ಕೆಲಸಕ್ಕೆ ಬಂದಾನು. ತಾವು ಸಭೆಯಲ್ಲಿ ನುಡಿದ ಮಾತೂ ಸತ್ಯವಾಗುವುದು ಎನಲು; ಅದಕ್ಕೆ ನಂದರು ತಮ್ಮ ಮನದಲ್ಲಿ—ಇವನು ಹೇಳಿದಂತೆ ಮಾಡಿದರೆ ಶತ್ರುಶೇಷಮುಳಿಯುವುದು. ಮಾಡದಿದ್ದರೆ ನಂದರು ಆಡಿದ ಮಾತಿಗೆ ತಪ್ಪಿದರೆಂಬ ಜನಾಪವಾದಮುಂಟಾಗುವುದು ಎಂದು ಯೋಚಿಸುತ್ತ ಸುಮ್ಮನೇ ಇರಲು; ಸುಮತಿ ಎಂಬ ಮತ್ತೊಬ್ಬ ಮಂತ್ರಿಯು ತನ್ನ ಮನದಲ್ಲಿ—

ಈ ನಂದರ ಮನಸ್ಸು ವೃದ್ಧಮಂತ್ರಿವಾಕ್ಯದಿಂದ ಅರ್ಧಾಂಗೀಕಾರವಾಗಿದೆ, ನಾನು ಇವರ ಮನೋನುಸಾರವಾಗಿ ಸದ್ಯಕ್ಕೆ ಇವರ ಮಾತು ಉಳಿಯುವಂತೆಯೂ ಮುಂದೆ ಚಂದ್ರಗುಪ್ತನು ನಾಶವಾಗುವ ಸೂಚನೆಯು ತೋರುವಂತೆಯೂ ಹೇಳದಿದ್ದರೆ ಪುನಃ ಚಂದ್ರಗುಪ್ತನಿಗೆ ಕಾರಾಗೃಹವನ್ನೇ ನೇಮಿಸುವರು. ಈ ದುಷ್ಟರು ಯಾತಕ್ಕೂ ಹೇಸರೆಂದು ನಿಶ್ಚಯಿಸಿ ನಂದರಂ ಕುರಿತು—

ಸ್ವಾಮಿ, ಈ ಚಂದ್ರಗುಪ್ತನನ್ನು ಕಾರಾಗೃಹದಿಂ ಬಿಡಿಸಿ ಅವನಿಗೆ ೯ ನ್ಯಾವ ಅಧಿಕಾರವನ್ನೂ ಕೊಡಕೂಡದು. ಬ್ರಾಹ್ಮಣಭೋಜನದ ಅನ್ನಸತ್ರಾಧಿಕಾರವಂ ಕೊಡಿಸಬೇಕೆಂದು ಹೇಳಲಾಗಿ, ನಂದರು ಆ ಮಾತಿಗೆ ಇದರ ಅಭಿಪ್ರಾಯವೇನೆಂದು ರಾಕ್ಷಸನ ಮುಖವಂ ನೋಡಲು; ಆತನು ನಂದರಂ ಕುರಿತು ರಹಸ್ಯವಾಗಿ—

ಎಲೈ ರಾಜಪುತ್ರರುಗಳಿರಾ, ಈ ಚಂದ್ರಗುಪ್ತನು ವೃದ್ಧರಾಜರ ಪೌತ್ರನಾದುದರಿಂದ ಆ ಸ್ವಲ್ಪಾಧಿಕಾರದಲ್ಲಿ ಉದಾಸೀನನಾಗಿ ಬ್ರಾಹ್ಮಣರ ಸಂತರ್ಪಣೆಯಂ ಚೆನ್ನಾಗಿ ವಿಚಾರಿಸದೇ ಹೋಗುವನು. ಆಗ ತಮಗೆ ಅಪವಾದವುಂಟಾಗದೆ ಬ್ರಾಹ್ಮಣರ ಶಾಪದಿಂದ ತಮ್ಮ ಶತ್ರುಶೇಷವು ಪರಿಹಾರವಾಗುವುದೆಂಬುವುದೇ ಸುಮತಿಯ ಮನೋಗತವು ಎಂದು ಹೇಳಿದನು ಅದಕ್ಕೆ ನಂದರು ಸಮ್ಮತಿಪಟ್ಟು ಅದೇ ಪ್ರಕಾರವಾಗಿ ಚಂದ್ರಗುಪ್ತನಂ ಕಾರಾಗೃಹದಿಂ ಬಿಡಿಸಿ ಅನ್ನಸತ್ರಾಧಿಕಾರದೊಳ್ ನೇಮಿಸಿದರು.

ಆಗ ರಾಕ್ಷಸನು—ಪಂಜರರಕ್ಷಕರಂ ನಾವು ದಂಡಿಸದೆ ಇದ್ದರೆ ನಮ್ಮ ಅವಹೇಳನಾರ್ಥವಾಗಿ ಈ ಕಪಟಸಿಂಹವಂ ಕಳುಹಿಸಿದವರಿಗೆ ಮುಖಭಂಗವಾಗದೆಂದು ಅವರಂ ಕರತರುವುದಕ್ಕಾಗಿ ದೂತರಿಗೆ ನೇಮಿಸಲು ; ಆ ದೂತರು ಅವರನ್ನು ಹುಡುಕಿ ಎಲ್ಲೂ ಕಾಣದೆ ಬಂದು ರಾಕ್ಷಸನಿಗೆ—ಅವರು ತಮ್ಮ ಸಾಮಗ್ರಿಗಳಂ ಬಿಟ್ಟು ಓಡಿಹೋಗಿರುವರು ಎಂದು ಹೇಳಲಾಗಿ ರಾಕ್ಷಸನು ತನ್ನ ಮನೆಗೆ ಹೋದನು.

ಆಗ ಚಂದ್ರಗುಪ್ತನು ಗಂಗಾನದಿಯಲ್ಲಿ ಸ್ನಾನವಂ ಮಾಡಿ ತಂದೆ ತಮ್ಮಂದಿರಿಗೆಲ್ಲಾ ತಿಲೋದಕವಂ ಕೊಟ್ಟು ಅನ್ನಸತ್ರಾಧಿಕಾರವಂ ಮಾಡಿಕೊಂಡಿದ್ದನು. ಎಂಬಲ್ಲಿಗೆ ಮುದ್ರಾಮಂಜೂಷವೆಂಬ ಗ್ರಂಥದಲ್ಲಿ ಚಂದ್ರಗುಪ್ತಬಂಧವಿಮೋಚನೆ ಎಂಬ ದ್ವಿತೀಯಾಶಯವು ಸಮಾಪ್ತವಾದುದು.

---

## ತೃತೀಯಾಶಯ ಪ್ರಾರಂಭವು.

---

### ಚಂದ್ರಗುಪ್ತ ಚಾಣಕ್ಯರಿಗೆ ಪರ್ವತ ರಾಜ್ಯಪ್ರವೇಶವು.

ಅನಂತರದೊಳ್ ಚಂದ್ರಗುಪ್ತನು ನಂದರ ಆಜ್ಞಾನುಸಾರವಾಗಿ ಅನ್ನಸತ್ರಾಧಿಕಾರವಂ ಮಾಡುತ್ತ ಭಕ್ತಿಯಿಂದ ಬ್ರಾಹ್ಮಣರನ್ನಾರಾಧಿಸುತ್ತಿರಲು ; ಹೀಗೆ ಕೆಲವು ದಿವಸಗಳು ಕಳೆದ ಮೇಲೆ ಒಂದಾನೊಂದು ಸಮಯದಲ್ಲಿ ದಂಡಕೃಷ್ಣಾಜಿನಗಳಂ ಧರಿಸಿ ಉರಿಯುತ್ತಿರುವ ಅಗ್ನಿಯೋ ಎಂಬಂತೆ ಮಹಾತೇಜಸ್ವಿಯಾಗಿಯೂ ಆ ಅನ್ನಸತ್ರಮಾರ್ಗವಾಗಿ ನೈಮಿಶಾರಣ್ಯಮಾರ್ಗವಂ ಹಿಡಿದು ಹೋಗುತ್ತಿರುವವನಾಗಿಯೂ ಇರುವ ಚಾಣಕ್ಯನೆಂಬ ಬ್ರಾಹ್ಮಣೋತ್ತಮನ

ಪಾದಕ್ಕೆ ಮಾರ್ಗದಲ್ಲಿರುವ ಗರಿಕೆಯ ಬಳ್ಳಿ ಸುತ್ತಿಕೊಳ್ಳಲು, ಮುಂದೆ ನಡೆಯುವ ವೇಗದಿಂದ ಮುಗ್ಗರಿಸಿ ಭೂಮಿಯಂ ಹಿಡಿದ ಆತನು ಮಹಾಕ್ರುದ್ಧನಾಗಿ ಜಡವಾದ ಗರಿಕೆಯ ಹಂಬು ಮಾರ್ಗನಿರೋಧವಂ ಮಾಡಿದುದರಿಂದ ಅದರ ಮೂಲೋತ್ಪಾಟನವಂ ಮಾಡಬೇಕೆಂದು ಕಾರ್ಯಾಂತರವಂ ಬಿಟ್ಟು ತನ್ನ ದಂಡಾಗ್ರದಿಂದಲೇ ಆ ಗರಿಕೆಯ ಬಳ್ಳಿಯನ್ನು ಸಮೂಲವಾಗಿ ಅಗೆದು ಛೇದಿಸಿ ತನ್ನ ಮಾರ್ಗವನ್ನು ಹಿಡಿದು ಹೋಗುತ್ತಿರುವುದನ್ನು ದೂರದಲ್ಲಿಯೇ ಚಂದ್ರಗುಪ್ತನು ಕಂಡು—ಈತನಾರೋ ಮಹಾತೇಜಸ್ವಿಯಾದವನು. ಕೋಪಿಷ್ಠನು. ಇಂಥಾ ಕೋಪವಿದ್ದವರಲ್ಲೇ ಆಶ್ರಿತಾಭಿಮಾನವು ದೃಢವಾಗಿರುವುದು ಎಂದು ನಿಶ್ಚಯಿಸಿ ತನ್ನ ಪುಣ್ಯದಿಂದ ಈತನು ಅನುಕೂಲನಾದರೆ ಕೇಳುವುದೇನು! ಆದುದರಿಂದ ಇವನನ್ನು ಸತ್ಕರಿಸಬೇಕೆಂದು ನೆನೆಸಿ ಆತನ ಸಮೀಪಕ್ಕೆ ಬಂದು ಸಾಷ್ಟಾಂಗವಾಗಿ ನಮಸ್ಕರಿಸಿ—ಸ್ವಾಮೀ, ಮಧ್ಯಾಹ್ನವು ಮೀರಿತು. ನನ್ನ ಗೃಹದಲ್ಲಿ ಮಧುಪರ್ಕಾದಿಗಳಂ ಸ್ವೀಕರಿಸಿ ವಿಶ್ರಾಂತರಾಗಿ ಮುಂದೆ ತೆರಳಬಹುದೆನಲು; ಚಾಣಕ್ಯನು ಚಂದ್ರಗುಪ್ತನ ಪ್ರಾರ್ಥನೆಯಂ ಕೇಳಿ ಹಾಗಾಗಲೆಂದು ಆತನಿಳದಿದ್ದ ಗೃಹಕ್ಕೆ ಬಂದು ಅರ್ಘ್ಯಪಾದ್ಯಗಳಿಂದ ಪೂಜೆಯಂ ಪರಿಗ್ರಹಿಸಿ ಭಕ್ತಿಯಿಂದ ಅರ್ಪಿಸಿದ ಫಲಂಗಳಂ ಭಕ್ಷಿಸಿ ವಿಶ್ರಮಿಸಿಕೊಂಡು ಮುಂದೆ ತೆರಳುವುದಕ್ಕೆ ಯತ್ನವಂ ಮಾಡುವ ಆತನಂ ಕುರಿತು ಚಂದ್ರಗುಪ್ತನು—

ಸ್ವಾಮೀ, ಮಾರ್ಗಾಯಾಸದಿಂದ ಬಂದಿರಿ ನನ್ನ ಮೇಲೆ ಕೃಪೆಮಾಡಿ ಈ ಗೃಹದಲ್ಲಿ ಮೂರು ನಾಲ್ಕು ದಿನಗಳ ವರೆಗೂ ವಿಶ್ರಮಿಸಿಕೊಂಡು ನಾನು ಮಾಡುವ ಸ್ವಲ್ಪ ಸೇವೆಯಂ ಪರಿಗ್ರಹಿಸಿ ಮುಂದೆ ತೆರಳಬೇಕು. ಸ್ವಾಮಿಯವರ ಆಗಮನದಿಂದ ನನ್ನ ಪಿತೃಗಳೆಲ್ಲರೂ ಸಂತುಷ್ಟರಾದರು. ನಾನೂ ಧನ್ಯನಾದೆನು. ನನ್ನ ಗೃಹವೂ ಪಾವನವಾಯಿತು ಎಂದು ಹೇಳಲು; ಚಾಣಕ್ಯನು ಚಂದ್ರಗುಪ್ತನ ಭಕ್ತಿ ವಿಶ್ವಾಸವಂ ನೋಡಿ ಸಂತೋಷಿಸಿದವನಾಗಿ ಹಾಗೇ ಆಗಲಿ ಎಂದು ಅಲ್ಲಿಯೇ ಮೂರು ನಾಲ್ಕು ದಿವಸಗಳಿದ್ದು ಆತನ ಉಪಚಾರಂಗಳಂ ಅಂಗೀಕರಿಸಿ ಸುಪ್ರೀತನಾಗಿ ಚಂದ್ರಗುಪ್ತನಂ ಕುರಿತು—

ಅಯ್ಯಾ ಗೃಹಸ್ಥನೇ, ನೀನು ಯಾರ ಪುತ್ರನು? ನಿನ್ನ ಹೆಸರೇನು? ನಿನಗೆ ಇಲ್ಲಿ ಜೀವನವೇನು? ಎನಲು; ಸ್ವಾಮೀ, ನಾನು ಈ ದೇಶಾಧಿಪತಿಯಾದ ಸರ್ವಾರ್ಥಸಿದ್ಧಿರಾಜನ ಪ್ರಿಯ ಪತ್ನೀಕುಮಾರನಾದ ಮೌರ್ಯನ ತನಯನು. ನನ್ನಂ ಚಂದ್ರಗುಪ್ತನೆಂದು ಕರೆಯುವರು. ನನಗೆ ಬಂದಿರುವ ದುರ್ದಶೆಯಂ ಎಷ್ಟೆಂದು

ಹೇಳಲಿ! ಬಹು ಜನ ಹುಟ್ಟಿದರೆ ಬಹು ಕ್ಲೇಶವುಂಟೆಂಬ ಲೌಕಿಕವಾರ್ತೆಯು ನನ್ನಲ್ಲೇ ಅನುಭವಕ್ಕೆ ಬಂದಿತು. ನಾನು ನೂರು ಮಂದಿಗಳಾದ ಭ್ರಾತೃಗಳ ಸಂಗಡ ಹುಟ್ಟಿದವನಾದರೂ ನನ್ನ ಪಿತೃಸೋದರರಲ್ಲಿ ನಾನೊಬ್ಬನೇ ಉಳಿದು ಈ ಕ್ಲೇಶಕ್ಕೆ ಪಾತ್ರನಾದೆನು. ಅದು ಹೇಗೆಂದರೆ—ನನ್ನ ಪಿತಾಮಹನಾದ ವೃದ್ಧರಾಜನ ಪಟ್ಟಮಹಿಷಿಯಲ್ಲಿ ಜನಿಸಿದ ಕುಮಾರರುಗಳೇ ನವನಂದರು. ಆತನ ಪ್ರಿಯ ಪತ್ನಿಯಾದ ಮುರಾದೇವಿಯಲ್ಲಿ ಹುಟ್ಟಿದವನೇ ನಮ್ಮ ತಂದೆಯಾದ ಮೌರ್ಯನೆಂಬುವನು. ಆತನಿಗೆ ಅಸಹಾಯಶೂರರಾದ ನೂರು ಮಂದಿ ಮಕ್ಕಳು ಜನಿಸಿ ಪ್ರಸಿದ್ಧರಾದರು. ಅದಂ ನೋಡಿ ನಂದರು—ಶೂರರೂ ತಮಗೆ ಜ್ಞಾತಿಗಳೂ ಆದುದರಿಂದ ಮುಂದೆ ಕಾಲಾಂತರದಲ್ಲಿ ಇವರು ನಮಗೆ ಶತ್ರುಗಳಾದಾರೆಂಬ ಶಂಕೆಯಿಂದಲೋ ಏನೋ ಕಾಪಟ್ಯದಿಂದ ನೆಲಮಾಳಿಗೆಯೊಳಗೆ ನಮ್ಮ ಪಿತೃಸೋದರರೆಲ್ಲರಂ ಕೂಡಿ ಅನ್ನೋದಕವಂ ಕೊಡದೆ ಅವರಂ ಸಂಹರಿಸಿದರು. ನಾನು ಮಾತ್ರ ಮಹಾ ಕ್ಲೇಶಕ್ಕೆ ಗುರಿಯಾಗಿ ಜೀವಿಸಿದೆನು. ನಿಮಿತ್ತಾಂತರದಿಂದ ನನ್ನಂ ಹೊರಗೆ ತೆಗೆದು ಜೀವನಾರ್ಥವಾಗಿ ಅನ್ನಸತ್ರಾಧಿಕಾರವಂ ನೋಡುತ್ತ ಬಿದ್ದಿರಲಿ ಎಂದು ನೇಮಿಸಿದುದರಿಂದ ಆಶ್ರಯಾಂತರ ದೊರಕದೆ ಈ ದುರ್ದಶೆಗೆ ತಗುಲಿ ಹೀನವೃತ್ತಿಯಿಂ ಜೀವಿಸುತ್ತ ಯಾವ ವೇಳೆಯಲ್ಲಿ ತನಗೂ ಶತ್ರುಗಳಿಂದ ಹಾನಿ ಬಂದೀತೋ ಎಂದು ನಿರಂತರವೂ ಶಂಕೆಪಡುತ್ತ ಇದ್ದೇನೆ. ನವಾರ್ಬುದ ಸಂಖ್ಯಾಧನವನ್ನಾರ್ಜಿಸಿ ಬಹು ದೇಶಾಧಿಪತಿಗಳ ಕೈಯ್ಯಿಂ ಕಪ್ಪವಂ ಸ್ವೀಕರಿಸುವ ಮಹಾರಾಜನಿಗೆ ನಾನು ಪೌತ್ರನಾಗಿದ್ದರೂ ನಮ್ಮ ತಂದೆಯಾದ ಮೌರ್ಯನಿಂ ಪ್ರತಿಷ್ಠಿತವಾದ ವಿರೂಪಾಕ್ಷನಿಗೆ ನಿತ್ಯದಲ್ಲೂ ಆಗುವ ಆರಾಧನೆಗೆ ವಿಘ್ನ ತಟ್ಟಿ ನಿಂತುಹೋಗಿರುವಲ್ಲಿ ಅಷ್ಟು ಮಾತ್ರ ನಿರ್ವಹಿಸಲಾರದೆ ಧನಹೀನನಾಗಿ ಈ ಶತ್ರುಮಧ್ಯದಲ್ಲಿ ಜೀವಿಸುವುದಕ್ಕಿಂತಲೂ ಮಹಾಪುಣ್ಯಕರವಾದ ಅರಣ್ಯದ ಕಂದಮೂಲಂಗಳಿಂ ಹೊಟ್ಟೆಯಂ ಹೊರೆಯುತ್ತ ನಿಮ್ಮಂಥಾ ಮಹಾನುಭಾವರ ಪಾದಸೇವೆಯಂ ಮಾಡಿದರೆ ಪರಲೋಕವಾದರೂ ಪ್ರಾಪ್ತವಾದೀತು. ಇಲ್ಲಿ ಏನು ಪ್ರಯೋಜನಕ್ಕಾಗಿ ಇರಬೇಕು ? ಅಪ್ಪಣೆಯಾದರೆ ನಾನೂ ತಮ್ಮ ಸಂಗಡಲೇ ಬರುವೆನೆಂದು ಕಂಬನಿಗಳಂ ತುಂಬಿ ದುಃಖಪಡುತ್ತಿರುವ ಚಂದ್ರಗುಪ್ತನ ವ್ಯಸನವನ್ನೂ ಆತನ ಸೌಜನ್ಯವನ್ನೂ ಪ್ರಭುತ್ವಲಕ್ಷಣಯುಕ್ತವಾದ ಆತನ ಶರೀರವನ್ನೂ ನೋಡಿ ಈತನಂ ಪರೀಕ್ಷಿಸಿದರೆ ಮುಂದೆ ಪ್ರಭುಪದಕ್ಕೆ ಯೋಗ್ಯನಾಗುವಂತೆ ಕಾಣುತ್ತಿದೆ ಎಂದು ತಿಳಿದು ಮನಮರುಗಿ ಚಾಣಕ್ಯನು—

ಎಲೈ, ಚಂದ್ರಗುಪ್ತನೇ, ಕ್ಷತ್ರಿಯಬೀಜೋತ್ಪನ್ನನಾಗಿ ಯೌವನಶಾಲಿಯಾಗಿ ಪ್ರಭುತ್ವಕ್ಕೆ ಯೋಗ್ಯವಾದ ಲಕ್ಷಣಮುಂಟಾಗಿರುವ ನಿನಗೆ ವನವಾಸವೂ ಕಂದಮೂಲಾಹಾರವೂ ಯೋಗ್ಯವಲ್ಲ ; ಅದು ಬ್ರಾಹ್ಮಣಜೀವನವು. ಕ್ಷತ್ರಿಯನು ಧನಹೀನನಾಗಿ ವಿಪತ್ತಿಗೆ ತಗುಲಿದರೆ ಧೈರ್ಯವನ್ನವಲಂಬಿಸಿ ತನ್ನ ಅಭ್ಯುದಯಕಾಲವಂ ನಿರೀಕ್ಷಿಸುತ್ತ ಸಮಯವರಿತು ತನ್ನ ಬುದ್ಧಿಪೌರುಷಗಳ ಬಲದಿಂದ ಶತ್ರುಗಳಂ ನಿಗ್ರಹಿಸಿ ಸುಖಿಯಾಗಬೇಕಲ್ಲದೆ ನೀನು ಹೀಗೆ ಧೈರ್ಯಹೀನನಾಗಿ ಹೀನಜನದಂತೆ ಹೇಳುವುದು ಸರಿಯೇ? ಎನಲು ; ಆ ಮಾತಿಗೆ ಚಂದ್ರಗುಪ್ತನು—

ಸ್ವಾಮಿಾ, ಮಹಾನುಭಾವರೇ, ಅಕ್ಕಿಯಕಾಳಿನಷ್ಟು ಬೆಂಕಿಯ ಕಿಡಿಯು ಗಾಳಿಯ ಸಹಾಯದಿಂದ ವನವೆಲ್ಲವಂ ದಹಿಸುವಂತೆ ನನ್ನ ಅದೃಷ್ಟವು ನಿಮ್ಮ ಕೃಪಾಕಟಾಕ್ಷದಿಂದ ನನ್ನ ಶತ್ರುಗಳೆಲ್ಲರನ್ನೂ ನಾಶಪಡಿಸಿ ಪ್ರಕಾಶಿಸಬೇಕಲ್ಲದೆ ನನ್ನ ಪೌರುಷಬಲದಿಂದ ಶತ್ರುನಿಗ್ರಹವಾಗುವುದೆಂಬುವುದು ಬೇರೆ ತೋರುವುದಿಲ್ಲ. ನಿಮ್ಮಂ ಶರಣಂ ಹೊಕ್ಕೆನು. ನಿಮ್ಮ ತೇಜೋಬಲದಿಂದ ಈ ಕ್ರೂರಕರ್ಮಿಗಳಾದ ಶತ್ರುಗಳಂ ನಿಗ್ರಹಿಸಿ ನನ್ನನ್ನು ಉದ್ಧರಿಸಬೇಕೆಂದು ಪಾದಂಗಳಂ ಪಿಡಿದಿರಲು ; ಚಾಣಕ್ಯನು ಚಂದ್ರಗುಪ್ತನಂ ನೋಡಿ--

ಎಲೈ, ಚಂದ್ರಗುಪ್ತನೆ, ನಿನ್ನ ಶತ್ರುಗಳಂ ನಿಗ್ರಹಿಸಿ ನಿನಗೆ ರಾಜ್ಯಾಧಿಪತ್ಯವನ್ನುಂಟುಮಾಡುವುದಕ್ಕೆ ನಾನು ಸಮರ್ಥನಹುದು. ಆದರೂ ನಿನಗೆ ಮಾತ್ರವೇ ದ್ರೋಹಿಗಳಾಗಿ ಪ್ರಜಾರಕ್ಷಣೆಯಂ ಮಾಡುತ್ತಿರುವ ನಂದರಂ ಅಕಾರಣವಾಗಿ ನಾನು ನಿಗ್ರಹಿಸಿದರೆ ಪ್ರತ್ಯವಾಯವೂ ಅಪಕೀರ್ತಿಯೂ ಉಂಟಾಗುವುವು. ನಮಗೆ ಮಾಡಿದ ಅಪರಾಧವಂ ತಿಳಿದು ಅವರಂ ನಿಗ್ರಹಿಸಿದರೆ ಬಾಧಕವಿಲ್ಲ. ನೀನು ಸಜ್ಜನನಾಗಿ ತೋರುತ್ತಿರುವೆ. ಅದರಿಂ ದುಷ್ಟರಾದ ಈ ನಂದರಿಗೆ ನನ್ನಲ್ಲಿ ಕೋಪ ಹುಟ್ಟುವ ಹಾಗೆ ಧರ್ಮವಿರುದ್ಧವಲ್ಲದ ಒಂದು ಕುಚೇಷ್ಟೆಯನ್ನು ಆಚರಿಸುತ್ತೇನೆ. ಅದಕ್ಕೆ ನಂದರು ಕ್ಷಮಿಸದೆ ನಿರಾಕರಿಸಿ ನನಗೆ ಕೋಪವುಂಟಾಗುವಂತೆ ಮಾಡಿಕೊಂಡರೆ ಆಗ ನಿನ್ನ ಕಾರ್ಯಕ್ಕೆ ಅಭಯವಂ ಕೊಡುವೆನು ಎಂದು ಚಂದ್ರಗುಪ್ತನಿಗೆ ಹೇಳಿ ಮಾಧ್ಯಾಹ್ನಿಕಕ್ಕಾಗಿ ಗಂಗಾ ನದಿಗೆ ಹೋಗುತ್ತಿದ್ದನು. ಆ ಸಮಯದಲ್ಲಿ ದೈವಯೋಗದಿಂದ ನವನಂದರು ನೂತನವಾಗಿ ರಚಿಸಿದ್ದ ಉದ್ಯಾನದ ರಮಣೀಯತ್ವವಂ ನೋಡಿ ತಮ್ಮ ಮನೆಯಂ ಕುರಿತು ಬರುತ್ತ ಮಾರ್ಗಮಧ್ಯದಲ್ಲಿ ಅನ್ನಸತ್ರವಂ ಕಂಡು ಬ್ರಾಹ್ಮಣರ

ಭೋಜನಶಾಲೆಯಂ ನೋಡಬೇಕೆಂದು ತಮ್ಮ ತಮ್ಮ ವಾಹನಂಗಳನ್ನಿಳಿದು ಒಳಪೊಗಲು ಚಾಣಕ್ಯನು ಇದೇ ಸಮಯವೆಂದು ಹರಕು ಧೋತ್ರವನ್ನುಟ್ಟುಕೊಂಡು ಪಂಜೆ ಬ್ರಾಹ್ಮಣನಂತೆ ಆ ಸತ್ರವಂ ಹೊಕ್ಕು ಅಲ್ಲಿದ್ದ ರಾಜಾರ್ಹವಾದ ಸುವರ್ಣಪೀಠವನ್ನು ಅಗ್ರಭಾಗದಲ್ಲಿ ಹಾಕಿಕೊಂಡು ಅದರಲ್ಲಿ ಕುಳಿತಿದ್ದನು.

ಆ ವೇಳೆಯೊಳ್ ನಂದರು ಶಾಲೆಯಂ ನೋಡುತ್ತ ಬರುವಲ್ಲಿ ಆ ಬ್ರಾಹ್ಮಣನಂ ಕಂಡು ಮತ್ತರಾಗಿ ದೈವಸಂಕಲ್ಪದಿಂದ ವಿಮರ್ಶೆಯಂ ಮಾಡದೆ ಅಗ್ನಿಶಿಖೆಯಲ್ಲಿ ಆಹಾರಬುದ್ಧಿಯಿಂದ ಬೀಳಲೆಳಸುವ ಪತಂಗಗಳಂತೆ ಕ್ರುದ್ಧರಾಗಿ ಒಬ್ಬರ ಮುಖವನ್ನೊಬ್ಬರು ನೋಡುತ್ತ ತಮ್ಮ ದೂತರಂ ನಿರೀಕ್ಷಿಸಿ—ಇವನಾರೀ ಬ್ರಾಹ್ಮಣಾಧಮನು? ತುಚ್ಛನು! ಅಗ್ರಸ್ಥಾನಪೀಠದಲ್ಲಿ ಕಾಲ ಮೇಲೆ ಕಾಲನ್ನು ಹಾಕಿಕೊಂಡು ಎಲ್ಲರಿಗಿಂತಲೂ ತಾನೇ ಅಧಿಕನಾಗಿರುವಂತೆ ಕುಳಿತಿದ್ದಾನೆ! ನೀವೆಲ್ಲರೂ ಯಾಕೆ ಸುಮ್ಮನೇ ಇದ್ಧೀರಿ? ಎನಲು; ಅದಂ ಕೇಳಿ ರಾಜಭಟರು—ಏಳು ಏಳು ಎಂದು ಚಾಣಕ್ಯನಂ ಬೆದರಿಸಲು; ಆತನು ಅವರ ಮಾತುಗಳಂ ಲಕ್ಷ್ಯೀಕರಿಸದೆ ಮೊದಲಿನಂತೆಯೇ ಕುಳಿತಿರಲಾಗಿ ಕ್ರುದ್ಧರಾದ ದೂತರು ಅವನ ಕೈಯ್ಯಂ ಪಿಡಿದು ಈಚೆಗೆ ಎಳೆದರು. ಅವರು ಎಳೆದ ರಭಸಕ್ಕೆ ತನ್ನ ಜುಟ್ಟು ಬಿಚ್ಚಿಹೋಗಲು; ಆಗ ಚಾಣಕ್ಯನು ಚಂದ್ರಗುಪ್ತನ ಅದೃಷ್ಟ ಒದಗಿತೆಂದು ತಿಳಿದು ಮಹಾ ಕೋಪದಿಂದೆದ್ದು ಕಣ್ಣುಗಳಂ ಕೆಂಪುಮಾಡುತ್ತ ಹುಬ್ಬುಗಳಂ ಗಂಟಿಕ್ಕಿಕೊಂಡು ಪೀಠವನ್ನೊದೆದು ಕ್ರುದ್ಧನಾದ ಮೃತ್ಯುವಿನಂತೆ ಔಡುಗಳಂ ಕಚ್ಚುತ್ತ ಹಲ್ಲುಗಳಂ ಮಸೆಯುತ್ತ ಪಾದಗಳಂ ನಡುಗಿಸುತ್ತ ಮೊರೆದು ಮುಸುಗುಟ್ಟುತ್ತ ಸ್ವಲ್ಪ ಹೊತ್ತಿನ ಮೇಲೆ ಕೆರಳಿದ ಕೋಪವಂ ಮನದಲ್ಲಿ ಅಡಗಿಸಿ ನಂದರಂ ಬಿರಬಿರನೆ ನೋಡುತ್ತ ಇಂತೆಂದನು—

ಎಲೈ, ನಂದಾಧಮರುಗಳಿರಾ, ಅಶನಾರ್ಥಿಯಾಗಿ ಬಂದ ಅತಿಥಿಯಂ ನಿರಾಕರಿಸಿದ ಗೃಹಸ್ಥನ ಆಯುಷ್ಯವಂ ಮೃತ್ಯುವು ಅಪಹರಿಸುವುದೆಂದು ಹೇಳುವ ಶಾಸ್ತ್ರಾರ್ಥವು ನಿಮ್ಮಲ್ಲೇ ಫಲಿಸಿದಂತೆ ತೋರುತ್ತಿದೆ. ನಿರಪರಾಧಿಯಾಗಿ ಭೋಜನಶಾಲೆಯಲ್ಲಿ ಕುಳಿತಿದ್ದ ನನ್ನನ್ನು ಬ್ರಾಹ್ಮಣಾಧಮನೆಂದೂ ತುಚ್ಛನೆಂದೂ ಮಹಾ ಪರುಷವಾಕ್ಯದಿಂದ ಎಲ್ಲರೂ ನೋಡುವಂತೆ ಅಪಮಾನಪೂರ್ವಕವಾಗಿ ನನ್ನನ್ನು ಹೇಗೆ ಕೆಳಗೆ ಎಳಸಿದವರಾದಿರೋ ಮುಂದೆ ನಿಮ್ಮ ಪ್ರಾಣಾಪಹಾರವಂ ಮಾಡಿ ಕಾಲುಗಳಿಗೆ ಹಗ್ಗವಂ ಬಿಗಿರಿ ಹದ್ದು ನಾಯಿ ನರಿ

ಪಿಶಾಚಿ ಇವುಗಳಿಗೆ ಗ್ರಾಸಾರ್ಥವಾಗಿ ಮಾರ್ಗವಂ ಬಿಟ್ಟು ಶವಗಳನ್ನು ಬೇಲಿಯು ಬಳಯಿಂಕೆ ಎಳಸಿಹಾಕುವುದನ್ನು ಹಾಗೆಯೇ ಈ ಸಭಾಜನರು ನೋಡಿಯಾರು. ಭೃಗುವಂಶಜನಾದ ಔರ್ವ ಋಷಿಯು ತನಗೆ ಅಪರಾಧಿಗಳಾದ ಹೇಹಯರೆಂಬ ದುಷ್ಟ ಕ್ಷತ್ರಿಯರಂ ತನ್ನ ದೃಷ್ಟಿಯಿಂದಲೇ ನಾಶವಂ ಮಾಡಿದಂತೆ ನನ್ನ ತಪೋಲೇಶವ್ಯಯದಿಂದ ಈಗಲೇ ನಿಮ್ಮ ನಾಶವಂ ಮಾಡಿದರೆ ನನ್ನ ಪೌರುಷಕ್ಕೆ ಪ್ರಯೋಜನವಿಲ್ಲದೆ ಹೋಗುವುದು. ಭೃಗುನಂದನನಾದ ಶುಕ್ರಾಚಾರ್ಯನಿಂದ ಪ್ರಣೀತವಾದ ದಂಡನೀತಿಶಾಸ್ತ್ರಾಧ್ಯಯನದಿಂದ ನಾನು ಅವರಿಗೆ ಧರ್ಮಪುತ್ರನಾದುದು ಸತ್ಯವಾದರೆ ಭೃಗುಕುಲೋತ್ಪನ್ನನಾದ ಪರಶುರಾಮನು ದುಷ್ಟ ಕ್ಷತ್ರಿಯರಂ ಬಹುವಾಗಿ ಸಂಹರಿಸಿ ವಿಶ್ರಮಿಸಿಕೊಂಡಂತೆ ದುಷ್ಟ ಕ್ಷತ್ರಿಯರಾದ ನಿಮ್ಮಂ ಸಂಹರಿಸಿ ಕಾಲಸರ್ಪದಂತೆ ಬಿಚ್ಚಿರುವ ಈ ನನ್ನ ಜುಟ್ಟಂ ಕಟ್ಟುವೆನು. ಹಾಗೆ ಮಾಡದೆ ಕಟ್ಟಿದವನಾದರೆ ಸ್ವಧರ್ಮವಂ ಬಿಟ್ಟು ಡಾಂಭಿಕನಾಗಿ ಅನ್ಯಧರ್ಮವನ್ನಾಚರಿಸುವ ಮನುಷ್ಯಾಧಮನ ದುರ್ಗತಿಗೆ ನಾನು ಗುರಿಯಾಗುವೆನು. ಮತ್ತು ಬ್ರಾಹ್ಮಣರು ಮಾಡುವ ವೇದಾಧ್ಯಯನವಂ ಮನಮುಟ್ಟಿ ಕೇಳುತ್ತಿರುವ ಶೂದ್ರನಿಗೆ ಪ್ರಾಪ್ತವಾಗುವ ಪರಲೋಕದಂಡನೆಯು ಎನಗಾಗಲಿ. ಇದಲ್ಲದೆ ವೇದವಂ ಶೂದ್ರನಿಗೆ ಉಪದೇಶವಂ ಮಾಡಿದ ಬ್ರಾಹ್ಮಣನ ಗತಿಗೆ ನಾನು ಪೋಗುವೆನು. ಹೀಗೆಂದು ಕ್ರೂರಪ್ರತಿಜ್ಞೆಯಂ ಮಾಡಿ ಎಲ್ಲರೂ ನೋಡುವಂತೆ ಚಾಣಕ್ಯನು ಅಲ್ಲಿಂದ ಎದ್ದು ಹೋಗುತ್ತಿರಲು ; ಆಗ ಮಹೋತ್ಪಾತಗಳಾದ ಭೂಕಂಪನವೂ ಧೂಮಕೇತುಗಳೂ ಉದ್ಭವಿಸುತ್ತಿರಲು; ಅದಂ ನೋಡಿ ಸಭಾಜನರು ಮಹಾ ಭೀತರಾದರು. ಆಗ ಶತ್ರುಗಳ ಮೇಲೆ ಮೀಸೆಯಂ ತಿರಿಚುವ ವೀರನಂದದಿ ಚಾಣಕ್ಯನು ಬಿಚ್ಚಿರುವ ತನ್ನ ಜುಟ್ಟಂ ಕೈಯ್ಯಿಂದ ನೇವರಿಸುತ್ತ ತೆರಳುತ್ತಿರಲು; ಆಗ ನಂದರಿಗೆ ದೈವಬಲ ತಪ್ಪಿ ಇದ್ದುದರಿಂದ ಆತನಂ ಸಮಾಧಾನಂಗೊಳಿಸಿ ನಿಲ್ಲಿಸುವುದಕ್ಕೆ ಬುದ್ಧಿಗೆ ತೋರದೆ ಕೋಪಸಂತಾಪಗಳುಂಟಾಗುತ್ತಿರಲು; ಇದೆಲ್ಲವಂ ನೋಡಿ ಸಮೀಪದಲ್ಲಿದ್ದ ವಕ್ರನಾಸನೆಂಬ ವೃದ್ಧಮಂತ್ರಿಪುತ್ರನಾದ ಪುಷ್ಪದಂತನೆಂಬ ಮಂತ್ರಿಯು ತನ್ನ ಮನಸ್ಸಿನಲ್ಲಿ—

ಈಗ ಕ್ರೂರಪ್ರತಿಜ್ಞೆಯಂ ಮಾಡಿಹೋದ ಬ್ರಾಹ್ಮಣನ ಪರುಷವಾಕ್ಯ ಪ್ರಯೋಗದಿಂದ ಈ ನವನಂದರ ಮನಸ್ಸು ಮೂರು ತೆರನಾಗಿರುವುದು. ಅದು ಹೇಗೆಂದರೆ—ಬ್ರಾಹ್ಮಣರಲ್ಲಿ ಗೌರವವಿದ್ದವರಿಗೆ ಭೀತಿ ತೋರಿರುವುದು; ಬ್ರಾಹ್ಮಣಾಪಮಾನದಲ್ಲಿ ಪ್ರತ್ಯವಾಯ ತೋರಿದವರಿಗೆ ಪಶ್ಚಾತ್ತಾಪವುಂಟಾಗಿರುವುದು;

ಬ್ರಾಹ್ಮಣರು ಭಿಕ್ಷುಕರು ಇವರಿಂದಾಗುವುದೇನೆಂದು ಲಘುತ್ವ ತೋರಿದವರಿಗೆ ಕೋಪವುಂಟಾಗಿರುವುದು. ಆದರೆ ಮೊದಲು ಶತ್ರುಗಳಿಂದಾಗುವ ಭೇದೋಪಾಯಕ್ಕೆ ಅಸ್ಪದವಿಲ್ಲದಂತೆ ಸಮಯಬಂಧವಂ ಮಾಡಿಕೊಂಡು, ಐಕಮತ್ಯದಿಂದ ಒಬ್ಬನು ಹೇಳಿದ ಮಾತಿಗೆ ಎಲ್ಲರೂ ಒಡಂಬಡುವವರಾದುದರಿಂದ ಇವರಲ್ಲಿ ಕ್ಷಮಿಸದೆ ಬ್ರಾಹ್ಮಣಾಪಮಾನಕ್ಕೆ ಒಬ್ಬ ಹೇಳಿದಂತೆ ಎಲ್ಲರೂ ಒಡಂಬಟ್ಟರು. ಇದರಿಂದ ವಿಪತ್ತು ಸಂಭವಿಸಿದರೆ ಅದಕ್ಕೆ ಎಲ್ಲರೂ ಸಮಭಾಗಿಗಳಾಗುತ್ತಾರೆ. ಕಾರ್ಯಾಕಾರ್ಯವಿಮರ್ಶೆ ಇಲ್ಲದೆ ಕಾಲ ದೇಶವಂ ತಿಳಿಯದೆ ಮಾಡಿಕೊಂಡಿರುವ ಈ ಸಮಯಬಂಧವೇ ಸಮಯಾಂತರದಲ್ಲಿ ಇವರಿಗೆ ವಿಪತ್ತಂ ತಂದುಬಿಡುವುದು. ಈಗ ಮಾಡಿದ ಬ್ರಾಹ್ಮಣಪ್ರತಿಜ್ಞೆಯು ಸತ್ಯವಾದರೆ ಮುಂದೆ ಸ್ವರ್ಗಸ್ಥನಾಗುವ ಸರ್ವಾರ್ಥಸಿದ್ಧಿರಾಜಂಗೆ ಈ ನಂದರ ಕೈಯ್ಯಿಂದ ತಿಲೋದಕವು ದೊರಕುವಂತೆ ತೋರುವುದಿಲ್ಲ. ಆ ಬ್ರಾಹ್ಮಣನು ಅನ್ಯಾದೃಶತೇಜಸ್ವಿಯಾದುದರಿಂದ ಆತನು ನಂದರಂ ನೋಡಿ ಮನಸ್ಸುಬಂದಂತೆ ಪರುಷವಾಕ್ಯವಂ ಹೇಳುತ್ತಿದ್ದರೆ ಅಲ್ಲಿನ ಜನರೆಲ್ಲರೂ ಪಶುಪ್ರಾಯರಾಗಿ ಪ್ರತ್ಯುತ್ತರವಂ ಹೇಳದೆ ಸ್ತಂಭೀಭಾವದಲ್ಲಿಯೇ ಇದ್ದರು. ಇದನ್ನು ಯೋಚಿಸಿ ನೋಡಿದರೆ ಆತನು ತನ್ನ ಪ್ರತಿಜ್ಞೆಯನ್ನು ನಿರ್ವಹಿಸಿಕೊಂಡಾನೆಂದು ತೋರುತ್ತಿದೆ ಇದಕ್ಕೆ ಸಾಧನವಾಗಿ ಉತ್ಪಾತಂಗಳೂ ತೋರಿವೆ. ಹೀಗಾದರೂ ಇವರ ಸಮೀಪವರ್ತಿಗಳಾದ ದುಷ್ಟಕ್ಷುದ್ರಜನರು ಈ ನಂದರಿಗುಂಟಾಗಿರುವ ಕೋಪವಂ ಕೆರಳಿಸಿ ಪುನಃ ಆ ಬ್ರಾಹ್ಮಣನಂ ಕೇಕುವಂತೆ ಮಾಡಿದರೆ ಮುಂದೆ ಬರುವ ವಿಪತ್ತು ಈಗಲೇ ಸಂಭವಿಸೀತು. ನಾನು ಮಂತ್ರಿಪುತ್ರನಾಗಿ ಸಮೀಪದಲ್ಲಿ ಇದ್ದ ಬಳಿಕ ಇವರನ್ನೊಡಂಬಡಿಸಿ ಅರಮನೆಗೆ ಕರೆದುಕೊಂಡುಹೋಗುವುದು ಮಂತ್ರಿಧರ್ಮವೆಂದು ನಿಶ್ಚಯಿಸಿ ನಂದರಂ ಕುರಿತು—

ಜೀಯಾ, ಶಿಷ್ಟಗ್ರಾಹ್ಯವಲ್ಲದ ಈ ಸತ್ರದ ಸಂಘಾನ್ನಕ್ಕೆ ಬಂದು ಅಗ್ರಸ್ಥಾನದಲ್ಲಿರುವ ಸ್ವರ್ಣಮಯವಾದ ಪೀಠದಲ್ಲಿ ಕುಳಿತು ಸಮಯೋಚಿತವಲ್ಲದೆ ಮನಸ್ಸಿಗೆ ಬಂದಂತೆ ಕೂಗಿಹೋದ ಆ ಬ್ರಾಹ್ಮಣನು ಹುಚ್ಚನೆಂದು ತೋರುತ್ತಿದೆ. ಲೋಕದಲ್ಲಿ ಬಾಲಕರ ವಾಕ್ಯವೂ ಹುಚ್ಚರ ವಾಕ್ಯವೂ ವಿನೋದಕ್ಕೆ ಯೋಗ್ಯವಲ್ಲದೆ ವಿಷಾದಕ್ಕೆ ಯೋಗ್ಯವಲ್ಲ. ನಿಮ್ಮ ಕೋಪಕ್ಕೆ ಪಾತ್ರರಾಗಿ ನಿರ್ವಹಿಸಿಕೊಂಡವರಂ ಈ ಲೋಕದಲ್ಲಿ ಎಲ್ಲಿಯೂ ಕಾಣೆನು. ಈ ಪಂಜೆ ಬ್ರಾಹ್ಮಣನು ಎಷ್ಟುಮಾತ್ರದವನು! ಈತನಂ ನಿಗ್ರಹಿಸಿದರೆ ಬರುವ ಬಹುಮಾ

ನವೇನು ? ಉಪೇಕ್ಷಿಸಿದರೆ ಆಗುವ ಅಪಮಾನವೇನು ? ಇದು ಧರ್ಮಸತ್ರವಾದುದರಿಂದ ಹೀಗೆ ಬಹು ಜನರು ಬರುವರು. ಅಲ್ಲಿನ ಅಧಿಕಾರಿಗಳಿಗೆ ಇಂಥಾ ಮೂರ್ಖರಂ ಒಡಂಬಡಿಸುತ್ತ ಸಿದ್ಧಾಹಾರಕ್ಕೆ ಸಮಯ ದೊರಕುವುದೇ ಇಲ್ಲ. ಇದಂತಿರಲಿ. ಬಹು ದಿವಸಗಳಾರಭ್ಯ ಸ್ವಾಮಿಯವರ ಕಟಾಕ್ಷಕ್ಕೆ ಪಾತ್ರರಾಗಿ ಕಾದುಕೊಂಡಿರುವ ಅನೇಕ ದೇಶಾಧಿಪತಿಗಳಿಗೆ ಸನ್ಮಾನಪೂರ್ವಕವಾಗಿ ಅಪ್ಪಣೆಯನ್ನು ಕೊಡಿಸುತ್ತೇವೆ. ಅವರವರ ದೇಶಗಳಿಗೆ ಹೊರಟುಹೋಗುವುದಕ್ಕೆ ಎಲ್ಲರೂ ಸಿದ್ಧವಾಗಿರಲಿ ಎಂದು ನಿನ್ನೆ ಅಪ್ಪಣೆಯಾದ ಮೇರೆಗೆ ಆ ದೇಶಾಧಿಪತಿಗಳು ತಾವು ಒಪ್ಪಿಸುವ ಕಪ್ಪಗಳಂ ಪಿಡಿದು ಪಾದದರ್ಶನವು ಎಷ್ಟುಹೊತ್ತಿಗೆ ಲಭ್ಯವಾದೀತು ಎಂದು ಕಾದುಕೊಂಡಿದ್ದಾರೆ. ಹಾಗೇ ಅಮಾತ್ಯರೂ ತಮ್ಮೆದುರು ನೋಡುತ್ತಿದ್ದಾರೆ. ಪಾದ ಬೆಳಯಬಹುದೆಂದು ಹೇಳಲಾಗಿ ಆ ವಾಕ್ಯವಂ ಕೇಳಿ ನಂದರೆಲ್ಲಾ ಒಡಂಬಟ್ಟು ಎಂದಿನಂತೆ ತಮ್ಮ ವಾಹನಂಗಳನ್ನೇರಿ ಆಸ್ಥಾನಕ್ಕೆ ತೆರಳಿದರು.

ಆಗ ಕ್ರುದ್ಧನಾಗಿ ಶಪಥವಂ ಮಾಡಿ ಚಾಣಕ್ಯನು ಹೊರಟುಹೋದ ಬಳಿಕ ಆದ ಉತ್ಪಾತಂಗಳಂ ನೋಡಿ ಅಲ್ಲಿನ ಸಭಾಜನರು ಪರಸ್ಪರವಾಗಿ ಮಾತನಾಡಿಕೊಳ್ಳುತ್ತಿದ್ದರು. ಅದೇನಂದರೆ—

ಇದೇನೋ ? ವಿಪರೀತಗಳು ಕಾಣಿಸುತ್ತಿವೆ ! ಹೀಗೆ ಬ್ರಾಹ್ಮಣಾಪಮಾನವು ಎಂದಿಗೂ ನಡೆದುದಿಲ್ಲ. ಆ ಬ್ರಾಹ್ಮಣನಂ ನಿಲ್ಲಿಸಿ ಸಮಾಧಾನಂಗೊಳಿಸೋಣವೆಂದರೆ ಅವನು ಕ್ರುದ್ಧನಾಗಿ ಪ್ರತಿಜ್ಞೆಯಂ ಮಾಡಿಹೋದನಾದುದರಿಂದ ಸಾಂತ್ವವಚನಕ್ಕೆ ವಶನಾಗನು. ಇದಂ ಅರಸುಗಳಿಗೆ ತಿಳಿಸೋಣವೆಂದರೆ ಕಲಿಯುಗದ ಕ್ರೌರ್ಯದಿಂದಲೂ ದೈವಯೋಗದಿಂದಲೂ ಬ್ರಾಹ್ಮಣರೆಲ್ಲಾ ಇಂಥಾ ಮೂರ್ಖರೆ ಎಂದು ಧಿಕ್ಕರಿಸಾರು. ಮತ್ತೆ ಯಾರಾದರೂ ಈ ವಿಷಯವನ್ನು ಕುರಿತು ಸಾಂತ್ವವಚನದಿಂದ ಹೇಳಹೋದರೆ ಶೀತಲವಾದ ಉದಕಸೇಚನೆಯಿಂದ ಮತ್ತೂ ಪ್ರಜ್ವಲಿಸುವ ಬಾಡಬಾಗ್ನಿಯಂತೆ ಹೇಳಹೋದವರ ಮೇಲೆ ಕೋಪ ಹೆಚ್ಚೀತು. ಮಹಾ ಕುಲೀನರಾದುದರಿಂದ ಸರಳಹೃದಯರೆಂದಾದರೂ ಹೇಳಹೋದರೆ ಶ್ಲಾಘ್ಯವಾದ ಶ್ರೀಗಂಧಕಾಷ್ಠದಲ್ಲಿ ಉದ್ಭವಿಸಿದ ಅಗ್ನಿಜ್ವಾಲೆಯು ವನವನ್ನು ದಹಿಸುವಂತೆ ಬಡವರ ಕುಲವಂ ನಾಶಮಾಡಿಯಾರು. ಆಕಾರದಲ್ಲಿ ಸೌಮ್ಯರಂತೆ ತೋರುವ ಈ ಅರಸುಗಳಲ್ಲಿ ಇಂಥಾ ದೋಷವುಂಟೇ ಎಂದರೆ ಅಕಾಲಪುಷ್ಪವು ನೋಡುವವರಿಗೆ ರಮಣೀಯವಾಗಿ ಕಂಡರೂ ಪ್ರಜಾಪೀಡಾಸೂಚಕವಾಗಿ

ರುವಂತೆ ಸಮಯದಲ್ಲಿ ಜನಹಿಂಸಕರಾದಾರು. ಪಟ್ಟಾಭಿಷೇಕಕಲಶಜಲಗಳಿಂದ
ಇವರ ಅಸ್ವಾತಂತ್ರ್ಯವು ತೊಳೆದು ಹೋದಂತೆ ದೇಶಕಾಲಮರ್ಯಾದೆಗಳನ್ನು
ಉಪದೇಶಿಸುವ ಆಪ್ತವೃದ್ಧಜನರ ಗೌರವವೂ ತೊಳೆದುಹೋದೀತು. ಶ್ವೇತ
ಛತ್ರಛಾಯೆಯಿಂದ ಬಿಸಿಲು ಮರೆಯಾದಂತೆ ಔದಾಸೀನ್ಯದಿಂದ ದೂರಾಲೋಚ
ನೆಯೂ ಆಪದಾಗಮಸ್ಮರಣೆಯೂ ಲೋಕಾಪವಾದಭಯವೂ ಮರೆಯಾದಾವು.
ಇವರು ಮರ್ಯಾದೆಯಂ ಮೀರಿ ನಡೆಯುವ ಚಿತ್ತವೃತ್ತಿಯುಳ್ಳವರಾದುದರಿಂದ
ವಿಹಿತವಂ ಹೇಳುವ ಜನರು ಇವರ ಬಳಿಯಲ್ಲಿ ಸ್ವಲ್ಪವಾಗಿಯೇ ಇದ್ದಾರು.
ಅಥವಾ ಇದ್ದರೂ ಹಿತವಂ ಹೇಳಬೇಕಾದರೂ ಕೂಗಿದರೆ ಹಾಗೇ ಹೊಳಲು
ಕೊಡುವ ಧ್ವನಿಯಂತೆ ಹೀಗೆ ಹೌದೇನಯ್ಯಾ? ಎಂದು ಅರಸು ಕೇಳಿದರೆ ಅದು
ಹೌದು ಬುದ್ಧೀ ಎಂದೇ ನುಡಿವರು. ಹಿತೈಷಿಗಳಾದ ಜನರು ಇದ್ದ ಅರ್ಥವಂ
ಖಂಡಿತವಾಗಿ ತಿಳುಹಿದರೆ ಕಿವಿಗೆ ಹಾಕಿಕೊಳ್ಳರು. ಅಥವಾ ಕೇಳಿದರೂ ಗಜವು
ಕಣ್ಣು ಮುಚ್ಚಿದಂತೆ ಸುಮ್ಮನಾಗುವರು. ದಾರಿ ತಪ್ಪಿದವರಿಗೆ ದಿಗ್ಭ್ರಮೆಯಂತೆ
ಪ್ರಭುಗಳಿಗೆ ವಿಷಯದಲ್ಲಿ ಅತ್ಯಾಸಕ್ತಿ ಎಂಬುವುದು ಸದಾ ಉಂಟಾಗಿರುವುದು.
ಐಶ್ವರ್ಯಯೌವನರೂಪವಿನಯರಾಹಿತ್ಯವೆಂಬಿವುಗಳೊಳಗೆ ಒಂದೊಂದು ಮಾತ್ರ
ವೇ ಅನರ್ಥಕಾರಣವು. ಇವೆಲ್ಲವೂ ಒಂದೇ ಕಡೆಯಲ್ಲಿಯೇ ಇದ್ದರೆ ಕೇಳು
ವುದೇನು! ಮತ್ತು ಯೌವನಮದವೆಂಬ ಅಂಧಕಾರವು ಸೂರ್ಯಾದಿಗಳಿಂ
ತೊಲಗಲಾರದು; ಐಶ್ವರ್ಯಮದವೆಂಬ ನೇತ್ರರೋಗವು ಅಂಜನಸಾಧ್ಯವಾ
ಗದು. ನಿರ್ಲಕ್ಷ್ಯದಿಂದಿರುವ ಭೂಪತಿಗಳಿಗೆ ಸ್ವಲ್ಪ ಮನುಷ್ಯರಿಂದಾಗುವುದೇ
ನೆಂದರೆ—ಅಗ್ನಿಕಣವು ಸ್ವಲ್ಪವಾಗಿದ್ದರೂ ಅದು ತೃಣವನ್ನವಲಂಬಿಸಿ ಮಹಾವನ
ವನ್ನೂ ದಹಿಸುವಂತೆ ಕ್ಷೋಭೆಯುಂಟಾಗುವುದು. ಪೂರ್ವಯುಗದಲ್ಲಿ ಉನ್ಮ
ತ್ತನಂತೆ ಬರುತ್ತಿದ್ದ ದೂರ್ವಾಸಮುನಿಯ ಕೋಪದಿಂದ ಸಮಯವಿಶೇಷದಲ್ಲಿ
ಇಂದ್ರನೈಶ್ವರ್ಯವು ಅಸುರರ ಪಾಲಾಗಲಿಲ್ಲವೇ? ಬ್ರಾಹ್ಮಣನು ಭಿಕ್ಷುಕ
ನಂತೆ ತೋರುತ್ತಿದ್ದರೆ ಆತನ ತೇಜಸ್ಸು ಉಲ್ಲಂಘಿಸುವುದಕ್ಕೆ ಶಕ್ಯವಾದೀತೇ?
ಬ್ರಾಹ್ಮಣಾಪಮಾನವು ಐಶ್ವರ್ಯಹಾನಿಕರವು. ಐಶ್ವರ್ಯವೆಂಬುವುದು ಲಕ್ಷ್ಮೀ
ಸ್ವರೂಪವು. ಲಕ್ಷ್ಮೀಗುಣವು ಆಶ್ರಯಸ್ಥಾನದೋಷದಿಂದ ಚಂಚಲತ್ವವನ್ನು
ಪಡೆಯುವುದು. ಅದು ಹೇಗಂದರೆ—ಅಶುಚಿಯಾದ ದೇಶವನ್ನು ಆಚಾರವಂತರು
ತ್ಯಜಿಸುವಂತೆಯೂ ಗೂಬೆಯು ಹೊಕ್ಕ ಮನೆಯಂ ಶ್ರೇಯೋವಂತರು ಬಿಡುವಂ
ತೆಯೂ ನ್ಯಾಯನೀತಿ ತಪ್ಪಿನಡೆದ ಪುರುಷನೆಂಥಾ ಗುಣವಂತನಾದರೂ ಲಕ್ಷ್ಮಿಯು

ಆತನಂ ಬಿಟ್ಟು ಹೋಗುವಳು. ಮತ್ತು ಆಯಾ ವೇಳೆಯಲ್ಲಿ ಖದ್ಯೋತ ಪ್ರಕಾಶದಂತೆಯೂ ಕಾರ್ಮುಗಿಲ ಮಿಂಚಿನಂತೆಯೂ ತೋರಿ ಮರೆಯಾಗುವಳು. ಈ ಲಕ್ಷ್ಮಿಯು ಸ್ವಲ್ಪ ಶಕ್ತಿವಂತನಂ ಮಹಚ್ಛಕ್ತಿಯುಳ್ಳವನನ್ನಾಗಿ ಮಾಡುವಳು. ಗುಣವಂತನಂ ಅಶುಚಿಯಂ ಕಂಡಂತೆ ಕಾಣುವಳು ; ತ್ಯಾಗಿಯಂ ಅಮಂಗಲದಂತೆ ಎಣಿಸುವಳು. ಸಜ್ಜನನಂ ಕಂಡು ಅಪಶಕುನವಂ ಕಂಡಂತೆ ಹಿಂದಿರುಗುವಳು. ಶೂರನಂ ಸರ್ಪವಂ ಕಂಡಂತೆ ದಾಟುವಳು. ಮನಸ್ವಿಯಂ ಮುಳ್ಳನಂತೆ ಪರಿಹರಿಸುವಳು. ವಿನೀತನಂ ಪುಚ್ಛನಂತೆ ತಿಳಿಯುವಳು. ಈಕೆಯು ಜಲರಾಶಿ ಸಂಜಾತಳಾದರೂ ತೃಷ್ಣೆಯನ್ನುಂಟುಮಾಡುವಳು. ಅಮೃತಸೋದರಿಯಾದರೂ ತೀಕ್ಷ್ಣಳು. ಪುರುಷೋತ್ತಮಪ್ರಿಯಳಾದರೂ ಖಲಜನೇಷ್ಟಳು. ಈ ಲಕ್ಷ್ಮಿಯು ಯಾರಲ್ಲಿ ನೆಲಸಿ ಹೇಗೆ ಹೇಗೆ ಎಷ್ಟೆಷ್ಟು ಹೆಚ್ಚಾಗಿ ಪ್ರಕಾಶಿಸುವಳೋ ಹೆಚ್ಚಿ ಬೆಳಗುವ ದೀಪವು ಧೂಮವನ್ನುಗುಳುವಂತೆ ಆ ಪುರುಷನಿಂದ ವಿಶೇಷ ಮಲಿನಕರ್ಮವನ್ನೇ ಮಾಡಿಸುವಳು. ಇಂಥಾ ಐಶ್ವರ್ಯಸ್ವರೂಪಳಾದ ಲಕ್ಷ್ಮಿಗೆ ಆಶ್ರಯರಾದ ಈ ಅರಸುಗಳು ನ್ಯಾಯತಪ್ಪಿ ನಡೆಯಬಾರದೆಂಬ ಪರಿಜ್ಞಾನದಿಂ ಶೂನ್ಯರಾಗಿ ಸಾಧುಗಳಂ ತಿರಸ್ಕರಿಸುತ್ತ ಆಶಾಪಿಶಾಚಗ್ರಸ್ತರಾಗಿ ಪ್ರಜಾಯೋಗಕ್ಷೇಮಕಾರ್ಯದಲ್ಲಿ ದೃಷ್ಟಿಯನ್ನಿಡದೆ ಪ್ರಜಾನಿಕರದಿಂ ಬಂದ ವಸ್ತುಗಳಂ ಪ್ರಜಾರಕ್ಷಣೆಗೆಂದು ತಿಳಿಯದೆ ಇವೆಲ್ಲವೂ ತಮ್ಮ ಭೋಗಕ್ಕೆ ಯೋಗ್ಯವಾದವುಗಳೆಂದೇ ತಿಳಿಯುತ್ತ ಭೂಮಿಯಲ್ಲಿ ಧಾನ್ಯ ಬೆಳೆಯುವಂತೆ ಧನವೂ ಬೆಳೆಯುವುದೆಂದು ಭಾವಿಸಿ ಪ್ರಜೆಗಳಿಂದ ನ್ಯಾಯವಾಗಿ ಬಂದುದು ಸಾಲದೆ ಇನ್ನೂ ಹೇರಳವಾಗಿ ತರಿಸಿರೆಂದು ಅಧಿಕೃತಿಗಳಿಗೆ ನೇಮಿಸುತ್ತಾ ಶಾಣೋಲ್ಲೇಖನದಿಂ ತೀಕ್ಷ್ಣಧಾರೆಯುಳ್ಳ ಖಡ್ಗವು ಪ್ರಾಣಿಗಳಂ ಭೇದಿಸುವಂತೆ ಪಾನಮತ್ತರಾಗಿ ಸಾಧುಗಳಂ ನಿಗ್ರಹಿಸುವರು. ದಂಡಾಘಾತದಿಂ ಫಲಗಳನ್ನುದುರಿಸುವಂತೆ ದಂಡಗಳಂ ತರಿಸಿ ಕುಲೀನರಂ ಶಿಥಿಲಂಗೈಸುವರು. ಬಲೆಗಳೊಳ್ ತಗುಲಿಸಿ ಕೊಲ್ಲುವ ಬೇಟೆಗಾರನನ್ನರಿಯದೆ ತೃಣವಂ ಭಕ್ಷಿಸಲೆಳಸುವ ಮೂಢಮೃಗದಂತೆ ಮುಂದೆ ಬರುವ ಆಪತ್ತನ್ನರಿಯದೆ ವಿಷಯಾಸಕ್ತರಾಗಿ ತಾವು ಮಾಡುವ ಅನಾಚಾರವಂ ಬಹು ಯುಕ್ತವೆಂದೂ ಜೂಜುಗಳಂ ವಿನೋದಕೇಳಿಯೆಂದೂ ಪರಸ್ತ್ರೀಸಂಗಮವಂ ರಸಿಕತ್ವವೆಂದೂ ಗೀತವೇಶ್ಯಾಸಕ್ತಿಯಂ ಪ್ರೌಢಿಮೆಯೆಂದೂ ಪತ್ನೀಪರಿತ್ಯಾಗವಂ ಜಿತೇಂದ್ರಿಯತ್ವವೆಂದೂ ಮತ್ತತೆಯಂ ವಿಲಾಸಶೌರ್ಯವೆಂದೂ ವೃದ್ಧವಚನತಿರಸ್ಕಾರವಂ ನೋಡಿ ಪ್ರಭುಗಳೇ

ಸ್ವಯಂಬುದ್ಧಿವಂತರೆಂದೂ ಪ್ರಭುವು ಮಾಡತಕ್ಕ ಕಾರ್ಯವಂ ಭೃತ್ಯರೂ ಮಾಡಿ ಕೊಳ್ಳುತ್ತಿದ್ದರೆ ದರ್ವಿ ಇರುವಲ್ಲಿ ಹಸ್ತಕ್ಕೆ ಸೆಕೆಯುಂಟೇ ? ಎಂದೂ ಅಪರಾಧಿ ಗಳಂ ದಂಡಿಸದೆ ಇರುವುದಂ ನೋಡಿ ಪ್ರಭುಗಳು ಮಹಾ ಕರುಣಾಳುಗಳು ಎಂದೂ ದೇವತಾಹೇಳನಂಗೆಯ್ವುದಂ ನೋಡಿ ರಾಜರೇ ಪ್ರತ್ಯಕ್ಷದೇವತೆಗಳು ಎಂದೂ ಹೀಗೆ ಪ್ರಭುಗಳ ಅಕಾರ್ಯವನ್ನೂ ವಿಹಿತವೆಂದು ಹೊಗಳುತ್ತ ಮನ ಸ್ಸಿನಲ್ಲಿ ಪರಿಹಾಸಂಗೊಂಡು ನಗುತ್ತಿರುವ ಸಮೀಪವರ್ತಿಗಳೂ ಸ್ವಕಾರ್ಯ ತತ್ಪರರೂ ಆದ ವಂಚಕರಿಂ ವಂಚಿತರಾಗಿ ಅವರು—ನೀನೇ ಈಶ್ವರನೆಂದು ಸ್ತುತಿ ಸಿದರೆ ತಮ್ಮ ಹಣೆಯಲ್ಲಿ ಅವ್ಯಕ್ತವಾದ ನೇತ್ರವಿನ್ನೊಂದುಂಟೆಂದು ತಿಳಿಯುತ್ತ ಭುಜದೊಳಗೆ ಭುಜಯುಗ್ಮವಿದ್ದೀತು ಅದರಿಂದ ತಾವೇ ಈಶ್ವರರೆಂದು ಭಾವಿ ಸುತ್ತ ತಾವು ನಡೆದುದೇ ಪರಮಧರ್ಮವೆಂದೂ ಲೋಕದಲ್ಲಿ ತಮಗಿಂತಲೂ ಬುದ್ಧಿವಂತರೇ ಇಲ್ಲವೆಂದೂ ತಾವು ನೋಡಿದರೆ ಈತನು ಧನ್ಯನಾಗುವನು ಮುಟ್ಟಿದರೆ ಈತನ ತನು ಪಾವನವಾಗುವುದು ಮಾತನಾಡಿದರೆ ಈತನು ಕೃತಕೃತ್ಯ ನಾಗುವನು ಎಂದು ತಿಳಿಯುತ್ತ ಹೀಗೆ ಮಿಥ್ಯಾಮಹಾತ್ಮ್ಯಯಿಂದ ದೇವತೆಗಳಗೂ ಅಭಿವಂದಿಸದೆ ಹಿರಿಯರಿಗೆ ನಮಸ್ಕರಿಸದೆ ಶ್ರೋತ್ರಿಯರಿಗೆ ಕೈಮುಗಿಯದೆ ವಂಚಕರ ವಾಕ್ಯವಂ ವೇದಸದೃಶವಾಗಿ ಭಾವಿಸುತ್ತ ಅವರು ಹೇಳಿದವರಿಗೆ ಕೊಡುತ್ತ ಅಭಿಚಾರವಂ ಪ್ರಮಾಣವೆಂದು ತಿಳಿಯುತ್ತ ಲೋಕಾಪವಾದವಂ ಗಣನೆಗೆ ತಾರದೆ ಇರುವ ಈ ನಂದರಲ್ಲಿ ದೈವಸಂಕಲ್ಪವೆಂತಿರುವುದೋ ? ಆ ಬ್ರಾಹ್ಮಣನು ಏನು ನಿಮಿತ್ತವಾಗಿ ಬಂದನೋ ? ಮುಂದೇನಾಗುವುದೋ ? ಎಂದು ಹೇಳಿಕೊಳ್ಳುತ್ತ ಅಲ್ಲಿನ ಸಭಾಜನರೆಲ್ಲರೂ ಹೊರಟುಹೋದರು.

ಆಗ ದೇಶಾಂತರವಿಶೇಷವರ್ತಮಾನವಂ ತಿಳಿದುಬಂದು ಹೇಳುವಂತೆ ನೇಮಿ ಸಲ್ಪಟ್ಟು ಆ ಸತ್ರಕ್ಕೆ ಬಂದಿದ್ದ ಪರ್ವತರಾಜ್ಯದ ಗೂಢಚಾರರು ಈ ವರ್ತಮಾ ನಗಳೆಲ್ಲವಂ ತಮ್ಮ ದೊರೆಗೆ ತಿಳುಹಿಸಬೇಕೆಂದು ಹೊರಟುಹೋಗಲು, ಅಷ್ಟ ರಲ್ಲಿಯೇ ಮೊದಲು ನೇಮಿಸಿದ್ದ ಪಂಜರಕ್ಷಕರಾದ ದೂತರು ಬಂದು ಪಾಟಲೀ ಪುರದಲ್ಲಿ ನಡೆದ ವರ್ತಮಾನಗಳೆಲ್ಲವಂ ಪರ್ವತರಾಜನಿಗೆ ವಿಜ್ಞಾಪಿಸಲಾಗಿ ಅದಂ ಕೇಳಿ ಆ ದೊರೆಯು ತನ್ನ ಮಂತ್ರಿಯಾದ ಶಬರವರ್ಮನಂ ನೋಡಿ—

ಏನೈ, ನೀನು ಪಾಟಲೀಪುರಕ್ಕೆ ಕಳುಹಿಸಿದ್ದ ಕಪಟಶಿಲ್ಪದ ಪರೀಕ್ಷೆಯು ಅಲ್ಲಿನ ಮಂತ್ರಿಗಳಿಂದಾಗದೆ ಚಂದ್ರಗುಪ್ತನೆಂಬವನಿಂದ ಆಯಿತಂತೆ ! ಆದರಿಂದ ನಂದರು ಅವನ ಬಂಧನಿವೃತ್ತಿಯಂ ಮಾಡಿ ಅನ್ನಸತ್ರಾಧಿಕಾರವಂ ನೋಡುತ್ತಿ

ರುವಂತೆ ಆತನನ್ನು ನೇಮಿಸಿದರಂತೆ! ಆತನು ತನ್ನ ಕಣ್ಣುಸನ್ನೆಯಿಂದ ಪಂಜರ ರಕ್ಷಕರಾದ ನಮ್ಮ ದೂತರಂ ಅಲ್ಲಿಂದ ಬೇಗ ಹೋಗುವಂತೆ ಸೂಚಿಸಲು ನಿಮಿತ್ತವೇನು? ಆತನೇ ನಾವು ಮೊದಲು ಕೇಳಿದ್ದ ಮೌರ್ಯಪುತ್ರನಾದಾನು ಎನಲು, ಆ ಮಾತಿಗೆ—

ಜೀಯಾ, ಚಂದ್ರಗುಪ್ತನಿಗೆ ಬಂಧವಿಮೋಚನವು ತಮ್ಮ ಸನ್ನಿಧಾನದಿಂದಲೇ ಆದಂತಾಯಿತು. ಧನಹೀನನೂ ಕೃಶನೂ ಆಗಿ ವಿಪತ್ತಿಗೆ ತಗುಲಿದ್ದ ಆ ಚಂದ್ರಗುಪ್ತನಿಗೆ ಮುಂದೆ ಆತನ ಶತ್ರುಗಳಂ ನಿಗ್ರಹಿಸುವುದಕ್ಕೆ ಶಕ್ತರಾದ ಪ್ರಭುಗಳ ಆಶ್ರಯವುಂಟಾದರೆ ಆತನ ಅದೃಷ್ಟವು ಫಲಿಸುವುದು. ಮೌರ್ಯಪುತ್ರರು ಬುದ್ಧಿವಂತರೆಂದು ಮೊದಲು ಕೇಳಿದ್ದ ಮಾತಿಗೆ ಸರಿಯಾಗಿ ಅವರಲ್ಲಿ ಈ ಚಂದ್ರಗುಪ್ತನು ತಾನು ಮಾಡಿದ ಪಂಜರಪರೀಕ್ಷಾನಂತರದಲ್ಲಿ ಕಣ್ಣುಸನ್ನೆಯಿಂದ ನಮ್ಮ ದೂತರಂ ಅಲ್ಲಿಂದ ಬೇಗ ಹೋಗುವಂತೆ ಮಾಡುವುದಕ್ಕೆ ನಿಮಿತ್ತವೇನು ಎಂದರೆ—ಈ ಪಂಜರರಕ್ಷಕರು ಆ ಸಿಂಹವಂ ಆಸ್ಥಾನದ ಬಳಿಯಲ್ಲಿ ಅಮಾನುಷಕೃತವೆಂದು ಹೇಳಿರುವಲ್ಲಿ ಅದು ಪರೀಕ್ಷೆಯಿಂದ ಕಪಟಶಿಲ್ಪವಾಗಲು; ಇನ್ನು ಇವರಿಲ್ಲಿದ್ದರೆ ರಾಜದಂಡಕ್ಕೆ ಯೋಗ್ಯರಾದಾರು. ಹಾಗೆ ನಡೆದರೆ ತನ್ನ ನಿಮಿತ್ತದಿಂದ ಇವರಿಗೆ ದಂಡನೆ ನಡೆದಂತಾಗುವುದು. ಅಂತಾಗಬಾರದೆಂಬ ಕರುಣೆದಿಂದಲೋ ಅಥವಾ ಪಂಜರ ಮೂಲಕದಿಂದ ತನಗೆ ಬಂಧನನಿವೃತ್ತಿಯಾಗುವುದೆಂಬ ಕೃತಜ್ಞತೆಯಿಂದಲೋ ಕಣ್ಣುಸನ್ನೆಯಂ ಮಾಡಿದ್ದಾನು. ಆದರಿಂದ ಅವನಂ ಚತುರನೆನಬೇಕು. ಆತನಂ ಪಕ್ಷೀಕರಿಸಿದರೆ ಪ್ರಭುಗಳಿಗೆ ಕೀರ್ತಿಲಾಭಮುಂಟಾದೀತು. ದೈವಬಲವು ಯಾವನಲ್ಲಿ ಎಂತಿರುವುದೋ! ಎಂದು ವಿಜ್ಞಾಪಿಸಿ ಪಂಜರರಕ್ಷಕರಂ ನೋಡಿ—

ಎಲೈ, ಆ ಚಂದ್ರಗುಪ್ತನು—ನೀವು ಯಾರೆಂದು ನಿಮ್ಮಂ ಕೇಳಿದನೋ ಇಲ್ಲವೋ? ಎಂದು ಶಬರವರ್ಮನು ಕೇಳಲು; ಸ್ವಾಮಿ, ಕೇಳಿದನು. ಅದಕ್ಕೆ ನಾವು ಗಟ್ಟಬೆಟ್ಟಗಳಲ್ಲಿ ವಾಸಮಾಡುವ ಭೃತ್ಯರೆಂದು ಹೇಳಿದೆವೆನಲು, ಅದಂ ಕೇಳಿ ರಾಯನಂ ಕುರಿತು—

ಜೀಯಾ, ಈ ದೂತರ ವಚನದಿಂದ ಪಂಜರಸಿಂಹವು ಪರ್ವತದೇಶಾಧಿಪತಿಗಳಿಂದ ನಂದರ ಅವಹೇಳನಾರ್ಥವಾಗಿ ಕಳುಹಿಸಿರ್ಪುದು ಎಂದು ಚಂದ್ರಗುಪ್ತನು ಗೊತ್ತಾಗಿ ತಿಳಿದು ಇದ್ದಾನು. ಆತನು ಅಲ್ಲಿಯೂ ಇರುವುದಕ್ಕೆ ಅಶಕ್ಯ

ವಾದ ಸಮಯದಲ್ಲಿಯಾದರೂ ಅಥವಾ ರಾಜಕಾರ್ಯಾರ್ಥವಾಗಿಯಾದರೂ ಈ ಪ್ರಾಂತಗಳಿಗೆ ಬಂದರೂ ಬರಬಹುದೆಂದು ಶಬರವರ್ಮನೆಂಬ ಮಂತ್ರಿಯು ಪರ್ವತೇಶ್ವರನಿಗೆ ವಿಜ್ಞಾಪಿಸಿದನು. ಆ ರಾಯನು ಆ ಮಾತಿಗೆ ಹಾಗೆ ಆದೀತೆಂದು ಹೇಳಿ ಸ್ಥಾನಾಂತರವನ್ನೈದಿದನು.

ಹೀಗಿರುತ್ತಿರುವಲ್ಲಿ ಅತ್ತಲಾಗಿ ಚಾಣಕ್ಯನು ತನ್ನ ಮನಸ್ಸಿನಲ್ಲಿ—ಈಗ ನಂದರಂ ನನ್ನ ಬುದ್ಧಿಪೌರುಷಗಳಿಂದ ಸಂಹರಿಸಿದರೆ ಮುಂದೆ ಶುದ್ಧಕ್ಷತ್ರಿಯ ಸಂತತಿಯು ಸಾಗದೆ ನಿಲ್ಲುವುದು. ಉಪೇಕ್ಷಿಸಿದರೆ ಪ್ರತಿಜ್ಞೆಗೆ ಭಂಗಬರುವುದು. ಶುದ್ಧಕ್ಷತ್ರಿಯನಾಗಿದ್ದರೂ ದುರಾತ್ಮಕನಾದ ವೇನರಾಯನಂತೆ ಇವರು ಸಾಧುಗಳಂ ಪೀಡಿಸುವರು. ಬಹುವಿಧವಾಗಿ ಯೋಚಿಸಿದರೂ ಈ ನಂದರಿಂದ ಲೋಕಕ್ಕೆ ಕ್ಷೇಮವಾಗದು. ಪೂರ್ವದಲ್ಲಿ ಶೂದ್ರಸ್ತ್ರೀಪುತ್ರನಾದ ವಿದುರನು ಧೃತರಾಷ್ಟ್ರನ ರಾಜ್ಯಭಾರವಂ ನಿರ್ವಹಿಸುತ್ತ ಖ್ಯಾತಿವಂತನಾದಂತೆ ನನ್ನ ಬುದ್ಧಿಬಲದಿಂದ ಶತ್ರುಗಳಾದ ನಂದರು ಸಂಹೃತರಾಗಲು ; ಈ ಚಂದ್ರಗುಪ್ತನು ಅದೇ ನಂದರಾಜ್ಯಕ್ಕೆ ಪ್ರಭುವಾಗಿ ನ್ಯಾಯದಿಂದ ಪ್ರಜಾರಕ್ಷಣೆಯಂ ಮಾಡುತ್ತ ಯಶೋವಂತನಾಗಿರುವನು. ಲೋಕಕ್ಕೆ ಇದಕ್ಕಿಂತಲೂ ಮತ್ತೊಂದು ಕ್ಷೇಮವೇನು ? ಲೋಕದಲ್ಲಿ ಭೂತದಯೆಯೆಂಬುವುದು ಮುಖ್ಯಧರ್ಮವು. ಅದಕ್ಕಿಂತಲೂ ಭೀತರಾದ ಶರಣಾಗತರಂ ರಕ್ಷಿಸುವುದು ಪರಮೋತ್ಕೃಷ್ಟಧರ್ಮವು. ಈಯರ್ಥದಲ್ಲಿ ಪೂರ್ವಶಿಷ್ಟಾಚಾರವಂ ಬಹಳವಾಗಿ ಕೇಳಿಹೆವು. ಗೋವುಗಳನ್ನೂ ಪ್ರಜೆಗಳನ್ನೂ ಬಾಧಿಸುವ ಹುಲಿಗಳ ನಿಗ್ರಹದಂತೆ ದುಷ್ಟರಾದ ನಂದನಿಗ್ರಹದಿಂದ ಪ್ರತ್ಯವಾಯ ಬರಲಾರದು ಎಂದು ಯೋಚಿಸಿ ಹೋಗುತ್ತಿರಲು ; ಚಂದ್ರಗುಪ್ತನು ಆತನ ಸಮೀಪಕ್ಕೆ ಬಂದು ಅಭಿವಂದಿಸಿ ಫಲೋಪಹಾರಂಗಳಂ ಸಮರ್ಪಿಸಿ—ಸ್ವಾಮೀ, ನನಗೆ ಇಲ್ಲಿ ಏನು ಕೆಲಸವು ? ನಾನೂ ತಮ್ಮ ಸಂಗಡಲೇ ಸೇವೆಯಂ ಮಾಡುತ್ತ ಬರುತ್ತಿದ್ದೇನೆ. ಅರಣ್ಯವೆಲ್ಲವಂ ದಹಿಸುವ ಕಾಡುಗಿಚ್ಚಿನ ಔಷ್ಣ್ಯದಿಂದ ಬಾಡುತ್ತಿರುವ ಚಂಪಕವೃಕ್ಷವನ್ನು ಲೋಕಸಂತಾಪಶಾಮಕವಾದ ಉದಕಧಾರೆಗಳಿಂದ ಅಗ್ನಿಯಂ ಕೆಡಿಸಿ ಸುಖಪಡಿಸುವ ಮೇಘದಂತೆ ಸ್ವಜನನಾಶಕರಾದ ಈ ಶತ್ರುಗಳ ತಿರಸ್ಕಾರ ದುಃಖಗಳಿಂದ ಸಂತಪ್ತನಾದ ನನ್ನನ್ನು ನಿಮ್ಮ ಕೃಪಾಪಾಂಗಾಮೃತಧಾರಾಸೇಚನೆಯಿಂದ ಸುಖಿಸುವಂತೆ ಮಾಡಬೇಕೆಂದು ಪಾದಂಗಳಂ ಪಿಡಿದು, ನಮಸ್ಕರಿಸುವುದಂ ನೋಡಿ ದಯಾರ್ದ್ರಹೃದಯನಾದ ಚಾಣಕ್ಯನು—

ಅಯ್ಯಾ, ಚಂದ್ರಗುಪ್ತನೇ, ಇನ್ನು ಮೇಲೆ ಶತ್ರುಗಳ ಭಯವಂ ಬಿಡುವವನಾಗು. ಇನ್ನು ಸ್ವಲ್ಪ ಕಾಲದಲ್ಲೇ ಈ ನಂದರಂ ನಿಗ್ರಹಿಸಿ ಸಕಲಸಾಮಂತ ರಾಜಮಣಿಮಕುಟಪ್ರಭಾನೀರಾಜಿತವಾಗುವಂಥ ಮತ್ತು ಸಾರ್ವಭೌಮಪದಕ್ಕೆ ಯೋಗ್ಯವಾದಂಥ ಮಹಾಸಿಂಹಾಸನದಲ್ಲಿ ನಿನ್ನಂ ಕುಳ್ಳಿರಿಸಿ ಪಟ್ಟಾಭಿಷೇಕವಂ ಮಾಡಿಸಿ ಆ ವೈಭವವಂ ನೋಡಿ ನಾನು ಕೃತಕೃತ್ಯನಾಗಿ ತದನಂತರ ತಪೋವನಕ್ಕೆ ಹೋಗುವೆನು. ಈ ಮಾತಂ ನಂಬುವವನಾಗು. ಇದಕ್ಕೆ ನನ್ನ ಸುಕೃತವೇ ಸಾಕ್ಷಿ ಎಂದು ಅಭಯವಂ ಕೊಟ್ಟು ಚಾಣಕ್ಯನು ಜನರಹಿತವಾದ ವೃಕ್ಷಛಾಯೆಯಲ್ಲಿ ವಿಶ್ರಮಿಸಿಕೊಳ್ಳುತ್ತ ರಾಜಕಾರ್ಯವನ್ನಾಲೋಚಿಸುವವನಾಗಿ ಪಾದಸೇವೆಯಂ ಮಾಡುತ್ತಿರುವ ಚಂದ್ರಗುಪ್ತನಂ ಕುರಿತು—

ಅಯ್ಯಾ, ಕುಮಾರಕನೇ, ಈ ಭೂಮಿಯಲ್ಲಿರುವ ಮಂಡಲಾಧಿಪತಿಗಳಲ್ಲಿ ನಂದರಿಗೆ ಶತ್ರುಗಳು ಯಾರು ? ಮಿತ್ರರು ಯಾರು ? ಎಂದು ಕೇಳಲು; ಚಂದ್ರಗುಪ್ತನು—

ಸ್ವಾಮಿ, ಅರಸುಗಳು ಹೃದಯದಲ್ಲಿ ನಂದರ ಮೇಲೆ ಮಾತ್ಸರ್ಯವುಳ್ಳವರಾದರೂ ರಾಕ್ಷಸನು ಮಾಡುವ ಉಪಾಯ ಚತುಷ್ಟಯಕ್ಕಾಗಿ ಪುಷ್ಪಿತವಾದ ವನವನ್ನಾಶ್ರಯಿಸಿ ಜೀವಿಸುತ್ತಿರುವ ಭ್ರಮರನಿಕರಗಳಂತೆ ಕೆಲವು ಜನರು ನಂದರಲ್ಲಿ ಅನುರಕ್ತರಾಗಿ ದಾಸಭಾವದಿಂದಿರುವರು. ಮತ್ತೆ ಕೆಲವರು ರಾಕ್ಷಸನ ಭೀತಿಯಿಂದ ಅಂಕುಶಪ್ರಹಾರಕ್ಕೆ ಭಯಪಡುತ್ತ ಮಾವುತರ ವಶವರ್ತಿಗಳಾಗಿರುವ ಮದಗಜಗಳಂತೆ ನಂದರಿಗೆ ನಿಯಮ್ಯರಾಗಿರುವರು. ರಾಕ್ಷಸನು ಆ ಮಂಡಲಾಧಿಪರಂ ಯಾವ ಮರ್ಯಾದೆಯಲ್ಲಿ ಇಟ್ಟಿಹನೆಂದರೆ—ನಂದರಲ್ಲಿ ಮಲತನವರಂ ದಂಡಿಸುತ್ತ ಅನುರಕ್ತರನ್ನಾದರಿಸುತ್ತ ಅವರವರ್ಗೆ ಉಚಿತವಾದ ದೇಶವಂ ಕೊಟ್ಟು ಹೆಚ್ಚಿದುದಕ್ಕೆ ಕಪ್ಪಂಗಳಂ ನೇಮಿಸಿ ಕಾಲಕಾಲಕ್ಕೆ ತಪ್ಪದೆ ಧನಂಗಳನ್ನಾರ್ಜಿಸುತ್ತ ಅವುಗಳಂ ರಾಜಕೋಶದಲ್ಲಿ ರಾಶಿಗೊಳಿಸುತ್ತಿರುವನಲ್ಲದೆ ಕ್ಷಣಮಾತ್ರವೂ ಉಪೇಕ್ಷೆಯಂ ಮಾಡನು. ಮತ್ತು ಉಳಿದ ಅಧಿಕಾರಿಗಳಿಗೆ ಸಂಬಳ ಹೊರತು ಇತರ ವಿಷಯಜ್ಞಾನಕ್ಕೆ ಲೇಶಮಾತ್ರವೂ ಅವಕಾಶವಿಲ್ಲ. ಇದಂ ನೋಡಿದರೆ ರಾಕ್ಷಸನು ಅನ್ಯರ ಶ್ರೇಯಸ್ಸಂ ಸಹಿಸುವವನಂತೆ ಕಾಣಿಸುದಿಲ್ಲ ಎಂದು ಹೇಳಿದನು.

ಆ ಮಾತಿಗೆ ಚಾಣಕ್ಯನು—ಅಯ್ಯಾ, ಕುಮಾರನೇ, ರಾಕ್ಷಸನಲ್ಲಿ ಈ ಯರ್ಥವನ್ನು ದೋಷವೆಂದೆಣಿಸಕೂಡದು ; ಅದೇಕೆಂದರೆ—ಜನಗಳಲ್ಲಿ ಉಚಿತವಂ

ಮಿಾರಿ ಧನಗಳು ಕೂಡಿ ಬಂದರೆ ಧನಸಂಪನ್ನರಾದ ಆ ಜನಗಳಿಗೆ ನಿಗ್ರಹಾನುಗ್ರಹ ಶಕ್ತಿಗಳುಂಟಾಗಿ ಸ್ವಾಮಿಯಂ ಲಕ್ಷೀಕರಿಸದೆ ಸಮಯಾಂತರದಲ್ಲಿ ಸ್ವಾಮಿ ಪದ ವನ್ನೇ ಅಪೇಕ್ಷಿಸುವರು. ಅದರಿಂ ಸ್ವಾಮಿಭೃತ್ಯನ್ಯಾಯವು ತಪ್ಪಿ ರಾಜ್ಯತಂತ್ರವು ಕೆಡುವುದೆಂಬ ಶಂಕೆಯಿಂದ ರಾಕ್ಷಸನು ಜನಗಳಿಗೆ ಉಚಿತವಾದ ಧನಪ್ರಾಪ್ತಿಯಂ ಉಂಟುಮಾಡುವನು. ಇದು ಸ್ವಾಮಿಭಕ್ತನಾದ ಮಂತ್ರಿಗೆ ಗುಣವಲ್ಲದೆ ದೋಷ ವಲ್ಲವು. ಇದರಿಂ ಜನರು ತನ್ನ ಕೈಮಿಾರಿಹೋಗದಂತೆ ರಾಜ್ಯತಂತ್ರವಂ ಮಾಡು ವುದರಿಂ ರಾಕ್ಷಸನು ಮಂತ್ರಿಪದಕ್ಕೆ ಯೋಗ್ಯನಹುದು ಎಂದು ಹೇಳಿ ನಂದರಿಗೆ ಆಪ್ತಮಿತ್ರರಾರು ? ಉದಾಸೀನಪಕ್ಷದ ಅರಸುಗಳಾರು ? ಎಂದು ಕೇಳಿದನು.

ಅದಕ್ಕೆ—ಸ್ವಾಮಿಾ, ನಂದರಿಗೆ ಕಾಶೀದೇಶಾಧೀಶ್ವರನು ಮತ್ಸ್ಯದೇಶಾಧಿ ಪತಿಯು ಇವರಿಬ್ಬರೂ ಆಪ್ತಮಿತ್ರರು. ಮತ್ತೆ ಕಾಶ್ಮೀರಪತಿ ಮಲಯಪತಿ ಸಿಂಧುಪತಿ ಕುಲೂತಪತಿ ಪಾರಶೀಕಪತಿ ಕಾಂಭೋಜಚೋಳಹೂಣ ದೇಶಾಧಿಪತಿ ಗಳಿಗೆ ನಿಯಾಮಕನಾಗಿರುವ ಪರ್ವತದೇಶಾಧಿಪತಿಯಾದ ಪರ್ವತೇಶ್ವರನು ನಂದರಿಗೆ ಉದಾಸೀನಪಕ್ಷದವನು. ಆ ಪರ್ವತೇಶ್ವರನಿಗೆ ಸಮಯಾಂತರದಲ್ಲಿ ಶತ್ರುಗಳೊಡನೆ ಬಂದ ಮಹತ್ಕಲಹವು ಈ ಅಮಾತ್ಯರಾಕ್ಷಸನಿಂದ ಶಮನವಾದ ಕಾರಣ ರಾಕ್ಷಸನು ತನಗೆ ಮಿತ್ರನೆಂದು ಪರ್ವತೇಶ್ವರನು ಭಾವಿಸುವನಂತೆ. ಆತನು ನಂದರಿಗೆ ಉದಾಸೀನಪಕ್ಷದವನಾದರೂ ಏನು ಕಾರಣದಿಂದಲೋ ನಂದರ ಅವಹೇಳನಾರ್ಥವಾಗಿ ಕಪಟಶಿಲ್ಪವಂ ರಚಿಸಿ ಪಾಟಲೀಪುರಕ್ಕೆ ಕಳುಹಿಸಿ ಇದ್ದನು. ಆ ಶಿಲ್ಪಪರೀಕ್ಷೆಯಿಂದಲೇ ನನ್ನ ಬಂಧನವು ವಿಮೋಚನವಾಯಿತು ಎಂದು ಚಂದ್ರಗುಪ್ತನು ಹೇಳಲು—

ಅಯ್ಯಾ, ಕುಮಾರಕನೇ, ಲೋಕದಲ್ಲಿ ಸ್ವಜನರು ಮಾಡಿದ ಅವಹೇಳನವು ವಿನೋದದಲ್ಲಿ ಪರ್ಯವಸಾನವಾದೀತು. ಅದನ್ನೇ ಅನ್ಯರು ಮಾಡಿದರೆ ವೈರ ಮುಂಟಾಗುವುದು. ಈ ಯರ್ಥವಂ ತಿಳಿದು ನಂದರಿಗೆ ವೈರಿಗಳಾದ ಜನರು ಪರ್ವ ತೇಶ್ವರನ ಆಶ್ರಯವಂ ಸಂಪಾದಿಸಿದಾಗ್ಗೂ ಅಥವಾ ಪರ್ವತೇಶ್ವರನ ಶತ್ರುಗಳು ನಂದರಲ್ಲಿ ಆಶ್ರಯವಂ ಸಂಪಾದಿಸಿದಾಗ್ಗೂ ಈ ಅರಸುಗಳೀರ್ವರಿಗೂ ಉದಾಸೀ ನಭಾವವು ಹೋಗಿ ಅನ್ಯೋನ್ಯವೈರವು ಹೆಚ್ಚಿ ಬರುವುದು. ಇದಂತಿರಲಿ. ಈ ಪುರದಲ್ಲಿ ನಿಮ್ಮ ತಂದೆಯಾದ ಮೌರ್ಯನಲ್ಲಿ ಅನುರಕ್ತರಾಗಿದ್ದ ಅಧಿಕಾರಿಗ ಳುಂಟೋ, ಇಲ್ಲವೋ ? ಎಂದು ಚಾಣಕ್ಯನು ಕೇಳಿದುದಕ್ಕೆ—

ಸ್ವಾಮಿ, ನಮ್ಮ ತಂದೆಯಾದ ಮೌರ್ಯನು ಮಾಡಿದ ಆದರದಿಂದ ಬಾಗು
ರಾಯಣ ಮುಖ್ಯರಾದ ಸೇನಾಪತಿಗಳೆಲ್ಲರೂ ಪ್ರಸಿದ್ಧಿಯಂ ಪಡೆದರು. ಈಗ ಆ
ಕೃತಜ್ಞತೆಯು ಅವರ ಮನಸ್ಸಿನಲ್ಲಿ ಉಂಟೋ, ಇಲ್ಲವೋ? ಬುದ್ಧಿಪರಾಕ್ರ
ಮಗಳಲ್ಲಿ ನಮ್ಮ ತಂದೆಯು ರಾಕ್ಷಸನಿಗೆ ಸಮಾನನಾದರೂ ಆತನು ಮಾಡುವ
ರಾಜ್ಯವಿಚಾರವಂ ನೋಡಿ ರಾಕ್ಷಸನು ಯಾವಾಗಲೂ ತಟಸ್ಥನಾಗಿಯೇ ಇರುತ್ತಿ
ದ್ದನು ಎಂದು ಚಂದ್ರಗುಪ್ತನು ಹೇಳಲು; ಚಾಣಕ್ಯನು—

ಅಯ್ಯಾ, ಕುಮಾರಕನೇ, ರಾಕ್ಷಸನಲ್ಲಿ ಶೌರ್ಯಮುಂಟೇ? ಎನಲು;
ಸ್ವಾಮಿ, ಈ ಸೇನಾಪತಿಗಳೆಲ್ಲರಿಗಿಂತಲೂ ಅಧಿಕಶೌರ್ಯವಂತನಾದ ರಾಕ್ಷಸನು
ಯುದ್ಧೋನ್ಮುಖನಾದರೆ ಪ್ರತಿಪಕ್ಷಲಕ್ಷವನ್ನಾದರೂ ಸಹಸ್ರಾಕ್ಷನುಕ್ಷ್ಮಾಧರ
ಗಳ ಪಕ್ಷಗಳಂ ಕ್ಷೋಭೆಗೈವಂತೆ ಛೇದಿಸುವನೆಂದು ಕಂಡು ಕೇಳಿ ಉಂಟು.
ಆದುದರಿಂದ ಈ ರಾಜ್ಯಭಾರ ನಿರ್ವಾಹವು ರಾಕ್ಷಸನಲ್ಲಿಯೇ ಉಂಟಾಗಿರುವುದು
ಎಂದು ಚಂದ್ರಗುಪ್ತನು ಹೇಳಿದನು.

ಅದಂ ಕೇಳಿ ಚಾಣಕ್ಯನು ರಾಕ್ಷಸನ ಗುಣವಂ ಮನದಲ್ಲಿಯೇ ಶ್ಲಾಘಿ
ಸುತ್ತ ಮುಂದೆ ರಾಜಕಾರ್ಯವು ಒದಗಿ ಯುದ್ಧೋಪಕ್ರಮವಾದರೆ ನಂದರಂ
ಹೊರಚ್ಚು ಮಾಡಿ ಸಂಹರಿಸಿ ರಾಕ್ಷಸನಂ ಸಂಗ್ರಹಿಸಬೇಕೆಂದು ನಿಶ್ಚಯಿಸಿ—ಎಲೈ,
ಚಂದ್ರಗುಪ್ತನೇ, ಒಂದು ರಾಜಕಾರ್ಯಮುಂಟು. ಅದು ಮಹಾ ರಹಸ್ಯವು.
ಅದಕ್ಕೆ ನಿಮ್ಮ ಮೌರ್ಯನಲ್ಲಿ ಅನುರುಕ್ತರಾಗಿದ್ದ ಇಲ್ಲಿನ ಬಾಗುರಾಯಣಾದಿ
ಸೇನಾಪತಿಗಳ ಸ್ವಹಸ್ತಾಕ್ಷರಸಮ್ಮತಿಯಿಂ ಯುಕ್ತವಾದ ಒಂದು ಕಾಗದವು
ಬೇಕಾಗಿದೆ. ಈಗ ನಾನು ಒಂದು ಕಾಗದವಂ ಬರೆದು ಕೊಡುವೆನು. ಅದಂ
ಆ ಸೇನಾಪತಿಗಳಿಗೆ ತೋರಿಸಿ ಒಡಂಬಡಿಸಿದಲ್ಲದೆ ಅವರು ನಿನ್ನ ಹಸ್ತಾಕ್ಷರದ
ಕಾಗದಕ್ಕೆ ತಮ್ಮ ಸಮ್ಮತಿಯಂ ಬರೆದುಕೊಡಲಾರರು ಎಂದು ಹೇಳಿ ತನ್ನ ಅಕ್ಷ
ರದಿಂದ ಪ್ರಕೃತೋಚಿತವಾಗಿ ಒಂದು ಕಾಗದವಂ ಬರೆದು ಅದನ್ನು ಚಂದ್ರಗುಪ್ತನ
ಕೈಯಲ್ಲಿ ಕೊಟ್ಟು, ಇದಂ ನೀನು ಓದಿಕೊಂಡು ಅರ್ಥವಂ ತಿಳಿದ ಬಳಿಕ ಹೋಗಿ
ಆ ಸೇನಾಪತಿಗಳಿಗೆ ತೋರಿಸಿದರೆ ಅವರು ನಂಬುವರು. ಆಗ ನಿನ್ನ ಅಕ್ಷರದಿಂದ
ಇದಕ್ಕೆ ಪ್ರತ್ಯುತ್ತರವಂ ಬರೆದು ನಿನ್ನ ಹೆಸರಿನ ಸಮ್ಮತಿಯಂ ಹಾಕಿ ಅವರು
ಸಮ್ಮತಿಗಳಂ ಬರೆಯುವುದಕ್ಕೆ ಮುಂಗಡೆಯಲ್ಲಿಯೇ ಸ್ಥಳವಂ ಬಿಟ್ಟು ಅದಂ
ಅವರಿಗೆ ತೋರಿಸಿ ಪ್ರಕೃತೋಚಿತವಾಗಿ ಬಾಯಿಮಾತಂ ಹೇಳಿದರೆ ಅವರು
ನೋಡಿಕೊಂಡು ಸಮ್ಮತಿಗಳಂ ಬರೆದುಕೊಟ್ಟಾರು. ಆ ಮೇಲೆ ನೀನು ಅದಂ

ತೆಗೆದುಕೊಂಡು ನೈಮಿಶಾರಣ್ಯದೊಳ್ ಗಂಗಾತೀರದಲ್ಲಿನ ಸೋಮೇಶ್ವರಾಲಯದ ಬಳಿಯಲ್ಲಿರುವ ನಮ್ಮ ಮಿತ್ರನಾದ ಇಂದುಶರ್ಮನಾಲಯಕ್ಕೆ ಬರುವವನಾಗು. ನಾನು ಅಲ್ಲಿರುವೆನು ಎಂದು ಚಾಣಕ್ಯನು ಚಂದ್ರಗುಪ್ತನಿಗೆ ಹೇಳಿ ನೈಮಿಶಾರಣ್ಯ ಮಾರ್ಗವಂ ಹಿಡಿದು ತೆರಳಿದನು.

ಆಗ ಚಂದ್ರಗುಪ್ತನು ರಹಸ್ಯವಾಗಿ ಹೋಗಿ ಬಾಗುರಾಯಣಾದಿ ಸೇನಾಪತಿಗಳಂ ಕಾಣಿಸಿಕೊಂಡನು. ಆಗ ಅವರು ಚಂದ್ರಗುಪ್ತಂಗೆ ಬಂದಿರುವ ದುರ್ದಶೆಯಂ ನೋಡಿ ಮನಮರುಗಿ ಸಾಂತ್ವವಚನವಂ ಹೇಳುತ್ತ—ಅಯ್ಯಾ, ಚಂದ್ರಗುಪ್ತನೇ, ಇನ್ನು ಕ್ಲೇಶವಂ ಬಿಡು. ನೀನು ನಮ್ಮಲ್ಲಿ ಬಂದ ಪ್ರಯೋಜನವೇನು? ಎನಲು—

ಅಯ್ಯಾ, ಸೇನಾಪತಿಗಳಿರಾ, ನಿಮ್ಮಂ ಕಂಡುದರಿಂದ ನನ್ನ ಕ್ಲೇಶವು ತೊಲಗಿ ನಮ್ಮ ಹಿರಿಯರಂ ಕಂಡಂತಾಯಿತು. ಹೇಳತಕ್ಕ ಮತ್ತೊಂದು ಸಂಗತಿಯುಂಟು. ಏನಂದರೆ ಮೊದಲು ನಮ್ಮ ತಂದೆಯಾದ ಮೌರ್ಯನು ಕಾಶೀಗಂಗಾತೀರದಲ್ಲಿ ಶಿವಾಲಯವಂ ರಚಿಸಿ ಅದರಲ್ಲಿ ಈಶ್ವರಪ್ರತಿಷ್ಠೆಯಂ ಮಾಡಿಸಿ ಆ ಬಳಿಕ ಅಲ್ಲಿ ಆಗುವ ನಿತ್ಯ ಗಟ್ಟಿಯ ಆರಾಧನೆಗೋಸ್ಕರವೂ ಕೈಸಾಲೆ ಗೋಪುರ ಇವುಗಳನ್ನು ಕಟ್ಟಿಸುವುದಕ್ಕೋಸ್ಕರವೂ ಆರ್ಜಿಸಿದ್ದ ದ್ರವ್ಯವಂ ಕಾಶೀಪಟ್ಟಣದಲ್ಲಿರುವ ಕೇಶವದಾಸನೆಂಬ ವರ್ತಕನ ವಶವಂಮಾಡಿ ಆ ಕಾರ್ಯವಂ ಆತನ ಮುಖಾಂತರ ದಿಂದಲೇ ನೆರವೇರಿಸಬೇಕೆಂದು ನಿಶ್ಚಯಿಸಿದ್ದು ಅಷ್ಟರಲ್ಲಿಯೇ ನಂದರು ಮಾಡಿದ್ದ ಬಂಧನಕ್ಕೆ ತಗುಲಿದ ಬಳಿಕ ಅವಸಾನಕಾಲದಲ್ಲಿ ತಾನು ದೇವಾಲಯದ ನಿಮಿತ್ತವಾಗಿ ಕಾಶೀಕೇಶವದಾಸನ ವಶಕ್ಕೆ ಕೊಟ್ಟಿದ್ದ ದ್ರವ್ಯವೂ ಕೂಡ ಸಾರ್ಥಕವಾಗದೆ ಅವನಲ್ಲಿಯೇ ನಿಂತಿತಲ್ಲಾ ಎಂದು ಹಂಬಲಿಸಿ ಶಿವಶಿವಾ ಎನ್ನುತ್ತ ಮುಕ್ತನಾದನು. ಈ ಯರ್ಥವು ನನಗೆ ಶ್ರುತವಾಗಿದ್ದುದರಿಂದ ನಾನು ಜೀವನಂತನಾಗಿ ಬಂಧನದಿಂದ ವಿಮುಕ್ತನಾದ ಬಳಿಕ ಕೆಲವು ದಿವಸಗಳ ಮೇಲೆ ಆ ಕೇಶವದಾಸನಿಗೆ ಈ ಯರ್ಥವಂ ಸೂಚಿಸಿ ಆ ದೇವಸ್ಥಾನದ ಗೋಪುರ ಕೈಸಾಲೆ ಇವುಗಳಂ ಕಟ್ಟಿಸಿ ನಿತ್ಯ ಗಟ್ಟಿಯ ಆರಾಧನೆಗಳಂ ನಡಿಸಿಕೊಂಡು ಬರುವ ಹಾಗೆ ನಾನು ಬರೆದ ಕಾಗದಕ್ಕೆ ಆತನು ಪ್ರತ್ಯುತ್ತರವನ್ನು ಬರೆದು ಇದ್ದಾನೆ. ನೀವು ನನಗೆ ಹಿರಿಯರ ಸಮಾನರಾದುದರಿಂದ ನನ್ನಲ್ಲಿ ವಾತ್ಸಲ್ಯವಿಟ್ಟು ಆ ಧರ್ಮವು ಶಾಶ್ವತವಾಗಿ ನಡೆಯುವಂತೆ ಸಮ್ಮತಿಸಬೇಕು ಎಂದು ತನ್ನ ಕೈಯ್ಯಲ್ಲಿದ್ದ ಆ ಕಾಗದವಂ ಅವರಿಗೆ ತೋರಿಸಿದನು. ಅದರಲ್ಲಿದ್ದ ಒಕ್ಕಣೆ ಏನಂದರೆ—

ಶ್ರೀಮತು ರಾಜಶ್ರೀ ಚಂದ್ರಗುಪ್ತರಾಜರಿಗೆ ಸೇವಕನಾದ ಕಾರ್ಕೇಶವ ದಾಸನು ಮಾಡುವ ವಿಜ್ಞಾಪನೆ ಏನಂದರೆ—ನೀವು ನನಗೆ ಬರೆಸಿ ಕಳುಹಿಸಿದ ಕಾಗದದ ಅಭಿಪ್ರಾಯವಂ ನೋಡಿಕೊಂಡೆನು. ನಿಮ್ಮ ತಂದೆಯವರಾದ ಮೌರ್ಯ ರು ಕಾಶಿಯಲ್ಲಿ ತಾವು ಮಾಡಿಸಿದ್ದ ಶಿವಾಲಯದ ನಿತ್ಯಾರಾಧನೆಗಾಗಿಯೂ ಕೈಸಾಲೆ ಗೋಪುರ ಇವುಗಳಂ ಕಟ್ಟಿಸುವುದಕ್ಕಾಗಿಯೂ ನಿನ್ನಲ್ಲಿ ಇರಲಿ ಎಂದು ಅದಕ್ಕೆ ತಕ್ಕಷ್ಟು ದ್ರವ್ಯವಂ ನನ್ನ ವಶಕ್ಕೆ ಕೊಟ್ಟು ಇದ್ದ ವಿಷಯದಲ್ಲಿ ಈಗ ಆ ಕಾರ್ಯ ವಂ ನಾನೇ ಮಾಡಿಸುವಂತೆ ನೀವು ನನಗೆ ಬರೆಸಿ ಕಳುಹಿಸಿದ್ದುದು ಸರಿಯಷ್ಟೆ. ಮೌರ್ಯರಿಗೆ ನೀವು ಸತ್ಪುತ್ರರಾದರೂ ಇನ್ನೂ ಬಾಲಕರಾಗಿರುವುದರಿಂದ ನಿಮ್ಮ ಮಾತಿನಂತೆಯೇ ನಾನು ಬಹುದ್ರವ್ಯಗಳ ವ್ಯಯದಿಂದ ಸಾಧ್ಯವಾಗುವಂಥ ಕೆಲ ಸಗಳಿಗೆ ಪ್ರಯತ್ನಿಸುವುದರಲ್ಲಿ ಸ್ವಲ್ಪಸಂದೇಹಯುಕ್ತನಾಗಿ ನಿಮಗೆ ಶ್ರುತಪಡಿ ಸುವುದೇನಂದರೆ—ನೀವು ನನಗೆ ಬರೆದಿರುವ ಪ್ರಕಾರ ನಿಮಗಿಂತ ಇನ್ನೂ ದೊಡ್ಡ ವರಾಗಿಯೂ ಆಪ್ತರಾಗಿಯೂ ಇರುವವರ ಸಂಗಡ ಚೆನ್ನಾಗಿ ಆಲೋಚಿಸಿ ಅವರಂ ಸಮ್ಮತಿಪಡಿಸಿ ಮುಂದೆ ನನಗೆ ಆಕ್ಷೇಪಣೆಗಳು ಇಲ್ಲದಂತೆ ಈ ಕಾಗ ದಕ್ಕೆ ನಿಮ್ಮೆಲ್ಲರ ಸಮ್ಮತಿಯುಕ್ತವಾದ ಪ್ರತ್ಯುತ್ತರವಂ ಬರೆದು ಕಳುಹಿಸಿದರೆ ನಾನು ನಿಸ್ಸಂದೇಹನಾಗಿ ನಿಮ್ಮ ತಂದೆಗಳು ಆರಂಭಿಸಿದ ಕಾರ್ಯವನ್ನು ಸಾಂಗ ವಾಗಿ ಮಾಡಿಸುತ್ತೇನೆ;

ಶ್ಲೋಕ॥ ಅನಾರಂಭೊ ಮನುಷ್ಯಾಣಾಂ ಪ್ರಥಮಂ ಬುದ್ಧಿಲಕ್ಷಣಂ॥
ಆರಬ್ಧಸ್ಯಾಂತಗಮನಂ ದ್ವಿತೀಯಂ ಬುದ್ಧಿಲಕ್ಷಣಂ॥

ಟೀ॥ ಪ್ರಾಜ್ಞರಾದಂಥಾವರಿಗೆ ಯಾವ ಕೆಲಸಕ್ಕಾದರೂ ಆರಂಭಿಸದೆ ಗಂಭೀರವಾಗಿ ತಟಸ್ಥಭಾವದಲ್ಲಿ ಇರುವುದು ಬುದ್ಧಿಯ ಮೊದಲನೆಯ ಲಕ್ಷಣವು. ಹಾಗಿರದೆ ಏನಾದರೂ ಒಂದು ಕೆಲಸವನ್ನು ಆರಂಭಿಸಿದರೆ ಆ ಕೆಲಸವನ್ನು ಬಿಡದೆ ಪೂರ್ತಿಯಾಗಿ ಮಾಡುವಂಥದು ಬುದ್ಧಿಯ ಎರಡನೆಯ ಲಕ್ಷಣವು.

ಶ್ಲೋಕ॥ ಆರಭ್ಯತೆನ ಖಲುವಿಘ್ನ ಭಯೆನನೀಚೈಃ॥
ಆರಭ್ಯವಿಘ್ನ ಸಿಹತಾಃ ವಿರಮಂತಿಮಧ್ಯಾಃ॥
ವಿಘ್ನೈಃಪುನಃಪುನರಪಿ ಪ್ರತಿಹನ್ಯಮಾನಾಃ॥
ಪ್ರಾರಬ್ಧ ಮುತ್ತಮಗುಣಾಃ ನಪರಿತ್ಯಜಂತಿ॥

ಟೀ॥ ಬುದ್ಧಿಹೀನರಾದ ಅಧಮರು ಈ ಕೆಲಸವನ್ನು ಮಾಡಿದರೆ ಈ ವಿಘ್ನವು ಬಂದು ತಟ್ಟಿ ನಾವು ಹಿಡಿದ ಕೆಲಸ ಸಾಗದೆ ವೃಥಾಯಾಸಕ್ಕೆ ಕಾರಣವಾ

ಗುತ್ತದೆ. ಇದರಿಂದ ಪ್ರಯೋಜನವಿಲ್ಲವೆಂದು ವಿಘ್ನಭಯದಿಂದ ಯಾವ ಕೆಲಸಗಳನ್ನೂ ಆರಂಭಿಸುವುದೇ ಇಲ್ಲ. ಮಧ್ಯಮಪುರುಷರಾದವರು ಒಂದು ಕೆಲಸವನ್ನು ಮಾಡುವುದಕ್ಕೆ ಪ್ರಾರಂಭಿಸಿ ಆ ಕೆಲಸಕ್ಕೇನಾದರೂ ವಿಘ್ನತಟ್ಟಿದರೆ ಅಷ್ಟುಮಾತ್ರದಿಂದಲೇ ಆ ಕೆಲಸದ ತಂಟೆಯನ್ನೇ ಬಿಟ್ಟು ಸುಮ್ಮನಾಗುತ್ತಾರೆ. ಶ್ರೇಷ್ಠವಾದ ಗುಣಗಳುಳ್ಳ ಪರಾಕ್ರಮಶಾಲಿಗಳಾದರೋ ತಾವು ಒಂದು ಕಾರ್ಯಕ್ಕೆ ಪ್ರಯತ್ನವನ್ನೇ ಮಾಡುವುದಿಲ್ಲ, ಪ್ರಯತ್ನವಂ ಮಾಡಿದವರಾದರೆ ಬಾರಿಬಾರಿಗೂ ಎಷ್ಟು ವಿಘ್ನಗಳು ತಟ್ಟಿದಾಗ್ಯೂ ತಮಗೆ ಎಷ್ಟು ಕಷ್ಟವಾದಾಗ್ಯೂ ಒಂದು ಮಾರ್ಗತಪ್ಪಿದರೆ ಮತ್ತೊಂದು ಮಾರ್ಗದಿಂದಾದರೂ ಹಿಡಿದಂಥ ಕೆಲಸವನ್ನು ಮುಗಿಸದೆ ಬಿಡುವುದಿಲ್ಲ.

ಈ ಪ್ರಕಾರ ನೀತಿಶಾಸ್ತ್ರವಿರುವುದರಿಂದ ನಿಮ್ಮ ತಂದೆಯವರಾದ ಮೌರ್ಯರಿಂದ ಪ್ರಾರಂಭಿಸಲ್ಪಟ್ಟ ದೇವತಾಕಾರ್ಯವು ವಿಘ್ನದಿಂದ ನಿಂತುಹೋಗಿರುವಲ್ಲಿ ಸತ್ಪುತ್ರರಾದ ನೀವು ಶ್ರಮಪಟ್ಟು ಅದನ್ನು ಪೂರೈಸಿದರೆ ನಿಮಗೆ ಲೋಕೋತ್ತರ ಧರ್ಮವೂ ಕೀರ್ತಿಯೂ ಪಿತೃವಾತ್ಸಲ್ಯವೂ ಜಗತ್ಪ್ರಖ್ಯಾತವಾಗಿ ಉಂಟಾಗುವುವು. ಧರ್ಮಿಷ್ಠರಾದ ನಿಮ್ಮ ತಂದೆಯವರಿಗೂ ಶಾಶ್ವತವಾದ ಪುಣ್ಯಲೋಕಪ್ರಾಪ್ತಿಯಾಗುವುದು. ಎಣ್ಣೆಯನ್ನು ಅಳೆದ ಮಾನದಂತೆ ನನಗೂ ಸ್ವಲ್ಪ ಧರ್ಮವು ಲಭಿಸುವುದು. ಹೀಗೆಂದು ಕೇಶವದಾಸನು ಚಂದ್ರಗುಪ್ತನ ಹೆಸರಿಗೆ ಬರೆದಿರುವ ಬಕ್ಕಣೆಯಂ ನೋಡಿಕೊಂಡು ಆ ಬಾಗುರಾಯಣಾದಿ ಸೇನಾಪತಿಗಳು ಚಂದ್ರಗುಪ್ತನಂ ಕುರಿತು—

ಅಯ್ಯಾ, ಕುಮಾರಕನೇ, ನಿನ್ನ ತಂದೆಯಾದ ಮೌರ್ಯನು ಪರಮಕಾರುಣ್ಯಶಾಲಿಯೂ ಧರ್ಮಿಷ್ಠನೂ ಸ್ವಾಮಿಕಾರ್ಯತತ್ಪರನೂ ಆಗಿದ್ದನು. ಅಂಥವನನ್ನು ಮಕ್ಕಳೊಡನೆ ಅನ್ಯಾಯವಾಗಿ ಈ ದುಷ್ಟರಾದ ನವನಂದರು ಕಪಟದಿಂದ ಕೊಂದುಹಾಕಿ ಸರ್ವಗುಣಸಂಪನ್ನನೂ ರಾಜಕುಮಾರನೂ ಆದ ನಿನ್ನಂ ಅಯೋಗ್ಯವಾದ ಅನ್ನಸತ್ರಾಧಿಕಾರದಲ್ಲಿ ನೇಮಿಸಿಬಿಟ್ಟರು. ಇಂಥಾ ವಿಷಮಕಾಲದಲ್ಲಿಯೂ ನಿನ್ನ ದುಃಖಗಳನ್ನು ಮನಸ್ಸಿನಲ್ಲಿ ಎಣಿಸದೆ ತಂದೆಮಾಡಿದಂಥ ಧರ್ಮಕಾರ್ಯವನ್ನು ನೆರವೇರಿಸಬೇಕೆಂದು ನಿನಗೆ ಈ ಧರ್ಮಬುದ್ಧಿಯು ಹುಟ್ಟಿದಕಾರಣ ಭಗವಂತನ ಕೃಪಾಕಟಾಕ್ಷದಿಂದ ನೀನು ಶ್ರೇಯೋವಂತನಾಗಿ ಬದುಕುವಿ. ಇದರಲ್ಲಿ ಸ್ವಲ್ಪ ಮಾತ್ರವೂ ಸಂದೇಹವಿಲ್ಲ. ಮತ್ತು ನಿಮ್ಮ ತಂದೆಯಾದ ಮೌರ್ಯನು ನಮ್ಮನ್ನು ಪ್ರವರ್ಧಮಾನರಂ ಮಾಡಿ ತಂದೆಯೋಪಾದಿಯಲ್ಲಿ ಸಂರಕ್ಷಿಸುತ್ತ

ಲಿದ್ದನು. ನಾವು ನಿರ್ಭಾಗ್ಯರಾದುದರಿಂದ ಅಂಥವನನ್ನು ಕಳೆದುಕೊಂಡೆವು. ಆತನು ಮಾಡಿದಂಥ ಧರ್ಮಕಾರ್ಯಕ್ಕೆ ಅನುಕೂಲನಾಗಿರುವ ನಿನಗೆ ಆತನಿಂದ ಉಪಕೃತರಾಗಿರುವ ನಾವು ಸಮ್ಮತಿಸುವುದು ಅತಿಶಯವಲ್ಲ.

ಶ್ಲೋ॥ ಪ್ರಥಮವಯಸಿಪೀತಂ ತೋಯಮಲ್ಪಂಸ್ಮರಂತಃ ಶಿರಸಿನಿಹಿತಭಾರಾ
ನಾರಿಕೇಳಾನರಾಣಾಂ॥ ಸಲಿಲಮಮೃತಕಲ್ಪಂ ದದ್ಯುರಾಜೀವಿತಾಂತಂ
ನಹಿಕೃತಮುಪಕಾರಂ ಸಾಧವೋವಿಸ್ಮರಂತಿ॥

ಟೀ॥ ಲೋಕದಲ್ಲಿ ತೆಂಗಿನ ಮರಗಳು ತಾವು ಸಸಿಯಾಗಿರುವ ಕಾಲದಲ್ಲಿ ಜನರಿಂದ ಎರೆಯಲ್ಪಟ್ಟ ಅಲ್ಪವಾಗಿಯೂ ಚೌಳಾಗಿಯೂ ಇರುವ ಉದಕಗಳನ್ನು ಸ್ಮರಿಸಿಕೊಂಡು ತಮ್ಮ ಶಿರಸ್ಸಿನಲ್ಲಿ ಭಾರವುಳ್ಳವುಗಳಾಗಿ ತಮ್ಮನ್ನು ಬೆಳೆಸಿದಂಥ ಮನುಷ್ಯರಿಗೆ ತಾವು ಸಾಯುವ ಪರ್ಯಂತರವೂ ಅಮೃತಸಮಾನವಾದ ಉದಕವನ್ನು ಕೊಡುತ್ತವೆ. ಹಾಗೆ ಸತ್ಪುರುಷರಾದಂಥವರು ಪರರು ತಮಗೆ ಮಾಡಿದಂಥ ಉಪಕಾರವನ್ನು ಎಂದಿಗೂ ಮರೆಯುವುದಿಲ್ಲ ಎಂದು ನೀತಿಶಾಸ್ತ್ರಮುಂಟು.

ಅದುಕಾರಣ ನಿಮ್ಮ ತಂದೆಯು ಮಾಡಿದಂಥ ಉಪಕಾರವನ್ನು ನಾವು ಮರೆಯುವುದಿಲ್ಲ. ಆ ವರ್ತಕನಿಗೆ ನಿನ್ನ ಹೆಸರಿನಿಂದ ಪುನಃ ಕಾಗದವನ್ನು ಬರೆಯುವವನಾಗು ; ಅದಕ್ಕೆ ನಮ್ಮ ನಮ್ಮ ಸ್ವಹಸ್ತಾಕ್ಷರಸಮ್ಮತಿಯಂ ಬರೆದುಕೊಡುವೆವು ಎಂಧರು. ಆಗಲೇ ಚಂದ್ರಗುಪ್ತನು ಪ್ರಕೃತೋಚಿತವಾಗಿ ಆ ಕೇಶವದಾಸನಿಗೆ ತನ್ನ ಹೆಸರಿನಿಂದ ಅಖಂಡವಾದ ಒಂದು ಕಾಗದವಂ ಬರೆದು ಅದರ ಮೇಲ್ಗಡೆಯಲ್ಲಿ ತನ್ನ ಸಮ್ಮತಿಯಂ ಹಾಕಿ ತದನಂತರ ಬಾಗುರಾಯಣಾದಿಗಳ ಕೈಯ್ಯಲ್ಲಿ ಕೊಡಲು ; ಆ ಎಂಟು ಜನರೂ ತಮ್ಮ ತಮ್ಮ ಕೈ ಬರಹದಿಂದಲೇ ಸಮ್ಮತಿಗಳಂ ಹಾಕಿ ವಸ್ತ್ರತಾಂಬೂಲಸಮೇತವಾಗಿ ಆ ಕಾಗದವಂ ಚಂದ್ರಗುಪ್ತನ ಕೈಯ್ಯಲ್ಲಿ ಕೊಟ್ಟು ಕಳುಹಿಸಿದರು.

ಚಂದ್ರಗುಪ್ತನು ಅಲ್ಲಿಂದ ಹೊರಟು ಮೊದಲು ತಾನಿದ್ದೆಡೆಗೆ ಬಂದು ತನ್ನ ತಾಯಿಗೆ ನಮಸ್ಕರಿಸಿ ಮನಸ್ಸಿನಲ್ಲಿ ಯೋಚಿಸಿ ನಾನು ಈ ಪಟ್ಟಣದಲ್ಲಿ ತಾಯನ್ನೂ ಹೆಂಡತಿಯನ್ನೂ ಬಿಟ್ಟು ಚಾಣಕ್ಯರೆಡೆಗೆ ಹೋದರೆ ದುಷ್ಟರಾದ ನವನಂದರು ಮೊದಲೇ ಎನ್ನೊಳ್ ಸಂದೇಹದಿಂದಿರ್ಪರು. ನಾನು ಹೋದಮೇಲೆ ಏನು ಕಾರ್ಯವಂ ಮಾಡುವನೋ ಎಂದು ಆತಂಕಯುಕ್ತರಾಗಿ ಈ ಹೆಂಗುಸರನ್ನು ಬಾಧಿಸುವರು ಆದುದರಿಂದ ಇವರಂ ಕೆಲವು ಕಾಲದವರೆಗೂ ಗೋಪ್ಯವಾಗಿ ಇಡಬೇಕೆಂದು ನಿಶ್ಚಯಿಸಿ ತನ್ನ ಮಾತೃಪತ್ನಿಯರಿಗೆ ಪ್ರಚ್ಛನ್ನರಾಗಿರುವಂತೆ ಉಪಾ

ಯವಂ ಹೇಳಿಕೊಟ್ಟು ಪುನಃ ಮಾತೃವಿಗಭಿವಂದಿಸಿ ಆಶೀರ್ವಾದವಂ ತೆಗೆದು
ಕೊಂಡು ಅಲ್ಲಿಂದ ನೈಮಿಶಾರಣ್ಯಕ್ಕೆ ಬಂದು ಗಂಗಾತೀರದಲ್ಲಿ ಸ್ನೇಹಿತನಾದ
ಇಂದುಶರ್ಮನ ಗೃಹದೊಳ್ ಅತಿಥಿಸತ್ಕಾರಂಗಳಂ ಕೈಕೊಳ್ಳುತ್ತ ಇರುವ ಚಾಣ
ಕ್ಯನಂ ಕಂಡು ಸಾಷ್ಟಾಂಗಪ್ರಣಾಮವಂಮಾಡಿ ತಾನು ತಂದ ಕಾಗದವಂ
ಕೊಡಲು ; ಆದರಲ್ಲಿ ಶ್ರೀಮತು ಚಂದ್ರಗುಪ್ತರಾಜನು ನಮ್ಮ ಪರಮಪ್ರಿಯ
ರಾದ ಕೇಶವದಾಸರಿಗೆ ಬರೆದು ಕಳುಹಿಸಿದ ವಿಷಯಾರ್ಥವೇನಂದರೆ—ನೀವು
ನನಗೆ ಬರೆಸಿ ಕಳುಹಿಸಿದ ಕಾಗದವನ್ನು ನನಗೆ ಹಿರಿಯವರಾದ ಸೇನಾಪತಿ
ಗಳಿಗೆ ತೋರಿಸಿದೆನು ; ಅವರು ಈ ಕಾರ್ಯಕ್ಕಾಗಿ ಸಂತೋಷಪಟ್ಟು ಈ
ಕಾಗದಕ್ಕೆ ತಮ್ಮ ತಮ್ಮ ಹಸ್ತಾಕ್ಷರದಿಂದ ಸಮ್ಮತಿಗಳನ್ನು ಬರೆದು ಇದ್ದಾರೆ.
ಇನ್ನು ಮೇಲೆ ಶಂಕೆಯಂ ಬಿಟ್ಟು ನಮ್ಮ ದೇವಾಲಯದ ಕಾರ್ಯವು ಶಾಶ್ವತ
ವಾಗಿ ನಡೆದು ಬರುವಂತೆ ಮಾಡತಕ್ಕ ಭಾರವು ನಿಮ್ಮನ್ನೇ ಹೊಂದಿದೆ.
ಇದು ಚಂದ್ರಗುಪ್ತನಿಗೆ ಅಭಿಮತಕಾರ್ಯವು ಎಂದು ಬರೆದಿರುವುದನ್ನೂ ಆ
ಪಙ್ಕ್ತಿಯ ಕೆಳಗೆ ಚಂದ್ರಗುಪ್ತನಿಗೆ ಅಭಿಮತವಾದ ಕಾರ್ಯವು ನಮಗೂ ಅಭಿ
ಮತವೆಂದು ಬಾಗುರಾಯಣಾದಿ ಅಷ್ಟಸೇನಾನಾಯಕರು ಸ್ವಹಸ್ತಾಕ್ಷರಗಳಿಂದ
ಸಮ್ಮತಿಗಳಂ ಬರೆದು ಕೊಟ್ಟಿರುವುದನ್ನೂ ನೋಡಿ ಚಾಣಕ್ಯನು ತನಗೆ ಉಪ
ಯುಕ್ತವಾದ ಅಕ್ಷರ ಪಙ್ಕ್ತಿಯ ಮಟ್ಟಿಗೆ ನಿಲ್ಲಿಸಿಕೊಂಡು ಶೇಷವಂ ಕತ್ತರಿಸಿ
ಪರಿಹರಿಸಿದನು. ನಿಲ್ಲಿಸಿಕೊಂಡ ಭಾಗದಲ್ಲಿ ಚಂದ್ರಗುಪ್ತನಿಗೆ ಅಭಿಮತವಾದ
ಕಾರ್ಯವು ಬಾಗುರಾಯಣನಿಗೆ ಅಭಿಮತವು ಇದೇ ಪ್ರಕಾರವಾಗಿ ಎಂಟು
ಮಂದಿ ಸೇನಾಪತಿಗಳ ಹಸ್ತಾಕ್ಷರ ಸಮ್ಮತಿಗಳು ಮಾತ್ರ ಇದ್ದುವು. ಆ ಕಾಗ
ದವನ್ನು ಇಟ್ಟುಕೊಂಡು ಇದು ಬಂದು ಮುಂದಣ ರಾಜಕಾರ್ಯಕ್ಕೆ ಸಾಧಕ
ವಾಯಿತು ಎಂದು ನಿಶ್ಚಯಿಸಿ ಅನಂತರದಲ್ಲಿ ತನಗೆ ಸಹಾಧ್ಯಾಯಿಯಾದ ಸಕಲ
ದಂಡನೀತಿಶಾಸ್ತ್ರ ಜ್ಯೋತಿಷ ಶಾಸ್ತ್ರ ಇವುಗಳಲ್ಲಿ ಪ್ರವೀಣನಾದಂಥ ಇಂದು
ಶರ್ಮನೆಂಬ ಬ್ರಾಹ್ಮಣನಂ ಕುರಿತು—

ಶ್ಲೋ || ಮಿತ್ರಂ ಸ್ವಚ್ಛತಯಾರಿಪುಂ ನಯಬಲೈರ್ಲುಬ್ಧಂ ಧನೈರೀಶ್ವರಂ |
ಕಾರ್ಯೇಣದ್ವಿಜಮಾದರೇಣಯುವತಿಂ ಪ್ರೇಮ್ಣಾಸಮೈರ್ಬಾಂಧವಾನ್ ||
ಅತ್ಯುಗ್ರಂಸ್ತುತಿಭಿರ್ಗುರುಂ ಪ್ರಣತಿಭಿರ್ಮೂರ್ಖಂ ಕಥಾಭಿರ್ಬುಧಾ |
ನ್ವಿದ್ಯಾಭೀರಸಿಕಂರಸೇನಸುಗುಣಂ ಶೀಲೇನಕುರ್ಯಾದ್ವಶಂ ||

ಟೀ || ಲೋಕದಲ್ಲಿ ಪ್ರೌಢರಾದವರು ತಮಗೆ ಮಿತ್ರನಾದವನಂ ನಿಷ್ಕಾಪ
ಟ್ಯದಿಂದಲೂ ಶತ್ರುಗಳಂ ನೀತಿಬಲದಿಂದಲೂ ಲುಬ್ಧನಂ ಧನದಿಂದಲೂ ತನ್ನ ಒಡೆ

ಯನಂ ಆತನ ಕಾರ್ಯದಿಂದಲೂ ಬ್ರಾಹ್ಮಣನಂ ಪ್ರೀತಿಯಿಂದಲೂ ಸ್ತ್ರೀಯಂ ಪ್ರೇಮದಿಂದಲೂ ಬಂಧುಗಳಂ ಸರ್ವೋಪಚಾರಗಳಿಂದಲೂ ಅತ್ಯಂತಕೋಪಿಷ್ಠನಂ ಸ್ತೋತ್ರದಿಂದಲೂ ಆಚಾರ್ಯನಂ ನಮಸ್ಕಾರಗಳಿಂದಲೂ ಮೂರ್ಖನಂ ಕಥೆಗಳಿಂದಲೂ ವಿದ್ವಾಂಸರಂ ವಿದ್ಯೆಗಳಿಂದಲೂ ರಸಿಕನಂ ರಸೋಕ್ತಿಗಳಿಂದಲೂ ಸುಗುಣಿಯಂ ಸದ್ವೃತ್ತಿಯಿಂದಲೂ ಸ್ವಾಧೀನಂಗೈದುಕೊಳ್ಳಬೇಕು ಎಂದು ನೀತಿಯುಂಟು.

ಅದುಕಾರಣ ನಿನ್ನಲ್ಲಿ ನಾನು ವಂಚನೆಯಂ ಮಾಡಕೂಡದು. ಕುಸುಮಪುರದಲ್ಲಿರುವ ನವನಂದರು ಕಪಟದಿಂದ ಅನ್ಯಾಯವಾಗಿ ಈ ಚಂದ್ರಗುಪ್ತನ ತಂದೆಯೂ ಧರ್ಮಿಷ್ಠನೂ ಆದ ಮೌರ್ಯನನ್ನೂ ಇವನ ತೊಂಭತ್ತೊಂಭತ್ತು ಮಂದಿ ಒಡಹುಟ್ಟಿದವರನ್ನೂ ಸಂಹರಿಸಿ ದೈವಯೋಗದಿಂದ ಉಳಿದ ಈ ಚಂದ್ರಗುಪ್ತನನ್ನೂ ವ್ಯಾಜಾಂತರದಿಂದ ಸಂಹರಿಸಬೇಕೆಂದು ಯೋಚಿಸಿಕೊಂಡು ಅನ್ನಸತ್ರಾಧಿಕಾರದಲ್ಲಿ ನೇಮಿಸಿದ್ದರು. ಅಷ್ಟರೊಳಗೆ ನಾನು ಒಂದು ದಿವಸ ಭೋಜನಾರ್ಥವಾಗಿ ಅಲ್ಲಿಗೆ ಹೋಗಿ ಕ್ಷುತ್ತಿನಿಂದ ಬಹುಪೀಡಿತನಾಗಿ ಬಿಸಿಲಲ್ಲಿ ತಪಿಸಿ ದಣಿದು ಆ ಸತ್ರದಲ್ಲಿ ಒಂದು ಆಸನದ ಮೇಲೆ ಕುಳ್ಳಿರಲು ಆ ದುಷ್ಟರಾದ ನವನಂದರು ಬಂದು ಬ್ರಾಹ್ಮಣನೆಂದು ಕ್ಷಮಿಸದೆ ನನ್ನ ತೇಜಸ್ಸನ್ನೂ ಸಾಮರ್ಥ್ಯವನ್ನೂ ತಿಳಿಯದೆ ನಿಷ್ಠುರೋಕ್ತಿಗಳನ್ನಾಡಿ ತಮ್ಮ ಭೃತ್ಯರ ಕೈಯ್ಯಿಂದ ನನ್ನನ್ನು ಎಳೆಸುವಲ್ಲಿ ನನ್ನ ಶಿಖೆಯು ಬಿಚ್ಚಿಹೋಗಲು ನಾನು ಬಹಳ ಕೋಪಿಷ್ಠನಾಗಿ ದುಷ್ಟರಾದ ನವನಂದರಂ ಸಂಹರಿಸಿದಲ್ಲದೆ ಈ ಜುಟ್ಟಂ ಕಟ್ಟುವುದಿಲ್ಲವೆಂದು ಶಪಥವಂ ಮಾಡಿಕೊಂಡು ಹೊರಟು ಬರುವುದಂ ಈ ಚಂದ್ರಗುಪ್ತಂ ಕಂಡು ನನಗೆ ಶರಣಾಗತನಾಗಿ ತನ್ನ ದುಃಖಗಳನ್ನೆಲ್ಲಾ ಹೇಳಿಕೊಂಡುದರಿಂದ ನವನಂದರಂ ನಿಗ್ರಹಿಸಿ ನಿನ್ನಂ ಪಾಟಲೀಪುರದ ಸಿಂಹಾಸನದ ಮೇಲೆ ಕುಳ್ಳಿರಿಸಿ ಪಟ್ಟಾಭಿಷೇಕವಂ ಮಾಡುವೆನು. ಇನ್ನುಮೇಲೆ ಅಂಜಬೇಡವೆಂದು ಶಪಥಪೂರ್ವಕವಾಗಿ ಅಭಯವಂ ಕೊಟ್ಟು ಈತನಂ ಬರಹೇಳಿ ನಿನ್ನ ಬಳಿಗೆ ಬಂದೆನು.

ಶ್ಲೋ ॥ ಕ್ಷಾಂತಿಶ್ಚೇತ್ಕವಚೇನಕಿಂ ಕಿಮರಿಭಿಃ ಕ್ರೋಧೋಸ್ತಿಚೇದ್ದೇಹಿನಾಂ।
ಜ್ಞಾತಿಶ್ಚೇದನಲೇನಕಿಂ ಯದಿ ಸುಹೃದ್ದಿವ್ಯೌಷಧೈಃಕಿಂಫಲಂ ॥
ಕಿಂಸರ್ಪೈರ್ಯದಿದುರ್ಜನಾಃ ಕಿಮುಧನೈರ್ವಿದ್ಯಾನವದ್ಯಾಯದಿ।
ವ್ರೀಡಾಚೇತ್ಕಿಮುಭೂಷಣೈಸ್ಸುಕವಿತಾಯದ್ಯಸ್ತಿರಾಜ್ಯೇನಕಿಂ ॥

ಟೀ ॥ ಲೋಕದೊಳ್ ಮನುಷ್ಯರಿಗೆ ಸಹನಾಗುಣವಿದ್ದುದೇ ಆದರೆ ಕವಚದಿಂದ ಏನು ಪ್ರಯೋಜನವು? ಕೋಪವಿದ್ದುದೇ ಆದರೆ ಶತ್ರುಗಳಿಂದ ಏನು?

ಜ್ಞಾತಿಯು ಇದ್ದುದೇ ಆದರೆ ಬೆಂಕಿಯಿಂದ ಏನು? ಪ್ರೀತಿಯುಕ್ತನಾದ ಸ್ನೇಹಿತನು ಇದ್ದುದೇ ಆದರೆ ಶ್ಲಾಘ್ಯವಾದ ಔಷಧದಿಂದ ಏನುಫಲ? ದುರ್ಜನರ ಸಹವಾಸವಿದ್ದುದೇ ಆದರೆ ಸರ್ಪಗಳಿಂದೇನು? ನಿರ್ದುಷ್ಟವಾದ ವಿದ್ಯೆಯು ಇದ್ದುದೇ ಆದರೆ ಧನಗಳಿಂದ ಏನುಪ್ರಯೋಜನ? ನಾಚಿಕೆಮಾತ್ರವಿದ್ದುದೇ ಆದರೆ ಆಭರಣಗಳಿಂದ ಏನು? ಶೋಭನವಾದ ಕವಿತ್ವವಿದ್ದುದೇ ಆದರೆ ರಾಜ್ಯದಿಂದೇನು ಫಲವೆಂದು ನೀತಿಯುಂಟು.

ನೀನು ನನಗೆ ಸಹಾಧ್ಯಾಯಿಯಾಗಿದ್ದುದು ಸತ್ಯವಾದರೆ ಶರಣಾಗತನಾಗಿ ಬಂದಿರುವ ಈ ಚಂದ್ರಗುಪ್ತನ ಕಾರ್ಯಕ್ಕೆ ಸಹಾಯಾರ್ಥವಾಗಿ ನೀನು ಬೌದ್ಧಸನ್ಯಾಸಿಯ ವೇಷವಂ ಧರಿಸಿ ಜೀವಸಿದ್ಧಿ ಎಂಬ ನಾಮವನ್ನಿಳವಡಿಸಿಕೊಂಡು ನಿನಗೆ ಆಪ್ತರಾದ ಶಿಷ್ಯರಿಗೂ ಸಮಯೋಚಿತವಾದ ವೇಷಭಾಷಾನಾಮಧೇಯಂಗಳಂ ಕಲ್ಪಿಸಿಕೊಟ್ಟು ಪಾಟಲೀಪುರದಲ್ಲಿ ಅಮಾತ್ಯರಾಕ್ಷಸನೇ ಮೊದಲಾದ ಅಧಿಕಾರಿಗಳಲ್ಲಿ ಜ್ಯೋತಿಷವೇ ಮೊದಲಾದ ವಿದ್ಯಾಕೌಶಲಗಳನ್ನು ತೋರಿಸುತ್ತ ಅವರಲ್ಲಿ ಆಪ್ತನಂತೆ ಕಾಣಿಸಿಕೊಂಡು ರಾಜಕಾರ್ಯವಂ ತಿಳಿಯುತ್ತ ಅಲ್ಲಿನ ವಿಶೇಷವರ್ತಮಾನಂಗಳಂ ವೇಷಧಾರಿಗಳಾದ ನಿನ್ನ ಶಿಷ್ಯರ ಮುಖದಿಂದಲೇ ನನಗೆ ತಿಳಿಯಪಡಿಸುತ್ತ ನೀನು ಓದಿದ ದಂಡನೀತಿಶಾಸ್ತ್ರ ಪ್ರಯೋಗಕ್ಕೆ ಫಲವಂ ಕಾಣುತ್ತ ಅಲ್ಲಿಯೇ ಇದ್ದುಕೊಂಡಿದ್ದರೆ ನೀನು ನಮಗೆ ಮಿತ್ರನೇ ಸರಿ ಎಂದು ಹೇಳಿ ನಂದನಿಗ್ರಹ ಮೊದಲುಗೊಂಡು ರಾಕ್ಷಸ ಸಂಗ್ರಹದ ವರೆಗೂ ಮಾಡತಕ್ಕ ಉಪಾಯರಹಸ್ಯಗಳನ್ನೆಲ್ಲವಂ ಇಂದುಶರ್ಮನಿಗೆ ತಿಳುಹಿಸಿ ಈ ಯರ್ಥವಂ ವೇಳೆವೇಳೆಗಳಲ್ಲಿ ನಿನ್ನ ಶಿಷ್ಯರಿಗೆ ತಿಳಿಯಪಡಿಸುತ್ತ ಬಹುಜಾಗರೂಕನಾಗಿ ರಾಜಕಾರ್ಯವಂ ನೋಡುತ್ತಿರಬೇಕೆಂದು ಬಹಳವಾಗಿ ಉಪಚಾರವಂ ಹೇಳುತ್ತಿರಲು ಇಂದುಶರ್ಮಂ ಚಾಣಕ್ಯನಂ ನೋಡಿ—

ಎಲೈ, ಬುದ್ಧಿಯಲ್ಲಿ ಬೃಹಸ್ಪತ್ಯಾಚಾರ್ಯನಿಗೂ ನೀತಿಪ್ರವೀಣತೆಯಲ್ಲಿ ಶುಕ್ರಾಚಾರ್ಯನಿಗೂ ಸಮಾನನಾದ ಚಾಣಕ್ಯರೇ, ನಿಮ್ಮ ಶಿಷ್ಯಸದೃಶನಾದ ನನಗೆ ಇಷ್ಟು ಪಚಾರವಂ ಹೇಳಬೇಕೆಂಬುವುದೇನು! ನೀವು ಪೇಳ್ದ ಕಾರ್ಯವಂ ಶಿರಸಾ ವಹಿಸಿ ಮಾಡುವೆನು.

ಶ್ಲೋ॥ ಕರಾವಿವಶರೀರಸ್ಯ ಅಕ್ಷ್ಣೋರಿವಚಪಕ್ಷ್ಮಣೀ ॥ ಅಪ್ರೇರಿತ
ಹಿತಂಕಾರ್ಯಮಿದಂಸನ್ಮಿತ್ರಲಕ್ಷಣಂ ॥

ಟೀ || ಲೋಕದಲ್ಲಿ ಶರೀರಕ್ಕೆ ಕೈಗಳೂ ಕಣ್ಣುಗಳಿಗೆ ರೆಪ್ಪೆಗಳೂ ಅವುಗಳಿಂದ ಹೇಳಿಸಿಕೊಳ್ಳದೆ ಅವುಗಳ ಸೌಖ್ಯಕಾರ್ಯವನ್ನು ಹೇಗೆ ತಾವೇ ಮಾಡುವವ್ರೋ ಅದೇ ಮೇರೆಗೆ ಮಿತ್ರನಾದವನು ತನ್ನ ಮಿತ್ರನಿಂದ ಹೇಳಿಸಿಕೊಳ್ಳದೆ ಅವನ ಭಾವವನ್ನು ತಿಳಿದು ಅವನಿಗೆ ಹಿತವಾದ ಕಾರ್ಯವಂ ಮಾಡಬೇಕು. ಇದೀಗ ಸನ್ಮಿತ್ರಲಕ್ಷಣವೆಂದು ನೀತಿಯುಂಟು.

ಅದುಕಾರಣ ನಾನು ನಿಮ್ಮಿಂದ ಹೇಳಿಸಿಕೊಳ್ಳದೆ ನಿಮ್ಮ ಕೆಲಸವನ್ನು ಮಾಡಬೇಕು. ನೀವು ಹೇಳಿದ ಮೇಲೂ ಅದರಂತೆ ನಡೆಯದಿದ್ದರೆ ನನ್ನಂಥ ಮಿತ್ರಘ್ನನು ಜಗತ್ತಿನಲ್ಲಿ ಯಾರುಂಟು? ಹಾಗಾದರೆ ನನಗೆ ನರಕಬಾಧೆಯು ಪ್ರಾಪ್ತವಾಗುವುದು. ಆದುದರಿಂದ ನಿಮ್ಮ ಮಾತನ್ನು ಸ್ವಲ್ಪವನ್ನಾದರೂ ಮೀರುವುದಿಲ್ಲವು. ಅಗತ್ಯವಾಗಿ ಮಾಡುವೆನು ಎಂದು ಹೇಳಿ ನೀವು ಎಲ್ಲಿರ್ಪಿರಿ? ಎಂದು ಕೇಳಿದ ಇಂದುಶರ್ಮನ ವಾಕ್ಯವನ್ನಾಲಿಸಿ ಚಾಣಕ್ಯನು—

ಈಗ ನಾನು ನಂದನಿಗ್ರಹಾರ್ಥವಾಗಿ ಅಪರಿಮಿತಸೇನಾಪರಿವೃತನಾದ ಪರ್ವತೇಶ್ವರನ ಸಮೀಪಕ್ಕೆ ಈ ಚಂದ್ರಗುಪ್ತಸಮೇತನಾಗಿ ಪೋಗುವೆನು. ನೀನು ಈಗಲೇ ಶಿಷ್ಯಸಮೇತನಾಗಿ ಪಾಟಲೀಪುರಕ್ಕೆ ಪೋಗಬೇಕು ಎಂದು ಹೇಳಿ ಮತ್ತೆ—

ಶ್ಲೋ || ಸೌಹಾರ್ದಸ್ವರ್ಣರೇಖಾಣಾಮುಚ್ಚಾವಚಭಿದೋಜುಷಾಂ ||
ಪರೋಕ್ಷಮಿತಿಕೊಪ್ಯಸ್ತಿ ಪರೀಕ್ಷಾನಿಕಷೋಪಲಃ ||

ಟೀ || ಲೋಕದಲ್ಲಿ ಮಿತ್ರತ್ವವು ಸುವರ್ಣದೋಪಾದಿಯಲ್ಲಿ ನಾನಾ ಭೇದವಾಗಿರುವುದು. ಅದು ಇಷ್ಟೇ ಬಣ್ಣ ಮುಳ್ಳುದೆಂಬುದಾಗಿ ತಿಳಿಯುವುದಕ್ಕೆ ಪರೋಕ್ಷವೆಂಬ ಒಂದು ಒರೆಗಲ್ಲು ಇರುವುದು ಎಂದು ನೀತಿಶಾಸ್ತ್ರಮುಂಟು.

ಆದುದರಿಂದ ನೀನು ನನ್ನ ವಿಷಯದಲ್ಲಿ ಪರೋಕ್ಷಪ್ರತ್ಯಕ್ಷಗಳಲ್ಲಿ ಏಕಪ್ರಕಾರವಾದ ಸ್ನೇಹವಂ ಇಟ್ಟಿರುವುದರಿಂದ ನಿನ್ನಲ್ಲಿ ಬಹಳವಾದ ನಂಬಿಕೆಯುಳ್ಳವನಾಗಿ ಈ ಯಂತರಂಗದ ಕಾರ್ಯವಂ ಗೆಯ್ಯಲೋಸುಗ ಪೇಳಿದೆನು. ನಿನಗೆ ಕ್ಷೇಮವಾಗಲಿ. ನಾನು ಪೋಗುವೆನೆಂದು ಇಂದುಶರ್ಮನಂ ಬೀಳ್ಕೊಂಡು ಆತನ ಶಿಷ್ಯರಲ್ಲಿ ಇಬ್ಬರಂ ತನ್ನೊಡನೆ ಕರೆದುಕೊಂಡು ಚಾಣಕ್ಯನು ಚಂದ್ರಗುಪ್ತಸಮೇತನಾಗಿ ಪರ್ವತೇಶ್ವರನ ರಾಜ್ಯವಂ ಕುರಿತು ತೆರಳಿದನೆಂಬಲ್ಲಿಗೆ ಮುದ್ರಾಮಂಜೂಷದಲ್ಲಿ ಚಂದ್ರಗುಪ್ತ ಚಾಣಕ್ಯರಿಗೆ ಪರ್ವತರಾಜ್ಯಪ್ರವೇಶವೆಂಬ ತೃತೀಯಾಶಯವು ಸಮಾಪ್ತಮಾದುದು.

---

# ಚತುರ್ಥಾಶಯ ಪ್ರಾರಂಭವು.

## ಪರ್ವತರಾಜ ಸೇನಾಗಮನವು.

ಅನಂತರದೊಳ್ ಚಾಣಕ್ಯನು ಪರ್ವತರಾಜ್ಯಾಭಿಮುಖನಾಗಿ ತೆರಳುತ್ತಿರಲು ಇಂದುಶರ್ಮನೆಂಬ ಬ್ರಾಹ್ಮಣನು ತಾನು ಮಿತ್ರಕಾರ್ಯ ತತ್ಪರನಾಗಿ ಕ್ಷಪಣಕವೇಷವಂ ಧರಿಸಿ ತನ್ನ ಶಿಷ್ಯರಿಗೆ ಮಾಸೋಪವಾಸಿಯು ಸಿದ್ಧಾರ್ಥಕನು ವೇಗಶರ್ಮನು ಸಮಿದ್ಧಾರ್ಥಕನು ಪಶುಲೋಮನು ಎಂದು ಈ ಪ್ರಕಾರವಾದ ನಾಮಂಗಳನ್ನಿಟ್ಟು ವೈದ್ಯ ಮಂತ್ರಜ್ಞ ಮೊದಲಾದವರ ವೇಷಂಗಳನ್ನಳವಡಿಸಿ ಪಾಟಲೀಪುರಕ್ಕೆ ಹೋಗಿ ಭಾಗುರಾಯಣನೇ ಮುಂತಾದ ಅಧಿಕಾರಿಗಳಲ್ಲಿ ವೈದ್ಯ ಜ್ಯೋತಿಷ ಮೊದಲಾದ ವಿದ್ಯಾಕೌಶಲವಂ ತೋರಿಸುತ್ತ ಇರುವಂತೆ ಅವರನ್ನು ನೇಮಿಸಿ ತಾನು ಅಮಾತ್ಯರಾಕ್ಷಸನಿಗೆ ಆಪ್ತನಂತೆ ಆಶ್ರಯಿಸಿ ಆಗಾಗ್ಗೆ ನವನಂದರಂ ಕಾಣುತ್ತ ಆ ಪುರದ ವೃತ್ತಾಂತಂಗಳಂ ತಿಳಿಯುತ್ತ ಶಿಷ್ಯಸಮೇತನಾದ ತನ್ನ ಕಾಪಟ್ಯವು ಪರರಿಗೆ ಲೇಶವಾದರೂ ತಿಳಿಯದಂತೆ ಪರಮಜಾಗರೂಕನಾಗಿ ಚಾಣಕ್ಯನ ಆಗಮನವನ್ನೇ ನಿರೀಕ್ಷಿಸಿಕೊಂಡಿದ್ದನು.

ಇತ್ತಲಾಗಿ ಮೊದಲು ನಂದರ ಅನ್ನಸತ್ರದಲ್ಲಿ ನಡೆದ ಬ್ರಾಹ್ಮಣಾಪಮಾನವಂ ಕಂಡ ಗೂಢಚಾರರು ಪರ್ವತರಾಜ್ಯಕ್ಕೆ ಹೋಗಿ ಪರ್ವತೇಶ್ವರನಂ ಕಂಡು ಕೈಮುಗಿದು—

ಬುದ್ಧೀ, ನಾವು ದೇಶಾಂತರವರ್ತಮಾನವಂ ತಿಳಿದು ಬಂದು ಹೇಳುವಂತೆ ಮೊದಲು ಆಜ್ಞಪ್ತರಾಗಿ ಹೋಗಿದ್ದ ಚಾರರು. ನಾವು ಬಂದಾನೊಂದು ದಿವಸ ಮಾರ್ಗವಶದಿಂದ ಪಾಟಲೀಪುರಕ್ಕೆ ಹೋಗಿ ಸತ್ರದಲ್ಲಿ ಭೋಜನ ಮಾಡುವ ಬ್ರಾಹ್ಮಣರ ಗುಂಪಿನಲ್ಲಿ ಪ್ರಚ್ಛನ್ನರಾಗಿದ್ದೆವು. ಆಗ ಪುಷ್ಪೋದ್ಯಾನವಿಹಾರಾರ್ಥವಾಗಿ ಪೋಗಿದ್ದ ನವನಂದರು ಅಲ್ಲಿಗೆ ಬಂದು ಅದಕ್ಕೆ ಮೊದಲು ಸೂರ್ಯಾಗ್ನಿ ತೇಜಸ್ಸಾಮ್ಯನಾದ ಬಬ್ಬಾನೊಬ್ಬ ಬ್ರಾಹ್ಮಣನೈದಿ ಏನು ಕಾರಣದಿಂದಲೋ ಸುವರ್ಣಮಯವಾದ ರಾಜಾಸನದ ಮೇಲೆ ಕಾಲ ಮೇಲೆ ಕಾಲನ್ನು ಹಾಕಿಕೊಂಡು ತಮ್ಮನ್ನು ಲಕ್ಷೀಕರಿಸದೆ ಕುಳಿತಿರುವುದನ್ನು ನೋಡಿ ಕೋಪ ಹೆಚ್ಚಿ ಆತನು ಮಹಾತೇಜಸ್ವಿ ಎಂಬುವುದನ್ನೂ ಕೂಡ ಬಗೆಯದೆ ನಿಷ್ಠುರೋಕ್ತಿಗಳನ್ನಾಡಿ ತಮ್ಮ ಭೃತ್ಯರ ಕೈಯಿಂದ ಆತನ ಜುಟ್ಟು ಬಿಚ್ಚಿಹೋಗುವಂತೆ ಕೆಳಕ್ಕೆ ಎಳ

ಸಲು ; ಕ್ರುದ್ಧನಾದ ಆ ವಿಪ್ರೋತ್ತಮನು ತನ್ನ ಕಣ್ಣುಗಳಲ್ಲಿ ಕಿಡಿಗಳನ್ನುದುರಿಸುತ್ತ ನಂದರಂ ಕುರಿತು—ಎಲೈ, ಕ್ಷತ್ರಿಯಾಧಮರುಗಳಿರಾ, ಸತ್ರಕ್ಕೆ ಅನ್ನಾರ್ಥಿಯಾಗಿ ಬಂದ ಅತಿಥಿಯಂ ಸತ್ಕರಿಸದೆ ಕೆಳಕ್ಕೆ ಎಳಸಿದಿರಾದಕಾರಣ ನಿಮ್ಮಂಥ ದುಷ್ಟರಲ್ಲಿ ನನ್ನ ತಪೋಲೇಶವ್ಯಯಮಂ ಮಾಡದೆ ನಾನು ಭೃಗುವಂಶೋತ್ಪನ್ನನಾದ ಕಾರಣದಿಂದ ಶುಕ್ರಾಚಾರ್ಯಪ್ರಣೀತವಾದ ಕಾಲದಂಡದೋಪಾದಿಯಲ್ಲಿರುವ ದಂಡನೀತಿಯಿಂದಲೇ ನಿಮ್ಮಂ ನಿಗ್ರಹಿಸಿ ಬಿಚ್ಚಿರುವ ಈ ನನ್ನ ಶಿಖೆಯಂ ಬಂಧಿಸುವೆನು. ಹಾಗಲ್ಲದೆ ಕಟ್ಟಿದವನಾದರೆ ತ್ರಿವೇಣೀಸಂಗಮದೊಳ್ ಶುಚಿರ್ಭೂತನಾಗಿ ನಿತ್ಯಕರ್ಮಾನುಷ್ಠಾನದಿಂದ ಹರಿಪೂಜೆಯಂ ಮಾಡುತ್ತಿರುವ ಬ್ರಾಹ್ಮಣನಂ ಕಾಲಿಂದ ಒದೆದವನ ದುರ್ಗತಿಯು ಎನಗಾಗಲಿ ಎಂದು ಶಪಥವಂ ಮಾಡಿ ಹೊರಟುಹೋದನು. ಹಾಗೆ ಕೋಪದಿಂದ ಹೋಗುತ್ತಿರುವ ಬ್ರಾಹ್ಮಣನಂ ಸಮಾಧಾನವನ್ನಾದರೂ ಗೆಯ್ಯದೆ ನಂದರು ಮತ್ತರಾಗಿ ತಮ್ಮ ಅರಮನೆಯಂ ಕುರಿತು ತೆರಳಿದರು. ಆಗ ಮಹೋತ್ಪಾತಂಗಳುಂಟಾಗಲು ಅಲ್ಲಿದ್ದ ಸರ್ವರಿಗೂ ಬಹಳ ಆತಂಕವು ಪುಟ್ಟಿ ಗುಜುಗುಟ್ಟುತ್ತ ಆದ ದುರ್ನಿಮಿತ್ತಂಗಳನ್ನೂ ಆ ಬ್ರಾಹ್ಮಣನ ತೇಜಸ್ಸನ್ನೂ ಆತನು ಮಾಡಿದ ಶಪಥವನ್ನೂ ನಂದರ ಮಹದಪಚಾರವನ್ನೂ ತಮ್ಮೊಳಗೆ ಯೋಚಿಸುತ್ತ—

ಶ್ಲೋ॥ ರಾಮೋಹೇಮಮೃಗಂ ನವೇದನಹುಷೋ ಯಾನೇನಿಯೊಜದ್ವಿಜಾನ್ ।
ವಿಪ್ರಸ್ಯೈಕತಮಸ್ಯವತ್ಸಹರಣೆ ಲಜ್ಜಾಂಜಹೌಹೆಹಯಃ ॥
ದ್ಯೂತೆ ಭ್ರಾತೃಚತುಷ್ಟಯಂಚಮಹಿಷೀಂ ಧರ್ಮಾತ್ಮಜೊದತ್ತವಾನ್ ॥
ಪ್ರಾಯಸ್ಸರ್ವಜಗದ್ವಿನಾಶ ಸಮಯೆಬುದ್ಧಿಃಪರಿಕ್ಷೀಯತೆ ॥

ಟೀ॥ ದಶರಥಚಕ್ರವರ್ತಿಯ ಪುತ್ರನಾದ ರಾಮನು ಮಾರೀಚಕಾಪಟ್ಯಮಾದ ಹೇಮಮೃಗವಂ ತಿಳಿಯದೆ ಪೋದನು. ನಹುಷಚಕ್ರವರ್ತಿಯು ತನ್ನ ವಿಮಾನವನ್ನು ಹೊರುವುದಕ್ಕೆ ಬ್ರಾಹ್ಮಣರನ್ನು ನೇಮಿಸಿದನು. ಹೇಹಯನೆಂಬ ಕಾರ್ತವೀರ್ಯಾರ್ಜುನನು ಬ್ರಾಹ್ಮಣನ ಗೋವಂ ಅಪಹರಿಸಿರುವ ಕಾರ್ಯದಲ್ಲಿ ನಾಚಿಕೆಯಂ ಬಿಟ್ಟನು. ಪಗಡೆಯಾಟದ ಜೂಜಿನಲ್ಲಿ ಧರ್ಮಪುತ್ರನಾದ ಯುಧಿಷ್ಠಿರನು ತನ್ನ ನಾಲ್ಕು ಮಂದಿ ತಮ್ಮಂದಿರನ್ನೂ ಪಟ್ಟಮಹಿಷಿಯನ್ನೂ ಕೌರವಗೆ ಕೊಟ್ಟನು. ಇಂಥ ಮಹಾಪುರುಷರೆಲ್ಲಾ ಕಾಲಗತಿಯಿಂದ ತಮ್ಮ ತಮ್ಮ ಬುದ್ಧಿಯಿಂ ಶೂನ್ಯರಾಗಿ ಬಹುವಿಪತ್ತುಗಳಂ ಹೊಂದಿದರು. ಇದೇ ಪ್ರಕಾರವಾಗಿ ವಿನಾಶಕಾಲದೊಳ್ ಸರ್ವರೂ ಕ್ಷೀಣಬುದ್ಧಿಯುಳ್ಳವರಾಗುವರು ಎಂದು ನೀತಿಯುಂಟು.

ಆದುಕಾರಣ ಈ ನವನಂದರಿಗೂ ಮುಂದೆ ಮಹಾವಿಪತ್ತು ಪ್ರಾಪ್ತವಾಗುವುದಕ್ಕಾಗಿ ಈ ಪ್ರಕಾರವಾದ ಉತ್ಪಾತಂಗಳುಂಟಾಗುತ್ತಿವೆ ಎಂದು ಹೇಳಿಕೊಳ್ಳುತ್ತ ಇದ್ದರು. ಇದಾದ ಎರಡು ದಿನಗಳ ಮೇಲೆ ಆ ಅನ್ನಸತ್ರಾಧಿಕಾರದಲ್ಲಿ ಇದ್ದ ಚಂದ್ರಗುಪ್ತನು ಎಲ್ಲಿಯೋ ಓಡಿಹೋದನೆಂದು ಹೇಳಿಕೊಳ್ಳುತ್ತಿದ್ದರೆಂಬ ವರ್ತಮಾನವನ್ನು ಅರಿಕೆ ಮಾಡಲು ; ಅದಂ ಕೇಳಿ ಆ ರಾಯನು ಮಂತ್ರಿಯ ಮುಖವನ್ನು ನೋಡಿ—

ಏನೈ, ಶಬರವರ್ಮನೇ, ಈಚೆಗೆ ಪಾಟಲೀಪುರದಲ್ಲಿ ನಡೆದ ವರ್ತಮಾನವಂ ಕೇಳಿದಿಯಾ? ಇದನ್ನು ಯೋಚಿಸಿ ನೋಡುವಲ್ಲಿ ಆ ಬ್ರಾಹ್ಮಣನು ಸಾಧಾರಣನಂತೆ ತೋರುವುದಿಲ್ಲ. ಆತನು ಮಹಾತ್ಮರಾದ ಶುಕ್ರಾಚಾರ್ಯರ ಶಿಷ್ಯನೇ ಆದರೆ ಆತನ ದೆಸೆಯಿಂದ ನಂದರಿಗೆ ವಿಪತ್ತು ಸಂಭವಿಸೀತು. ಮತ್ತು ನಂದರಲ್ಲಿ ಮತ್ಸರವುಳ್ಳ ಚಂದ್ರಗುಪ್ತನು ಅಲ್ಲಿಂದ ಹೋದನಂತೆ ಎಂದು ಹೇಳಲು ; ಆ ಮಾತಿಗೆ ಶಬರವರ್ಮನು—

ಜೀಯಾ, ಚಾರರು ಹೇಳಿದ ಮಾತಿನಲ್ಲಿ ಸೂಕ್ಷ್ಮವಂ ವಿಚಾರಿಸಿದರೆ ಇದರಲ್ಲಿ ದೈವಯತ್ನಮಾತ್ರವೇ ಇದೆ ಎಂದು ತೋರುವುದಿಲ್ಲ. ಸ್ವಲ್ಪ ಪುರುಷಪ್ರಯತ್ನವೂ ಉಂಟೆಂದು ತೋರುತ್ತದೆ. ಏನೆಂದರೆ—ಪೂರ್ವಸಂಕೇತವಿಲ್ಲದೆ ಬ್ರಾಹ್ಮಣನಾದವನು ರಾಜಾರ್ಹಪೀಠವಂ ತೆಗೆದುಕೊಂಡು ಅಗ್ರಸ್ಥಾನದಲ್ಲಿ ಪ್ರಭುಗಳಂ ಲಕ್ಷೀಕರಿಸದೆ ಕಾಲ ಮೇಲೆ ಕಾಲನ್ನು ಹಾಕಿಕೊಂಡು ಕುಳಿತುಕೊಳ್ಳುವುದಕ್ಕೆ ನಿಮಿತ್ತವೇನು? ಆತನು ಹುಚ್ಚನಾಗಿದ್ದರೆ ನಂದರಿಗೆ ಏನೂ ವಿಪತ್ತಿಲ್ಲ. ಹಾಗೆ ಉನ್ಮತ್ತನಾಗದೆ ನಿಜವಾಗಿ ತೇಜಸ್ವಿಯಾಗಿದ್ದರೆ ಆತನ ದೆಸೆಯಿಂದ ನಂದರಿಗೆ ಆಪತ್ತು ಬರುವುದು. ಆ ಬ್ರಾಹ್ಮಣನು ಎದ್ದುಹೋದ ಕೂಡಲೆ ಉತ್ಪಾತಂಗಳು ಉಂಟಾದುವು ಎಂಬುವುದರಿಂದ ಆತನು ತೇಜಸ್ವಿಯೇ ಅಹುದು. ಆತನು ಹುಚ್ಚನಲ್ಲದೆ ನಂದರಿಗೆ ಕೋಪಮುಂಟಾಗುವಂತೆ ಮಾಡಿದುದಕ್ಕಾಗಿ ಆತನಿಗೆ ನಂದರಲ್ಲಿ ಪೂರ್ವವೈರಮುಂಟೆಂದು ಹೇಳಬೇಕು. ಪೂರ್ವವೈರವಿದ್ದರೆ ಆತನು ತೇಜಸ್ವಿಯಾಗನು. ತೇಜಸ್ವಿಯಲ್ಲದಿದ್ದರೆ ಈ ಕಾರ್ಯಾರಂಭವು ನಿಷ್ಫಲವು. ಚಂದ್ರಗುಪ್ತನು ಹೊರಟುಹೋದನು ಎಂಬುವುದರಿಂದ ಆ ಬ್ರಾಹ್ಮಣನಿಗೆ ನಂದರಲ್ಲಿ ವೈರವಿಲ್ಲದಿದ್ದರೂ ವೈರಿಯಾದ ಚಂದ್ರಗುಪ್ತನು ಶರಣಾಗತನಾದಕಾರಣದಿಂದ ತಾನು ಆತನಲ್ಲಿ ದಯೆಯುಳ್ಳವನಾಗಿಯೂ ಕಾರ್ಯದಕ್ಷನಾಗಿಯೂ ಇದ್ದು ಆತನ ನಿಮಿತ್ತವಾಗಿ ಧರ್ಮವಿರುದ್ಧವಾಗದಂತೆ ನಂದರಿಗೆ ಕೋಪವಂ ಕೆರಳಿಸಿ ಲೋಕವು

ಮೆಚ್ಚುವಂತೆ ವೈರವಂ ಧರಿಸಿ ಇದ್ದಾನು. ಇದನ್ನು ಮಂತ್ರಾಲೋಚನೆಯೂ ದೂರ ದೃಷ್ಟಿಯೂ ಇಲ್ಲದಂಥ ಮೂಢರಾದ ನವನಂದರು ಯೋಚಿಸಿ ನೋಡದೆ ಅಮಾತ್ಯರಾಕ್ಷಸಾದಿಗಳು ಸಮೀಪದಲ್ಲಿಲ್ಲದಿದ್ದ ಕಾರಣದಿಂದ ಇಂಥ ಅವಿವೇಕವಂ ನಡೆಸಿರಬಹುದು. ಮತ್ತು—

ಶ್ಲೋ॥ ಉಚಿತಮನುಚಿತಂವಾ ಕುರ್ವತಾಕಾರ್ಯಜಾತಂ ।
ಪರಿಣತಿರವಧಾರ್ಯಾಯತ್ನತಃಪಂಡಿತೇನ ॥
ಅತಿರಭಸಕೃತಾನಾಂ ಕರ್ಮಣಾಮಾವಿಪಾಕಂ ।
ಭವತಿಹೃದಯದಾಹೀ ಶಲ್ಯತುಲ್ಯೋವಿಪಾಕಃ ॥

ಟೀ॥ ಲೋಕದಲ್ಲಿ ಬುದ್ಧಿಶಾಲಿಯಾದಂಥ ಮನುಷ್ಯನಿಂದ ಯೋಗ್ಯವಾದ ಕಾರ್ಯಸಮೂಹವನ್ನಾಗಲಿ ಅಯೋಗ್ಯವಾದ ಕಾರ್ಯಸಮೂಹವನ್ನಾಗಲಿ ಮಾಡುವ ಕಾಲದಲ್ಲಿ ಬಹುಪ್ರಯತ್ನದಿಂದ ಈ ಕಾರ್ಯವಂ ಮಾಡಿದರೆ ಇದರ ಪರಿಣತಿಯು ಹೀಗಾಗುವುದೆಂದು ತನ್ನ ಮನಸ್ಸಿನಲ್ಲಿಯೂ ತನ್ನ ಆಪ್ತರೊಡನೆಯೂ ಆಲೋಚಿಸಿ ಅದನ್ನು ತಿಳಿಯತಕ್ಕದು. ಆ ಪ್ರಕಾರವಾಗಿ ಆಲೋಚನೆಯಂ ಮಾಡದೆ ಧುಮುಕಿಪ್ರವೇಶದಿಂದ ಮಾಡಿದ ಕಾರ್ಯಗಳ ಪರಿಪಾಕವು ಮಾಡಿದಂಥವನ ಹೃದಯವನ್ನು ದಹಿಸುವಂಥ ಶೂಲಕ್ಕೆ ಸಮಾನವಾಗಿರುವುದೆಂದು ನೀತಿಶಾಸ್ತ್ರಮುಂಟು.

ಅದುಕಾರಣದಿಂದ ಮುಂದಿಟ್ಟಿ ಇಲ್ಲದೇ ಇರುವ ಆ ನವನಂದರಿಗೆ ಇಂಥ ಸಂಘಟನೆಗಳು ಉಂಟಾಗುವವು. ಆ ಬ್ರಾಹ್ಮಣನು ತೇಜಸ್ವಿಯಾದ ಮೇಲೆ ಅವರಿಗೆ ವಿಪತ್ತು ತಪ್ಪದು. ಮತ್ತು -

ಶ್ಲೋ॥ ದಾರುಚರ್ಮವಿನಿಶ್ವಾಸೊ ದಹತೆಲೊಹಪಂಚಕಂ ॥
ಸಾಧುಸಜ್ಜನ ಸಂತಾಪಃ ಕಿಮಾಶ್ಚರ್ಯಂ ಕುಲಕ್ಷಯೆ ॥

ಟೀ॥ ಲೋಕದಲ್ಲಿ ಸತ್ತುಹೋದ ದನವಿನ ಚರ್ಮದಿಂದ ಹೊರಡುವ ಉಸಿರುಗಳು ಪಂಚಲೋಹಗಳನ್ನು ದಹಿಸುತ್ತಿವೆ. ಸಾಧುಗಳಾದ ಸಜ್ಜನರ ಸಂತಾಪಯುಕ್ತವಾದ ನಿಟ್ಟುಸಿರುಗಳು ಕುಲಕ್ಷಯವಂ ಮಾಡುವುದರಲ್ಲಿ ಸಂದೇಹವಿಲ್ಲವೆಂದು ನೀತಿಶಾಸ್ತ್ರವಿರುವುದು.

ಆದುದರಿಂದ ತಂದೆಯಾದ ಸರ್ವಾರ್ಥಸಿದ್ಧಿಯಿಂದ ಹುಟ್ಟಿ ಮಕ್ಕಳೊಡನೆ ತಮಗೆ ಹಿತೈಷಿಯಾಗಿದ್ದ ಮತ್ತು ಸಜ್ಜನನಾದ ಮೌರ್ಯನ ನಿಟ್ಟುಸಿರೆಂಬ ಗಾಳಿಯು ಅವರ ಶೋಕಾಗ್ನಿಯನ್ನು ಪ್ರವರ್ಧಮಾನಮಂ ಮಾಡಿ ನಂದಕುಲ

ವೆಂಬ ವನವಂ ದಹಿಸುವುದು. ಇದರಲ್ಲಿ ಸಂದೇಹವಿಲ್ಲ. ಇದಕ್ಕೆ ತೇಜಸ್ವಿಯಾದ ಬ್ರಾಹ್ಮಣಾಪಮಾನವೇ ಕಾರಣವೆಂದು ಹೇಳುತ್ತಿದ್ದಂಥ ಆ ಶಬರವರ್ಮನ ವಾಕ್ಯವಂ ಕೇಳಿ ಪರ್ವತರಾಜನು ಅತನೊಡನೆ—

ಎಲೈ, ಮಂತ್ರಿಯೇ, ನವನಂದರು ಅವಮಾನವಂ ಪಡಿಸಿದ ಆ ಮಹಾ ತಪಸ್ವಿಯು ಭೃಗುವಂಶೋತ್ಪನ್ನನಾದರೆ ಶಾಪವಂ ಕೊಡದೆ ಇರುವುದಕ್ಕೆ ನಿಮಿತ್ತ ವೇನು ? ಅತನಿಗೆ ವಾಕ್ಸಿದ್ಧಿಯಿಲ್ಲದೇ ಇದ್ದರೆ ತಪಸ್ವಿ ಎಂತಹನು ? ಹಾಗೆ ತಪಸ್ವಿ ಯಾಗದೇ ಇದ್ದರೆ ಆ ದರಿದ್ರಬ್ರಾಹ್ಮಣನೂ ಬಲಹೀನನಾದ ಚಂದ್ರಗುಪ್ತನೂ ಕೂಡಿ ಮಹದೈಶ್ವರ್ಯದಿಂದ ಕೂಡಿ ಸೇನಾಸಮೇತರಾಗಿ ಪ್ರವರ್ಧಮಾನರಾಗಿ ರುವ ಆ ನಂದರಿಗೆ ಎಂತು ವಿಪತ್ತಂ ತಂದಾರು ? ಎಂದು ಕೇಳಿದ ಪರ್ವತೇಶ್ವರಂಗೆ ಮಂತ್ರಿಯು—

ಎಲೈ, ಒಡೆಯನೇ, ನೀನು ಮಾಡಿದ ಆಕ್ಷೇಪಣೆಗೆ ಸಮಾಧಾನವಂ ಹೇಳುವೆನು. ಲೋಕದಲ್ಲಿ ತಪಸ್ಸನ್ನಾರ್ಜಿಸುವ ಮಹಾತ್ಮರಿಗೆ—ಲೋಭಿಗೆ ಧನದಲ್ಲಿ ಇರುವಂತೆ ತಪೋಲೇಶವ್ಯಯದಲ್ಲಿಯೂ ಲೋಭಮುಂಟಾಗಿರುವುದರಿಂದ ಪೌರುಷಯುಕ್ತನಾದ ಪುರುಷನು ಪರಲೋಕಸಾಧನವಾದ ತಪಃಫಲವಂ ಎಂದಿಗೂ ಕೆಡಿಸಿಕೊಳ್ಳುವುದಿಲ್ಲ. ಆ ಬ್ರಾಹ್ಮಣನು ಭೃಗುವಂಶೋತ್ಪನ್ನನೂ ದಂಡನೀತಿ ಪ್ರವೀಣನೂ ಆಗಿರುವ ಕಾರಣದಿಂದ ಶಾಪವಂ ಕೊಟ್ಟು ತನ್ನ ತಪೋದ್ರವ್ಯವಂ ಕೆಡಿಸಿಕೊಳ್ಳದೆ ಹಿಂದೆ ವಿಶ್ವಾಮಿತ್ರಮುನಿಯು ಸುಬಾಹುಮಾರೀಚರೆಂಬ ತನ್ನ ಯಜ್ಞಕಂಟಕರಾದ ರಾಕ್ಷಸರನ್ನು ಶ್ರೀರಾಮನಿಂ ಹೇಗೆ ಉಪಾಯದಲ್ಲಿ ನಿಗ್ರಹಿ ಸಿದನೋ ಹಾಗೆಯೇ ಚಂದ್ರಗುಪ್ತನಿಂದ ಆ ನವನಂದರಂ ಸಂಹರಿಸಲುಪಾಯಾಂ ತರವಂ ಹುಡುಕುವನು.

ಶ್ಲೋ॥ ವಿಜಿತವ್ಯಾಲಂಕಾ ಚರಣತರಣೀಯೋಜಲನಿಧಿಃ । ವಿಪಕ್ಷಃಪೌಲಸ್ತ್ಯೋರಣ
ಭುವಿಸಹಾಯಾಶ್ಚಕಪಯಃ ॥ ತಥಾಪ್ಯೇಕೋರಾಮ ಸ್ಸಕಲಮವಧೀದ್ರಾಕ್ಷ
ಸಕುಲಂ । ಕ್ರಿಯಾಸಿದ್ಧಿ ಸ್ಸತ್ವೇಭವತಿಮಹತಾಂನೋಪಕರಣೇ ॥

ಟೀ॥ ಸಮುದ್ರವೇ ಅಗಳಾಗಿರುವ ತ್ರಿಕೂಟಶಿಖರದೊಳಿರ್ಪ ಅರಿಗಳಿಗೆ ಅತಿದುರ್ಘಟವಾದ ಲಂಕಾಪಟ್ಟಣವೆಂಬ ಜಲದುರ್ಗವು ಜಯಿಸತಕ್ಕಂಥದೋ ? ಅಗಾಧವಾಗಿಯೂ ಅತಿವಿಸ್ತಾರವಾಗಿಯೂ ಇರುವ ಸಮುದ್ರವು ಕಾಲು ಗಳಿಂದ ದಾಟುವುದಕ್ಕೆ ಯೋಗ್ಯವಾದುದೋ ? ಮತ್ತು ಸಾಕ್ಷಾತ್ ಬ್ರಹ್ಮ ಪುತ್ರನಾದ ಪುಲಸ್ತ್ಯಋಷಿಗೆ ಮೊಮ್ಮಗನಾಗಿ ಇಂದ್ರಾದ್ಯಷ್ಟದಿಕ್ಪಾಲಕರಂ

ಜಯಿಸಿದ ರಾವಣನು ಜಯಿಸತಕ್ಕವನೋ? ಇಂಥ ಕೆಲಸಗಳನ್ನು ಮಾಡುವು ದಕ್ಕೆ ವನದಲ್ಲಿ ಹಣ್ಣುಹಂಪಲುಗಳನ್ನು ತಿಂದುಕೊಂಡು ಜೀವಿಸುವ ಅತಿಚಪ ಲಗಳಾದ ಕಪಿಗಳು ಸಹಾಯಕರೋ? ಹೀಗಿದ್ದಾಗ್ಯೂ ರಾಜ್ಯಭ್ರಷ್ಟನಾಗಿ ಸೇನೆ ಯೂ ಇಲ್ಲದೆ ಇದ್ದ ರಾಮನು ಸಕಲರಾಕ್ಷಸಕುಲವನ್ನೂ ಸಂಹರಿಸಿದನು. ಅದುಕಾರಣ ಮಹಾಪುರುಷರಿಗೆ ಸಾಧನಸಂಪತ್ತುಗಳು ಇಲ್ಲದೇ ಇದ್ದಾಗ್ಯೂ ಅವರು ಪ್ರಯತ್ನಿಸಿದ ಕಾರ್ಯವು ಸಿದ್ಧಿಯಾಗುವುದು ಎಂದು ದೊಡ್ಡವರು ಹೇಳುತ್ತಿರ್ಪರು. ಆ ನಿಮಿತ್ತದಿಂದ ಆ ಬ್ರಾಹ್ಮಣನೂ ಚಂದ್ರಗುಪ್ತನೂ ಯತ್ನಿ ಸಿದ ಕಾರ್ಯವು ದೈವಗತಿಯಿಂದ ಸಾಗಿದರೂ ಸಾಗಬಹುದು. ಇದಲ್ಲದೆ—

ಶ್ಲೋ॥ ಅಘಟಿತಘಟಿತಾನಿ ಘಟಯತಿಘಟಿತಘಟಿತಾನಿ ದುರ್ಘಟೀಕುರುತೆ ॥
ವಿಧಿರೇವತಾನಿ ವಿದಧತಿಯಾನಿ ಪುಮಾನ್ನೈವಚಿಂತಯತಿ ।

ಟೀ॥ ವಿಧಿಯು ಅಘಟಿತವಾದಂಥ ಕಾರ್ಯವನ್ನು ಘಟನೆಮಾಡುವುದು. ಈ ಕಾರ್ಯವು ಆಗತಕ್ಕುದಲ್ಲವೆಂದು ಮನುಷ್ಯನಿಗೆ ತಿಳಿದಿದ್ದರೆ ಅಂಥದನ್ನು ಆಗಮಾಡುವುದು. ಈ ಕಾರ್ಯವು ಆಗತಕ್ಕುದು ಎಂದು ತಿಳಿದಿದ್ದರೆ ಅಂಥ ದನ್ನು ಅತಿ ದುರ್ಘಟವಾಗಿ ಮಾಡುವುದು. ಮನುಷ್ಯನು ಯಾವುದನ್ನು ಯೋಚಿ ಸುತ್ತ ಇರುವನೋ ಅದನ್ನು ಉಂಟುಮಾಡುವುದೇ ಇಲ್ಲ. ಯೋಚಿಸದೆ ಇರು ವಂಥ ಕೆಲಸವನ್ನೇ ಮಾಡುವುದು ಎಂದು ನೀತಿಶಾಸ್ತ್ರಮುಂಟು.

ಅದುಕಾರಣ ಆ ಕಾರ್ಯವು ನಮಗೆ ದುರ್ಘಟವೆಂದು ತೋರಿದಾಗ್ಯೂ ಚಂದ್ರಗುಪ್ತನಿಗೆ ದೈವಬಲವಿದ್ದಲ್ಲಿ ಅದು ಅನುಕೂಲಿಸುವುದಕ್ಕೆ ಯಾವ ಅಡ್ಡಿ ಯೂ ಇಲ್ಲ. ಆದುದರಿಂದಲೇ ಅವನಿಗೆ ಅಂಥ ತೇಜಸ್ವಿಯಾದ ಬ್ರಾಹ್ಮಣನ ಸಹಾಯವು ದೊರಕಿತು ಎಂದು ಹೇಳಿದನು. ಆ ಶಬರವರ್ಮನ ವಾಕ್ಯವಂ ಕೇಳಿ ಪರ್ವತೇಶ್ವರನು ಸಮ್ಮತಿಪಟ್ಟು ಅಂತಃಪುರಕ್ಕೆ ಹೋದನು.

ಆ ಮೂರನೆಯ ದಿವಸದಲ್ಲಿಯೇ ಲಂಪಾಕದೇಶಕ್ಕೆ ಹೋಗಿದ್ದಚಾರರು ತ್ವರಿ ತದಿಂ ಬಂದು ಪರ್ವತೇಶ್ವರನಿಗೆ ಕೈ ಮುಗಿದು—ಜೀಯಾ, ನಾವು ಸನ್ನಿಧಾನದಿಂದ ಆಜ್ಞಪ್ತರಾಗಿ ಲಂಪಾಕದೇಶಕ್ಕೆ ಹೋಗಿದ್ದ ಚಾರರು. ಮೊದಲು ಸನ್ನಿಧಿಯಲ್ಲಿ ವಿಜ್ಞಾಪಿಸಿದಂತೆ ಲಂಪಾಕಾಧಿಪತಿಯಾದ ಗಿರಿವರ್ಮನು ತನ್ನ ಸಾಮಂತಸೇನಾ ಪರಿವೃತನಾಗಿ ಪಾರ್ವತೇಯರ ಮೇಲೆ ಯುದ್ಧಕ್ಕೆ ಬರುವುದು ನಿಶ್ಚಯವು. ಇಂ ದಿಗೆ ಹದಿನೈದು ದಿವಸದಲ್ಲಿ ದಂಡಯಾತ್ರಾಸೂಚಕವಾದ ಆತನ ಸೇನಾಧ್ವಜವು ನಮ್ಮ ದೇಶಾಭಿಮುಖವಾಗಿ ಆತನ ಪುರದ ನೈರುತ್ಯದಿಗ್ಭಾಗದಲ್ಲಿ ಪ್ರತಿಷ್ಠಿತ

ವಾಗಿ ಬಹುಸೇನೆಯಿಂದ ರಕ್ಷಿಸಲ್ಪಟ್ಟಿದೆ. ಪುಂಡುಪಾಳೆಯಗಾರರು ನಮ್ಮ ದೇಶದ ಎಲ್ಲೆಕಟ್ಟಿನ ಗ್ರಾಮಗಳಂ ಮುಂಚಿತವಾಗಿಯೇ ಸೂರೆಗೊಳ್ಳುವುದಕ್ಕೆ ಯತ್ನವಂ ಮಾಡಿದ್ದಾರೆ. ಈ ಅರ್ಥವೆಲ್ಲವೂ ಆ ದೇಶದಲ್ಲಿ ಪ್ರಸಿದ್ಧವಾಗಿಹುದು ಎಂದು ಬಿನ್ನೈಸಲು; ಅದಂ ಕೇಳಿ ರಾಯನು ಮಂತ್ರಿಯಂ ನೋಡಿ—

ಅಯ್ಯಾ, ಶಬರವರ್ಮನೇ, ಹುಲಿಯ ಮರಿಯಂ ಬೆಕ್ಕಿನಂತಿಹುದೆಂದು ಉಪೇಕ್ಷಿಸಿದರೆ ಕಾಲಾಂತರದಲ್ಲಿ ಅದು ಹೆಬ್ಬುಲಿಯಾದಂತೆ ನಾವು ಮೊದಲು ಲಂಪಾಕಪತಿಯಂ ಹೀನಬಲನೆಂದು ಉಪೇಕ್ಷಿಸಿದುದಕ್ಕೆ ಈಗ ಬಹುಪ್ರಯತ್ನವಂ ಮಾಡಬೇಕಾಯಿತು. ನಾವು ಈ ವೇಳೆಯಲ್ಲಿಯೂ ಉದಾಸೀನರಾಗಿದ್ದರೆ ಮುಂದೆ ಪ್ರಮಾದವುಂಟಾದೀತು. ಅದರಿಂದ ಕಿರಾತಾಧಿಪತಿಯಾದ ಮಾತಂಗನ ಸೇನೆಯು ಮೊದಲು ಸನ್ನದ್ಧವಾಗಿ ಮುಂದೆ ನಡೆಯಲಿ. ಮತ್ತು ಕಾಂಭೋಜ ಹೂಣ ಚೀಣ ಶಕಸೇನೆಗಳು ಅದರ ಹಿಂಗಡೆಯಲ್ಲಿ ದಂಡಯಾತ್ರೆಗೆ ಸಿದ್ಧವಾಗಿ ನಿಲ್ಲಲಿ. ಕುಲೂತ ಪಾರಶೀಕ ಮಲಯ ಸಿಂಧು ಕಾಶ್ಮೀರ ಈ ದೇಶಾಧಿಪತಿಗಳ ಸೇನೆಗಳು ನಮ್ಮ ಸೇನಾಪತಿಯಾದ ಶೇಖರನಂ ಓಲೈಸುತ್ತ ನಡೆಯಲಿ. ಪಾರ್ವತೀಯಸೇನೆಯು ಪಟ್ಟಣವಂ ಸಂರಕ್ಷಿಸುತ್ತ ಇಲ್ಲೇ ಇರಲಿ ಎಂದು ಶಬರವರ್ಮನಿಗೆ ಆಜ್ಞಾಪಿಸಲು; ಶಬರವರ್ಮನು ಮಹಾಪ್ರಸಾದವೆಂದು ರಾಜಾಜ್ಞೆಯಂ ದೇಶಾಧಿಪತಿಗಳಿಗೆ ತಿಳಿಸುವಂತೆ ರಾಜಭಟರಿಗೆ ಹೇಳಿ ಕಳುಹಿಸಲು; ಅದೇ ರೀತಿಗೆ ಆ ದೇಶಾಧಿಪತಿಗಳ ಸೇನೆಗಳು ಬಂದು ಪರ್ವತರಾಜನ ಶಾಹುರೀನಗರದ ಬಹಿರ್ಭಾಗದಲ್ಲಿ ಇಳಿಯುತ್ತಿದ್ದುವು. ಹೀಗಿರುತ್ತಿರಲು ಮೊದಲು ಪರ್ವತರಾಜ್ಯವಂ ಕುರಿತು ಹೊರಟಿದ್ದ ಚಾಣಕ್ಯನು ಕೆಲವು ದಿನಗಳ ಮೇಲೆ ಆ ರಾಜ್ಯವಂ ಪ್ರವೇಶಿಸಿ ದೇಶದ ಸಮೃದ್ಧಿಯಂ ನಿರೀಕ್ಷಿಸಿ ಮನಸ್ಸಿನಲ್ಲಿ ಆನಂದಭರಿತನಾಗಿ ಸಂಗಡಲೇ ಬರುತ್ತಿರುವಂಥ ದೀನಾವನತವದನನಾದ ಚಂದ್ರಗುಪ್ತನಂ ನೋಡಿ—

ಎಲೈ, ಕುಮಾರಕನೇ, ಯಾಕೆ ಬಾಡಿದ ಮುಖವುಳ್ಳವನಾಗಿ ಬಹುಚಿಂತೆಯಿಂದ ಕೂಡಿ ಇದ್ದೀಯೆ? ಎಂದು ಕೇಳಲು; ಅದಕ್ಕೆ ಚಂದ್ರಗುಪ್ತನು—

ಎಲೈ, ಮಹಾನುಭಾವನೇ, ನನ್ನ ತಂದೆಯು ಸರ್ವಜನ ಪೂಜ್ಯನಾದ ಸರ್ವಾರ್ಥಸಿದ್ಧಿಯ ಹೊಟ್ಟೆಯಲ್ಲಿ ಹುಟ್ಟಿದಾಗ್ಗೂ ಸಾಮಂತಶತ್ರುಗಳ ಮೇಲೆ ಸೇನಾಸಮೇತನಾಗಿ ಪೋಗಿ ಅವರ ಸೇನೆಯೊಳ್ ಪೊಯ್ದಾಡಿ ಅವರಂ ಸಂಹರಿಸಿ ತಾನೂ ಪ್ರಾಣವಂ ಬಿಟ್ಟು ರಂಭಾದ್ಯಪ್ಸರಸ್ತ್ರೀಯರುಗಳಿಂದ ಹಾಕಲ್ಪಟ್ಟ ಪುಷ್ಪಮಾಲಿಕೆಗಳಂ ಧರಿಸಿ ಅವರಿಂದ ಆಲಿಂಗಿಸಲ್ಪಟ್ಟವನಾಗಿ ದಿವ್ಯವಿಮಾನವಂ ಏರಿ

ಕೊಂಡು ವೀರಸ್ವರ್ಗವಂ ಪಡೆಯದೆ ಚೋರರೋಪಾದಿಯಲ್ಲಿ ಕಾರಾಗೃಹ ದೊಳ್ ಸಿಕ್ಕಿ ತನ್ನ ಸಂಗಡ ಸಾಯುತ್ತಿರುವ ಮಕ್ಕಳುಗಳಂ ನೋಡುತ್ತ ದುಃಖಿತನಾಗಿ ಪ್ರಾಣವಂ ಬಿಟ್ಟನಲ್ಲಾ ! ಎಂಬುವುದೊಂದು ಚಿಂತೆ ; ಇಂಥ ಅನ್ಯಾಯವಾದ ಶತ್ರುತ್ವವನ್ನಿಟ್ಟು ನಮ್ಮವರಂ ಕೊಂದುಹಾಕಿದ ದುಷ್ಟರಾದ ನವನಂದರಂ ತಮ್ಮ ಚರಣಾನುಗ್ರಹದಿಂದ ನಾನು ಎಂದಿಗೆ ಸಂಹರಿಸಿ ನನ್ನ ಪಿತೃಋಣವಂ ತೀರಿಸುವೆನೋ ! ಎಂಬುವುದೊಂದು ಚಿಂತೆ ; ಈ ವ್ಯಾಕುಲಗಳೆರಡರಿಂದಲೂ ನಿತ್ಯವೂ ರಾತ್ರಿಯಲ್ಲಿ ನನಗೆ ನಿದ್ರೆಯು ಬರುವುದೇ ಇಲ್ಲವು. ನನಗೆ ಮಹಾಪುರುಷರಾದ ತಮ್ಮ ಅಭಯವಾದ ಕಾರಣ ಪಾಪಿಯಾದ ನನ್ನ ಪ್ರಾಣವು ಈವರೆಗೂ ನಿಂತಿತು. ನನ್ನ ಪೂರ್ವಪುಣ್ಯದಿಂದ ತಮ್ಮ ಆಶ್ರಯವು ನನಗೆ ದೊರಕದೇ ಇದ್ದರೆ ಇಷ್ಟು ಹೊತ್ತಿಗೆ ನಾನು ಪ್ರಾಣವಂ ಬಿಟ್ಟು ನನ್ನ ತಂದೆ ತಮ್ಮಂದಿರಿರುವ ಲೋಕವನ್ನು ಸೇರುತ್ತ ಇದ್ದೆನು ಎಂದು ಹೇಳಿ ಕಣ್ಣಿನಲ್ಲಿ ನೀರನ್ನು ತಂದುಕೊಂಡನು. ಅದಂ ನೋಡಿ ಚಾಣಕ್ಯನು ಕರುಣಾರ್ದ್ರಹೃದಯ ನಾಗಿ ಚಂದ್ರಗುಪ್ತನನ್ನು ಕುರಿತು—ಅಪ್ಪಾ,

ಶ್ಲೋ॥ ಚಿಂತಾಯಾಶ್ಚ ಚಿತಾಯಾಶ್ಚ ಬಿಂದುಮಾತ್ರಂ ವಿಶಿಷ್ಯತೆ॥
ಚಿತಾದಹತಿ ನಿರ್ಜೀವಂ ಚಿಂತಾದಹತಿ ಜೀವಿನಂ ॥

ಟೀ॥ ಚಿಂತೆಗೂ ಚಿತೆಗೂ ನಡುವೆ ಒಂದು ಸೊನ್ನೆಮಾತ್ರ ವಿಶೇಷವು. ಚಿತೆಯು ಜೀವವಿಲ್ಲದ ಶವವನ್ನು ದಹಿಸುವುದು. ಚಿಂತೆಯು ಜೀವವುಳ್ಳ ಪುರುಷ ನನ್ನೇ ದಹಿಸುವುದು ಎಂದು ನೀತಿಶಾಸ್ತ್ರಮುಂಟು.

ಅದುಕಾರಣ ಬುದ್ಧಿವಂತನಾದ ಪುರುಷನು ವಿಪತ್ತು ಬಂದ ವೇಳೆಯಲ್ಲಿ ಧೈರ್ಯವನ್ನು ಅವಲಂಬಿಸಿಕೊಂಡು ಇರಬೇಕೇ ಹೊರತು ಚಿಂತೆಗೆ ಆಸ್ಪದವಂ ಕೊಡಕೂಡದು ಎಂದು ಚಂದ್ರಗುಪ್ತನಂ ಸಮಾಧಾನಂಗೊಳಿಸಿ—ಎಲೈ, ಕುಮಾರ ಕನೇ, ಈ ಪರ್ವತೇಶ್ವರನು ಬಹುಮ್ಲೇಚ್ಛದೇಶಾಧಿಪತಿಗಳಿಂದ ಕಪ್ಪಂಗಳಂ ಸ್ವೀಕರಿಸುತ್ತ ಅಸಂಖ್ಯಾತಸೇನಾಪರಿವೃತನಾಗಿರುವ ಶೂರನೆಂದು ಕೇಳಿ ಈತ ನಿಂದ ನಿನ್ನ ಕಾರ್ಯವು ಸಾಧ್ಯವಾದೀತೆಂದು ಇಲ್ಲಿಗೆ ಬಂದೆನೆಂಬುದಾಗಿ ಹೇಳುತ್ತ ಮುಂದೆ ತೆರಳುತ್ತಿರುವಲ್ಲಿ ದೂರದಿಂದಲೇ ಆ ಶಾಹುರೀನಗರವನ್ನು ನೋಡಿ ಈ ಪಟ್ಟಣವು ದೇವಾಸುರರಿಗೂ ಅಸಾಧ್ಯವೆಂದು ಹೇಳಲು ; ಚಂದ್ರಗುಪ್ತನು—

ಸ್ವಾಮಿಾ, ತಾವು ಹೇಳಿದುದು ಸತ್ಯವೇ. ತಾವು ನಿಶ್ಚಯಿಸಿದ ಅರ್ಥವು ಅನ್ಯಥಾ ಪರಿಣಮಿಸುವುದುಂಟೇ ? ನನ್ನ ವಿಜ್ಞಾಪನೆಯನ್ನವಧರಿಸಬೇಕು. ನಿನಂ

ದರೆ—ಈ ಪುರದ ಈಶಾನ್ಯದಿಕ್ಕಿನಲ್ಲಿ ಶತ್ರುನಾಶನಸೂಚಕವಾಗಿ ಉದ್ಭವಿಸಿದ ಧೂಮಕೇತುವಿನಂತೆ ಧೂಮರೇಖಾಲಕ್ಷಣಲಕ್ಷಿತವಾಗಿ ಗಗನಲಕ್ಷ್ಮಿಯೊಡನೆ ಸರಸವಾಡುವ ವಿಜಯಲಕ್ಷ್ಮಿಗೆ ಆವಾಸವಾದ ಸೇನಾಧ್ವಜವು ಬಹುಸೇನಾನಿಕರದಿಂ ಕೂಡಿ ಪ್ರತಿಷ್ಠಿತವಾಗಿರುವುದರಿಂದಲೂ ಶೂರಪರಿವಾರವು ಮುಂಗಡೆಯಲ್ಲಿ ಸೇವಕಪರಿವಾರವು ಹಿಂಗಡೆಯಲ್ಲಿ ಇಳಿದಿರುವುದರಿಂದಲೂ ಈ ದೇಶಾಧಿಪತಿಗೆ ಈಶಾನ್ಯದಿಕ್ಕಿನ ಶತ್ರುರಾಜರ ಮೇಲೆ ದಂಡಯಾತ್ರೆಯು ಉಂಟಾಗಿರುವುದೆಂದು ತೋರುತ್ತಿದೆ. ಇದೇ ಸಮಯದಲ್ಲಿ ಈ ರಾಯನಿಗೆ ನಮ್ಮ ಅಭಿಮತಕಾರ್ಯವನ್ನರುಹಿದರೆ ತನಗೆ ಅವಶ್ಯಕವಾದ ರಾಜಕಾರ್ಯವಂ ಬಿಟ್ಟು ನಮ್ಮ ಕಾರ್ಯಕ್ಕೆ ಒಡಂಬಡುವನೇ ? ಇದಲ್ಲದೆ—

ಶ್ಲೋ॥ ಸುಗುಣೋಪಿಕುಪ್ಯತಿವರಂ ಅನವಸರಜ್ಞೆನಯಾಚಿತಸ್ಸುಹೃದಾ ॥

ಟೀ॥ ಸಮಯವನ್ನು ತಿಳಿಯದೇ ಇರುವಂಥವನಿಂದ ಯಾಚಿಸಲ್ಪಟ್ಟ ಪುರುಷನು ಸುಗುಣಿಯಾದಾಗ್ಯೂ ಯಾಚಿಸಿದಂಥವನಿಗೆ ಬಹಳ ಸ್ನೇಹಿತನಾದಾಗ್ಯೂ ಕೋಪಗೊಳ್ಳುವವನಾಗುತ್ತಾನೆ ಎಂದು ನೀತಿಯುಂಟು.

ಅದುಕಾರಣ ನನ್ನ ಮನಸ್ಸು ಈ ಕಾರ್ಯ ಸಾಗುವುದೋ ವ್ಯರ್ಥಶ್ರಮವಾಗುವುದೋ ಎಂದು ಡೋಲಾಯಮಾನವಾಗಿದೆ ಎಂಬುದಾಗಿ ಹೇಳುತ್ತ ಇರಲು ; ಅದಕ್ಕೆ ಚಾಣಕ್ಯನು—

ಶ್ಲೋ॥ ಶುಷ್ಕೇಭೂಯಸ್ವಯಮಪಿಪರಾನಂದದಶ್ಚಂದನದ್ರುಃ ಧನುರ್ದತ್ತೆ
ರಸಮನುದಿನಂ ದತ್ತಘಾಸಾನುರೂಪಂ ॥ ಹತ್ವಾಮಾತುರ್ಹೃದಯಮಯ
ತೆಹಾಸ್ವಯಂ ವೃಶ್ಚಿಕಾದಿರ್ಮೃತ್ವಾಪ್ಯನ್ನಂ ವಮಯತಿನೃಣಾಂಮಕ್ಷಿಕಾ
ಕುಕ್ಷಿಗಾಪಿ ॥

ಟೀ॥ ಲೋಕದಲ್ಲಿ ಶ್ರೀಗಂಧತರುವು ತಾನು ಒಣಗಿ ಪರರಿಗೆ ಆನಂದವನ್ನು ಕೊಡುವುದು. ಆಕಳುಗಳು ತೃಣದಿಂದ ತಮ್ಮ ಹೊಟ್ಟೆಯನ್ನು ತುಂಬಿಸಿಕೊಂಡು ಆ ಹುಲ್ಲು ಹಾಕಿ ಸಾಕಿದಂಥವನಿಗೆ ದಶಗುಣಾಧಿಕವಾಗಿ ಹಾಲನ್ನು ಕೊಡುವುವು. ಚೇಳು ಮೊದಲಾದ ಜೀವಿಜಾಲವು ತಮ್ಮ ತಾಯನ್ನು ಕೊಂದುಹಾಕಿ ತಾವಾದರೂ ಬದುಕುವುವು. ನೊಣವು ತಾನೂ ಸತ್ತು ಅನ್ಯರಿಗೆ ವಾಂತಿಯನ್ನೂ ಮಾಡಿಸುವುದು. ಈ ಪ್ರಕಾರವಾಗಿ ಉತ್ತಮಮಧ್ಯಮಾಧಮರ ಗುಣಗಳು ಎಂದು ನೀತಿಶಾಸ್ತ್ರಮುಂಟು.

ಅದುಕಾರಣ ಈ ಪರ್ವತೇಶ್ವರನು ಪರಮಗುಣಾಢ್ಯನಾಗಿರುವುದರಿಂದ ನಾವು ಆರ್ತರಾಗಿ ಹೇಳಿಕೊಂಡುದೇ ಆದರೆ ಪರೋಪಕಾರಕ್ಕಿಂತ ಅತಿಶಯವಾದ

ಧರ್ಮವು ಮತ್ತೊಂದಿಲ್ಲವೆಂದು ನಿಶ್ಚಯಿಸಿ ತನ್ನ ಕಾರ್ಯವೆಷ್ಟು ಇದ್ದಾಗ್ಯೂ ಅದನ್ನು ಬಿಟ್ಟು ನಮ್ಮ ಕಾರ್ಯಕ್ಕೆ ಸಹಾಯನಾಗುವನು. ಇದಕ್ಕೆ ಒಂದು ಕಥೆಯುಂಟು. ಏನೆಂದರೆ—

ಶ್ಲೋ॥ ಕಾಂತಂಪ್ರಾಹಕಪೋತಿಕಾಕುಲತಯಾನಾಥಾಂತ್ಯಕಾಲೋಧುನಾ ॥
ವ್ಯಾಧೋಧೋಧ್ಯತಚಾಪಸಂಯತಶರಃಶ್ಯೆನೋಪರಿಭ್ರಾಮ್ಯತಿ ॥
ಏವಂಸತ್ಯಹಿನಾಸದಷ್ಟ ಇಷುಣಾಃಶ್ಯೆನಸ್ತುತೆನಾಹತಃ ॥
ತೂರ್ಣಂತೌತುಯಮಾಲಯಂಪರಿಗತೌದ್ಯೆವೀವಿಚಿತ್ರಾಗತಿಃ ॥

ಟೀ॥ ಒಂದು ಮರದ ಮೇಲೆ ಎರಡು ಪಾರಿವಾಳದ ಹಕ್ಕಿಗಳು ದಾಂಪತ್ಯಾನುಕೂಲತೆಯಿಂದ ವಾಸಮಾಡಿಕೊಂಡಿರುವಲ್ಲಿ ಒಂದಾನೊಂದು ದಿನ ಹೆಣ್ಣು ಹಕ್ಕಿಯು ಗಂಡು ಹಕ್ಕಿಯಂ ಕುರಿತು ಬಹಳ ವ್ಯಾಕುಲಚಿತ್ತದಿಂದ—ಎಲೈ, ನಾಥನೇ, ಈಗ ನಮಗೆ ಅಂತ್ಯಕಾಲವು ಪ್ರಾಪ್ತವಾಗಿರುವುದು. ಅದೇನೆಂಬೆಯಾ? ಈಗ ನಮ್ಮನ್ನು ಸಂಹರಿಸುವುದಕ್ಕೆ ಕಿರಾತನು ಬಾಹುವಿನಲ್ಲಿ ಧರಿಸಲ್ಪಟ್ಟ ಧನುಸ್ಸಿನಲ್ಲಿ ಕೂಡಿಸಿದ ಬಾಣವುಳ್ಳವನಾಗಿ ಅಧಃಪ್ರದೇಶದಲ್ಲಿ ಗುರಿಯನ್ನು ನೋಡುತ್ತ ನಿಂತಿದ್ದಾನೆ. ಮೇಲಕ್ಕೆ ಹಾರಿ ಹೋಗುವಣ ಎಂದರೋ ಗಿಡಗನು ನಾವು ಹಾರಿದ ಕ್ಷಣವಲ್ಲಿಯೇ ನಮ್ಮನ್ನು ಹಿಡಿದು ತಿನ್ನಬೇಕೆಂದು ಮಂಡಲಾಕಾರವಾಗಿ ತಿರುಗುತ್ತ ಮೇಲೆ ಇದೆ ಎಂದು ಹೇಳುತ್ತಿರುವಷ್ಟರಲ್ಲಿ ಆ ಕಿರಾತನು ಹಾವಿನಿಂದ ಕಚ್ಚಲ್ಪಟ್ಟವನಾದನು ಅವನು ಎಸೆದ ಬಾಣದಿಂದ ಮೇಲೆ ತಿರುಗುತ್ತಿರುವ ಗಿಡಗನು ಸಂಹರಿಸಲ್ಪಟ್ಟಿತು. ಈ ರೀತಿಯಾಗಿ ಆ ಕಪೋತಪಕ್ಷಿಗಳಂ ಸಂಹರಿಸುವುದಕ್ಕೆ ಯತ್ನವಂ ಮಾಡಿಕೊಂಡಿದ್ದ ಈರ್ವರೂ ಯಮಾಲಯವನ್ನು ಹೊಂದಿದರು. ಅದುಕಾರಣ ದೈವಗತಿಯು ವಿಚಿತ್ರವಾಗಿರುವುದು.

ಆದುದರಿಂದ ನಮಗೆ ದೈವಬಲವು ಒದಗಿದರೆ ನಾವು ಮಾಡುವ ಉಪಾಯಗಳಿಂದ ಈ ರಾಯನಿಗೆ ಈಗಿನ ಶತ್ರುಗಳ ಆತಂಕ ತಪ್ಪಿ ಈ ಪ್ರಯಾಣವೇ ನಮ್ಮ ಕಾರ್ಯಕ್ಕೆ ಉಪಯುಕ್ತವಾಗಿ ಪಾಟಲೀಪುರಾಭಿಮುಖವಾಗುವುದು ಎಂದು ಹೇಳಿ ಆ ಪುರಪ್ರವೇಶವಂ ಮಾಡಿ ಆ ಮಾರನೆಯ ದಿವಸದಲ್ಲಿ ಆ ರಾಯನ ಸಮಯವಂ ವಿಚಾರಿಸಿ ಇದು ಸುಮುಹೂರ್ತವೆಂದು ತಿಳಿದು ಚಂದ್ರಗುಪ್ತ ಸಮೇತನಾಗಿ ಬಂದು ರಾಜದ್ವಾರದಲ್ಲಿ ನಿಂತು ಅಲ್ಲಿಯ ದ್ವಾರಪಾಲಕರಂ ನೋಡಿ—

ಎಲೈ, ಪ್ರತಿಹಾರಿಗಳಿರಾ, ರಾಜಪುತ್ರನೊಡಗೂಡಿ ಚಾಣಕ್ಯನೆಂಬ ಬ್ರಾಹ್ಮಣನು ಪ್ರಭುಗಳ ದರ್ಶನಾಪೇಕ್ಷೆಯಿಂದ ರಾಜದ್ವಾರದ ಬಳಿಯಲ್ಲಿ ಬಂದು

ನಿಂತು ಇದ್ದಾನೆ ಎಂದು ಭೂಪತಿಗಳಿಗೆ ತಿಳಿಸಿರಿ ಎಂಬುದಾಗಿ ಹೇಳಲು ; ಆ ದ್ವಾರಪಾಲಕರು ಒಳ್ಳೆಯದೆಂದು ಹೋಗಿ ಆಸ್ಥಾನದಲ್ಲಿ ಕುಳಿತಿರ್ದ ಪರ್ವತ ರಾಜನಿಗೆ ವಂದಿಸಿ,—

ಬುದ್ಧೀ, ಪರಾಕು ! ಚಾಣಕ್ಯನೆಂಬ ಬ್ರಾಹ್ಮಣೋತ್ತಮನು ಉದಯಿಸಿ ಬರುತ್ತಿರುವ ಬಾಲಚಂದ್ರನೊಡಗೂಡಿದ ಅಂಗಾರಕನಂತೆ ಮಹಾತೇಜೋ ವಂತನಾಗಿರುವ ರಾಜಪುತ್ರನೊಡಗೂಡಿ ರಾಜದ್ವಾರವನ್ನಲಂಕರಿಸುತ್ತ ಸನ್ನಿ ಧಿಯಂ ಕಾಣಬೇಕೆಂಬ ಕುತೂಹಲದಿಂದ ಪ್ರಭುಗಳಿಗೆ ವಿಜ್ಞಾಪಿಸಿರಿ ಎಂದು ಹೇಳಿದುದರಿಂದ ಬಂದು ಚರಣಸನ್ನಿಧಿಯಲ್ಲಿ ಬಿನ್ನೈಸಿದೆವು ಎನಲು ; ಆ ರಾಯಂ ಈ ಮಾತಂ ಕೇಳಿ ಮೊದಲು ಶಬರವರ್ಮನು ಹೇಳಿದಂತೆ ಚಾಣಕ್ಯನೆಂಬ ಬ್ರಾಹ್ಮಣನು ರಾಜನಾದ ಚಂದ್ರಗುಪ್ತನೊಡಗೂಡಿ ನಂದನಿಗ್ರಹಾರ್ಥವಾಗಿ ಬಂದಿರಬೇಕು ಎಂದು ತಿಳಿದು ಮಂತ್ರಿಯ ಮುಖವಂ ನೋಡಿ—ಯಾರೋ ಪೂಜ್ಯರು ಬಂದಿರಬೇಕು ; ಯಥೋಚಿತಮರ್ಯಾದೆಯಿಂ ಕರೆದುತರುವವರಾಗಿರಿ ಎಂದು ಆ ರಾಯನಾಜ್ಞಾಪಿಸಲು ; ಮಹಾಪ್ರಸಾದವೆಂದು ಶಬರವರ್ಮನೆಂಬ ಮಂತ್ರಿಯು ಬಂದು ಸುಮಾನದಿಂದ ಹಸ್ತಲಾಘುವವನ್ನಿತ್ತು ಚಂದ್ರಗುಪ್ತಚಾಣ ಕ್ಯರಂ ಸಭಾಮಂಟಪಕ್ಕೆ ಕರೆದುತಂದನು. ಆಗ ಪರ್ವತರಾಜನು ಪೀಠದಿಂದೆದ್ದು ಬಂದು ಸುವರ್ಣಾಸನದಲ್ಲಿ ಚಾಣಕ್ಯಚಂದ್ರಗುಪ್ತರಂ ಕುಳ್ಳಿರಿಸಿ ಭೂಸುರೋ ತ್ತಮರಾದ ಚಾಣಕ್ಯರಿಗೂ ರಾಜಕುಮಾರರಿಗೂ ಸ್ವಾಗತವೇ ಎಂದು ಕುಶಲ ಪ್ರಶ್ನೆಯಂಮಾಡಿ—

ಶ್ಲೋ॥ ನಂದಂತಿ ಪಿತರಸ್ಸರ್ವೇ ನೃತ್ಯಂತಿಚಪಿತಾಮಹಾಃ ॥ ಪ್ರಪಿತಾಮಹಾ
ಶ್ಚಗಾಯಂತಿ ಶ್ರೋತ್ರಿಯೇ ಗೃಹಮಾಗತೇ ॥

ಟೀ॥ ಲೋಕದಲ್ಲಿ ಶ್ರೋತ್ರಿಯರಾದಂಥವರು ಯಾವನ ಮನೆಯನ್ನೈದು ತ್ತಿದ್ದಾರೋ ಆತನ ಪಿತೃಗಳೆಲ್ಲಾ ಸಂತೋಷಪಡುತ್ತಿದ್ದಾರೆ. ಆತನ ಪಿತಾಮಹ ರೆಲ್ಲಾ ಹರ್ಷದಿಂ ನರ್ತನವಂ ಮಾಡುತ್ತಿದ್ದಾರೆ. ಪ್ರಪಿತಾಮಹರೆಲ್ಲಾ ಪರಮಾ ಹ್ಲಾದದಿಂದ ಗಾನವನ್ನು ಮಾಡುತ್ತಿದ್ದಾರೆ ಎಂದು ಧರ್ಮಶಾಸ್ತ್ರವಿರುವುದು.

ಚಂದ್ರಸೂರ್ಯರೇಕತ್ರ ಕೂಡಿದರೆ ಆ ದಿನವು ದರ್ಶವೆಂದೆನಿಸಿ ತಮಸ್ಸಿ ನಿಂದ ಯುಕ್ತವಾಗುವುದೆಂಬುವುದು ಲೋಕಪ್ರಸಿದ್ಧವು. ಆದರೆ ಪರಸ್ಪರಾನು ಕೂಲವಾಗಿ ಏಕಕಾಲದಲ್ಲಿ ತಮೋನಿಕರವಂ ಪರಿಹರಿಸಿ ಬೆಳಗುತ್ತಿರುವ ಅಪೂರ್ವಚಂದ್ರಸೂರ್ಯರ ದರ್ಶನದಂತೆ ಕ್ಷಾತ್ರತೇಜಸ್ಸಿನಿಂದ ಆಲಂಕೃತ

ವಾದ ಬ್ರಹ್ಮತೇಜೋನಿಧಿಗಳಾದ ನಿಮ್ಮ ದರ್ಶನದಿಂದ ನಮ್ಮೆಲ್ಲರ ಮನೋಂಧ ಕಾರವೆಲ್ಲವೂ ತೊಲಗಿತು.

ಶ್ಲೋ|| ಧನ್ಯೋಸ್ಮ್ಯನುಗೃಹೀತೋಸ್ಮಿ ಕೃತಾರ್ಥೋಸ್ಮಿಧ್ರುವಂಯತಃ ||
ಗಂಗಾಪಂಗಾವಿವಭವತ್ಕೃಪಾಮಯಿಸಮಾಗತಾ ||

ಟೀ|| ಈ ದಿನ ತಮ್ಮ ಉಭಯರ ಆಗಮನದಿಂದ ನಾನು ಧನ್ಯನಾದೆನು. ಕೃತಾರ್ಥನಾದೆನು. ಮತ್ತು ಅನುಗೃಹೀತನಾದೆನು. ಮಹಾತ್ಮರಾದ ನಿಮ್ಮ ದಯೆಯು ಪಂಗುವಿನಲ್ಲಿ ಗಂಗೆ ಬಂದುಬಿದ್ದಂತೆ ನನ್ನಲ್ಲಿ ಉಂಟಾಯಿತು ಎಂದನು. ಈ ರೀತಿಯಲ್ಲಿ ಹೇಳುತ್ತಿರುವ ಪರ್ವತೇಶ್ವರನಂ ಕುರಿತು ಚಾಣಕ್ಯನು—ರಾಜಾಧಿ ರಾಜರಾದ ಪರ್ವತೇಶ್ವರರೇ, ನಾವು ಕ್ಷೇಮದಿಂದ ಬಂದೆವು. ಪ್ರಜಾಪರಿವಾರ ಸಮೇತರಾದ ನಿಮಗೆ ಕುಶಲವೇ ಎನಲು—

ಅಯ್ಯಾ, ಭೂಸುರೋತ್ತಮರೇ, ನಿಮ್ಮಂಥ ಮಹಾಪುರುಷರಾಶೀರ್ವಾದ ಬಲದಿಂದ ನಾವೆಲ್ಲರೂ ಕ್ಷೇಮಿಗಳು. ತಾವು ಬಂದ ವಿಶೇಷಪ್ರಯೋಜನವೇನು? ಎಂದು ರಾಯಂ ಕೇಳಲು; ಆ ಮಾತಿಗೆ ಚಾಣಕ್ಯನು ನ್ಯಾಯದಿಂ ಪ್ರಜಾ ಪರಿಪಾಲನಂ ಗೆಯ್ಯುತ್ತ ಯಶೋವಂತರಾಗಿರುವ ನಿಮ್ಮ ವೈಭವವಂ ನೋಡು ವುದಕ್ಕೆ ಬಂದೆವು. ಇದಲ್ಲದೆ ಏಕಾಂತಯೋಗ್ಯವಾದ ಕಾರ್ಯಗೌರವ ಮುಂಟೆಂದು ಹೇಳಲು; ಆ ರಾಯಂ ಚತುರ್ದಿಕ್ಕುಗಳಂ ನೋಡಲಾಗಿ ಆತನ ಇಂಗಿತಜ್ಞರಾದ ಜನರೆಲ್ಲರೂ ಕೆಲಸಾರಿದರು. ಆಗ ಚಾಣಕ್ಯನು—

ಅಯ್ಯಾ, ಭೂಪತಿಯೇ, ನಿನ್ನ ಪ್ರತಾಪವೆಂಬ ಸೂರ್ಯಾತಪದ ಸೆಕೆಯಂ ಸೈರಿಸಲಾರದೆ ಶತ್ರುರಾಜ್ಯಲಕ್ಷ್ಮಿಯರು ನಿನ್ನಶ್ವೇತಛತ್ರದ ನೆರಳನ್ನಾಶ್ರಯಿಸಿರು ವುದಂ ನೋಡಿ ನಂದರಾಜ್ಯಲಕ್ಷ್ಮಿಯೂ ನಿನ್ನ ಶ್ವೇತಛತ್ರಛಾಯಾಗಮನವನ್ನೆ ದುರು ನೋಡುತ್ತಿದ್ದಾಳೆ. ಅದುಕಾರಣ ಜ್ಞಾತಿಮತ್ಸರದಿಂದ ಪಿತೃಸೋದರರೆಲ್ಲ ರನ್ನೂ ಸಂಹರಿಸಿದ ಶತ್ರುಗಳಾದ ಆ ನವನಂದರು ಮಾಡುವ ಅಪಮಾನದಿಂದ ಖಿನ್ನನಾದ ಚಂದ್ರಗುಪ್ತನೆಂಬ ಈ ಅರಸಿನ ಅಭ್ಯುದಯವೆಂಬ ಬಾಲಚಂದ್ರ ಮಂಡಲಕ್ಕೆ ನಿನ್ನ ಪರಾಕ್ರಮವೆಂಬ ಸೂರ್ಯಪ್ರತಿಬಿಂಬದ ಪ್ರವೇಶವಾದ ಲ್ಲದೆ ವೃದ್ಧಿಯುಂಟಾಗದೆಂದು ತಿಳಿದು ನಿಮ್ಮ ಬಳಿಗೆ ಬಂದೆವು. ದುರಾತ್ಮಕರಾದ ನಂದರು ನಿಷ್ಕಾರಣವಾಗಿ ತಮಗೆ ಜ್ಞಾತಿಗಳಾದ ಮೌರ್ಯಕುಮಾರರಿಗೆ ಮಾಡಿದ ಹಿಂಸೆಯಂ ನೋಡಿ ನಂದರಿಗೆ ಸಮ್ಮತನಾದ ರಾಕ್ಷಸನೆಂಬ ಅಮಾತ್ಯನೊಬ್ಬನು ಹೊರತು ಮಿಕ್ಕ ಸಾಮಾಜಿಕರ ಮನಃಕುವಲಯಗಳು ನಂದರಲ್ಲಿ ನಂಬಿಕೆಯಂ

ಬಿಟ್ಟು ಚಂದ್ರಗುಪ್ತನೆಂಬ ಚಂದ್ರೋದಯಮನ್ನೇ ಅಪೇಕ್ಷಿಸುತ್ತಿರುವುವು. ಆದರಿಂದ ಚಂದ್ರಗುಪ್ತನ ಅಭಿಮತಾನುಸಾರ ಸಮಯೋಚಿತವಾಗಿ ಹುಟ್ಟಿದ ಆ ಸಾಮಾಜಿಕರೆಲ್ಲರ ಅಕ್ಷರಸಮ್ಮತಿಯಿಂ ಯುಕ್ತವಾದ ಕಾಗದವಿದು ಎಂದು ಹೇಳಿ ಅದಂ ಆ ರಾಯನ ಕೈಯಲ್ಲಿ ಕೊಟ್ಟನು. ಅದಂ ನೋಡಿ ಆ ರಾಯನು ತನ್ನ ಮನಸ್ಸಿನಲ್ಲಿ—ಮೊದಲು ಪಾಟಲೀಪುರದೊಳ್ ನಂದರ ದೆಸೆಯಿಂದ ಮೌರ್ಯರೆಲ್ಲರೂ ಹತರಾಗಿ ಚಂದ್ರಗುಪ್ತನೊಬ್ಬನು ಮಾತ್ರ ಜೀವಿಸಿಕೊಂಡಿದ್ದಾನೆ ಎಂಬುವುದರಿಂದ ನಿಷ್ಕಾರಣವಾದ ಮೌರ್ಯವಧೆಯಂ ಕಂಡು ಅಲ್ಲಿನ ಸಾಮಾಜಿಕರ ಮನಸ್ಸಿಗೆ ಅಸಮಾಧಾನವಾಗಿದ್ದೀತು. ಅವರು ಸಮಯಾಂತರದಲ್ಲಿ ಚಂದ್ರಗುಪ್ತನಿಗೆ ಸಹಾಯರಾದರೂ ಆಗಬಹುದು ಎಂದು ನಾನು ಮೊದಲು ಆಲೋಚಿಸಿದಂತೆಯೇ ಆಯಿತು. ಈ ಚಂದ್ರಗುಪ್ತನ ರೂಪಲಾವಣ್ಯಗಾಂಭೀರ್ಯಾದಿಲಕ್ಷಣಂಗಳಂ ನೋಡಿದರೆ ಪ್ರಭುಪದಕ್ಕೆ ಯೋಗ್ಯನೆಂದು ತೋರುತ್ತಿದೆ. ಈತನಿಂದಲೇ ಮೊದಲು ಸಿಂಹಪಂಜರಪರೀಕ್ಷೆಯೂ ಆಗಿದ್ದೀತು. ಕೃಶನಾಗಿಯೂ ಗಾಂಭೀರ್ಯಶಾಲಿಯಾಗಿಯೂ ಇರುವ ಈತನಿಗೆ ಪ್ರಭುಪದ ಉಂಟಾದರೆ ಇನ್ನೂ ಅಧಿಕವಾಗಿ ಪ್ರಕಾಶಿಸಾನು. "ಜ್ಞಾತಿಶ್ಚೇದನಲೇನಕಿಂ" ಎಂಬ ನೀತಿವಾಕ್ಯವು ಮೌರ್ಯನಂದರಲ್ಲಿ ನಿದರ್ಶನಕ್ಕೆ ಬಂದಂತಾಯಿತು. ಐಶ್ವರ್ಯಮತ್ತರಾದ ಅರಸುಗಳು ಜ್ಞಾತಿಗಳಲ್ಲಿ ವೈರವಂ ಮಾಡುವರೆಂಬುವುದು ಅನಾದಿಸಿದ್ಧವು. ಆದರೆ ತಮ್ಮ ಕ್ಷೇಮಾರ್ಥವಾಗಿ ಅಕಾರ್ಯವನ್ನಾದರೂ ಮಾಡುವವರುಂಟೇ? ಇಂದಿನವರೆಗೆ ನಂದರ ಐಶ್ವರ್ಯದಲ್ಲಿ ಛಿದ್ರವುಂಟಾಗಲಿಲ್ಲ. ಅಲ್ಲಿನ ಭಾಗುರಾಯಣಾದಿ ಸೇನಾಪತಿಗಳು ನಂದರಲ್ಲಿ ಅನಾದರಬುದ್ಧಿಯಿಂದ ಈ ಚಂದ್ರಗುಪ್ತನಿಗೆ ಈತನಭಿಮತವೇ ತಮ್ಮ ಅಭಿಮತವೆಂದು ಸ್ವಹಸ್ತಾಕ್ಷರಸಮ್ಮತಿಯಿಂ ಬರೆದು ಕೊಟ್ಟಿರುವುದರಿಂದ ಚಂದ್ರಗುಪ್ತನಿಗೆ ನಂದನಿಗ್ರಹವು ಅವಶ್ಯಕವಾದಂತೆ ಭಾಗುರಾಯಣಾದಿಗಳಿಗೂ ಅವಶ್ಯಕವಾದಂತಾಯಿತು. ಚಂದ್ರಗುಪ್ತನು ನಮ್ಮ ಸಹಾಯದಿಂದ ನಂದರಂ ನಿಗ್ರಹಿಸಬೇಕೆಂದು ಬಂದನೆಂಬುದಾಗಿ ಚಾಣಕ್ಯರಿಂದ ನಿಶ್ಚಯನಾಯಿತು. ಈ ಚಂದ್ರಗುಪ್ತನಿಗೆ ಭಾಗುರಾಯಣಾದಿಗಳ ಸಹಾಯವಿದ್ದ ಬಳಿಕ ಈತನ ಸಹಾಯಾರ್ಥವಾಗಿ ಹೋಗುವ ನಮಗೆ ನಂದನಿಗ್ರಹವು ಸುಲಭವಾಗಿ ಆಗುವಂತೆ ತೋರುತ್ತಿದೆ. ಇದಲ್ಲದೆ ಪೂರ್ವಮತ್ಸರಮಂ ನೆನೆದು ಲಂಪಾಕಪತಿಯು ನಮ್ಮ ಮೇಲೆ ದಂಡೆತ್ತಿ ಬರುವವನಾಗಿದ್ದಾನೆ. ಈ ಅರ್ಥಗಳೆಲ್ಲವಂ ನಮ್ಮ ಮಂತ್ರಿಗಳೊಡನೆ ಆಲೋಚಿಸಿ

ಅದರ ಗೂಢೋಪಾಂಗಳಂ ತಿಳಿದು ಕರ್ತವ್ಯವಂ ಮನಕ್ಕೆ ತಂದುಕೊಂಡು ಆ ಬಳಿಕ ಚಾಣಕ್ಯರಿಗೆ ಉತ್ತರವಂ ಹೇಳಬೇಕೆಂದು ನಿಶ್ಚಯಿಸಿ ಚಾಣಕ್ಯರ ಮುಖಮಂ ನೋಡುವಷ್ಟರಲ್ಲಿ ಮಧ್ಯಾಹ್ನ ಸೂಚಕವಾದ ಶಂಖ ಭೇರಿ ಮೊದಲಾದ ವಾದ್ಯಧ್ವನಿಗಳು ಘೋರಿಡಲು ; ಈ ಕಾರ್ಯಕ್ಕೆ ಈ ವಾದ್ಯಧ್ವನಿಗಳು ಶುಭಸೂಚಕಗಳೆಂದು ನಿಶ್ಚಯಿಸಿ—ಬ್ರಾಹ್ಮಣೋತ್ತಮರಾದ ಚಾಣಕ್ಯರೇ, ನಿಮಗೆ ಮಾಧ್ಯಾಹ್ನಿಕ ಸಮಯವು ಸನ್ನಿಹಿತವಾಯಿತು. ಆಲೋಚನಾಶೇಷವು ಮತ್ತೆ ಆದೀತು. ಸಮ್ಮಲ್ಲಿ ಕೃಪೆಮಾಡಿ ದೂರದಿಂದ ಬಂದಿರಿ. ವಿಶ್ರಮಿಸಿಕೊಳ್ಳಬಹುದೆಂದು ಹೇಳಿ ಪೀಠದಿಂದೆದ್ದು ಮಂತ್ರಿಮುಖವಂ ನೋಡಿ ಆಗ ಮೃದಂಗ ಭೇರೀ ನಿಸ್ಸಾಳ ಕಹಳ ಶಂಖ ಇವುಗಳು ದಿಕ್ತಟಂಗಳಂ ತುಂಬುವಂತೆ ಧ್ವನಿಗೆಯ್ಯುತ್ತಿರಲು ; ಸಾಮಂತನರಪತಿ ಸಂಮರ್ದಕ್ಷೋಭೆಯಿಂದ ಅವರ ಕಿರೀಟಾಂಗದಹಾರಮಣಿಗಳು ಖದ್ಯೋತಸಹಸ್ರ ಪ್ರಭೆಯಂತೆ ಬೆಳಗುತ್ತಿರಲು ; ಹೀಗೆ ಮಹಾವೈಭವದೊಡನೇ ಆಸ್ಥಾನದಿಂದ ಹೊರಟು ಚಾಣಕ್ಯಂ ಕೊಟ್ಟ ಕಾಗದಮಂ ತನಗೆ ಕುಮಾರಕನಾದ ಮಲಯಕೇತುವಿನ ಕೈಯ್ಯಲ್ಲಿತ್ತು ಮಜ್ಜನಗೃಹಾಭಿಮುಖನಾದನು. ಆಗ ರಾಜೇಂಗಿತಜ್ಞನಾದ ಶಬರವರ್ಮನೆಂಬ ಮಂತ್ರಿಯು ಹಂಸಕಾರಂಡವಿರುತಮನೋಹರಮಾಗಿ ಕಮಲಕಲ್ಹಾರಂಗಳಿಂ ಶೋಭಿಸುತ್ತ ನಿರ್ಮಲಮಧುರೋದಕಪೂರಿತವಾಗಿ ಪುರಲಕ್ಷ್ಮೀವಿಲಾಸದರ್ಪಣಂಗಳೋ ಎಂಬಂತಿರುವ ಸರೋವರಗಳಿಂ ಶೋಭಿಸುತ್ತ ತಾರಾನಿಕರದಿಂದೊಪ್ಪುವ ಗಗನಾಭೋಗದಂತೆ ಪುಷ್ಪಗುಚ್ಛಂಗಳಿಂ ಶೋಭಿಸುತ್ತ ಫಲಭಾರಂಗಳಿಂ ಬಗ್ಗಿ ಪಲ್ಲವಾಂಜಲಿಗಳಿಂ ವನಲಕ್ಷ್ಮಿಗೆ ಪುಷ್ಪೋತ್ಕರವನ್ನರ್ಪಿಸುವಂತೆ ಕಂಗೊಳಿಸುತ್ತ ವಿವಿಧಕುಸುಮಮಕರಂದಮತ್ತ ಮಧುಕರಂಗಳ ಝುಂಕಾರಯುತವಾಗಿ ಶುಕಶಾರಿಕಾನಿನಾದದಿಂ ನಂದನವನಸಂಪತ್ತನ್ನನುಕರಿಸುತ್ತಿರುವ ಪ್ರಮದವನದೊಳ್ ವಿವಿಧಮಣಿಪುತ್ರಿಕಾಶೋಭಿತವಾಗಿ ಸಕಲ ವಸ್ತುಗಳಿಂದಲೂ ಸೇವಕ ಜನಗಳಿಂದಲೂ ಸಮೃದ್ಧವಾದ ದಿವ್ಯಮಂದಿರಮಂ ಬಿಡಾರವಂ ಮಾಡಿ ಸುಮ್ಮಾನದಿಂದ ಅಲ್ಲಿ ಚಾಣಕ್ಯಚಂದ್ರಗುಪ್ತರನ್ನಿಳಿಸಿ ಕಾದುಕೊಂಡಿರಲು ; ಚಾಣಕ್ಯಂ ಚಂದ್ರಗುಪ್ತನೊಡನೆ ಅಲ್ಲಿನ ಸರೋವರದಲ್ಲಿ ಸ್ನಾನಾದಿಗಳಂ ಮಾಡಿ ಶಿಷ್ಯರಿಂ ಸಂಗ್ರಹೀತಮಾದ ಫಲಪುಷ್ಪಂಗಳಿಂ ದೇವತಾರಾಧನಂಗೆಯ್ದು ಉಚಿತಾಹಾರವಂ ನೆರವೇರಿಸಿ ವಿಶ್ರಮಿಸಿಕೊಂಡನು. ಆಗ ಆ ರಾಯನ ಅಪ್ಪಣೆಯಿಂದ ಕಳುಹಿಸಲ್ಪಟ್ಟ ದಿವ್ಯಮಾಲ್ಯಾಂಬರಾಭರಣಾನುಲೇಪನಗಳಿಂ ಚಂದ್ರಗುಪ್ತನನ್ನಲಂಕರಿಸಿ ಗಾಯಕ ವೈಣಿಕ ವೈತಾಳಿಕ ಪರಿಹಾಸಕಾದಿಜನರಿಂ

ನಾತಿದೂರಸ್ಥರಾಗಿ ಕಾದುಕೊಂಡಿರುವಂತೆ ನೇಮಿಸಿ ಚಂದ್ರಗುಪ್ತಂ ಕೊಟ್ಟ ವೀಳೆಯವಂ ಕೈಕೊಂಡು ಅವರ ಅಪ್ಪಣೆಯಿಂ ಹೋಗಿ ತಾನು ಮಾಡಿದ ಸತ್ಕಾರವಮಂ ಆ ರಾಯಂಗರುಪಿದನು.

ಆ ಮೂರನೆಯ ದಿವಸ ಪರ್ವತರಾಜಂ ತನಗೆ ಮಂತ್ರಿಗಳಾದ ಉಲೂಕ ಶಬರವರ್ಮರಂ ಏಕಾಂತದಲ್ಲಿ ಕುಳ್ಳಿರಿಸಿಕೊಂಡು—ಅಯ್ಯಾ, ಮಂತ್ರಿಗಳಿರಾ, ಈಗ ಚಂದ್ರಗುಪ್ತನು ನಂದರಲ್ಲಿ ದ್ವೇಷಮಂ ಸಾಧಿಸಲೋಸುಗ ನಮ್ಮ ಸಹಾಯವನ್ನಪೇಕ್ಷಿಸಿ ಬಂದು ಇದ್ದಾನೆಯೋ? ಅಥವಾ ಶತ್ರುರಹಿತವಾದ ಪಿತ್ರಾರ್ಜಿತರಾಜ್ಯದ ಲಾಭಾರ್ಥವಾಗಿ ಬಂದಿರುವನೋ? ಚಾಣಕ್ಯರು ಹೇಳಿದ ಭಾವಮಂ ನೋಡಿದರೆ ಈ ಎರಡು ವಿಧವಾಗಿಯೂ ತೋರುತ್ತಿದೆ. ಪ್ರಕೃತದಲ್ಲಿ ಲಂಪಾಕಾಧಿಪತಿಯು ದಂಡೆತ್ತಿ ಬರುವನೆಂಬ ವರ್ತಮಾನವೂ ತಿಳಿದು ಇದೆಯಷ್ಟೆ. ಈ ಭಾಗದಲ್ಲಿ ಗುಣದೋಷಂಗಳಂ ತಿಳಿದು ಅವಶ್ಯಕರ್ತವ್ಯಮಂ ಹೇಳುವವರಾಗಿರಿ ಎಂದು ಕೇಳಲು ; ಆ ಮಾತಿಗೆ ನಂದರ ಮಂತ್ರಿಯಾದ ರಾಕ್ಷಸನಲ್ಲಿ ವಿಶ್ವಾಸಮಂ ಬಳಸಿ ಇದ್ದ ಉಲೂಕನೆಂಬ ವೃದ್ಧಮಂತ್ರಿಯು ಮೊದಲು—

ಜೀಯಾ, ಪಾಟಲೀಪುರದ ಅರಸುಗಳಿಗೂ ನಮಗೂ ದ್ವೇಷವೆಂಬುವುದು ಎಂದಿಗೂ ಇಲ್ಲ. ಈಗ ಈ ಚಂದ್ರಗುಪ್ತನ ದೆಸೆಯಿಂದ ಅವರೊಡನೆ ಹಗೆಯಂ ಸಂಪಾದಿಸಿಕೊಳ್ಳಬೇಕಾಗುತ್ತಿದೆ. ಅವರು ಸರ್ವಭಾಗದಲ್ಲಿಯೂ ಸಂಪನ್ನರೆಂಬುವುದು ಚಿತ್ತಕ್ಕೆ ವೇದ್ಯವಾಗಿಯೇ ಇದೆಯಷ್ಟೆ! ಸ್ವಯಂ ಶೂರರೂ ಶೂರಪರಿವಾರವುಳ್ಳವರೂ ಬಹುದೇಶದ ಸಾಮಂತರಾಜರ ಕೈ ಕಪ್ಪಂಗಳಂ ಕೈಕೊಳ್ಳುವವರೂ ಪ್ರಜಾರಂಜಕರೂ ವಿತರಣಶಾಲಿಗಳೂ ಆದುದರಿಂದ ಅವರು ಯುದ್ಧೋಪಾಯದಿಂ ಸಾಧ್ಯರಾಗರು. ದಕ್ಷನೂ ಸ್ವಾಮಿಭಕ್ತನೂ ಆಗಿರುವ ರಾಕ್ಷಸನು ಮಂತ್ರಿಯಾಗಿ ಸಕಲಭಾರಮಂ ವಹಿಸಿರುವುದರಿಂದ ಅವರಲ್ಲಿ ಭೇದೋಪಾಯವೂ ಘಟಿಸದು. ಸಾಮದಾನಗಳಿಗೆ ನಿಮಿತ್ತವೇ ಇಲ್ಲ. ರಾಕ್ಷಸನು ನಿಮಗೆ ಕೃತೋಪಕಾರನಾಗಿರುವುದರಿಂದ ಆ ಉಪಕಾರಸ್ಮರಣೆಯು ನಿಮಗಿರಬೇಕು. ಮತ್ತು ಮಹಾ ಸಾಹಸಮಂ ಗೈದು ದ್ರವ್ಯವ್ಯಯ ಜನವ್ಯಯಂಗಳಂ ಮಾಡಿ ಜಯಮಂ ಸಂಪಾದಿಸಿದಾಗ್ಯೂ ಚಂದ್ರಗುಪ್ತನು ಶೂದ್ರಸ್ತ್ರೀಪೌತ್ರನಾದುದರಿಂದ ಪ್ರಜಾಸಮ್ಮತವಾದ ಪ್ರಭುಪದಕ್ಕೆ ಯೋಗ್ಯನಲ್ಲವು. ಯುದ್ಧಪರ್ಯವಸಾನದಲ್ಲಿ ಜಯಲಾಭವೆಂತಿರುವುದೋ? ಆದರಿಂದ ಇಲಿಯಂ ಹಿಡಿಯುವುದಕ್ಕೆ ಬೆಟ್ಟವನ್ನಗುಳ್ವಂತೆ ಮಾಡದೆ ಮಿತ್ರತ್ವವನ್ನಂಗೀಕರಿಸಿ ರಾಕ್ಷಸನ ಮುಖದಿಂದಲೇ

ಚಂದ್ರಗುಪ್ತನಂದರಿಗಿರುವ ವೈರಮಂ ಪರಿಹರಿಸಿ ಚಂದ್ರಗುಪ್ತನಲ್ಲಿ ನಮಗೆ ಪೂರ್ಣಾಭಿಮಾನಮುಂಟೆಂಬರ್ಥಮಂ ಪ್ರಕಟಂಗೆಯ್ದು ಈತನಿಗೆ ಅವರ ದೆಸೆ ಯಿಂದ ಯೋಗ್ಯತಾನುಸಾರವಾಗಿ ಜೀವನಮಂ ಕಲ್ಪಿಸಿದರೆ ಎಲ್ಲವೂ ಕ್ಷೇಮವೇ ಸರಿ. ಮುಂದೆ ಈ ಯರ್ಥಮಂ ಮಾಡಿಸಬಹುದು. ಈಗ ಪೂರ್ವಮಾತ್ಸರ್ಯಮಂ ನೆನದು ನಮ್ಮ ಮೇಲೆ ದಂಡೆತ್ತಿಬರುವ ಲಂಪಾಕಪತಿಯ ಗರ್ವಮಂ ಭಂಗಪಡಿ ಸುವುದಕ್ಕೆ ಮುಂಚಿತವಾಗಿ ಈ ಪಾಟಲೀಪುರದ ಕಾರ್ಯಭಾಗವಿಷಯವಾದ ಶಬ್ದವನ್ನೇ ಆಡಕೂಡದು ಎಂದು ಹೇಳಿದನು. ಅದಂ ಕೇಳಿ ಶಬರವರ್ಮನೆಂಬ ಮಂತ್ರಿಯು—

ಜೀಯಾ, ರಾಜಬೀಜೋತ್ಪನ್ನರಾದ ಅರಸುಗಳಿಗೆ ಈ ಕಲಿಯುಗದಲ್ಲಿ ಬಹುದೇಶಾಧಿಪತ್ಯಮುಂಟಾಗಿರುವುದು. ಶುದ್ಧಕ್ಷತ್ರಿಯಸಂತತಿಯು ಶಿಶಿರಾಂತದ ವೃಕ್ಷಪರ್ಣದಂತೆ ವಿರಳವಾಗಿರುವುದು. ಮುಂದೆ ಅದೂ ಇರುವಂತೆ ತೋರು ವುದಿಲ್ಲ. ದಕ್ಷನಾಗಿಯೂ ಶೂರನಾಗಿಯೂ ನ್ಯಾಯದಿಂ ಪ್ರಜಾಪರಿಪಾಲನಂ ಗೆಯ್ಯುವ ಅರಸು ಜಘನ್ಯನಾದವನಾದರೂ ಅವನು ಹೊರತು ಅವಲಂಬನ ವಿಲ್ಲದಿದ್ದರೆ ಪ್ರಜೆಗಳೆಲ್ಲರೂ ಅವನನ್ನೇ ಅನುವರ್ತಿಸುವರು. ಅಹಂಕಾರ ಯುಕ್ತನಾಗಿ ನಿರ್ವ್ಯಾಜದಿಂ ಜನರಂ ದಂಡಿಸಿ ದ್ವೇಷಮಂ ಸಂಪಾದಿಸಿಕೊಳ್ಳುತ್ತ ಪ್ರಜೆಗಳ ದ್ರವ್ಯಮಂ ಅಪಹರಿಸುತ್ತ ಇರುವ ಅರಸು ಕುಲೀನನಾದರೂ ಅವನಿಗೆ ಸರ್ವ ಜನರೂ ಅಶ್ರೇಯಸ್ಸನ್ನೇ ಅಪೇಕ್ಷಿಸುವರು.

ಶ್ಲೋ॥ ಚಂಚತ್ಪಾರ್ವಣಶರ್ವರೀಪರಿಬೃಢಪ್ರೌಢಪ್ರಭಾಭಾಸುರಂ ।
ಮುಕ್ತಾಜಾಲಮಪೀಹ ನಿರ್ಗುಣತಯಾಕಂಠೇನಸಂಧಾರ್ಯತೆ ॥
ವೀಣಾಪ್ಯೆಕಗುಣೇನರಾಜರಮಣೀನೀರಂಧ್ರಪೀನಸ್ತನ ।
ದ್ವಂದ್ವೇಖೇಲತಿಶುಷ್ಕದಾರುರುಚಿರಾನಿಸ್ಸಾರತುಂಬೀಫಲಾ ॥

ಟೀ॥ ಪ್ರಕಾಶಮಾನವಾಗಿರುವ ಪೂರ್ಣಿಮಾಚಂದ್ರನ ಮನೋಹರವಾದ ಬೆಳುದಿಂಗಳೋಪಾದಿಯಲ್ಲಿ ಶೋಭಾಯಮಾನವಾಗಿರುವಂಥ ಮುತ್ತುಗಳ ಸಮೂಹವೂ ಕೂಡ ನಿರ್ಗುಣವಾದುದೇಯಾದರೆ ಯಾರಿಂದಲೂ ಕತ್ತಿನಲ್ಲಿ ಧರಿ ಸುವುದಕ್ಕೆ ಯೋಗ್ಯವಾಗುವುದಿಲ್ಲ. ಒಣಗಿದ ಮರದಿಂದ ಮಾಡಲ್ಪಟ್ಟು ಒಣಗಿದ ಹಾಲುಸೋರೆಯ ಬುರುಡೆಯಿಂದ ಕೂಡಿದಂಥದಾದಾಗ್ಯೂ ವೀಣೆಯು ಗುಣ ಯುಕ್ತವಾಗಿರುವುದರಿಂದ ರಾಜರಮಣಿಯರ ಪೃಥುವಾದ ಕುಚಸ್ಥಳಗಳಲ್ಲಿ ಕ್ರೀಡಿಸುತ್ತಿದೆ ಎಂದು ನೀತಿಶಾಸ್ತ್ರಮುಂಟು.

ಅದುಕಾರಣ ಸಂಗ್ರಹಕ್ಕೆ ಗುಣಗಳು ಮುಖ್ಯವೇ ಹೊರತು ಕುಲೀನತ್ವವು ಮುಖ್ಯವಲ್ಲ. ನಂದರು ಮತ್ತರಾಗಿ ಪರದೇಶಗಳನ್ನೊತ್ತಿಕೊಳ್ಳುತ್ತ ಬಹು ದೇಶಾಧಿಪತಿಗಳಿಂದ ಪಗದಿಯಂ ತೆಗೆದುಕೊಳ್ಳುತ್ತ ಸಾರ್ವಭೌಮರೆಂದು ತಾವು ಹೊಗಳಿಸಿಕೊಳ್ಳುತ್ತ ಹೆಚ್ಚಿ ಬರುತ್ತಿದ್ದಾರೆ. ಕೇಳಿದರೆ ಸ್ವಲ್ಪಕಾರ್ಯಕ್ಕೆ ಅನರ್ಥಮುಂಟಾದೀತೆಂದು ಉಪೇಕ್ಷೆಯಿಂದ ಇರುವುದಾಗಿದೆ. ಈಗ ಇದೊಂದು ನಮಗೆ ಮುಖ್ಯವಾದ ಅವಕಾಶವು. ನಂದರಲ್ಲಿ ಈ ಛಿದ್ರಮುಂಟಾದ ಸಮಯದಲ್ಲಿಯೂ ನಾವು ಉಪೇಕ್ಷಿಸಿದರೆ ನಮಗೆ ಕಾರ್ಯಾಂತರವು ಒದಗಿದ ಕಾಲದೊಳ್ ಅವರೇ ನಮ್ಮಂ ಕಲಹಕ್ಕೆ ಕರೆದಾರು. ಆಗ ನಾವು ಬಹು ಶ್ರಮಪಡಬೇಕಾಗುವುದು. ಅದಕ್ಕೆ ಈಗ ಪ್ರತ್ಯಕ್ಷದಿಂದ ನಮಗೆ ನಿದರ್ಶನವಾಗಿರುವುದೇನಂದರೆ—ನಾವು ಸ್ವಲ್ಪ ಉಪೇಕ್ಷೆಮಾಡಿದ ಕಾರಣ ಲಂಪಾಕಪತಿಯು ನಮ್ಮ ಮೇಲೆ ದಂಡೆತ್ತಿಬರುವವನಾಗಿರ್ಪಂ. ಈಗ ಆತನ ನಿಗ್ರಹಕ್ಕೆ ಎಷ್ಟು ಶ್ರಮಪಡಬೇಕಾಗಿ ಬಂದಿದೆ! ಅದುಕಾರಣ ಈ ರಂಧ್ರವು ಹುಟ್ಟಿದ ವೇಳೆಯಲ್ಲಿಯೇ ಶರಣಾಗತನಾಗಿ ಬಂದಿರುವ ಚಂದ್ರಗುಪ್ತಂಗೆ ಸಹಾಯವಾಗಿ ಪೋದರೆ ದುರಹಂಕಾರಿಗಳಾದ ನವನಂದರ ನಿಗ್ರಹವು ನಮಗೆ ನಿರಾಯಾಸವಾಗಿ ಘಟಿಸಿ ಕೀರ್ತಿಯುಂಟಾಗುವುದು. ಚಂದ್ರಗುಪ್ತನು ಗುಣಾಢ್ಯನಾಗಿರುವ ಕಾರಣ ಕೃತಜ್ಞನಾಗಿ ತಮ್ಮ ಉಪಕಾರಸ್ಮರಣೆಯಂ ಮಾಡಿಕೊಂಡು ತಮ್ಮ ಆಜ್ಞಾನುವರ್ತಿಯಾಗಿರ್ಪಂ.

ಶ್ಲೋ ॥ ಅಗ್ನಿರ್ವಿಪ್ರೋಯಮೋರಾಜಾ ಸಮುದ್ರಮುದರಂಗೃಹಂ ॥
ಸಪ್ತೈತಾನಿನಪೂರ್ಯಂತೆ ಪೂರ್ಯಮಾಣಾಃಪುನಃಪುನಃ ॥

ಟೀ ॥ ಬೆಂಕಿಯು ಬ್ರಾಹ್ಮಣನು ದೊರೆಯು ಯಮನು ಸಮುದ್ರವು ಹೊಟ್ಟೆಯು ಮನೆಯು ಇವು ಏಳೂ ಎಷ್ಟಾದಾಗ್ಯೂ ತುಂಬದೆ ಮತ್ತೆ ಮತ್ತೆ ಅಪೇಕ್ಷಿಸುತ್ತಿರುವುವು ಎಂದು ನೀತಿಶಾಸ್ತ್ರಮುಂಟು.

ಅದುಕಾರಣ ಈ ನವನಂದರು ಎಷ್ಟೆಷ್ಟು ದೇಶಗಳನ್ನು ಜಯಿಸಿದಾಗ್ಯೂ ಇನ್ನೂ ಮುಂದುಮುಂದಕ್ಕೆ ದೇಶಗಳನ್ನು ಗೆಲ್ಲಬೇಕೆಂಬ ಅಪೇಕ್ಷೆಯಿಂದಲೇ ಇರುವರು. ಮಾನಿಗಳೂ ಶೂರರೂ ಆದ ಅರಸುಗಳು ಅನ್ಯರಾಜರ ಅಭಿವೃದ್ಧಿಯಂ ಸೈರಿಸುವರೋ? ಇದೆಲ್ಲಾ ಪಾದಕ್ಕೆ ವೇದ್ಯವಾಗಿಯೇ ಇದೆ. ಆದರೆ ಅವರ ಮಂತ್ರಿಯಾದ ರಾಕ್ಷಸನ ಭೇದಕೌಶಲ್ಯವು ನಮ್ಮ ಜನದಲ್ಲಿ ಸ್ವಲ್ಪಸ್ವಲ್ಪವಾಗಿ ಪ್ರವೇಶಿಸಿದಂತೆ ತೋರುತ್ತಿದೆ. ಆತನು ಈ ದೇಶಕ್ಕೆ ಮುಳ್ಳಿನಂತಿರುವ

ದಶಾರ್ಣಾಧಿಪತಿಶೂರಸೇನಾಧಿಪತಿಗಳಿಂದ ಮೊದಲು ಬಂದಿದ್ದ ಕಲಹಶಮನವಂ ಮಾಡಿ ತಮ್ಮ ಸನ್ನಿಧಿಗೆ ಮಿತ್ರನೆಂಬ ಖ್ಯಾತಿಗೆ ಪಾತ್ರನಾಗಿ ಇದ್ದವನಾದರೂ ಆತನು ಭೃತ್ಯಪದಕ್ಕೆ ಯೋಗ್ಯನಾದುದರಿಂದ ಸ್ವಾಮಿಗಳಾದ ನಂದರ ಮೂಲ ಕವಾಗಿ ಉಂಟಾಗುವ ಮಹಾಲಾಭವಂ ಇವನಂ ನೋಡಿ ಬಿಡಕೂಡದು. ಹಗೆ ಯಾದ ಭೃತ್ಯನ ನಿಮಿತ್ತವಾಗಿ ಸ್ವಾಮಿಯಾದವನಲ್ಲಿರುವ ಸಖ್ಯವಂ ಬಿಡಕೂ ಡದು. ಮತ್ತು ಮೌರ್ಯರಲ್ಲಿ ಅನುರಕ್ತರಾಗಿರ್ದ ಸೇನಾಪತಿಗಳು ಆತನ ಪುತ್ರನಾದ ಈ ಚಂದ್ರಗುಪ್ತನಲ್ಲಿ ಅಭಿಮಾನವಂ ಇಟ್ಟಿದ್ದಾರು. ಅದರಿಂದ ನಂದರು ನಮ್ಮ ಭೇದೋಪಾಯಗಳಿಗೆ ಸಾಧ್ಯರಾದಾರು. ಅದಂತಿರಲಿ. ಪ್ರಕೃತ ದಲ್ಲಿ ಬದಗಿರುವ ಲಂಪಾಕಪತಿಯ ಯುದ್ಧೋತ್ಸಾಹಭಂಗವಂ ಮಾಡಿ ಆ ಮೇಲೆ ನಂದರಲ್ಲಿ ನಮ್ಮ ಶೌರ್ಯವಂ ಪ್ರಕಟ ಮಾಡಿದರೆ ಶ್ರಮವಿಲ್ಲದೆ ಗೌಡದೇಶಗಳು ಸಾಧ್ಯವಾದಾವು. ಈ ಚಂದ್ರಗುಪ್ತನ ಕಾರ್ಯವಂ ನಾವು ನಿರ್ವಹಿಸಿದರೆ ಈ ಉಪಕಾರಕ್ಕೆ ಆತನ ದೆಸೆಯಿಂದ ಪ್ರತ್ಯುಪಕಾರವಾಗುವುದರಲ್ಲಿ ಲೇಶವೂ ಸಂಶ ಯವಿಲ್ಲ. ಅದರಿಂ ನಂದಸಾಮಂತರೆಲ್ಲರೂ ನಮಗೆ ತಗ್ಗಿ ನಡೆಯುವರು. ಇದರಿಂ ಶ್ರೇಯಸ್ಸೂ ಬಹಳವಾಗಿ ಉಂಟಾದೀತು ಎಂದು ಹೇಳಿದನು. ಆ ಮಾತಿಂದ ಪರ್ವತರಾಜನಿಗೆ ನಂದರ ಮೇಲೆ ಕೋಪ ಹುಟ್ಟಿ—

ಅಯ್ಯಾ, ಶಬರವರ್ಮನೇ, ನೀನು ಹೇಳಿದುದು ಯಥಾರ್ಥವು. ಮುಂದಕ್ಕೆ ಇದು ಕರ್ತವ್ಯವೆಂದು ತೋರುತ್ತಿದೆ. ಸದ್ಯಕ್ಕೆ ದಂಡೆತ್ತಿಬರುವ ಲಂಪಾಕಪತಿಯ ಕಾರ್ಯೋದ್ಯೋಗಭಂಗಕ್ಕಾಗಿ ಯತ್ನವಂ ಮಾಡಿ ಶರಾವತೀನದಿಯ ತೀರದಲ್ಲಿ ನಮ್ಮ ಸೇನೆಯು ಹೋಗಿ ಇಳಿಯುವಂತೆ ನಾಳೆ ಬುಧವಾರದ ದಿವಸ ನೇಮಿಸು ವವನಾಗು ಎಂದು ಶಬರವರ್ಮಂಗೆ ಹೇಳಿ ರಾಯನು ಅಂತಃಪುರಕ್ಕೆ ತೆರಳಿದನು.

ಮತ್ತೆ ಮರುದಿವಸ ರಾಯನು ಚಾಣಕ್ಯನಿಗೆ ನಂದರ ಮೇಲೆ ಕೋಪವೂ ಚಂದ್ರಗುಪ್ತನಲ್ಲಿ ಅನುಗ್ರಹವೂ ಉಂಟಾಗುವುದಕ್ಕೆ ಕಾರಣವಂ ಆತನ ಮುಖ ವಚನದಿಂದಲೇ ಕೇಳಬೇಕೆಂದು ದೂತನಂ ಕರೆದು—ನೀನು ಚಾಣಕ್ಯರ ಬಳಿಗೆ ಹೋಗಿ ತಮ್ಮ ಸಮಯವೇನೆಂದು ತಿಳಿದು ಬರಹೇಳಿದರೆಂದೂ ಅರಸುಗಳು ತಮ್ಮಂ ನೋಡಬೇಕೆಂಬ ಕುತೂಹಲದಿಂದಿದ್ದಾರೆಂದೂ ಹೇಳಿ ಬಂದರೆ ಕರೆದು ಕೊಂಡು ಬರುವವನಾಗು ಎನಲು; ಆ ಮಾತಿಗೆ, ಬುದ್ಧೀ, ಅಪ್ಪಣೆ, ಎಂದು ದೂತ ನು ಹೋಗಿ ರಾಯನು ಹೇಳಿದ ವಾಕ್ಯವಂ ಹೇಳಲು ; ಚಾಣಕ್ಯನು ಅದಂ ಕೇಳಿ ನಾವೇ ಬರುತ್ತಿದ್ದೇವೆ ಎಂದು ಹೇಳಿ ರಾಜಸಭೆಗೆ ಬಂದು ಆ ರಾಯನಂ ಕಂಡು

"ಶ್ರೇಯೋಸ್ತು" ಎಂದು ಉಚಿತಪ್ರಕಾರದಿಂ ಕುಳಿತಿರಲಾಗಿ ರಾಯನು ಚಾಣಕ್ಯ ರನ ನೋಡಿ—ಭೂಸುರೋತ್ತಮರೇ, ಚಂದ್ರಗುಪ್ತನು ನಿಮ್ಮನ್ನಾಶ್ರಯಿಸಿ ಎಷ್ಟ ದಿನಗಳಾದುವು? ಎನಲು; ಚಾಣಕ್ಯನು—ಅಯ್ಯಾ, ರಾಯನೇ, ಈತನನ್ನು ನಾವು ಪರೀಕ್ಷಿಸಿ ಸ್ವಲ್ಪ ಕಾಲವಾದಾಗ್ಯೂ ನಂದರು ನಮಗೆ ಮಾಡಿದ ಅವಮಾನಕ್ಕಾಗಿ ಅವರಲ್ಲಿ ದ್ವೇಷವು ಆ ಜನ್ಮಸಿದ್ಧವಾದ ಗಜಸಿಂಹಗಳ ವೈರದಂತೆ ಪ್ರತಿಕ್ಷಣವೂ ಹೆಚ್ಚಿ ಬರುತ್ತಿರುವುದು. ನಾವು ಕಾರ್ಯಾರ್ಥವಾಗಿ ಬಂದು ನಿನ್ನನ್ನು ಆಶ್ರಯಿ ಸಿದಂತೆ ಈ ಚಂದ್ರಗುಪ್ತನು ತನ್ನ ಕಾರ್ಯಕ್ಕೆ ಸಾಧನವಾದಾನೆಂದು ನನ್ನನ್ನು ಅನುವರ್ತಿಸಿದನು. ನಂದರಲ್ಲಿ ನಮಗೆ ಕೋಪವುಂಟಾಗುವುದಕ್ಕೆ ಕಾರಣವೇ ನಂದರೆ—ಅದನ್ನು ಹೇಳುವೆನು ಕೇಳು. ಲೋಕದಲ್ಲಿ ಕೋಪವೆಂಬುವುದು ಲೌಕಿ ಕವ್ಯವಹಾರಕ್ಕೆ ಸಾಧನವೇ ಹೊರತು ನಿರರ್ಥಕವಲ್ಲ. ಕೋಪವಿಲ್ಲದವನು ಹೆಣ್ಣು ಕುರಿಯಂತೆ ಲೋಕದ ಜನಕ್ಕೆ ಸುಲಭನಾದಾನು. ರಾಜನು ಕೋಪಿಷ್ಠನಾ ಗಿದ್ದಲ್ಲಿ ಪ್ರಜೆಗಳು ರಾಜಾಜ್ಞೆಯಂ ಮೀರಿದರೆ ಪ್ರಭುವಿನ ಕೋಪಕ್ಕೆ ಪಾತ್ರ ರಾಗಿ ದಂಡನೆಗೆ ಯೋಗ್ಯರಾದೇವೆಂಬ ಭೀತಿಯಿಂದ ತಗ್ಗಿ ನಡೆಯುವರು. ಹಾಗೆ ಮನೆಯ ಯಜಮಾನನು ಕೋಪಿಷ್ಠನಾಗಿದ್ದರೆ ಪತ್ನೀಪುತ್ರರು ಭಯದಿಂದ ನ್ಯಾಯವಾಗಿ ನಡೆದುಕೊಳ್ಳುವರು. ತಪೋಧನರಿಗೆ ಕೋಪವು ವಿಘ್ನಕಾರಿಯ ಲ್ಲವೇ? ಎಂದರೆ—ಕೋಪವು ಎರಡು ತೆರನಾಗಿಹುದು. ಅದರಲ್ಲಿ ವಿಮರ್ಶಾ ಪೂರ್ವಕವಾಗಿ ಮಾಡಿದ ಕೋಪವು ಯಶಸ್ಕರವು. ಕೋಪಪೂರ್ವಕವಾಗಿ ಮಾಡಿದ ವಿಮರ್ಶೆಯು ಹಾನಿಕರವು. ಕೋಪಪೂರ್ವಕವಾದ ವಿಮರ್ಶೆಯುಳ್ಳ ವನು ಪ್ರಭುಪದಕ್ಕೆ ಯೋಗ್ಯನಲ್ಲ. ಅವನಿಗೆ ಹಾನಿಯುಂಟಾಗುವುದು ಯಥಾ ರ್ಥವು. ಈ ಯರ್ಥದಲ್ಲಿ ರಾಮರಾವಣರೇ ನಿದರ್ಶನವು. ಬ್ರಾಹ್ಮಣನು ಕೋಪ ದಿಂದಾಗತಕ್ಕ ಪ್ರಯೋಜನಮಂ ತಪೋವ್ಯಯದಿಂ ಮಾಡಿಕೊಂಡರೆ ಆ ಕೋಪ ವು ಪರಲೋಕವಿಘ್ನವಾಗುವುದು. ಪೌರುಷದಿಂ ಮಾಡಿಕೊಂಡರೆ ಆ ಕೋಪವು ಸದ್ಗತಿಗೆ ವಿಘ್ನವಲ್ಲವು. ಪ್ರಕೃತವೇನಂದರೆ—ನಂದರ ಮೇಲೆ ನಾನು ಮಾಡಿದ ಕೋಪವು ವಿಮರ್ಶಾಪೂರ್ವಕಮಾದುದರಿಂದ ತಪೋವ್ಯಯವಾಗದೆ ಪೌರುಷಕ್ಕೆ ಪ್ರಯೋಜನವಾದೀತು. ನಂದರು ನಿರಪರಾಧಿಯೂ ಅಭ್ಯಾಗತನೂ ಆಗಿ ಯೋಗ್ಯ ವಾದ ಸ್ಥಾನದಲ್ಲಿ ಕುಳಿತಿದ್ದ ನನ್ನ ಮೇಲೆ ವಿಮರ್ಶೆಯಿಲ್ಲದೆ ಕೋಪಿಸಿ ಅಪಮಾ ನಮಂ ಮಾಡಿದುದರಿಂದ ಅದರ ಫಲವನ್ನನುಭವಿಸಿಯಾರು. ಅದರಿಂದ ಚಂದ್ರಗು ಪ್ತನಿಗಿಂತಲೂ ನನಗೆ ನಂದನಿಗ್ರಹವೇ ಅವಶ್ಯಕರ್ತವ್ಯವು. ನಂದರು ಎಲ್ಲದರ

ಲ್ಲಿಯೂ ಸಂಪನ್ನರಾದವರಾದಾಗ್ಯೂ ನನಗೆ ಅವರ ನಿಗ್ರಹವು ಈಷತ್ಕರವು. ಆದರೂ ತಪೋಲೇಶಲೋಪಶಂಕೆಯಿಂದ ಬುದ್ಧಿಪೌರುಷಬಲಗಳಲ್ಲಿ ಸಾಧಿಸ ಬೇಕಾಗಿ ಪರರಾಜರ ಸೇನೆಯನ್ನಪೇಕ್ಷಿಸಬೇಕಾಯಿತು. ನೀನು ಶೂರನಾಗಿ ಮನಸ್ವಿಯಾದುದರಿಂದ ನನ್ನ ತಪೋಹಾನಿಯಾಗದಂತೆಯೂ ನನಗೆ ಶತ್ರುಸಂಹಾರಕನು ಭೀತರಕ್ಷಕನು ಎಂಬ ಕೀರ್ತಿಯು ಬರುವಂತೆಯೂ ನಂದರಾಜ್ಯಕ್ಕೆ ಚಂದ್ರಗುಪ್ತನಂ ಅಧಿಪತಿಯಂ ಮಾಡುವಂತೆಯೂ ಸಹಾಯಮಂ ಕೊಟ್ಟು ನನ್ನ ಪ್ರತಿಜ್ಞೆಗೆ ಸಾಫಲ್ಯವನ್ನುಂಟುಮಾಡಿಯಾನೆಂದು ನಿನ್ನಂ ಕುರಿತು ಬಂದೆವು. ನಾನು ಯೋಚಿಸಿದ ಕಾರ್ಯಕ್ಕೆ ಪರರಾಜರ ಸೇನೆಯು ಗೌಡದೇಶದಲ್ಲಿ ಹೋಗಿ ನಿಂತಲ್ಲದೆ ಮುಂದೇನೂ ಯತ್ನವಾಗಲಾರದು. ನಿನಗೆ ಯುದ್ಧಕುತೂಹಲವಿದ್ದರೆ ನಿನ್ನ ಶೌರ್ಯವು ಪರರಾಜರ ಗುಂಡಿಗೆಗಳಂ ತಲ್ಲಣಗೊಳಿಸುವಂತೆ ಸೇನಾಸಮೇತನಾಗಿ ನೀನೇ ತೆರಳಬಹುದು. ಜನರಂ ಯುದ್ಧಮುಖದಿಂದ ಯಾಕೆ ಶ್ರಮಪಡಿಸಬೇಕೆಂಬುವುದುಂಟಾದರೆ ನಿಮಿತ್ತಮಾತ್ರಕ್ಕೆ ನಿನ್ನ ಸೇನೆಯಂ ಕಳುಹಿಸಿಕೊಟ್ಟಲ್ಲಿ ಆಹಾರಮಂ ತೋರಿಸಿ ಮಡುವುಗಳ ದೆಸೆಯಿಂದ ಮಹಾಮತ್ಸ್ಯಂಗಳಂ ಹೊರಗೆ ತೆಗೆಯುವಂತೆ ಪರರಾಜರ ಸೇನೆಯಂ ದೂರದಲ್ಲಿಯೇ ತೋರಿಸಿ, ಉಪಾಯಾಂತರದಿಂದ ನಂದರಂ ನಿಗ್ರಹಿಸುವೆನು. ಆ ಬಳಿಕ ಎಲ್ಲವೂ ನೀನು ಹೇಳಿದಂತಾಗುವುದು. ಈಗ ವರ್ಷಾಕಾಲ ಕಳೆದು ಶರತ್ಕಾಲ ನಡೆಯುವುದರಿಂದ ಇದು ಅರಸುಗಳಿಗೆ ದಂಡಯಾತ್ರಾಸಮಯವು ಎಂದು ಹೇಳುತ್ತಿದ್ದನು. ಆ ವಾಕ್ಯಮಂ ಕೇಳಿ ಪರ್ವತರಾಜನು—

ಅಯ್ಯಾ, ಬ್ರಾಹ್ಮಣೋತ್ತಮರೇ, ನೀವು ಹೇಳಿದುದೆಲ್ಲವೂ ವಿಹಿತವು. ಶರಣಾಗತರಂ ರಕ್ಷಿಸುವುದೂ ದುಷ್ಟರಂ ನಿಗ್ರಹಿಸುವುದೂ ದಕ್ಷರಾದವರಿಗೆ ಶಿಷ್ಟಾಚಾರಪದ್ಧತಿಯು. ಈಗಲೇ ನಿಮಗಭಿಮತವಾದ ಕಾರ್ಯಮಂ ಮಾಡಿಕೊಡುವುದಕ್ಕೆ ಇದು ಸಮಯವಲ್ಲ. ಅದು ಯಾಕೆಂದರೆ ಪೂರ್ವದಲ್ಲಿ ನಮ್ಮ ಹಿರಿಯರು ತಾವು ಮಾಡುವ ದಿಗ್ವಿಜಯಸಮಯದಲ್ಲಿ ಎದುರಾದ ಶತ್ರುಗಳಂ ನಿಗ್ರಹಿಸಿ ಶರಣಾಗತರಂ ಸಂರಕ್ಷಿಸುತ್ತ ಬರುತ್ತಿರುವಲ್ಲಿ ಲಂಪಾಕದೇಶಾಧಿಪತಿಯು ಯುದ್ಧಕುತೂಹಲದಿಂದ ನಮ್ಮವರಿಗೆ ಎದುರಾಗಿ ಯುದ್ಧಮಂ ಮಾಡಿ ನಮ್ಮವರ ಖಡ್ಗಪ್ರಹಾರದಿಂದ ಪಂಚತ್ವವನ್ನೈದಲು ; ಅವನ ಸೇನೆಯೂ ಅವನಂತೆ ಆಗಲು ಅದಂ ನೋಡಿ ಆತನ ಪುತ್ರನು ಭೀತಿಯಿಂದ ವಿದೇಶಗತನಾಗಿ ಹೋಗಿದ್ದು ಬಹುದಿವಸಗಳ ಮೇಲೆ ನಗ್ನದೇಶಾಧಿಪತಿಯೊಡನೆ ಸಖ್ಯಮಂ

ಬೆಳಸಿ ಅವನ ಸಹಾಯದಿಂದ ತನ್ನ ರಾಜ್ಯಮಂ ಸಾಧಿಸಿಕೊಂಡು ಧನಿಕನಾಗಿ ನಮ್ಮಲ್ಲಿ ಪೂರ್ವವೈರಮಂ ನೆನೆದು ಈಗ ನಮ್ಮ ಮೇಲೆ ದಂಡೆತ್ತಿ ಬರುತ್ತಿರುವು ದರಿಂದ ಅವನ ನಿಗ್ರಹವು ನಮಗೆ ಆವಶ್ಯಕವಾಗಿದೆ. ಇದನ್ನುಪೇಕ್ಷಿಸಿ ಕಾರ್ಯಾಂ ತರೋದ್ಯೋಗಮಂ ಮಾಡಿದರೆ ಸ್ಥಾನಭ್ರಷ್ಟನಾದ ತ್ರಿಶಂಕುರಾಜನಿಗಾದಂತೆ ಪಾರ್ಷ್ಣಿಗ್ರಾಹಿಯಾದ ಶತ್ರುವಿನಿಂದ ಸ್ಥಾನಚ್ಯುತಿಯುಂಟಾದೀತು. ಅದುಕಾರಣ ಈಗ ಒದಗಿರುವ ಕಾರ್ಯಮಂ ಯುದ್ಧದಿಂ ನಿರ್ವಹಿಸಿಕೊಂಡು ಆ ಬಳಿಕ ನಿಮ್ಮ ಕಾರ್ಯಕ್ಕೆ ಅನುಕೂಲನಾಗುವೆನು. ಅಲ್ಲಿನ ಪರಿಯಂತರವೂ ಕಾರ್ಯ ಗೌರವದಲ್ಲಿ ದೃಷ್ಟಿ ಇಟ್ಟು ನಮ್ಮಲ್ಲಿ ಕೃಪೆ ಮಾಡಿ ನೀವು ಇಲ್ಲಿಯೇ ಇರಬೇಕು ಎಂದು ಹೇಳಲು ; ಆ ರಾಯನ ವಾಕ್ಯಮಂ ಕೇಳಿ ನಸುನಗುತ್ತ ಚಾಣಕ್ಯನು—

ಅಯ್ಯಾ ರಾಜಾಧಿರಾಜನೇ, ನೀನು ಹೇಳಿದುದು ಯುಕ್ತವಾದರೂ ಯಾವ ಮಹಾಕಾರ್ಯಗೌರವಕ್ಕೆಂದು ಯುದ್ಧೋದ್ಯೋಗಮಂ ಮಾಡುವೆ! ಇದು ನಿನಗೆ ವಿಷಯವಲ್ಲವೆಂದು ಚಾಣಕ್ಯನು ಹೇಳಲಾಗಿ—

ಅಯ್ಯಾ, ಶ್ರೋತ್ರಿಯೋತ್ತಮರೇ, ಲೋಕದಲ್ಲಿ ಅರಸುಗಳಿಗೆ ಪರಸ್ಪರ ವೈರಮುಂಟಾದರೆ ಮಾತ್ಸ್ಯನ್ಯಾಯದಂತೆ ಪ್ರಬಲನಾದವನು ದುರ್ಬಲನಂ ನಿಗ್ರ ಹಿಸುವನು. ಸಮಬಲನಾದರೆ ಜಯಾಪಜಯಗಳು ಹೇಗಿರುವುವೋ ? ಹೀಗಿರು ವಲ್ಲಿ ಮೊದಲು ನಮ್ಮ ಬಾಧೆಗೆ ಸಹಿಸಲಾರದೆ ಓಡಿ ಹೋಗಿದ್ದ ಲಂಪಾಕಪತಿಯು ಈಗ ನಮ್ಮ ಮೇಲೆ ದಂಡೆತ್ತಿ ಬರುವನೆಂದರೆ—ಸ್ವಬಲಪರಬಲ ವಿಚಾರ ರಹಿತ ರಾಗಿ ಕಾರ್ಯೋಪಕ್ರಮಮಂ ಮಾಡುವ ರಾಕ್ಷಸರಂತೆ ಕರ್ತವ್ಯಮಂ ತಿಳಿಯದೆ ಉನ್ಮತ್ತನಾಗಿ ಬರುವವನಾಗಿಲ್ಲ. ಪೂರ್ವಮತ್ಸರಮಂ ನೆನೆದು ತಕ್ಕಷ್ಟು ಸನ್ನಾ ಹದಿಂ ಕೂಡಿದವನಾಗಿ ನಮ್ಮಂ ಜಯಿಸಲೆಳಸಿ ಬರುವನು. ಅಲ್ಲದೆ ಅತನಿಗೆ ಕೆಲವು ದೇಶಾಧಿಪತಿಗಳ ಸಹಾಯವೂ ಒದಗಿರುವುದು: ಆದುದರಿಂದ ಯುದ್ಧ ಪ್ರಯತ್ನಮಂ ಮಾಡದೆ ಉಪೇಕ್ಷಿಸುವುದಕ್ಕೆ ತಪೋಧನರಂತೆ ನಾವು ವಿರಕ್ತ ರಲ್ಲ ಎಂದು ಆ ರಾಯಂ ಹೇಳಿದನು. ಆ ಮಾತಿಗೆ ಚಾಣಕ್ಯನು—

ಅಯ್ಯಾ, ಪೃಥ್ವೀಪತಿಯೇ, ಲೋಕದಲ್ಲಿ ಶತ್ರುಗಳಂ ಜಯಿಸುವುದಕ್ಕೆ ಸಾಧಕವಾದ ಉಪಾಯಚತುಷ್ಟಯವಿರುವುದು ಸತ್ಯವು. ಅದರಲ್ಲಿ ಮುಖ್ಯವಾದ ಉಪಾಯತ್ರಯಮಂ ಬಿಟ್ಟು ಹಿಂಸಾಪ್ರಧಾನವಾದ ದಂಡೋಪಾಯದಿಂದಲೇ ಶತ್ರುವಂ ಜಯಿಸಿದ ಅರಸಿಗೆ ಜಯಶೀಲನೆಂಬ ಯಶಸ್ಸು ಮಾತ್ರ ಬರುವುದು.

ಉಪಾಯತ್ರಯದಿಂದಲೂ ಶತ್ರುಗಳ ಆತಂಕರಹಿತನಾಗಿ ಸುಖಿಸುವ ಅರಸಿಗೆ ದಯಾಶೀಲನೆಂಬ ಖ್ಯಾತಿಯೂ ಉಂಟಾಗುವುದಿಲ್ಲವೇ? ಎಂದು ಕೇಳಲು—

ಅಯ್ಯಾ, ಭೂಸುರೋತ್ತಮರೇ, ನೀವು ಹೇಳಿದ ಉಪಾಯತ್ರಯವು ಚಿರಕಾಲಾನುಷ್ಠಾನದಿಂ ಸಿದ್ಧಿದಾಯಕವಾದುದರಿಂದ ಅದು ಈಗ ಉಪಯೋಗಕ್ಕೆ ಬರುವುದಲ್ಲವಾದರೂ ಷಡ್ಗುಣಗಳಲ್ಲಿ ಸಂಧಿಯಂ ನಡಸುವುದಕ್ಕೆ ಮೊದಲು ನಮ್ಮಿಂದ ಜಿತನಾಗಿ ಹೋಗಿದ್ದ ಶತ್ರುವಿನೊಡನೆ ಸಂಧಿಯಂ ಪ್ರಾರ್ಥಿಸುವುದೂ ಶರಣಾಗತನಾಗುವುದೂ ಎಂಬ ಈ ಎರಡು ಭಾಗಗಳಲ್ಲಿ ಶಬ್ದಭೇದವೇ ಹೊರತು ಅರ್ಥಭೇದವಿಲ್ಲ. ಇದನ್ನಾಚರಿಸುವುದಕ್ಕಿಂತಲೂ ಮಾನಶಾಲಿಗಳಾದ ಅರಸುಗಳಿಗೆ ಮಹದಪಮಾನವೆಂಬುವುದು ಇನ್ನಾವುದಿರುವುದು? ಎಂದು ಆ ರಾಯಂ ಹೇಳಿದನು. ಆ ಮಾತಿಗೆ ಚಾಣಕ್ಯನು—

ಅಯ್ಯಾ, ಪ್ರಭುವರನೇ, ಶತ್ರುಗಳ ಜಯಕ್ಕೆ ಉಪಾಯತ್ರಯವು ಮುಖ್ಯವು. ದಂಡೋಪಾಯವೆಂಬುವುದು ಮಧ್ಯಮವು ಎಂದು ಹೇಳಿದ ಮಾತಿಗೆ ನೀನು ಅನ್ಯಥಾ ತಿಳಿಯುವವನಾದೆ. ಇಂಥ ಹೀನಸಂಧಿಯಂ ನಿನ್ನ ವಶವರ್ತಿಗಳಾದವರಾದರೂ ಮಾಡತಕ್ಕುದಲ್ಲ. ಈ ಯರ್ಥದಲ್ಲಿ ನಾವು ಹೇಳಬಂದವರಲ್ಲ. ತಪ್ತಾಯೋನ್ಯಾಯಮಂ ಹೇಳಲು ಬಂದೆವು ಎಂದು ಚಾಣಕ್ಯನು ಹೇಳಲು—

ಅಯ್ಯಾ, ನೀತಿಜ್ಞರಾದ ಚಾಣಕ್ಯರೇ, ನೀವು ಹೇಳಿದರ್ಥವು ಅನ್ಯತ್ರವೂ ನಡೆಯಬಹುದಷ್ಟೆ! ಎಂದು ಆ ರಾಯಂ ಕೇಳಿದುದಕ್ಕೆ—

ಅಯ್ಯಾ, ದೂರದರ್ಶಿಯಾದ ರಾಯನೇ, ನೀನು ಹೇಳಿದರ್ಥವು ಜ್ಞಾತವಾಯಿತು. ತದರ್ಥವಾಗಿ ನಿನ್ನನ್ನೇ ಪ್ರಾರ್ಥಿಸಬಂದೆವು. ನಂದನಿಗ್ರಹ ಹೊರತು ಲಬ್ಧವಾಗುವ ಪ್ರಭುತ್ವಕ್ಕೆ ಚಂದ್ರಗುಪ್ತನು ಒಡಂಬಡುವವನಲ್ಲವಾದುದರಿಂದಲೂ ನಂದರಂ ಸಂಹರಿಸದೆ ಜುಟ್ಟಂ ಕಟ್ಟುವುದಿಲ್ಲವೆಂಬ ನನ್ನ ಪ್ರತಿಜ್ಞೆಯು ನಿಷ್ಫಲವಾಗುವುದರಿಂದಲೂ ನಂದರಲ್ಲಿ ದಂಡೋಪಾಯವೇ ಮುಖ್ಯಕರ್ತವ್ಯವೆಂದು ಚಾಣಕ್ಯನು ಹೇಳಿದನು. ಆಗ ಚಂದ್ರಗುಪ್ತನು ಆ ಪರ್ವತೇಶ್ವರನಂ ಕುರಿತು—

ರಾಜರೇ, ಕುಲಘ್ನರಾದ ನಂದರ ನಿಗ್ರಹವಿಲ್ಲದೆ ಲಬ್ಧವಾಗುವ ಪ್ರಭುತ್ವಕ್ಕಿಂತಲೂ ಅರಣ್ಯವಾಸವೇ ಸುಖದಾಯಕವೆಂದು ಮೊದಲೇ ನಮ್ಮ ಆಚಾರ್ಯರಿಗೆ ವಿಜ್ಞಾಪಿಸಿಕೊಂಡ ಮಾತಿಗೆ ಶತ್ರುಸಂಹಾರಪೂರ್ವಕವಾದ ರಾಜ್ಯಾಧಿಪತ್ಯಮಂ ನಿನಗೆ ಉಂಟುಮಾಡುವೆವೆಂದು ಅಭಯಮಂ ದಯಪಾಲಿಸಿದ್ದಾರೆಂಬುದಾಗಿ ಹೇಳಿದನು. ಆ ಮಾತಿಗೆ ರಾಯನು ನಸುನಗುತ್ತ—

ಅಯ್ಯಾ, ಚಂದ್ರಗುಪ್ತರಾಜನೇ, ಶತ್ರುಹತಿಪೂರ್ವಕವಾದ ರಾಜ್ಯ ಲಾಭಕ್ಕೆ ಕಾರ್ಯದಕ್ಷರಾಗಿರುವ ಮಾನಧನರನ್ನಪೇಕ್ಷಿಸದೆ ತಪೋಧನರ ಆಶ್ರಯ ಮಂ ಸಂಪಾದಿಸಿದರೆಂಬ ಅರ್ಥವು ಅನ್ಯರಿಗೆ ತೋರಿಸತಕ್ಕುದಲ್ಲವೆಂದು ಆ ರಾಯಂ ಹೇಳಲು ; ಆ ಮಾತಿಗೆ ಚಂದ್ರಗುಪ್ತನು—

ಶ್ಲೋ॥ ವಸುಪಿಸರಸವಾರ್ಜನಾಯರಾಜ್ಞಃವಶಯಿತುಮೌಷಧಿ ಮೂಲಮಾಪ್ತುಮಿಚ್ಛೋಃ॥
ನಿಧಿರಿವಭವತಾಮಿಹಪ್ರಸಾದಃ ಸಮುಜನಿಮೇಸುಲಭಃ ಪುರಾಕೃತೇನ ॥

ಟೀ॥ ದ್ರವ್ಯಸಮೂಹವನ್ನು ಸಂಪಾದಿಸುವುದಕ್ಕೋಸ್ಕರವಾಗಿ ದೊರೆಗಳ ನ್ನು ಸ್ವಾಧೀನಂಗೆಯ್ಯಲೋಸುಗ ಔಷಧಿಯ ಬೇರುಗಳನ್ನು ಪಡೆಯಲಿಚ್ಛೆಯುಳ್ಳ ಪುರುಷನಿಗೆ ಬೇರುಗಳಂ ಅಗೆಯುವಲ್ಲಿ ದ್ರವ್ಯನಿಧಿಯು ಸಿಕ್ಕಿದಂತೆ ನಿಮ್ಮ ಅನುಗ್ರಹವು ನಮ್ಮಲ್ಲಿ ಉಂಟಾಯಿತೆಂದು ಒಂದು ಪೂರ್ವನ್ಯಾಯವುಂಟು. ಅದರಂತೆ ನಮ್ಮ ಆಚಾರ್ಯಪ್ರಸಾದಬಲದಿಂದ ರಾಜಾಧಿರಾಜರಾದ ನಿಮ್ಮ ಅವಲಂ ಬನವು ನನಗೆ ಲಬ್ಧವಾದಕಾರಣ ಇನ್ನು ನನಗೆ ಕ್ಲೇಶವಂದರೇನು ? ಎಂದು ಹೇಳಲು ; ಪರ್ವತೇಶ್ವರನು ಆತನ ವಾಕ್ಯಮಂ ಕೇಳಿ ತನ್ನೊಳು ತಾನೇ—

ಶ್ಲೋ॥ ವಾಙ್ಮಾಧುರ್ಯಾತ್ ಸರ್ವಲೋಕಪ್ರಿಯಸ್ಸ್ಯಾತ್ ।
ವಾಕ್ಪಾರುಷ್ಯಾತ್ ಸರ್ವಲೋಕಾಪ್ರಿಯಸ್ಸ್ಯಾತ್ ॥
ಕೋವಾಲೋಕೇಕೋಕಿಲೇನೋಪಕಾರಃ ।
ಕೋವಾಲೋಕೇಗಾರ್ಧಭೇನಾಪಕಾರಃ ॥

ಟೀ॥ ಲೋಕದಲ್ಲಿ ಮಾಧುರ್ಯವುಳ್ಳ ಮಾತುಗಳ ದೆಸೆಯಿಂದ ಸರ್ವಜನ ರಿಗೂ ಪ್ರೀತಿಯುಂಟಾಗುವುದು. ಕಠಿನವಾದ ಮಾತುಗಳ ದೆಸೆಯಿಂದ ಅಖಿಲ ರಿಗೂ ಅಪ್ರಿಯವಾಗುವುದು. ಜನರಿಗೆ ಕೋಗಿಲೆಯಿಂದ ಉಪಕಾರವೇನು ? ಕತ್ತೆಯಿಂದ ಅಪಕಾರವೇನು ? ಕೋಗಿಲೆಯು ಮೃದುವಾಗಿ ಕೂಗುವುದರಿಂದ ಸರ್ವರೂ ಸಂತೋಷಪಡುತ್ತಾರೆ. ಕತ್ತೆಯು ಕ್ರೂರವಾಗಿ ಕೂಗುವುದರಿಂದ ಜನರು ಅಸಹ್ಯಪಡುತ್ತಾರೆ ಎಂದು ನೀತಿಶಾಸ್ತ್ರಮುಂಟು.

ಅದರ ಹಾಗೆ ಇಂಥ ಮೃದುಮಧುರಾಲಾಪವು ರಾಜಾಧಿರಾಜಲಕ್ಷಣವು ಳ್ಳವನಿಗೇ ಹೊರತು ಅನ್ಯತ್ರ ಬರಲಾರದೆಂದು ಯೋಚಿಸಿ ಚಂದ್ರಗುಪ್ತನ ವಾಕ್ಯಕ್ಕೆ ಸಂತೋಷಪಟ್ಟು ಚಾಣಕ್ಯನಂ ಕುರಿತು—

ಅಯ್ಯಾ, ವಿಚಿಂತಜ್ಞರಾದ ಚಾಣಕ್ಯರೇ, ಈಗ ಮತ್ಸರಿಯಾಗಿ ಬರುವ ಲಂಪಾಕಾಧಿಪತಿಯಂ ಜಯಿಸುವ ಕಾರ್ಯದಲ್ಲಿ ನಿಮ್ಮ ಮನೋಗತಾರ್ಥವು ಎಂತಿರುವುದು ? ಎಂದು ಕೇಳಿದುದಕ್ಕೆ ಚಾಣಕ್ಯನು—

ಅಯ್ಯಾ, ಭೂಪತಿಯೇ, ನಮ್ಮ ಮನೋಗತವು ಕಾರ್ಯಾಂತ್ಯದಲ್ಲಿ ತಿಳಿಯಬಂದೀತು. ಇದಕ್ಕೆ ನಿನಗೆ ಆಪ್ತನಾಗಿ ಬುದ್ಧಿಶಾಲಿಯಾದ ಒಬ್ಬ ನಿಯೋಗಿಯಂ ನಾವು ಹೇಳಿದಂತೆ ನಡೆದುಕೊಳ್ಳುವಹಾಗೆ ನೇಮಿಸಿ ನಾವಿದ್ದೆಡೆಗೆ ಕಳುಹಿಸಿ ಕೊಡಬೇಕು ಎಂದು ಹೇಳಿ ಎಲ್ಲರೊಡನೆ ಎದ್ದು ಯಥಾಸ್ಥಾನವನ್ನೈದಿದನು. ಆಗ ರಾಯನು ಕಮಲಾಪೀಡನೆಂಬ ನಿಯೋಗಿಯಂ ಕರೆದು ಚಾಣಕ್ಯರು ಹೇಳಿದಂತೆ ನಡೆದುಕೊಳ್ಳುವುದೆಂದು ನೇಮಿಸಿ ಕಳುಹಿಸಿದನು. ಆತನು ಬಂದು ಚಾಣಕ್ಯನಂ ಕಂಡು ಅಭಿನಮಿಸಿ ಅಪ್ಪಣೆಯ ಮೇರೆಗೆ ಬಂದು ಇದ್ದೇನೆ ಎಂದು ವಿಜ್ಞಾಪಿಸಲು ; ಆಗ ಚಾಣಕ್ಯನು ಪ್ರಕೃತೋಚಿತವಾಗಿ ಎರಡು ಕಾಗದಗಳಂ ಬರೆಸಿ ನಿಯೋಗಿಯ ಕೈಯ್ಯಲ್ಲಿ ಕೊಟ್ಟು ಅವುಗಳಿಗೆ ರಾಜಮೊಹರಮಂ ಮಾಡಿಸಿ ತರಿಸಿ ನಿಯೋಗಿಗೆ ಮಾಡತಕ್ಕ ಕಾರ್ಯಕೌಶಲ್ಯಮಂ ವಿವರವಾಗಿ ಹೇಳಿ ಆ ಕಾಗದಗಳೆರಡಂ ಆತನ ವಶಕ್ಕೆ ಕೊಟ್ಟು ಕಾಮರೂಪದೇಶಾಧಿಪತಿಯ ರಾಜಧಾನಿಯಾದ ಪ್ರಾಗ್ಜ್ಯೋತಿಷಪುರಕ್ಕೆ ಹೋಗಿ ಕಾರ್ಯಘಟನೆಯಂ ಮಾಡಿಕೊಂಡು ಬರುವಂತೆ ನೇಮಿಸಿ ಕಳುಹಿಸಿದನು. ಆ ಚಾಣಕ್ಯರು ಹೇಳಿದ ರೀತಿಗೆ ಕೆಲವು ದಿವಸಗಳ ಮೇಲೆ ಆ ನಿಯೋಗಿಯು ಕಾಮರೂಪದೇಶಕ್ಕೆ ಹೋಗಿ ತನಗೆ ಆಪ್ತನಾದ ದೂತನ ಕೈಯ್ಯಲ್ಲಿ ತನ್ನ ಹೆಸರಿಗೆ ಬರೆದಿರುವ ತಮ್ಮ ರಾಯನ ನಿರೂಪಮಂ ಕೊಟ್ಟು ಈ ರೀತಿಯಲ್ಲಿ ಮಾಡೆಂದು ಕರ್ತವ್ಯಮಂ ಹೇಳಿ ತಾನು ಪ್ರಾಗ್ಜ್ಯೋತಿಷನಗರದ ಪ್ರಾಕಾರದ ಬಹಿರುದ್ಯಾನದಲ್ಲಿ ಇಳಿದುಕೊಂಡು ಇದ್ದನು. ಆ ದೂತನು ಆ ನಿಯೋಗಿಯು ಹೇಳಿದ ಮೇರೆಗೆ ಅಲ್ಲಲ್ಲಿ ಹುಡುಕುತ್ತ ಅಲ್ಲಲ್ಲಿ ಜನಗಳಂ ಕೇಳುತ್ತ ಹೋಗಿ ಆ ಪುರದ ಬೇಹಗಾರರು ಬಂದು ಇಳಿಯುವ ಚಾವಡಿಯ ಬಳಿಯಲ್ಲಿ ನಿಂತು ಎಲ್ಲರನ್ನೂ ಕೇಳಿದಂತೆ ಅವರನ್ನು ಕುರಿತು—

ಎಲೈ, ಜನರುಗಳಿರಾ, ಪರ್ವತರಾಜ್ಯದ ನಿಯೋಗಿಯು ಬಂದು ಎಲ್ಲಿ ಇಳಿದಿರುವನು? ರಾಜಕಾರ್ಯಗೌರವಮುಂಟು. ಆ ಸ್ಥಳವನ್ನು ನೀವು ತಿಳಿದು ಇದ್ದರೆ ನನಗೆ ದಯಮಾಡಿ ಹೇಳಬೇಕು. ನಿಮಗೆ ಬಹಳ ಪುಣ್ಯಬರುವುದು ಎಂದು ಕೇಳಲು ; ಅವರು ಇವನನ್ನು ನೋಡಿ ಪರರಾಜರ ದೇಶದಿಂ ಏನೋ ರಾಜಕಾರ್ಯನಿಮಿತ್ತವಾಗಿ ಬಂದು ಇರುವವನಾದುದರಿಂದ ಈ ಯರ್ಥಮಂ ರಾಜಸನ್ನಿಧಿಯಲ್ಲಿ ತಿಳುಹಿಸಬೇಕೆಂದು ನಿಶ್ಚಯಿಸಿ ಏನು ಛದ್ಮವಿರುವುದೋ ಎಂದು ಶೋಧಿಸಿ ಅವನ ಬಳಿಯಲ್ಲಿದ್ದ ನಿರೂಪಮಂ ತೆಗೆದುಕೊಂಡು ಅವನೊಡನೆ ಹೋಗಿ ರಾಜಸನ್ನಿಧಿಯಲ್ಲಿ ಆ ನಿರೂಪವನ್ನಿರಿಸಿ—

ಬುದ್ಧೀ, ಪರ್ವತರಾಜ್ಯದಿಂದ ಏನು ನಿಮಿತ್ತವೋ ನಿಯೋಗಿಯು ಬಂದು ಈ ಪುರದಲ್ಲಿ ಇಳಿದು ಇದ್ದಾನಂತೆ. ಆತನಂ ಹುಡುಕುತ್ತ ನಮಗೆ ಸಿಕ್ಕಿದ ಈ ದೂತನ ಬಳಿಯಲ್ಲಿದ್ದ ಕಾಗದವಿದು ಎಂದು ರಾಯಂಗೆ ಬಿನ್ನೈಸಲು ; ಆ ರಾಯನು ರಾಜಮೊಹರದಿಂ ಸಮೇತವಾದ ಆ ಕಾಗದದ ಮೇಲೆ ಬರೆದಿರುವ ಅಕ್ಷರಗಳಂ ನೋಡಿಕೊಂಡು ಅದನ್ನು ತನ್ನ ಬಳಿಯಲ್ಲಿಟ್ಟುಕೊಂಡು ಏನು ವಿಶೇಷವಿರುವುದೋ ತಿಳಿಯಬೇಕೆಂದು ನಿಶ್ಚಯಿಸಿ ಆ ಕಾಗದಮಂ ತಂದ ದೂತನಂ ಕಾವಲಿಟ್ಟು ಪರ್ವತರಾಜ್ಯದ ನಿಯೋಗಿಯು ಬಂದು ರಾಜಸಭಾಪ್ರವೇಶಮಂ ಮಾಡಿ ಹೋದಬಳಿಕ ಆ ದೂತನಂ ಬಿಟ್ಟು ಬಿಡುವಂತೆ ತನ್ನ ದೂತರಿಗೆ ನೇಮಿಸಿ ಆ ನಿಯೋಗಿಯು ಎಲ್ಲಿ ಬಂದು ಇಳಿದಿದ್ದರೂ ಹುಡುಕಿ ಅವನನ್ನು ಕರತರವವರಾಗಿರಿ ಎಂದು ಬೇಹುಗಾರರಿಗೆ ನೇಮಿಸಿ ಕಳುಹಿಸಿದನು.

ಅವರು ಆ ಪುರದ ಬಳಗೂ ಹೊರಗೂ ಚೆನ್ನಾಗಿ ಹುಡುಕಿ ಉದ್ಯಾನದಲ್ಲಿ ಇಳಿದಿದ್ದ ನಿಯೋಗಿಯಂ ಕಂಡು ಮಹಾರಾಜಸನ್ನಿಧಿಯಲ್ಲಿ ಅಪ್ಪಣೆಯಾಗಿದೆ. ನೀವು ಆಸ್ಥಾನಕ್ಕೆ ಬರಬೇಕೆಂದು ಹೇಳಿದರು.

ಆಗ ಆತನು ಉಚಿತಪ್ರಕಾರದಿಂದ ಹೊರಟು ಆಸ್ಥಾನಕ್ಕೆ ಬರುತ್ತಿರಲು; ಆತನ ಪರಿವಾರವು ಆ ಉದ್ಯಾನದಿಂ ಆಸ್ಥಾನಪರ್ಯಂತರವೂ ಏಕಪ್ರಕಾರವಾಗಿ ನಿಂತಿತು. ಅದಂ ನೋಡಿದ ಅಲ್ಲಿನ ಜನರು ಪರ್ವತೇಶ್ವರನ ಐಶ್ವರ್ಯಕ್ಕೆ ಪಾರವಿಲ್ಲವೆಂದು ಶ್ಲಾಘಿಸುತ್ತಿರುವಲ್ಲಿ ಹಾಗೇ ಆ ನಿಯೋಗಿಯು ರಾಜಸನ್ನಿಧಿಗೆ ಹೋಗಿ ಕೈಮುಗಿದು ತಾನು ತಂದ ವಸ್ತ್ರ ವಾಹನಂಗಳನೊಪ್ಪಿಸಿ ಉಚಿತಪ್ರಕಾರದಿಂದ ಕುಳಿತು—ರಾಜೋತ್ತಮರೇ, ರಾಜಾಧಿರಾಜಪರ್ವತೇಶ್ವರರು ತಮ್ಮ ಕುಶಲಮಂ ಕೇಳಿದರೆನಲು ; ರಾಯನು—

ಅಯ್ಯಾ, ನಿಯೋಗಿಯೇ, ನಾವೆಲ್ಲರೂ ಕ್ಷೇಮದಲ್ಲಿರುವೆವು. ಪ್ರಜಾಸಮೇತರಾದ ನಿಮ್ಮ ಅರಸುಗಳಿಗೆ ಕುಶಲವೇ? ಏನು ಕಾರ್ಯಕ್ಕೆ ನಿಮ್ಮಂ ಕಳುಹಿಸಿದರು? ಎನಲಾಗಿ ಅದಕ್ಕೆ ನಿಯೋಗಿಯು—

ದೇವರೇ, ಸತ್ಕುಲಪ್ರಸೂತರಾದ ನಿಮ್ಮಲ್ಲಿ ಬಂಧುತ್ವಮಂ ಬಯಸಿ ಕಳುಹಿಸಿದರು. ಸಮಾನಕುಲೀನರಾದ ನಿಮ್ಮಿರ್ವರ್ಗೆ ಬಾಂಧವ್ಯಮುಂಟಾದರೆ ಸಾಂಖ್ಯಯೋಗಗಳ ಫಲಿತಾರ್ಥವು ಒಂದೇಯಾಗುವಂತೆಯೂ ಕ್ಷೀರಾಂಬುಧಿಯು ಇಕ್ಷುಸಾಗರದೊಡನೆ ಸಂಬಂಧಿಸುವಂತೆಯೂ ಜನಕದಶರಥರಾಜರುಗಳಿಗೆ ಬಾಂಧವ್ಯಂ ಬೆರೆದಂತೆಯೂ ಲೋಕಕ್ಷೇಮಕರವಾಗಿರುವುದು. ಹಾಗೇ ನಿಮ್ಮಿರ್ವರ ತನೂಜ

ಯುಗ್ಮವು ಲೋಕಾನಂದಕರವಾದ ಚಂದ್ರಚಂದ್ರಿಕೆಗಳಂತೆ ಜಗತ್ತಿನವರ ಮನಶ್ಚ ಕೋರಂಗಳಿಗೆ ಆನಂದಕರವಾಗಿರುವುದು ಎಂದು ಹೇಳಿ ತನ್ನ ಬಳಿಯಲ್ಲಿದ್ದ ನಿರೂಪವನ್ನು ಆ ರಾಯಂಗೆ ಒಪ್ಪಿಸಲು ; ಅದಂ ನೋಡಿಕೊಳ್ಳುವಲ್ಲಿ ಅದರೊಳಗೆ—

ಸ್ವಸ್ತಿಶ್ರೀ, ನಮಗೆ ಪರಮಪ್ರಿಯರಾಗಿರುವ ಕಾಮರೂಪದೇಶಾಧಿಪತಿಗಳಾದ ಸೂರ್ಯವರ್ಮರಿಗೆ ಪರ್ವತೇಶ್ವರರು ಮಾಡುವ ವಿಜ್ಞಾಪನೆ ಏನಂದರೆ—ಕನ್ನಿಕೆಯಾದ ನಿಮ್ಮ ಶ್ರೀಮಂತಪುತ್ರಿಯಿಂದ ನಮ್ಮ ಕುಮಾರ ಮಲಯಕೇತುವಿಗೆ ಗೃಹಸ್ಥಾಶ್ರಮಧರ್ಮಮುಂಟಾಗಬೇಕೆಂಬ ಅಭಿಲಾಷೆಯಿಂದ ನಾವು ನಿಮ್ಮಲ್ಲಿ ಬಾಂಧವ್ಯಮಂ ಬಯಸಿ ನಿಯೋಗಿಯಂ ನಿಮ್ಮ ಬಳಿಗೆ ಕಳುಹಿಸಿ ಇದ್ದೇವೆ. ಇದಕ್ಕೆ ನೀವು ಸಮ್ಮತಿಸಿ ನಮ್ಮ ನಿಯೋಗಿಯ ಸಂಗಡ ಕನ್ಯಾರತ್ನದ ಜಾತಪತ್ರಿಕೆಯೊಡನೆ ನಿಮ್ಮ ಪುರೋಹಿತನಂ ಕಳುಹಿಸಿದರೆ ಉಭಯಬಂಧುವರ್ಗ ಸಮ್ಮತವಾಗಿ ಶುಭಪ್ರಸ್ತವು ಶೀಘ್ರವಾಗಿ ನೆರವೇರುವುದು. ಇದರಿಂದ ನಮ್ಮ ಅಭ್ಯುದಯವು ನಿಮ್ಮದಾಗುವುದು. ನಿಮ್ಮ ಯೋಗಕ್ಷೇಮವೇ ನಮ್ಮದಾಗುವುದು ಎಂದು ಬರೆದಿರುವ ಒಕ್ಕಣೆಯಂ ನೋಡಿಕೊಂಡು ಹರ್ಷಯುಕ್ತನಾಗಿ ಇದು ಶ್ಲಾಘ್ಯಸಂಬಂಧವೆಂದು ಮನಸ್ಸಿನಲ್ಲಿ ತಿಳಿದುಕೊಂಡು ತನ್ನ ಬಳಿಯಲ್ಲಿ ಸಿಕ್ಕಿರುವ ಕಾಗದವೂ ಏತದರ್ಥಗರ್ಭಿತವಾಗಿಯೇ ಇದ್ದೀತೆಂದು ಯೋಚಿಸಿಕೊಂಡು ಪುರದೊಳಗೆ ನಿಯೋಗಿಗೆ ಬಿಡಾರಮಂ ಬಿಡಿಸೆಂದು ಮಂತ್ರಿಗೆ ನೇಮಿಸಿ—ಎಲೈ, ನಿಯೋಗಿವರ್ಯರೇ, ಎಷ್ಟು ದಿವಸದಿಂದ ಆಯಾಸಪಡುತ್ತ ಹೊರಗಿದ್ದಿರೋ ! ಎಂದು ಉಪಚಾರೋಕ್ತಿಯಂ ಹೇಳಿ ಬಂದ ನಿಯೋಗಿಗೆ ವಸ್ತ್ರಭೂಷಣತಾಂಬೂಲಂಗಳಂ ಕೊಟ್ಟು ನೀವು ಬಂದ ಮೇಲೆ ಕಾಲವಿಳಂಬವಾದುದರಿಂದಲೋ ಏನೋ ನಿಮಗೆ ನಿಮ್ಮ ರಾಯರು ಬರೆಸಿ ಕಳುಹಿಸಿದ ನಿರೂಪವು ನಮ್ಮ ವಶಕ್ಕೆ ಬಂದಿರುವುದು ಎಂದು ಹೇಳಿ ಆ ನಿರೂಪಮಂ ಅವನ ಕೈಗೆ ಕೊಡಲು ; ಅತನು ಆ ನಿರೂಪಮಂ ಶಿರಸಾವಹಿಸಿ ಸ್ವೀಕರಿಸಿ ಬಿಚ್ಚಿ ನೋಡಿಕೊಂಡು ಸರ್ವಸ್ವಮಂ ಕಳೆದುಕೊಂಡವನಂತೆ ತಲೆವಾಗಿ ಯೋಚಿಸುತ್ತಿರುವ ನಿಯೋಗಿಯ ಭಾವಮಂ ನೋಡಿ ರಾಯನು—ಅಯ್ಯಾ, ನಿಯೋಗಿಯೇ, ಕಾಗದಮಂ ನೋಡಿಕೊಂಡು ಯಾಕೆ ಉತ್ಸಾಹರಹಿತನಾಗಿ ಯೋಚಿಸುತ್ತಿರುವೆ ? ಎಂದು ಕೇಳಿದುದಕ್ಕೆ—ಬುದ್ಧೀ. ಮತ್ತೇನೂ ಇಲ್ಲವೆಂದು ವಿವರಮಂ ಹೇಳದೆ ಲಜ್ಜಿತನಾಗಿ ಸುಮ್ಮನಿರಲು ; ಆ ರಾಯಂ ತನ್ನ ಮಂತ್ರಿಯಂ ಕುರಿತು—

ಸಚಿವನೇ, ಈ ಕಾಗದದ ಅಭಿಪ್ರಾಯಮಂ ಹೇಳುವುದಕ್ಕೆ ನಿಯೋಗಿಯು ಲಜ್ಜೆಪಡುತ್ತಿದ್ದಾನೆ. ಅದನ್ನು ನೀನು ನೋಡಿ ನಮಗೆ ತಿಳುಹಿಸು ಎನಲು; ಆಗ ಆ ಮಂತ್ರಿಯು ಆ ಕಾಗದಮಂ ತೆಗೆದು ನೋಡಿಕೊಂಡು ರಹಸ್ಯದಲ್ಲಿ ಆದರ ಒಕ್ಕಣೆಯಂ ತನ್ನ ರಾಯಂಗೆ ಓದಿ ಹೇಳುತ್ತಿದ್ದನು ಏನಂದರೆ—

ಶ್ರೀಮತು, ಪರ್ವತೇಶ್ವರರು ಕಾಮರೂಪದೇಶಕ್ಕೆ ಹೋಗಿರುವ ನಮ್ಮ ನಿಯೋಗಿಯಾದ ಕಮಲಾಪೀಡನಿಗೆ ಬರೆಸಿ ಕಳುಹಿಸಿದ ನಿರೂಪವೇನಂದರೆ—ನೀನು ಕನ್ಯಾರ್ಥವಾಗಿ ಪ್ರಾಗ್ಜ್ಯೋತಿಷಾಧಿಪತಿಗಳ ಸಮೀಪಕ್ಕೆ ಹೋಗಿರುವುದು ಸರಿ ಯಷ್ಟೆ! ನಿನಗೆ ಅಲ್ಲಿ ಅರಸುಗಳ ದರ್ಶನವಾಯಿತೋ ಇಲ್ಲವೋ ತಿಳಿಯಲಿಲ್ಲ. ಮತ್ತೊಂದರ್ಥಮುಂಟು. ಈಚೆಗೆ ಲಂಪಾಕದೇಶಾಧಿಪತಿಯ ಸಭೆಯಲ್ಲಿ ರಾಜ ಮಂತ್ರಿಗಳ ಸಂವಾದದೊಳ್ ದೇಶಾಧಿಪತಿಗಳ ಪ್ರಶಂಸೆಯುಂಟಾಗುತ್ತಿರಲು; ಆ ಲಂಪಾಕಪತಿಯು—ಕಾಮರೂಪಾಧಿಪತಿಯ ವಂಶದಲ್ಲಿ ಸಾಂಕರ್ಯದೋಷ ವುಂಟಾಗಿರುವುದರಿಂದ . ಆ ದೇಶಾಧಿಪತಿಗಳು ನ್ಯೂನವಾದ ಶೌರ್ಯವುಳ್ಳವರು ಎಂದು ಹೇಳಿದ ವಾಕ್ಯಮಂ ಕೇಳಿ ಅಲ್ಲಿನ ರಾಜಾಸ್ಥಾನದಲ್ಲಿ ಪ್ರಮುಖರಾಗಿ ನಮಗೆ ಆಪ್ತರಾಗಿರುವ ಜನರು ಈ ಯರ್ಥಮಂ ಸೂಚಿಸಿ ನೀವು ಕಾಮರೂಪಾಧಿ ಪತಿಗಳೊಡನೆ ಸಂಬಂಧಮಂ ಬೆಳಸುವವರಾಗಿ ಇದ್ದೀರಿ. ಈ ವಿಷಯಮಂ ವಿಚಾ ರಿಸಿಕೊಂಡು ಬಂಧುತ್ವಮಂ ಮಾಡಬಹುದು ಎಂದು ಕಾಗದಮಂ ಬರೆದಿರುವರು. ಅದರ ಅರ್ಥಮಂ ನೋಡಿ ಆಲೋಚಿಸುವಲ್ಲಿ ಭೂಮಿದೇವಿಗೆ ಪೌತ್ರನಾದ ಭಗ ದತ್ತಮಹಾರಾಜನ ಕುಲದಲ್ಲಿ ಜನಿಸಿದ ಕಾಮರೂಪಾಧಿಪತಿಗಳ ವಂಶದಲ್ಲಿ ಅಂಥ ಅಕಾರ್ಯವು ಎಂದಿಗೂ ನಡೆಯಲಾರದು. ಏನೋ ಮದಮಾತ್ಸರ್ಯ ದಿಂದ ಲಂಪಾಕಪತಿಯು ತುಚ್ಛವಚನಮಂ ಆಡಿಯಿದ್ದಾನು ಎಂದು ನಾವು ನಿಶ್ಚ ಯಿಸುವವರಾದರೂ ಬಹುಕಾಲ ಸಂಬಂಧಮಂ ಮಾಡಬೇಕಾಗಿರುವುದರಿಂದ ಪರೋಕ್ಷವಾಗಿ ನೀನು ಕಾಮರೂಪಾಧಿಪತಿಗಳ ಕುಲಶೀಲಂಗಳಂ ಚೆನ್ನಾಗಿ ವಿಚಾ ರಿಸಿಕೊಂಡು ನಿನ್ನ ಮನಸ್ಸು ಪ್ರಶಸ್ತವಾದರೆ ಶುಭಪ್ರಸ್ತವು ಬೆಳೆಯುವುದಕ್ಕೆ ನಿಶ್ಚಯಮಾಡಿಕೊಂಡು ಬರುವುದು. ಹೀಗೆಂಬ ಕಾಗದದ ಒಕ್ಕಣೆಯಂ ಕೇಳಿ ಆ ಕಾಮರೂಪಾಧಿಪತಿಯು ಕಲ್ಲಿಟ್ಟು ಕೆಣಕಿದ ವ್ಯಾಘ್ರದಂತೆ ಕೋಪೋದ್ದೀಪಿ ತನಾಗಿ ಘುಡುಘುಡಿಸುತ್ತಾ—

ಎಲೈ, ಮಂತ್ರಿಯೇ, ಕ್ಷತ್ರಿಯಾಧಮನಾದ ಲಂಪಾಕಪತಿಯು ನಮ್ಮ ವಂಶ ಸ್ವರ ಮೇಲಾಡಿದ ದುಷ್ಟವಾಕ್ಯಕ್ಕೆ ನಾನು ಅವನ ಶಿರಮಂ ಇಳುಹದೆ ಈ ಕಿರೀ

ಟಮಂಧರಿಸಿದವನಾದರೆ ಲೋಕನಾಯಕನಾಗಿದ್ದ ನರಕಾಸುರನ ವಂಶದಲ್ಲಿ ಜನಿಸಿದವನೇ ಅಲ್ಲ. ಈ ಮಾತಿಗೆ ಪ್ರತ್ಯುತ್ತರಮಂ ಹೇಳಿದವರು ನನಗೆ ಹಗೆಗಳೇ ಸರಿ. ಈಗಲೇ ಸೇನಾಸಮೇತರಾಗಿ ಲಂಪಾಕದೇಶಕ್ಕೆ ಹೋಗುವಂತೆ ನಮ್ಮ ಸೇನಾಪತಿಗೂ ಸಾಮಂತರಾಜರಿಗೂ ನೇಮಿಸುವವನಾಗು. ನಮಗೆ ಪ್ರಯಾಣವೆಂದು ಪಟ್ಟಣದಲ್ಲಿ ಡಂಗುರಮಂ ಹಾಕಿ ಸಾರಲಿ. ನಾಳೆ ತರಂಗಿಣೀನದೀತೀರದಲ್ಲಿ ಹೋಗಿ ಇಳಿಯುವೆವು ಎಂದು ಮಂತ್ರಿಗೆ ನೇಮಿಸಿ ಬಂದಿದ್ದ ನಿಯೋಗಿಯಂ ಕುರಿತು—

ಅಯ್ಯಾ, ನೀನು ಬಂದ ಕಾರ್ಯವಿಷಯದಲ್ಲಿ ನಾವೂ ಹಾಗೆ ಪರ್ವತರಾಜರೊಡನೆ ಬಾಂಧವ್ಯಮಂ ಬಯಸಿದವರಾದರೂ ನೀಚನಾದ ಲಂಪಾಕಪತಿಯಂ ನಿಗ್ರಹಿಸಿದಲ್ಲದೆ ಮುಂದಣ ಶುಭಕಾರ್ಯಕ್ಕೆ ಪ್ರವರ್ತಿಸುವುದಿಲ್ಲ. ಈ ಯರ್ಥಮಂ ನಿಮ್ಮ ಅರಸುಗಳಿಗೆ ವಿಜ್ಞಾಪಿಸುವವನಾಗು ಎಂದು ಹೇಳಿ ಈತನು ತಂದುಕೊಟ್ಟ ಪರ್ವತೇಶ್ವರರ ಲೇಖನಕ್ಕೆ ಪ್ರತಿಲೇಖನಮಂ ಪ್ರಕೃತೋಚಿತವಾಗಿ ಬರೆಸಿಕೊಡುವವನಾಗು ಎಂದು ಮಂತ್ರಿಗೆ ನೇಮಿಸಿ ಆ ರಾಯನು ಅಂತಃಪುರಕ್ಕೆ ಹೋಗುತ್ತಿರಲು ; ಹಾಗೇ ಆ ಮಂತ್ರಿಯು ಬರೆಸಿಕೊಟ್ಟ ಲೇಖನಮಂ ತೆಗೆದುಕೊಂಡು ಆ ನಿಯೋಗಿಯು ಮೊದಲು ತಾನಿದ್ದೆಡೆಗೆ ಬಂದನು. ಆ ಮೇಲೆ ಆ ಮಂತ್ರಿಯು ರಾಜಾಜ್ಞೆಯ ಮೇರೆಗೆ ಸೇನಾಪತಿಗಳಿಗೂ ಸಾಮಂತರಾಜರಿಗೂ ನೇಮಿಸಲು ; ಕೂಡಲೇ ಪ್ರಯಾಣೋಚಿತವಾದ ಪಟಹಧ್ವನಿಗಳೇ ಮುಂತಾದ ಕಲಕಲಂಗಳುಂಟಾದುವು. ಅನಂತರದಲ್ಲಿ ಆ ನಿಯೋಗಿಯು ಅಲ್ಲಿಯೇ ಮೂರುನಾಲ್ಕು ದಿವಸಗಳಿದ್ದು ಆ ರಾಯನು ಸನ್ನದ್ಧನಾಗಿ ಲಂಪಾಕದೇಶಕ್ಕೆ ತೆರಳಿದುದಂ ನೋಡಿ ಪರ್ವತೇಶ್ವರನ ರಾಜಕಾರ್ಯವು ಅನ್ಯರ ಮುಖದಿಂದಲೇ ಆಯಿತೆಂದು ತಿಳಿದು ಅಲ್ಲಿಂದ ಹೊರಟು ಪರ್ವತ ರಾಜ್ಯಕ್ಕೆ ಬಂದು ಸಭಾಸ್ಥಾನದಲ್ಲಿ ಕುಳಿತಿರ್ದ ಪರ್ವತರಾಜನಿಗಭಿವಂದಿಸಿ—ಜೀಯಾ, ನಾನು ಹೋಗಿದ್ದ ಕಾರ್ಯವು ಜಯವಾಯಿತು ಎಂದು ಹೇಳಿ ಕಾಮರೂಪಾಧಿಪತಿಯ ಬಳಿಯಲ್ಲಿ ನಡೆದ ವೃತ್ತಾಂತವೆಲ್ಲಮಂ ರಹಸ್ಯದಲ್ಲಿ ವಿವರವಾಗಿ ಆತನಿಗೆ ತಿಳುಹಿಸಿ ತಾನು ತಂದಿದ್ದ ಲೇಖನವನ್ನೊಪ್ಪಿಸಲು ; ಅದಂ ನೋಡಿಕೊಂಡು ರಾಯನು ವಿಸ್ಮಿತನಾಗಿ ತಲೆದೂಗುತ್ತ ಮಂತ್ರಿಯಂ ಕುರಿತು—

ಅಯ್ಯಾ, ಶಬರವರ್ಮನೇ, ಬುದ್ಧಿಸಂಪನ್ನನಾದ ಚಾಣಕ್ಯನು ಆಡಿದಂತೆ ಕಾರ್ಯನಿರ್ವಾಹಮಂ ಮಾಡಿದುದರಿಂದ "ಅಸ್ಮಾಭಿರ್ಯದನುಷ್ಠೇಯಂ ಗಂಧರ್ವೈಸ್ತದನುಷಿತಂ" ಎಂಬ ವಚನದಂತೆ ನಮ್ಮಿಂದ ಮಾಡತಕ್ಕ ಮಹಾಕಾರ್ಯವು ಕಾಮರೂಪಾಧಿಪತಿಯಿಂದಲೇ ಪರ್ಯವಸನ್ನವಾಯಿತು. ಚಂದ್ರಗುಪ್ತನಿಗೆ ಉಪ

ಕಾರಂಗೆಯ್ಯಬೇಕೆಂಬುವುದು ಹೋಗಿ ಆತನಿಗೆ ಪ್ರತ್ಯುಪಕಾರಮಂ ಮಾಡಬೇಕಾಗಿ ಬಂದಿತು' ಈಗಲಾದರೂ ಉಲೂಕನೆಂಬ ಮಂತ್ರಿಗೆ ಈ ಯರ್ಥವು ಅಭಿಮತವಾದೀತೋ ಇಲ್ಲವೋ? ಎಂದು ಆ ರಾಯಂ ಕೇಳಲು—ಜೀಯಾ, ಯಾತ್ರಾ ಸಮಯದಲ್ಲಿ ಆತನ ಶಬ್ದಶ್ರವಣವನ್ನೇ ಮಾಡಕೂಡದೆಂದು ಹೇಳಿದ ಮಂತ್ರಿಯ ಮಾತಿಗೆ ಅರಸು ವಸ್ತ್ರದಿಂ ವದನಮಂ ಮರೆಮಾಡಿ ಹಾಸ್ಯ ತೋರದಂತೆ ಅಭಿನಯಿಸಿದನು. ಆಗ ಉಲೂಕನೆಂಬ ವೃದ್ಧಮಂತ್ರಿಯು—

ಸ್ವಾಮಿಾ, ಬಾಲಕನಾದ ಈ ಶಬರವರ್ಮನು ಹಾಸ್ಯಗರ್ಭಿತವಾದ ವಾಕ್ಯಮಂ ಹೇಳಿ ಚಿತ್ತರಂಜನೆಯಂ ಮಾಡುತ್ತಿದ್ದಾನೆ. ಅದನ್ನು ಬಿಟ್ಟು ನನ್ನ ವಿಜ್ಞಾಪನೆಯನ್ನವಧರಿಸಬೇಕು. ಲೋಕದಲ್ಲಿ ಕಾರ್ಯಪ್ರಯತ್ನಮಂ ಮಾಡುವವನಿಗೆ ಇಷ್ಟಪ್ರಾಪ್ತಿ ಅನಿಷ್ಟನಿವೃತ್ತಿಗಳಾಗುವುವೆಂಬುವುದು ಪರಮದುರ್ಲಭವು. ಈಗ ನಮಗೆ ಬಂದು ಒದಗಿದ್ದ ಅನಿಷ್ಟಕ್ಕೆ ನಿವೃತ್ತಿಯಂ ಮಾಡಿದ ಚಾಣಕ್ಯಚಂದ್ರಗುಪ್ತರಿಗೆ ಇಷ್ಟಪ್ರಾಪ್ತಿಯುಂಟಾಗುವಂತೆ ಮಾಡುವುದಕ್ಕೆ ಅವರ ಸಂಗಡ ಸೇನೆಯಂ ಕಳುಹಿಸಿಕೊಟ್ಟು ಜಯಮಂ ಸಂಪಾದಿಸುವುದು ಯುಕ್ತವು ಎಂದು ಹೇಳಲಾಗಿ ; ಆ ಮಾತಿಗೆ ಶಬರವರ್ಮನು—ಸೇನೆಯಂ ಮಾತ್ರ ಕಳುಹಿಸಿದರೆ ಅವರಿಗೆ ಇಷ್ಟಪ್ರಾಪ್ತಿಯಾದರೂ ಆಗಬಹುದು. ಇಲ್ಲದಿದ್ದರೆ ಪುನಃ ಪ್ರಯತ್ನದಿಂದ ಅರಸುಗಳೇ ಪ್ರಯಾಣವಂ ಮಾಡಿ ಅವರ ಕಾರ್ಯಮಂ ನಿರ್ವಹಿಸಿ ಕೊಟ್ಟು ನಮ್ಮ ಕಾರ್ಯಮಂ ಅವರಿಂದ ಮಾಡಿಕೊಳ್ಳಬೇಕಾಗುತ್ತಿದೆ ಎಂದು ಹೇಳಿದನು.

ಆ ಮಾತಿಗೆ ಉಲೂಕನು—ಜೀಯಾ, ಕಾರ್ಯಾರ್ಥಿಗಳಾದವರು ತಮ್ಮ ಕಾರ್ಯಕ್ಕೋಸ್ಕರವಾಗಿ ಪರರಿಗೆ ವಿಶೇಷಲಾಭಮಂ ಉಂಟುಮಾಡುವೆವೆಂದು ಹೇಳಿ ಕಾರ್ಯವಾದ ಬಳಿಕ ಅಜಯುದ್ಧದಂತೆ ಆಚರಿಸುವುದುಂಟು ಎಂದು ಹೇಳಿದುದಕ್ಕೆ—ಬ್ರಾಹ್ಮಣನಾದವನು ಅನೃತವಾಡುವುದುಂಟೇ? ಎನುತ್ತ ಅರಸು ಕೇಳಲು ; ಆ ಮಾತಿಗೆ ಉಲೂಕನು—

ಜೀಯಾ, ಕಲಿಯುಗದಲ್ಲಿ ಲೌಕಿಕವ್ಯವಹಾರದೊಳ್ ಪ್ರವರ್ತಿಸಿರುವ ಯಾರಿಗಾದರೂ ಸತ್ಯವಚನದಿಂದಲೇ ಕಾರ್ಯನಿರ್ವಾಹವಾಗಲಾರದು. ಈ ಯರ್ಥದಲ್ಲಿ ಮತ್ತೊಂದು ಸೂಕ್ಷ್ಮವುಂಟು. ಮೊದಲು ಚಂದ್ರಗುಪ್ತನ ಸನ್ನಿಧಿಯಲ್ಲಿ ಹೇಳಿಕೊಂಡ ಮಾತಿನಲ್ಲಿ ಶತ್ರುರಹಿತವಾದ ರಾಜ್ಯಾಧಿಪತ್ಯಮಂ ತನಗೆ ಉಂಟುಮಾಡುವುದಾಗಿ ತಮ್ಮ ಆಚಾರ್ಯರು ಅಭಯಮಂ ಕೊಟ್ಟು ಇದ್ದಾರೆ ಎಂದು

ಸೂಚಿಸಿದ ಪ್ರಕಾರ ಯಾವ ಸಾಹಸವನ್ನಾದರೂ ಮಾಡಿ ಯಾವ ಅನೃತವನ್ನಾದರೂ ಆಡಿ ಚಂದ್ರಗುಪ್ತನಿಗೆ ಅಭಯಮಂ ಕೊಟ್ಟ ಮೇರೆಗೆ ಅವನಿಗೆ ನಂದ ರಾಜ್ಯಾಧಿಕಾರವನ್ನುಂಟುಮಾಡುವುದೇ ಚಾಣಕ್ಯರಿಗೆ ಪರಮತಾತ್ಪರ್ಯವಾದುದರಿಂದ ಅನ್ಯರಿಗೆ ಆ ರಾಜ್ಯದಲ್ಲಿ ಲೇಶಮಾತ್ರವಾದರೂ ದೊರಕಲಾರದು. ಮುಂದೆ ಈ ಯರ್ಥವು ತಮಗೆ ವೇದ್ಯವಾಗಿ ಪಶ್ಚಾತ್ತಾಪಮುಂಟಾದೀತೆಂದು ಖಂಡಿತವಾಗಿ ವಿಜ್ಞಾಪಿಸಿದ್ದೇನೆ ಎಂದನು. ಆ ಮಾತಿಗೆ ಶಬರವರ್ಮನು—

ಅಯ್ಯಾ, ವೃದ್ಧಮಂತ್ರಿಯೇ, ನೀನು ಹೇಳಿದರ್ಥವೇ ಮುಂದೆ ನಿದರ್ಶನಕ್ಕೆ ಬರುವುದಾದರೆ ಆಗ ನಾವು ಭೂಮಿಯಲ್ಲಿ ಇದ್ದು ಫಲವೇನು ? ಎಂದು ಹೇಳಿ—ಜೀಯಾ, ಚಾಣಕ್ಯರ ವಚನವು ಅನೃತವಾದರೆ ಅವರು ಮಾಡಿರುವ ಪ್ರತಿಜ್ಞೆಯೂ ಸಹ ಅಬದ್ಧವಾಗಬೇಕು. ಹಾಗಾದರೆ ಈ ಮಹಾಕಾರ್ಯೋದ್ಯೋಗವನ್ನು ಮಾಡುವ ಪುರುಷನು ಹುಚ್ಚನೆಂಬುವುದರಿಂದ ಚಾಣಕ್ಯರು ಸಹ ಅಂಥವರೇ ಆಗಿ ತೋರಿದರೆ ತಾವು ತೂಷ್ಣೀಭಾವದಲ್ಲಿ ಇರತಕ್ಕುದು. ಅವರು ಹೇಳಿದಂತೆ ಕಾರ್ಯವು ನಿದರ್ಶನಕ್ಕೆ ಬರುವುದು ಸತ್ಯವಾದರೆ ಅವರ ಕಾರ್ಯಕ್ಕೆ ಆಗ ತಕ್ಕಷ್ಟು ಯತ್ನಮಂ ಮಾಡಿಕೊಂಡು ತಾವೇ ತೆರಳುವುದು ಉತ್ತಮವು ಹೀಗೆ ಅವರ ಕಾರ್ಯನಿರ್ವಾಹಮಂ ಮಾಡಿಕೊಟ್ಟ ಬಳಿಕ ಅವರಿಂದ ನಮಗಾಗುವ ಕಾರ್ಯದಲ್ಲಿ ಅವರ ಮನೋಗತಮಂ ತಿಳಿಯುವುದಕ್ಕೆ ಕುಮಾರನಾದ ಮಲಯಕೇತುವಂ ಚಂದ್ರಗುಪ್ತನ ಬಳಿಗೆ ಕಳುಹಿಸಿಕೊಟ್ಟರೆ ಆ ಯರ್ಥವು ಚಿತ್ತಕ್ಕೆ ವೇದ್ಯವಾಗುವುದು. ಆ ಬಳಿಕ ಕರ್ತವ್ಯಮಂ ಆಜ್ಞಾಪಿಸಬಹುದು ಎಂದನು. ಆಗ ರಾಯನು ಚಾಣಕ್ಯನಂ ಕರೆಯಕಳುಹಿಸಿ ಉಚಿತಪ್ರಕಾರವಾಗಿ ಕುಳ್ಳಿರಿಸಿಕೊಂಡು ಇಂತೆಂದನು—

ಅಯ್ಯಾ, ಕಾರ್ಯದಕ್ಷರಾದ ಚಾಣಕ್ಯರೇ, ನೀವು ಮಾಡಿದ ಉಪಾಯದಿಂದ ನಮಗೆ ಬಂದು ಒದಗಿದ್ದ ರಾಜಕಾರ್ಯವು ಕಾಮರೂಪಾಧಿಪತಿಯಿಂದಲೇ ಪರ್ಯವಸಿತವಾಯಿತು. ನೀವು ಸಂಕಲ್ಪಿಸಿದ ಕಾರ್ಯಕ್ಕೆ ಅನ್ಯಥಾ ಬರುವುದುಂಟೇ ? ನಿಮ್ಮಂಥವರು ಕಾರ್ಯೋದುಕ್ತರಾದರೆ ನಮ್ಮ ಸಹಾಯವೆಂಬುವುದು ನಿಮಿತ್ತಮಾತ್ರವು. ಇನ್ನು ಮೇಲೆ ನಿಮ್ಮ ಕಾರ್ಯವು ಅನುಕೂಲವಾಗುವಂತೆ ಸನ್ನಾಹಮಂ ಮಾಡುವೆನು. ಈ ಬಸಗೆಯಿಂ ನಿಮಗೆ ಹೇಳಬೇಕೆಂದು ಕರೆಯ ಕಳುಹಿಸಿದೆನು. ನಿಮಗೆ ಸಂಧ್ಯಾಕಾಲಸನ್ನಿಹಿತವಾಯಿತು. ಬಿಡಾರಕ್ಕೆ ತೆರಳಬಹುದು ಎಂದು ಹೇಳಿ ತಾಂಬೂಲಪುಷ್ಪಮಾಲಿಕೆಗಳಿಂದುಪಚರಿಸಿ ಚಾಣಕ್ಯನಂ

ಬಿಡಾರಕ್ಕೆ ಕಳುಹಿಸಿ ನಿಯೋಗಿಗೆ ಬಹುಮಾನವಂ ಮಾಡಿ ಎಲ್ಲರೂ ಯಥಾಸ್ಥಾನವನ್ನೈದಿದರು.

ಆಗ ಕಮಲಿನೀಹೃದಯಾನುರಾಗದಿಂ ರಾಗವಡರಿದವನಂತೆ ಕಮಲಬಾಂಧವನು ಸಿಂದೂರವರ್ಣನಾಗಿ ಪ್ರಾಚೀನಿತಂಬಿನಿಯನ್ನೊಡಗೂಡಲೆಳಸಿದಂತೆ ಪಶ್ಚಿಮಾಚಲಶಿಖರದಿಂ ಮರೆಯಾಗುತ್ತಿರಲು; ರವಿವಿರಹಖಿನ್ನರಾಜೀವಪಙ್ಕ್ತಿಯು ಹರಿತವರ್ಣವಾದುದಂ ನೋಡಿ ಪರಿಹಾಸಂಗೊಳ್ಳುವಂತೆ ಕುವಲಯನಿಕರಂಗಳು ವಿಕಸಿತವಾದುವು. ಕುಸುಮಶರಾಗ್ನಿದಂದಹ್ಯಮಾನಚಕ್ರವಾಕ ಹೃದಯೇಂಧನ ಧೂಮರಾಜಿ ಎಂಬಂತೆ ತಿಮಿರನಿಕರಂಗಳು ಜಗತ್ತಂ ಮುಚ್ಚಿದುವು. ಶಶಿಕರ ಸಿಂಹ ನಖರವಿಶೀರ್ಯಮಾಣ ತಿಮಿರ ಗಜಕುಂಭಸ್ಥಳೋತ್ಕ್ಷಿಪ್ತ ಮುಕ್ತಾಫಲ ನಿಕರವೆಂಬಂತೆ ತಾರಾನಿವಹಂ ಗಗನವನ್ನಲಂಕರಿಸಿದುದು. ಪ್ರಿಯದರ್ಶನಸಮುದಿತ ದಿಶಾವನಿತೆಯರ ಮುಗುಳುನಗೆಯ ಚಂದದಿಂ ಕಂಗೊಳಿಪ ಬೆಳುದಿಂಗಳಿಂ ಗಗನಾಭೋಗವು ಮಂದಾಕಿನೀಫೇನಪುಂಜದಂದದಿಂ ಶೋಭಿತವಾದುದು. ಪಾತಾಳ ತಳದಿಂದ ಭೂಭಾಗವಂ ನೋಡಲ್ಕೈತರುವ ಮಹಾಶೇಷನ ಮಧ್ಯಶಿರೋರತ್ನದಂತೆ ಚಂದ್ರನುದ್ಭವಿಸಿದನು. ಆಗ ಸಂಜೆಗೆಂಪು ಪ್ರಣಯಕುಪಿತರೋಹಿಣೀಚರಣಾಲಕ್ತಕರಸಲಾಂಛನದಂತೆ ರಂಜಿಸಿತು. ಜಗತ್ತೆಲ್ಲವೂ ಶಶಿಕರಸುಧಾರಸದಿಂ ಭಾವಿಸಿದಂತೆಯೂ ಗಂಗಾಜಲಂಗಳಿಂ ಸೇಚಿತವಾದಂತೆಯೂ ಬೆಳಬೆಳಗಿ ಕಂಗೊಳಿಸಿ ಶ್ವೇತದ್ವೀಪವಾಸಸುಖವನ್ನನುಭವಿಸಿತು. ಮದನರಾಜ್ಯಾಭಿಷೇಕಸಮಯದೊಳೆತ್ತಿದ ಮುತ್ತಿನ ಸತ್ತಿಗೆಯಂತೆ ಕುಮುದಬಾಂಧವಂ ಕಂಗೊಳಿಸಿದನು. ಆ ಸಮಯದಲ್ಲಿ ಪರ್ವತರಾಜನು ಯುವರಾಜನಾದ ಕುಮಾರ ಮಲಯಕೇತುವಂ ಕುರಿತು—

ಎಲೈ, ಕುಮಾರಕನೇ, ಆಯುಷ್ಮಂತನಾದ ಚಂದ್ರಗುಪ್ತನು ನಮ್ಮ ಸಹಾಯದಿಂದ ನಂದರಾಜ್ಯಮಂ ಸಾಧಿಸಲೋಸುಗ ಬುದ್ಧಿಶಾಲಿಯಾದ ಚಾಣಕ್ಯ ಸಮೇತನಾಗಿ ಬಂದು ಇದ್ದಾನೆ. ನಂದರು ಬಹುಪ್ರಬಲರಾದುದರಿಂದ ಅವರ ಗರ್ವಭಂಗಮಂ ಮಾಡುವುದಕ್ಕೆ ನಾವೇ ತೆರಳಬೇಕಾಗುತ್ತಿದೆ. ಚಂದ್ರಗುಪ್ತನಿಗೆ ಅಭಿಮತವಾದ ಕಾರ್ಯಮಂ ನಿರ್ವಹಿಸಿಕೊಟ್ಟರೆ ಅವರು ನಮಗೆ ಪ್ರತ್ಯುಪಕಾರಮಂ ಮಾಡಿಕೊಡುವಲ್ಲಿ ಅವರ ಮನೋಗತವೇನಿರುವುದು ? ನೀನೇ ಹೋಗಿ ತಿಳಿದು ಬಾರೆಂದು ನೇಮಿಸಲು; ಅದಕ್ಕೆ ಮಲಯಕೇತುವು ಮಹಾಪ್ರಸಾದವೆಂದು

ಹೊರಟು ತಾರಾಗಣದಿಂ ಶೋಭಿಸುವ ಚಂದ್ರನ ಚಂದದಿಂ ದೀಪಿಕಾಸಹಸ್ರಯುತ ಪರಿವಾರದಿಂ ಸಹಿತನಾಗಿ ಬರುತ್ತಿರಲು ; ಅದಂ ಕೇಳಿ ಚಂದ್ರಗುಪ್ತನು ಇದಿರಾಗಿ ಬಂದು ಅತನಂ ಸುಮ್ಮಾನದಿಂ ಸನ್ಮಾನದೊಡನೆ ಕರೆದುಕೊಂಡು ಹೋಗಿ ಕುಳ್ಳಿರಿಸಿ ಪರಸ್ಪರಕುಶಲಪ್ರಶ್ನೆಯಂಗೆಯ್ದನು. ಆಗ ಚಾಣಕ್ಯನು ಮಲಯಕೇತುವಂ ನೋಡಿ—

ಅಯ್ಯಾ, ಆಯುಷ್ಮಂತನಾದ ರಾಜಪುತ್ರನೇ, ಪ್ರಬುದ್ಧನಾಗಿ ಶೂರನಾದ ಜಯಂತನೆಂಬ ಪುತ್ರನಂ ನೋಡಿ ದೇವೇಂದ್ರನು ಸಂತೋಷಪಡುವಂತೆ ರಾಜ್ಯಭಾರನಿರ್ವಾಹಕ್ಕೆ ಯೋಗ್ಯನಾದ ನಿನ್ನ ಶೌರ್ಯಮಂ ಈಕ್ಷಿಸಿ ನಿಮ್ಮ ತಂದೆಯು ಸಂತೋಷಭರಿತನಾಗುವುದಕ್ಕೆ ಇದೇ ಸಮಯವು. ಸೂರ್ಯನು ತನ್ನ ಕಿರಣಂಗಳಿಂದ ಅಂಧಕಾರಮಂ ಪರಿಹರಿಸಿ ಅದೇ ಕಿರಣಂಗಳಂ ಚಂದ್ರಾಗ್ನಿಗಳಲ್ಲಿ ನಿಲ್ಲಿಸಿ ಅವರ ಮುಖದಿಂದ ನಿಶಾಂಧಕಾರಮಂ ಹೇಗೆ ಪರಿಹಾರಂಗೈಸುವನೋ ಅದೇ ರೀತಿಯಲ್ಲಿ ಅನ್ಯೋನ್ಯಮಿತ್ರರಾಗಿ ಶೂರರಾದ ನಿಮ್ಮಿಬ್ಬರ ಶೌರ್ಯದಿಂದ ಶತ್ರುಗಳು ಸಂಹೃತರಾದುದಂ ನೋಡಿ ನಿಮ್ಮ ತಂದೆಗೆ ಸಂತೋಷವುಂಟಾದರೆ ಆಗ ಅತನು ರಾಜ್ಯಭಾರಚಿಂತೆಯಂಬಿಟ್ಟು ವಿಶ್ರಮಿಸಿಕೊಂಡಾನು. ಶತ್ರುಗಳಿಂದ ಖಿನ್ನನಾದ ಚಂದ್ರಗುಪ್ತನು ನಿನ್ನಲ್ಲಿ ಸ್ನೇಹಮಂ ಬಳಸಿ ತನ್ನ ಪಿತ್ರಾರ್ಜಿತವಾದ ರಾಜ್ಯದಲ್ಲಿ ನಿನಗೆ ಅರ್ಧಮಂ ಕೊಟ್ಟು ಕ್ಷೀರದಲ್ಲಿ ಉದಕವು ಬೆರೆದಂತೆಯೂ ಗಂಗಾತರಂಗದಲ್ಲಿ ಯಮುನಾತರಂಗವು ಸಂಗತವಾದಂತೆಯೂ ನಿಮ್ಮನ್ನು ಹೊಂದಿ ಯಶೋವಂತನಾದೇನೆಂದು ಬಯಸುತ್ತಿದ್ದಾನೆ. ಈ ಉಭಯರಾಜ್ಯಗಳಿಗೂ ಅರಸುಗಳಾಗಿ ಅಶ್ವಿನೀದೇವತೆಗಳಂತೆ ಅನ್ಯೋನ್ಯಮಿತ್ರರಾಗಿರುವ ನಿಮ್ಮಂ ನೋಡಿ ಮಿಕ್ಕ ಅರಸುಗಳೆಲ್ಲರೂ ನಿಮ್ಮಡಿಗಳಿಗೆ ಶಿರಂಗಳಂ ಬಾಗಿಸುವರು. ಈ ಅರ್ಧರಾಜ್ಯಮಂ ನಿಮಗೆ ಕೊಡುವುದಕ್ಕಾಗಿ ಚಂದ್ರಗುಪ್ತನ ಅಕ್ಷರದಿಂ ಬರೆದಿರುವ ಕಾಗದವಿದು. ಇದಂ ನಿಮ್ಮ ತಂದೆಗೆ ತೋರಿಸಬಹುದು. ಈ ಆಲೋಚನೆಯು ಶತ್ರುಗಳಿಗೆ ತಿಳಿಯುವುದಕ್ಕಿಂತ ಮುಂಚಿತವಾಗಿಯೇ ನಿಮ್ಮ ಸೇನಾಧೂಳೀನಿಕರವು ನಂದನಿತಂಬಿನೀ ಕುಚಕುಟ್ಮಲ ಕುಂಕುಮಪತ್ರರೇಖೆಯನ್ನಪಹರಿ ರಕ್ತಿಮೆಯಂ ಕೆಡಿಸಿದರೆ ನಮ್ಮ ಕಾರ್ಯವು ಕೈವಶವಾಗುವುದೆಂದು ತಿಳಿಯಬೇಕು. ಈ ಯರ್ಥವೆಲ್ಲಮಂ ನಿಮ್ಮ ತಂದೆಗೆ ತಿಳುಹಿಸುವವನಾಗು ಎಂದು ಹೇಳಿ ಅರ್ಧರಾಜ್ಯಮಂ ಕೊಡುವುದಕ್ಕೆ ಒಪ್ಪಿ ಬರೆದಿದ್ದ ಕಾಗದಮಂ ಕೊಟ್ಟು ಅತನಂ ಗಂಧಮಾಲ್ಯಾ

ದಿಗಳಿಂದುಪಚರಿಸಿ ಸುಮ್ಮಾನದಿಂ ಕಳುಹಿಸಲು ; ಆಗ ಮಲಯಕೇತುವು ಬಂದು ತಮ್ಮ ತಂದೆಗಭಿವಂದಿಸಿ—ಅಯ್ಯಾ, ತಂದೆಯೇ,

ಶ್ಲೋ ॥ ಆಕಾರೈನ್ನೈವಚತುರಾಸ್ತರ್ಕಯಂತಿ ಪರೇಂಗಿತಂ ॥
ಗರ್ಭಸ್ಥಂಕೇತಕೀಪುಷ್ಪಂ ಆಮೋದೇನೈವಷಟ್ಪದಾಃ ॥

ಟೀ॥ ಲೋಕದಲ್ಲಿ ಬುದ್ಧಿವಂತರಾದವರು ಆಕಾರದಿಂದಲೇ ಪರರ ಮನೋಭಿಪ್ರಾಯಂ ಊಹಿಸುತ್ತಾರೆ. ಅದು ಹೇಗೆಂದರೆ—ಭೃಂಗಗಳು ಪರಿಮಳದಿಂದಲೇ ಸೋಗೆಗಳ ಮಧ್ಯದಲ್ಲಿರುವ ತಾಳೆಯಹೂವನ್ನು ತಿಳಿಯುತ್ತಿವೆ ಎಂದು ನೀತಿಯಿರ್ಪುದು.

ಅದೇ ಪ್ರಕಾರವಾಗಿ ಭಾವಜ್ಞನಾದ ಚಾಣಕ್ಯನು ನಾನು ಹೋದ ಕ್ಷಣದಲ್ಲೇ ಕುಶಲಪ್ರಶ್ನಾನಂತರ ಪೂರ್ವದಲ್ಲಿಯೇ ಬರೆಸಿ ಇಟ್ಟಿರ್ದ ಅರ್ಧರಾಜ್ಯಪ್ರದಾನಸೂಚಕವಾದ ಚಂದ್ರಗುಪ್ತನ ಅಕ್ಷರದ ಈ ಕಾಗದಮಂ ಕೊಟ್ಟನು ಎಂದು ತೋರಿಸಲು ; ಅದಂ ನೋಡಿ ಮಲಯಕೇತುವಿನೊಡನೆ ಪರ್ವತೇಶ್ವರಂ—

ಶ್ಲೋ ॥ ಉದೀರಿತಾರ್ಥಃಪಶುನಾಪಿಗೃಹ್ಯತೇ ಹಯಾಶ್ಚ ನಾಗಾಶ್ಚ ವಹಂತಿ ಚೋದಿತಂ ॥
ಅನುಕ್ತಮಪ್ಯೂಹತಿ ಪಂಡಿತೋಜನಃ ಪರೇಂಗಿತಜ್ಞಾನ ಫಲಾಹಿಬುದ್ಧಯಃ ॥

ಟೀ॥ ಹೇಳಿದಂಥ ಅರ್ಥವು ಚತುಷ್ಪಾದಜಂತುಗಳಾದ ಪಶುಗಳಿಂದಲೂ ಗ್ರಹಿಸಲ್ಪಡುತ್ತಿದೆ. ಆನೆ ಕುದುರೆ ಇವುಗಳೂ ಕೂಡ ಸಂಜ್ಞೆಯನ್ನು ತಿಳಿಯುತ್ತಿವೆ. ಪಂಡಿತನಾದವನು ಹೇಳದೆಯೂ ಸಂಜ್ಞೆ ಮಾಡದೆಯೂ ಇರುವಂಥ ಪರರ ಮನೋಗತಾರ್ಥಮಂ ತಿಳಿಯುತ್ತಿದ್ದಾನೆ. ಬುದ್ಧಿಗಳಿಗೆ ಪರರ ಇಂಗಿತವನ್ನು ತಿಳಿಯುವುದೇ ಫಲವು ಎಂದು ನೀತಿಯುಂಟು.

ಹಾಗೇ ಪರರ ಮನೋಗತಮಂ ತಿಳಿಯುವುದರಲ್ಲಿ ಪರಮಪ್ರೌಢನಾದ ಚಾಣಕ್ಯನು ಪ್ರಯತ್ನಂಗೆಯ್ದ ಕಾರ್ಯಗಳೆಲ್ಲ ನಿರ್ವಿಘ್ನವಾಗಿ ಸಾಗುವುದರಲ್ಲಿ ಸಂದೇಹವಿಲ್ಲವೆಂದು ಪೇಳಿ ಗುಣವಂತನಾದ ಚಂದ್ರಗುಪ್ತನ ಕಾರ್ಯಕ್ಕೆ ನಾವೇ ತೆರಳುವುದು ಯುಕ್ತವೆಂದು ನಿಶ್ಚಯಿಸಿ ಪರ್ವತರಾಜನು ಸರ್ವಾಧಿಪತ್ಯಮಂ ಮಾಡುತ್ತಿರುವ ವಿರೋಚನನೆಂಬ ತಮ್ಮನಂ ನೋಡಿ—

ಅಯ್ಯಾ, ದೇವಸೇನಾಪತಿಯಂತೆ ಪರಾಕ್ರಮಶಾಲಿಯಾದ ವಿರೋಚನನೇ, ನಮಗೆ ಗೌಡದೇಶದಲ್ಲಿ ರಾಜಕಾರ್ಯವು ಒದಗಿರುವುದರಿಂದ ನಾವೇ ದಂಡಯಾತ್ರೆಗೆ ತೆರಳಬೇಕಾಗುತ್ತಿದೆ. ಕಿರಾತಾಧಿಪತಿಯಾದ ಮಾತಂಗನು ತನ್ನ ಸೇನಾಸಮೇತನಾಗಿ ಪಾಟಲೀಪುರವನ್ನಡ್ಡಗಟ್ಟುವುದಕ್ಕೆ ಮುಂಗಡೆಯಲ್ಲಿ ತೆರಳಲಿ. ಕುದ್ದಾಲಕನೆಂಬವನು ತನ್ನ ಆರು ಲಕ್ಷ ಕಾಮಾಟದವರಂ ತೆಗೆದುಕೊಂಡು

ಸೇನಾಮಾರ್ಗದ ಹಳ್ಳತಿಟ್ಟುಗಳಂ ಸಮಮಾಡುತ್ತ ಜಲವಿಲ್ಲದ ಕಡೆಯಲ್ಲಿ ಜಲ
ವನ್ನುಂಟುಮಾಡುತ್ತ ಅಲ್ಲಲ್ಲಿ ಜನಗಳಿಗೆ ಶ್ರಮವು ತೋರದಂತೆ ಅರವಟ್ಟಿಗೆಗಳಂ
ರಚಿಸುತ್ತ ಸೇನೆಗೆ ಬೇಕಾದಷ್ಟು ತೃಣಕಾಷ್ಠಂಗಳನ್ನೊದಗಿಸುತ್ತ ಮುಂದೆ ನಡೆ
ಯಲಿ. ದಾಶನೆಂಬುವನು ಮಾರ್ಗಮಧ್ಯದ ನದಿಗಳಲ್ಲಿ ಸೇನೆಗೆ ಆಯಾಸವಿಲ್ಲದಂತೆ
ದಾಟುವುದಕ್ಕೆ ಮೂವತ್ತುಸಾವಿರ ನಾವೆಗಳಂ ಜೊತೆಗೊಳಿಸಿ ಕಾದಿರಲಿ.
ಸೇನಾಪತಿಯಾದ ಶೇಖರನು ಅಹೋರಾತ್ರಿಗಳಲ್ಲಿ ಶತ್ರುಗಳ ಗಮನಾಗಮನಂ
ಗಳಂ ತಿಳಿದು ದಂಡಿಸುತ್ತ ಸೇನೆಗೆ ಒದಗುವ ಧನಧಾನ್ಯಗಳಂ ರಕ್ಷಿಸುತ್ತ ಶತ್ರು
ಗಳ ಗೂಢಚಾರರಂ ಬಂಧಿಸುತ್ತ ದೀನಾನಾಥರಿಗೆ ಅನ್ನೋದಕಂಗಳನ್ನೊದಗಿ
ಸುತ್ತ ಉಚಿತಸ್ಥಳಗಳಲ್ಲಿ ರಾಜಯೋಗ್ಯವಾದ ಗೂಡಾರಂಗಳಂ ರಚಿಸುತ್ತ
ಸೇನಾಜನರಂ ಪ್ರೋತ್ಸಾಹಗೊಳಿಸುತ್ತ ತೆರಳಲಿ. ನಮ್ಮ ಸಾಮಂತನರಪತಿ
ಯಾದ ಮಗಧನು ವ್ಯೂಹಮಂ ರಚಿಸಿಕೊಂಡು ನಮ್ಮ ಪುರೋಭಾಗದಲ್ಲಿ ನಡೆ
ಯಲ್ಲಿ ಗಾಂಧಾರ ಶಕ ಚೀನ ಹೂಣದೇಶಾಧಿಪತಿಗಳು ರಾಜಗುಪ್ತನಾದ ಚಂದ್ರಗು
ಪ್ತನ ಅಂಗರಕ್ಷಕರಾಗಿ ಬರಲಿ. ಕುಲೂತಪತಿ ಚಿತ್ರವರ್ಮನೂ ಮಲಯಪತಿ
ಸಿಂಹನಾದನೂ ಕುಮಾರಕನಾದ ಮಲಯಕೇತುವಿನ ಪಾರ್ಶ್ವದಲ್ಲಿ ಬರಲಿ. ಕಾಶ್ಮೀ
ರಪತಿ ಪುಷ್ಕರಾಕ್ಷನು ಕುಮಾರಕನ ಮುಂಗಡೆಯಲ್ಲಿಯೂ ಸಿಂಧುಪತಿ ಸಿಂಧು
ಷೇಣನು ಹಿಂಗಡೆಯಲ್ಲಿಯೂ ಬರಲಿ. ಪಾರಶೀಕಪತಿ ಮೇಘನಾದಾದಿಗಳು
ಶತ್ರುಗಳ ಗಡಿಗಳನ್ನೂ ದುರ್ಗಗಳನ್ನೂ ಸಾಧಿಸುತ್ತ ಸೇನಾಸಂಭಾರವನ್ನೊದ
ಗಿಸುತ್ತ ನಡೆಯಲಿ. ನಮ್ಮ ಸೋದರಮಾವನಾದ ಅಂಗಾರವರ್ಮನು ಪಾರ್ವ
ತೀಯ ಸೇನೆಯಲ್ಲಿ ಅರ್ಧಮಂ ನಿಲ್ಲಿಸಿಕೊಂಡು ಈ ಪುರದೇಶಮಂ ರಕ್ಷಿಸುತ್ತ
ಉಲೂಕ ಮಂತ್ರಿ ಸಮೇತನಾಗಿ ಅಂತಃಪುರಾದಿ ಯೋಗಕ್ಷೇಮಂಗಳಂ ಬರೆಸಿ
ಕಳುಹಿಸುತ್ತ ಇಲ್ಲಿಯೇ ಇರಲಿ. ನೀನು ನನ್ನ ಸಂಗಡಲೇ ಇರುವವನಾಗು.
ಈಗ ಈಶಾನ್ಯದಿಕ್ಕಿನಲ್ಲಿ ಪ್ರತಿಷ್ಠಿತವಾಗಿರುವ ನಮ್ಮ ಸೇನಾಧ್ವಜವು ಅಘನಾ
ಶಿನೀತೀರದಲ್ಲಿ ಸ್ಥಾಪಿತವಾಗಲಿ ಎಂದು ಅಜ್ಞಾಪಿಸಿದನು. ವಿರೋಚನನು
ರಾಜಾಜ್ಞೆಯಂ ಕೈಕೊಂಡು ಅದೇ ರೀತಿಗೆ ಶೇಖರ ಮುಖ್ಯರಾದ ಸಾಮಂತ
ರಾಜರಿಗೆ ನೇಮಿಸಲು ; ಆಗ ಅವರೆಲ್ಲರೂ ತಮ್ಮ ತಮ್ಮ ಸೇನೆಗಳಂ ಪ್ರಯಾಣ
ಸನ್ನದ್ಧವಾಗುವಂತೆ ನಿಯೋಗಿಸಿದರು. ಆ ಸಮಯದಲ್ಲಿ ಪ್ರಯಾಣಸೂಚಕ
ವಾದ ಭೇರೀಧ್ವನಿಯು ದಿಙ್ಮಂಡಲಮಂ ತುಂಬಿತು. ಆ ಶಬ್ದಮಂ ಕೇಳಿ
ಚಾಣಕ್ಯನು ಚಂದ್ರಗುಪ್ತನಂ ಕುರಿತು—ಮಲಯಕೇತುವಿನ ಕೈಯಲ್ಲಿ ನಾವು

ಕೊಟ್ಟ ಕಾಗದಮಂ ಪರ್ವತೇಶ್ವರನು ನೋಡಿಕೊಂಡು ಇದು ತನ್ನ ಮನಃಪ
ರೀಕ್ಷಾರ್ಥವಾದುದು ಎಂದು ತಿಳಿದು ಹಿಂದಕ್ಕೆ ಕಳುಹಿಸದೆ ಬಹುಲಾಭಮಂ
ಪಡೆದವನಂತೆ ಉತ್ಸಾಹವಂತನಾಗಿ ಸೇನಾಪ್ರಯಾಣಸೂಚಕವಾದ ಭೇರೀಧ್ವನಿ
ಗಳಂ ಮಾಡಿಸುವನಾಬುದರಿಂದ ಈಗ ನಾವು ಮಾಡಿದ ಉಪಕಾರವು ಕೃತಘ್ನು
ನಾದ ರೋಗಿಗೆ ಮಾಡಿದ ಚಿಕಿತ್ಸೆಗೆ ಸದೃಶವಾಯಿತು. ನಮ್ಮ ಕಾರ್ಯಲಾಭಾನಂ
ತರದಲ್ಲಿ ಅರ್ಧರಾಜ್ಯಮಂ ಕೊಡಬೇಕೆಂಬ ಶಬ್ದಮುಂಟಾಗುವುದು. ಆಗಲಿ.
ಆಗ್ಗೆ ಪ್ರಕೃತೋಚಿತವಾಗಿ ನಡೆಯಬಹುದು ಎಂದು ಹೇಳಿ ನಿದ್ರಾಸಕ್ತನಾಗಲು ;
ಆಗ ಚಂದ್ರಗುಪ್ತನು ಸೇವಕರಿಂ ರಚಿಸಿದ ಮೃದುತಲ್ಪದಲ್ಲಿ ನಿದ್ರಾಸುಖದಿಂದ
ಆ ರಾತ್ರಿಯಂ ಕಳೆದನು.

ಆಗ ತರುಣತಮಾಲಕದಳಿಕಾನಿಕರಗಳಿಂದಲೂ ವಿರಳಜಲಧಿಜಲಕಲ್ಲೋ
ಲಶೀಕರಗಳಿಂದಲೂ ಶೀತಳವಾದ ಪಶ್ಚಿಮಾಚಲವನವೀಥಿಯಂ ಚಂದ್ರನಾಶ್ರಯಿಸಿ
ದನು. ತಮಿಸ್ರವು ಚಂದ್ರಗುಪ್ತನ ಹೃದಯದುಃಖಾಂಧಕಾರದಂತೆ ಮೆಲ್ಲಮೆಲ್ಲನೆ
ತೊಲಗುತ್ತಿದ್ದಿತು. ಅನವರತ ಶರಾಸನಾಕರ್ಷಣ ಶ್ರಮವಿಹ್ವಲಮದನ ವಿಶ್ವಾಸ
ಗಳಂತೆ ಉಷಃಕಾಲದ ತಂಗಾಳಿಗಳು ಎಲ್ಲಾ ಕಡೆಯಲ್ಲಿಯೂ ಬೀಸಿದುವು.
ಚಂದ್ರಗುಪ್ತನ ಪ್ರಿಯಜನಮುದಿತಮಾನಸಸರೋಜಂಗಳಂತೆ ವಿಕಚಾಂಬುಜನಿಕ
ರಂಗಳಲ್ಲಿ ರಕ್ತಿಮೆಯುದಯಿಸುತ್ತಿದ್ದಿತು. ಪ್ರಾಚೀವನಿತೆಯು ಪೂಸಿದ ಕುಂಕು
ಮಪಂಕದಂತೆ ರಾಜೀವಬಾಂಧವನು ಅರುಣಛವಿಯಿಂದ ರಂಜಿಸುತ್ತಿದ್ದನು. ಆಗ
ಚಂದ್ರಗುಪ್ತನು ಎದ್ದು ವಿಪ್ರಯುಗ್ಮಧೇನುದರ್ಶನಮಂಮಾಡಿ ಸ್ನಾನಾದಿಗಳಂ
ನೆರವೇರಿಸಿ ಅಲಂಕೃತನಾದನು. ಅಷ್ಟರಲ್ಲಿಯೇ ಪರ್ವತರಾಜನೆದ್ದು ಮಜ್ಜನಮಂ
ಮಾಡಿ ಅಲಂಕೃತನಾಗಿ ಶುಭಲಗ್ನದಲ್ಲಿ ವಿಪ್ರರ್ಗೆಬಹುಧನರತ್ನಗಳಂ ಯಾತ್ರಾ
ದಾನಂಗೆಯ್ದು ತನ್ನ ಅಂತಃಪುರಸ್ತ್ರೀಜನವನ್ನೊಡಂಬಡಿಸಿ ತನ್ನ ಇಷ್ಟದೇವತೆಗೆ
ನಮಸ್ಕರಿಸಿ ಹೊರಟು ದೇಶಾಧಿಪತಿಗಳಂ ಪರಿವೃತನಾಗಿ ಆಸ್ಥಾನದ ಬಳಿಗೆ
ಬಂದನು. ಆಗ ಗಾಂಧಾರ ಶಕ ಚೀನ ಹೂಣಾಧಿಪತಿಗಳು ಚಂದ್ರಗುಪ್ತನಿಗೆ
ವಂದನೆಗಳಂ ಮಾಡಿ ವಿಶ್ವಾಸದಿಂದ ಒಲೈಸುತ್ತಿದ್ದರು. ವಂದಿಮಾಗಧರು ಜಯ
ಜಯವೆಂದು ಹೊಗಳುತ್ತಿದ್ದರು. ಆ ಸಮಯದಲ್ಲಿ ರಾಜಭಟರು ಬಂದು
ಅಲಂಕೃತನಾಗಿರುವ ಚಂದ್ರಗುಪ್ತನಿಗೆ ಅಭಿವಂದಿಸಿ—

ಬುದ್ಧೀ, ರಾಜೋತ್ತಮರಾದ ಚಂದ್ರಗುಪ್ತರಾಜರೇ, ಸೇನೆಯೆಲ್ಲವೂ
ಮಹಾರಾಜಾಜ್ಞೆಯಿಂದ ಗೌಡದೇಶಗಳಿಗೆ ಪ್ರಯಾಣವಾಗಿ ಹೊರಟು ಸಿದ್ಧ

ವಾಗಿದೆ. ಪ್ರಭುಸಿರೂಪದ ಮೇರೆಗೆ ತಾವು ಕುಳ್ಳಿರುವುದಕ್ಕೆ ಅಳಗಿರಿ ಎಂಬ ಮದದಾನೆಯು ಅಲಂಕೃತವಾಗಿ ಬಂದು ನಿಂತಿದೆ. ಚಾಣಕ್ಯರು ಕುಳ್ಳಿರುವುದಕ್ಕೆ ಶ್ಲಾಘ್ಯವಾದ ಅಂದಳವು ಇಳುಹಿದೆ. ಮಹಾರಾಜರು ತಮ್ಮ ಕುಮಾರರು ಸಮೇತರಾಗಿ ನಿಮ್ಮನ್ನಿದಿರುನೋಡುತ್ತಿದ್ದಾರೆ. ಹಾಗೇ ಅರಸುಗಳೆಲ್ಲರೂ ಕಾದುಕೊಂಡಿದ್ದಾರೆ. ತಡವೇಕೆ? ದಿಗ್ವಿಜಯಮಂ ಮಾಡಬಹುದೆಂದು ಬಿನ್ನೈಸಲು ; ಆಗ ಚಂದ್ರಗುಪ್ತನು ಇಷ್ಟದೇವತಾಭಿವಂದನಮಂ ಮಾಡಿ ಚಾಣಕ್ಯರಿಗಡ್ಡಬಿದ್ದು ಅವರ ಆಶೀರ್ವಾದಮಂ ಕೈಕೊಂಡು ಮುಕ್ತಾಫಲಚಿತ್ರಿತಮಾದ ಆಂದೋಳಿಕೆಯಲ್ಲಿ ಅವರಂ ಕುಳ್ಳಿರಿಸಿ ಪ್ರದಕ್ಷಿಣೆಯಾಗಿ ಬಂದು ತಾನು ಗಜಾರೋಹಣಮಂ ಮಾಡಿದನು. ಹಾಗೆ ಮಲಯಕೇತುವು ದ್ವಿರದಸ್ಕಂಧವನ್ನೇರಿದನು. ಸೇನಾಸಮೇತರಾಗಿ ಪಾರ್ಶ್ವಗಳಲ್ಲಿ ತೆರಳುತ್ತಿರುವ ಮಲಯಕೇತು ಚಂದ್ರಗುಪ್ತರಿಂದೊಡಗೂಡಿದ ಪರ್ವತೇಶ್ವರನು ಚಂದ್ರಸೂರ್ಯರಿಂ ಪ್ರಕಾಶಿಸುವ ಮೇರುಭೂಧರದಂತೆ ಒಪ್ಪಿದನು. ಹಾಗೆಯೇ ವಿರೋಚನನು ಸೇನಾಪರಿವೃತನಾಗಿ ಗಜವನ್ನೇರಿ ಪರ್ವತೇಶ್ವರನಂ ಹೊಂದಿ ಬಂದನು. ಆಗ ಆನಕ ಭೇರೀನಿಸ್ಸಾಳ ಕಹಳಾದಿ ವಾದ್ಯಗಳು ಪ್ರಪಂಚಮಂ ಶಬ್ದಮಯಮಾದಂತೆ ಮಾಡುತ್ತಿದ್ದುವು.

ಆ ಸಮಯದಲ್ಲಿ ಸಸಂಭ್ರಮದಿಂ ನಡೆವ ಗಜಾವಳಿಗಳಿಂ ಕೆದರಿದ ಛತ್ರಪಙ್ಕ್ತಿಗಳಿಂ ಹೊಳೆ ಹೊಳೆವ ತುರಗನಿಕರಗಳಿಂ ಚಲಿಸುವ ಚಾಮರಕದಂಬದಿಂ ಪ್ರೋನ್ನತಧ್ವಜ ಪತಾಕೆಗಳಿಂ ಭೂಮಂಡಲವೆಲ್ಲವೂ ತುರಗಮಯವಾದಂತೆಯೂ ದಿಕ್ತಟಗಳು ಕುಂಜರಮಯವಾದಂತೆಯೂ ಅಂತರಿಕ್ಷವು ಛತ್ರಮಯವಾದಂತೆಯೂ ನಭೋಮಂಡಲವು ಧ್ವಜಪತಾಕಾಮಯವಾದಂತೆಯೂ ಪ್ರಜಾನಿಕರವು ಭೂಪಾಲಮಯವಾದಂತೆಯೂ ಸೂರ್ಯಾತಪವೆಲ್ಲವೂ ಆಭರಣಪ್ರಭಾಮಯವಾದಂತೆಯೂ ಮಾರುತಗಳು ಮದೋದಕಗಂಧಮಯವಾದಂತೆಯೂ ಲೋಕವೆಲ್ಲವೂ ಜಯಶಬ್ದಮಯವಾದಂತೆಯೂ ತೋರುತ್ತಿದ್ದುವು. ಪ್ರಳಯಕಾಲವಲಾಹಕ ನಿನದದಂತೆಯುಂ ಮಂದರಕ್ಷೋಭೆಯಿಂ ಚಲಿಸುವ ಸಮುದ್ರಘೋಷದಂತೆಯುಂ ಮೊಳಗುತ್ತಿರುವ ಪ್ರಯಾಣಭೇರೀನಿನಾದದಿಂ ಕುಲಾಚಲಗುಹಾಂತರಾಳಂಗಳಲ್ಲಿ ಪ್ರತಿಧ್ವನಿಯುಂಟಾಗುತ್ತಿರಲು ; ಆಗ ಪರ್ವತರಾಜನ ಸೇನೆಯು ಅಘನಾಶಿನಿಯೆಂಬ ನದಿಯ ತೀರದಲ್ಲಿರುವ ಮಹಾವನಪಙ್ಕ್ತಿಯಲ್ಲಿಳಿದಂಥದಾಯಿತು. ಹಿಮಾಚಲಶಿಖರದಂತೆ ಉನ್ನತಗಳಾಗಿರುವ ಕನಕಕಲಶಸಹಸ್ರ

ಶೋಭಿತಗಳಾದ ಪಟಗೃಹಪಜ್ತಿಗಳಲ್ಲಿ ಅರಸುಗಳೆಲ್ಲರೂ ಇಳಿದು ವಿಶ್ರಮಿಸಿ ಕೊಳ್ಳುತ್ತಿರಲು; ಶತ್ರುಭಯಂಕರನಾದ ಪರ್ವತೇಶ್ವರನಿಗೆ ಪಾರ್ಶ್ವಪುರೋಭಾಗದ ದೇಶಾಧಿಪತಿಗಳು ಭಯವಿಶ್ವಾಸಗಳಿಂದ ಅವನತಶಿರೋಭೂಷಣಗಳುಳ್ಳವರಾಗಿ ಧನಕನಕರತ್ನರೂಪವಾದ ಕಪ್ಪಂಗಳನೊಪ್ಪಿಸುತ್ತಿದ್ದರೆಂಬಲ್ಲಿಗೆ ಮುದ್ರಾಮಂಜೂಷವೆಂಬ ಗ್ರಂಥದಲ್ಲಿ ಪರ್ವತರಾಜಸೇನಾಗಮನ ಕಥನವೆಂಬ ಚತುರ್ಥಾಶಯವು ಸಮಾಪ್ತವಾದುದು.

---

## ಪಂಚಮಾಶಯ ಪ್ರಾರಂಭವು.

---

### ರಾಕ್ಷಸ ಭೇದೋಪಾಯ ಭಂಗವು.

ಅನಂತರದಲ್ಲಿ ಆ ಸೇನೆಯ ಬೇಹುಗಾರರು ಶತ್ರುಗಳ ಗೂಢಚಾರರನ್ನವರ ವೇಷಭಾಷಾವ್ಯತ್ಯಾಸಂಗಳಿಂ ತಿಳಿದು ಹಿಡಿದು ಬಂಧಿಸಿ ಚಂದ್ರಗುಪ್ತನಿಗೆ ಒಪ್ಪಿಸಲು; ಅವನವರಂ ನೋಡಿ—ನೀವು ಪ್ರಾಣಸಹಿತವಾಗಿ ನಿಮ್ಮ ದೇಶಕ್ಕೆ ಹೋಗಬೇಕಾದರೆ ನಿಮ್ಮ ನಿಶ್ಚಯಮಂ ಹೇಳಿರಿ ಎಂದನು. ಆ ಮಾತಿಗೆ—

ಬುದ್ಧೀ, ಅಭಯವಾದರೆ ಹೇಳುವೆವು. ನಾವು ಪಾಟಲೀಪುರದ ಅಮಾತ್ಯ ರಾಕ್ಷಸರಿಂದ ದೇಶಾಂತರವರ್ತಮಾನವಂ ತಿಳಿದು ಬಂದು ಹೇಳುವಂತೆ ಮೊದಲೇ ನಿಯಮಿಸಿ ಕಳುಹಿಸಲ್ಪಟ್ಟಿದ್ದ ಚಾರರು. ಈ ಪರ್ವತರಾಜ್ಯವೇ ಮುಂತಾದ ಉತ್ತರ ದೇಶಗಳಲ್ಲಿ ನಡೆದ ವರ್ತಮಾನವಂ ತಿಳಿದು ವೇಳೆವೇಳೆಗಳಲ್ಲಿ ಹೋಗಿ ಅಮಾತ್ಯ ರಾಕ್ಷಸರಿಗೆ ತಿಳುಹಿಸುವುದೇ ನಮ್ಮ ಉದ್ಯೋಗವು. ಇದರಲ್ಲಿ ಲೇಶಮಾತ್ರವೂ ವಂಚನೆಯಿಲ್ಲ ಎಂದು ಹೇಳಿದರು. ಅದಂ ಕೇಳಿ ಚಂದ್ರಗುಪ್ತನು ತನ್ನ ಬಳಿಯ ದೂತರ ಮುಖವಂ ನೋಡಿ ಈ ಚಾರರಿಗೆ ನಮ್ಮ ಸೇನೆಗಳೆಲ್ಲಮಂ ತೋರಿಸಿ ಕಶೆಗಳಿಂದ ಹತ್ತು ಪ್ರಹಾರಂಗೆಯ್ದು ದಂಡಿನಿಂದ ಹೊರಡಿಸಿಬಿಡಿರಿ ಎಂದು ನೇಮಿಸಿದನು. ಆ ದೂತರು ಅದೇಪ್ರಕಾರವಾಗಿ ಮಾಡಲು ಆ ಚಾರರು ಮೊದಲು ವನದಲ್ಲಿ ಕಟ್ಟಿದ್ದ ತಮ್ಮ ತುರಗಂಗಳನ್ನೇರಿ ಅತಿಶೀಘ್ರವಾಗಿ ಪಾಟಲೀಪುರಮಂ ಕುರಿತು ಬರುತ್ತಿದ್ದರು. ಇತ್ತಲಾಗಿ ಪರ್ವತರಾಜನ ಸೇನಾಜನರು ಗೌಡದೇಶವಂ ವ್ಯಾಪಿಸುತ್ತಿರಲು; ಆಗ ರಾಕ್ಷಸನು ಪಾಟಲೀಪುರದಲ್ಲಿ ಮಹೋತ್ಪಾತಗಳಾಗುವುದಂ ಕಂಡು ಇದೇನು ವಿಪರೀತವೋ! ಎಂದು ಯೋಚಿಸುತ್ತಿರುವ ಸಮಯದಲ್ಲಿ ಗೂಢಚಾರನೊಬ್ಬನು ಬಂದು—ಬುದ್ಧೀ, ಅಮಾತ್ಯರೇ, ನಮ್ಮ

ದೇಶದ ಗಿಡನಾಡಿನ ಪ್ರಜೆಗಳು ಪರದೇಶದ ಮ್ಲೇಚ್ಛೋಪದ್ರವದಿಂದ ವಲಸೇ ಹೋದರಂತೆ ಎಂದು ವಿಜ್ಞಾಪಿಸಲು; ಅದಂ ಕೇಳಿ ಮೊದಲು ನಾವು ತುಂಟ ಪಾಳ್ಯಗಾರರಿಗೆ ಒಂದೆರಡು ಗ್ರಾಮವನ್ನಾದರೂ ಕೊಡದೆ ನಿರಾಕರಿಸಿ ಓಡಿಸಿ ದುದರಿಂದ ಅವರು ಈ ಕಾರ್ಯವನ್ನಾಚರಿಸಿ ಇರಬೇಕು. ಹೊಟ್ಟೆಗಿಲ್ಲದಿದ್ದರೆ ಅವರೇನು ಮಾಡಿಯಾರು ? ಅವರಿಗೆ ಜೀವನಕ್ಕೆ ಒಂದೆರಡು ಗ್ರಾಮಮಂ ನಡಿಸಿ ಕೊಡುವಂತೆ ನಾವು ಹೇಳಿದೆವೆಂಬುದಾಗಿ ಕಟ್ಟು ಕರಣಿಕರಿಗೆ ಹೇಳುವವನಾಗು ಎಂದು ದೂತನಿಗೆ ನೇಮಿಸಿದನು. ಆ ಮರುದಿವಸ ಮತ್ತೊಬ್ಬ ಚಾರನು ಬಂದು—ಬುದ್ಧೀ, ಅಮಾತ್ಯರೇ, ನಮ್ಮ ದೇಶದ ತಲೆಕಟ್ಟಿನಲ್ಲಿ ಶತ್ರುಗಳಿಗೆ ದುರ್ಗಮವಾದ ದುರ್ಗಂಗಳೈದು ಪಾರಶೀಕರ ವಶವಾದವಂತೆ. ಆ ವರ್ತಮಾನವಂ ತಂದ ಭಟನಿವನು ಎಂದು ತೋರಿಸಿದನು. ಅದಂ ಕೇಳಿ ಇದೇನೈ? ಒಮ್ಮಿಂ ದೊಮ್ಮೆ ಹೀಗೆ ಆಗುವುದುಂಟೇ ? ಯಾರೋ ಮಲಿನರತ್ನಗಳಿಗೂ ವಸ್ತ್ರಗಳಿಗೂ ಬಣ್ಣಮಂ ಹಾಕುವ ಬಣ್ಣಗಾರರು ಕಲ್ಪಿಸಿದ ಮೃಷಾವರ್ತಮಾನವಾಗಿದ್ದೀತು. ಒಳ್ಳೆಯದು ! ವಿಚಾರಿಸುವೆವು ಹೋಗೆಂದು ಹೇಳಿದನು. ಮತ್ತೆ ಸಾಯಂಕಾಲ ದಲ್ಲಿ ಒಬ್ಬ ದೂತನು ಬಂದು—ಸ್ವಾಮಿಾ, ಅಮಾತ್ಯರೇ, ಕಾಶಪ್ರಸ್ಥದಲ್ಲಿದ್ದ ನಮ್ಮ ತುರಗಸೇನೆಗೂ ಶಕಸೇನೆಗೂ ಮಹಾಯುದ್ಧವಾಗಿ ನಮ್ಮ ಅಶ್ವಗಳು ಬಹಳ ನಷ್ಟವಾದುದರಿಂದ ರಾಮಸಿಂಗನೆಂಬ ನಮ್ಮ ಕಡೆಯ ಸರದಾರನು ನಿರ್ವಹಿಸಲಾರದೆ ಗತಪ್ರಾಣನಾಗಲು; ಅವನ ಮಕ್ಕಳಂ ಕೈಸೆರೆ ಹಿಡಿದರಂತೆ. ಆ ಗಡಿಯು ಸಹ ಅವರ ವಶವಾಯಿತೆಂದು ಅಲ್ಲಿದ್ದ ಅಂಚೆಯ ಹರಿಕಾರನು ಬರೆಸಿ ಕಳುಹಿಸಿದ ಪತ್ರಿಕೆ ಇದು ಎಂದು ಆ ಕಾಗದಮಂ ಕೊಡಲು; ಅದನ್ನು ನೋಡಿ ರಾಕ್ಷಸನು ಮನದೊಳು ಆತಂಕ ಪಡುತ್ತ ಶಕಸೇನೆಯೆಲ್ಲಿಯದು ? ಪಾರಶೀಕರೆಂಬ ಬಹುದೂರದೇಶಾಧಿಪತಿಗಳ ಸೇನೆಯು ಇಲ್ಲಿ ಬರುವುದಕ್ಕೆ ಕಾರಣವೇನು ? ಏನು ವಿಪರೀತಕಾಲವೋ ! ಶಿವ ಶಿವಾ ! ಎಂದು ರಾತ್ರಿಯೆಲ್ಲ ನಿದ್ರೆ ತಟ್ಟದೆ ಇದ್ದು ಪ್ರಾತಃಕಾಲದಲ್ಲೆದ್ದು ಹೊರಗೆ ಬರುತ್ತಿರಲು; ಆಗ ಮತ್ತೊಬ್ಬ ದೂತನು ಬಂದು—ಬುದ್ಧೀ, ಕ್ರೌಂಚಪ್ರಸ್ಥವೆಂಬ ನಮ್ಮ ದೊಡ್ಡ ಗಡಿಯಂ ಕಾದುಕೊಂಡಿದ್ದ ಲಕ್ಷಪದಾತಿಯು ನಾಲ್ಕುತಿಂಗಳುಗಳ ಸಂಬಳ ಸಲ್ಲದೆ ಇದ್ದುದರಿಂದ ಸಿಂಧುಪತಿಯ ತುರಗಸೇನೆಯಂ ಕಂಡು ಜಗಳವಾಡದೆ ಬಹುವಸ್ತು ಸಮೃದ್ಧವಾದ ಆ ಗಡಿಯಂ ಬಿಟ್ಟು ಆಯುಧಮಂ ಕೊಟ್ಟು ಓಡಿ ಹೋಯಿತಂತೆ.

ನೆರೇ ಗಡಿಯ ದುರ್ಗಪಾಲಕನು ಇದಂ ತಿಳಿದು ಉಷ್ಟ್ರಾರೂಢರಾದ ಚಾರರ
ಕೈಯ್ಯಲ್ಲಿ ಕಳುಹಿಸಿದ ಲೇಖನವಿದು ಎಂದು ಮುಂದಿರಿಸಲು; ಅದಂ ನೋಡಿ
ರಾಕ್ಷಸನು ವಿಸ್ಮಿತನಾಗಿ ತನ್ನ ಸಮೀಪಕ್ಕೆ ಬಂದಿದ್ದ ಸುಮತಿ ಎಂಬ ಮಂತ್ರಿ
ಯಂ ಕುರಿತು—

ಅಯ್ಯಾ, ಮಿತ್ರನೇ, ಈ ವರ್ತಮಾನವಂ ಕೇಳಿದೆಯಾ? ನಮ್ಮ ದೇಶಕ್ಕೆ
ಈಗ ಏನೋ ಸ್ವಲ್ಪ ಆತಂಕವು ಸಂಭವಿಸುವಂತೆ ತೋರುತ್ತಿದೆ. ಶಕಪಾರಸೀಕ
ಸಿಂಧುಪತಿಗಳ ಸೇನೆಗಳು ನಮ್ಮ ಗಡಿಗಳನ್ನೂ ದುರ್ಗಂಗಳನ್ನೂ ಹಿಡಿದು
ತಮ್ಮ ಕೈವಶಮಂ ಮಾಡಿಕೊಂಡರಂತೆ. ಬಹುದೂರದೇಶಾಧಿಪತಿಗಳೆಲ್ಲರೂ
ಕೃತಸಂಕೇತರಾಗಿ ಮಹಾಬಲಿಷ್ಠರಾದ ನಮ್ಮ ಮೇಲೆ ದಂಡೆತ್ತಿ ಬರುವುದಕ್ಕೆ
ಏನು ನಿಮಿತ್ತವೋ? ಇವರು ಬೇರೇ ಸ್ವತಂತ್ರರಲ್ಲ. ಇವರೆಲ್ಲರೂ ಪರ್ವತ
ದೇಶಾಧಿಪತಿಯ ವಶವರ್ತಿಗಳಾಗಿ ಇರತಕ್ಕವರು. ಆ ಪರ್ವತೇಶ್ವರನಿಗೆ ಅಭಿ
ಮತವಿಲ್ಲದೆ ಬಂದು ಈ ದುರಾಗತಮಂ ಮಾಡಿದ್ದರೆ ಈ ದೇಶಾಧಿಪತಿಗಳಂ
ಹಿಡಿದುತಂದು ಸೀಳಿಸಿ ತೋರಣಸ್ತಂಭಕ್ಕೆ ಕಟ್ಟಿಸುವೆನು. ಆತನ ಸಮ್ಮತಿಯಿಂದ
ಈ ಕಾರ್ಯವಂ ಮಾಡಿ ಇದ್ದರೆ ಮೊದಲು ನಮ್ಮಿಂದ ಉಪಕಾರವಂ ಮಾಡಿಸಿ
ಕೊಂಡು ಇರುವ ಪರ್ವತರಾಜನು ಕೃತಘ್ನನಾಗಿ ನಮ್ಮ ಸಖ್ಯವಂ ಮರೆತು
ಸ್ವಬಲಪರಬಲಜ್ಞಾನರಹಿತನಾಗಿರುವ ವಿಷಯದಲ್ಲಿ ಆತನಿಗೇನೋ ಉನ್ಮಾದದಶೆ
ಯುಂಟಾಗಿರಬೇಕು. ಅಥವಾ ದೈವಬಲವು ನಷ್ಟವಾಗಿರಬೇಕು. ಹಾಗಿಲ್ಲದೆ
ಇಲ್ಲಿ ಶತ್ರುವಿನ ಆಗಮನಕ್ಕೆ ಕಾರಣಗಳಾದ ಪ್ರಮಾದಗಳೇನೂ ಉಂಟಾದು
ದಿಲ್ಲ. ಆ ಪ್ರಮಾದಗಳಾವುವೆಂದರೆ—ಪ್ರಜಾಯೋಗಕ್ಷೇಮವಂ ವಿಚಾರಿಸದೆ
ಇರುವುದು. ನಾಣ್ಯಗಳಲ್ಲಿ ಎಡವಟ್ಟು ಬರುವುದು. ಅಳತೆಗಳಲ್ಲಿ ಮಿತಿಯಿಲ್ಲದೆ
ಇರುವುದು. ಧಾರಣೆಗಳಲ್ಲಿ ಹೆಚ್ಚು ಕಡಮೆಯಾಗುವುದು. ಅನ್ಯಾಯಗಳಲ್ಲಿ
ಪಕ್ಷಪಾತವುಂಟಾಗುವುದು. ಸ್ವಾಮಿಭೃತ್ಯರಿಗೆ ಮನಸ್ತಾಪವು ಬರುವುದು.
ಮಂತ್ರಿಗಳು ಸ್ವಾಮಿಭಕ್ತಿಯಂ ಬಿಡುವುದು. ಅಪೂಜ್ಯರು ಪೂಜ್ಯರಾಗುವುದು.
ರಾಜ್ಯಾಧಿಪತ್ಯವು ಸ್ತ್ರೀಯರಿಗೆ ಉಂಟಾಗುವುದು. ಮಂತ್ರಿಯ ರಹಸ್ಯವು ದುಷ್ಟ
ಸ್ತ್ರೀಯರುಗಳಿಗ ತಿಳಿಯುವುದು. ರಾಜ್ಯಕ್ಕೆ ಬಹುನಾಯಕರುಂಟಾಗುವುದು.
ಸಚಿವರಿಲ್ಲದ ಬಾಲಕರಿಗೆ ಪ್ರಭುಪದವು ದೊರಕುವುದು. ಕೋಶಗಳಲ್ಲಿ ಆಕಾ
ಶವೇ ಉಳಿಯುವುದು. ನಾಸ್ತಿಕವಾದವು ಹೆಚ್ಚಿ ಬರುವುದು. ವೇತನಗಳು
ಭೃತ್ಯರಿಗೆ ಕಾಲಕಾಲಗಳಿಗೆ ಸರಿಯಾಗಿ ಸಲ್ಲದೇ ಇರುವುದು. ಪ್ರಜೆಗಳು ವಿಹಿ

ತಮಂ ವಿೂರುವುದು. ಅಧಿಕಾರಿಗಳು ಲಂಚಕ್ಕೆ ಒಳಗಾಗುವುದು. ಈ ಪ್ರಕಾರವಾದ ದೋಷಂಗಳುಂಟಾದರೆ ಇದಂ ತಿಳಿದು ಪರರಾಜರು ಸ್ವದೇಶವನ್ನಾಕ್ರಮಿಸುವರೆಂಬ ಬುದ್ಧಿಯಿಂದ ಬಹುಕಾಲದಿಂ ಈ ಪ್ರಭುಪರಂಪರೆಯಲ್ಲಿ ಅಭಿಮಾನಿಗಳಾಗಿಯೂ ಸಾಂಪ್ರದಾಯಿಕರಾಗಿಯೂ ಕಾರ್ಯದಕ್ಷರಾಗಿಯೂ ಈ ದೇಶಮರ್ಯಾದೆಯಂ ತಮ್ಮ ದೇಹಕ್ಕಿಂತತಿಶಯವಾಗಿ ನೋಡುವವರಾಗಿಯೂ ಇರುವ ಇಲ್ಲಿನ ಅಧಿಕಾರಿಗಳಿಗೆ ಅಪಮಾನಂಗೊಳಿಸಿ ಅವರುಗಳನ್ನು ನಾನು ತೆಗೆದು ಹಾಕಿದವನಲ್ಲ. ದೇಶಾಂತರದ ಜನಗಳಿಗೆ ಹೆಚ್ಚಾದ ಸ್ವಾತಂತ್ರ್ಯಮಂ ಕೊಟ್ಟವನಲ್ಲ. ಪಿಶುನವಾಕ್ಯಮಂ ಕಿವಿಗೆ ತಂದವನಲ್ಲ. ಚೋರರಂ ನಿಗ್ರಹಿಸದೆ ಉಪೇಕ್ಷಿಸಿದವನಲ್ಲ. ಗೂಢದಸ್ಯುಗಳಾದ ಕರಣಿಕರ ಲೆಕ್ಕದ ನಿಪುಣತ್ವಕ್ಕೆ ಆಸ್ಪದಮಂ ಕೊಟ್ಟವನಲ್ಲ. ಪರಭೃತ್ಯರಾದ ಗೂಢಮಂತ್ರಿಗಳು ಈ ಪ್ರಭು ಪರಂಪರೆಯಲ್ಲಿ ಉಂಟಾದುದಿಲ್ಲ. ಭೃತ್ಯರ್ಗೆ ಸಂಬಳ ಹೊರತು ಹೆಚ್ಚು ಲಾಭಕ್ಕೆ ಮಾರ್ಗವಿಲ್ಲ. ನಮ್ಮ ಪ್ರಭುಗಳಿಂದಧಿಕರು ಈ ಲೋಕದಲ್ಲೇ ಕಾಣಿಸಲಿಲ್ಲ. ನಾನು ಬ್ರಾಹ್ಮಣನಾಗಿ ಮಂತ್ರಿಯಾದುದರಿಂದ ವರ್ಣಾಶ್ರಮಧರ್ಮವ್ಯತ್ಯಾಸವು ಇನ್ನೂ ಸಂಭವಿಸಲಿಲ್ಲ. ಇಲ್ಲಿನ ಮರ್ಮಜ್ಞರಂ ಕೇಳಿಕೆ ಭಯವಿಶ್ವಾಸಂಗಳಂ ತಪ್ಪಿಸಿಕೊಂಡವನಲ್ಲ. ಯಾವ ಕಾರಣದಿಂ ಶತ್ರುಗಳು ನಮ್ಮ ಮೇಲೆ ದಂಡೆತ್ತಿ ಬಂದಿರುವರು? ಅದರ ಸೂಕ್ಷ್ಮವು ನಿನಗೆ ತಿಳಿದರೆ ಹೇಳುವವನಾಗು ಎಂದು ಕೇಳಿದನು. ಆ ಮಾತಿಗೆ—

ಸ್ವಾಮಿೂ, ಅಮಾತ್ಯರೇ, ತಾವು ಹೇಳಿದುದೆಲ್ಲವೂ ಯುಕ್ತವೇ ಸರಿ. ನಮ್ಮ ಅರಸುಗಳು ಎಲ್ಲದರಲ್ಲಿಯೂ ಸಂಪನ್ನರಾದುದರಿಂದ ಶತ್ರುಗಳು ಇಟ್ಟಣಿಕೆ ನೋಡುವುದಕ್ಕೆ ಅವಕಾಶವಾಗದಿದ್ದರೂ "ಅನುಚಿತಕರ್ಮಾರಂಭಃ ಸ್ವಜನವಿರೋಧೋ ಬಲೀಯಸೀಸ್ಪರ್ಧಾ" ಎಂಬ ರೀತಿಯಲ್ಲಿ ಸ್ವಜನವು ಶತ್ರುಗಳನ್ನಾಶ್ರಯಿಸಿದರೆ ಇಂಥ ಅಸಂಗತವು ಸಂಭವಿಸಿದರೂ ಸಂಭವಿಸಬಹುದು. ಹೇಗಂದರೆ—ಮೌರ್ಯಪುತ್ರನಾದ ಚಂದ್ರಗುಪ್ತನು ಕಾರಾಗೃಹದಿಂದ ಮುಕ್ತನಾಗಿ ಸತ್ರಾಧಿಕಾರಮಂ ನೋಡುತ್ತ ನಂದರಲ್ಲಿ ಮಾತ್ಸರ್ಯಮುಳ್ಳವನಾಗಿ ಸತ್ರದಿಂ ಹೊರಟು ಹೋದ ಬಳಿಕ ಈ ಶತ್ರುಗಳ ವರ್ತಮಾನಮುಂಟಾದುದರಿಂದ ಆತನು ಹೋಗಿ ಪರರಾಜರನ್ನಾಶ್ರಯಿಸಿರಬೇಕು. ಇದೇ ಸ್ವಜನವಿರೋಧವೆಂಬ ದೋಷವು. ಇದುಹೊರತು ಆತನು ಹೊರಟುಹೋಗುವುದಕ್ಕೆ ಮುಂಚಿತವಾಗಿಯೇ ಒಬ್ಬ ಬ್ರಾಹ್ಮಣೋತ್ತಮನು ಸತ್ರದಲ್ಲಿ ನಂದರಿಂದ ನಿರಾಕರಿಸಲ್ಪಟ್ಟು ಕ್ರುದ್ಧನಾಗಿ

ಜುಟ್ಟಂ ಬಿಚ್ಚಿಕೊಂಡು ತೀಕ್ಷ್ಣಪ್ರತಿಜ್ಞೆಯಂ ಮಾಡಿಹೋಗುವ ಸಮಯದಲ್ಲಿ ಮಹೋತ್ಪಾತಂಗಳಾದುವಂತೆ. ಆದುದರಿಂದ ಆತನು ಮಹಾತೇಜಸ್ವಿಯಾಗಿರಬೇಕು. ಬ್ರಾಹ್ಮಣತೇಜಸ್ಸು ಕ್ಷಾತ್ರತೇಜಸ್ಸಂ ತಿರಸ್ಕರಿಸುವುದೆಂಬರ್ಥವು ಪುರಾಣಪ್ರಸಿದ್ಧವು. ಆದುದರಿಂದ ಇದೇ ಬಲೀಯಸೀಸ್ಪರ್ಧಾ ಎಂಬ ದೋಷವು ಮತ್ತು ಪ್ರಜಾಸಮ್ಮತರಾದ ಮೌರ್ಯರಿಗೆ ಅಕಾರಣವಧೆಯಾದುದರಿಂದ ಇದೇ ಅನುಚಿತಕರ್ಮಾರಂಭವೆಂಬ ದೋಷವಾಯಿತು. ಹೀಗೆ ಪ್ರಬಲವಾದ ದೋಷತ್ರಯದಿಂದ ದುರ್ಬಲವಾದ ಗುಣಗಳೆಲ್ಲವೂ ತಿರೋಧಾನವಾಗಿ ಶತ್ರುಗಳಾಗಮನಮುಂಟಾಯಿತೆಂದು ಹೇಳಬೇಕು ಎಂದು ಸುಮತಿಯು ಉಸುರಿದನು. ಆ ಮಾತಿಗೆ ರಾಕ್ಷಸನು--

ಅಯ್ಯಾ ಸುಮತಿಯೇ, "ವಿಧಿವಿಹಿತಂಬುದ್ಧಿರನುಸರತಿ" ಎಂಬ ಪ್ರಕಾರ ಪ್ರಾಣಿಗಳ ಸಂಪದಾಪತ್ತುಗಳಿಗೆ ದೈವಬಲವೇ ಕಾರಣವು. ಅದಂ ಮೀರುವವರಾರು? ಎಂದು ಹೇಳಿ ಆತನಂ ಕಳುಹಿಸಿ ತಾನು ಸ್ನಾನಗೃಹಕ್ಕೆ ಪೋದನು. ಆ ದಿನ ಸಾಯಂಕಾಲದಲ್ಲಿ ಮತ್ತೊಬ್ಬ ಚಾರನು ಬಂದು—ಸ್ವಾಮಿ, ಅಮಾತ್ಯರೇ, ನಮ್ಮ ಹೊನ್ನಗಟ್ಟದಲ್ಲಿದ್ದ ಮದಗಜಸಮೂಹಮಂ ನಿನ್ನೆ ಬುಧವಾರದ ರಾತ್ರಿಯಲ್ಲಿ ಕುಲೂತಪತಿಯ ಭಟರು ನಿದ್ರೆಗೈವ ಮಾವುತರಂ ಛೇದಿಸಿ ಹಿಡಿದುಕೊಂಡು ಹೋದ ವರ್ತಮಾನಮಂ ತಂದ ಗಾಯವಡೆದ ಮಾವುತನಿವನೆಂದು ತೋರಿಸಲು ; ಅವನಂ ನೋಡಿ—ಒಳ್ಳೆಯದು ! ಆ ಶತ್ರುಗಳಂ ನಿಗ್ರಹಿಸಿ ಎಂದಿನಂತೆ ಗಜಸಮೂಹಮಂ ತರಿಸುವೆವು. ಹೋಗೆಂದು ಅವರಂ ಕಳುಹಿಸಿ ಪುನಃ ತನ್ನಲ್ಲಿ ತಾನು—

ಮೊದಲು ಮೌರ್ಯನಿಂದ ಪ್ರಸಿದ್ಧಿಯಂ ಪಡೆದು ಈಗ ಪ್ರಮುಖರಾಗಿರುವವರು ಮೊದಲಿಗಿಂತ ಅಧಿಕರಾವೆಂಬ ಚಾಪಲ್ಯದಿಂದ ಮೌರ್ಯಪುತ್ರನಾದ ಚಂದ್ರಗುಪ್ತನಲ್ಲಿ ಅನುರಕ್ತರಾಗಿ ಅವನಂ ಪ್ರೋತ್ಸಾಹಪಡಿಸಿ ತಾವು ಮಾಡುವ ಸಹಾಯಮಂ ತಿಳುಹಿಸಿ ಪರರಾಜರಲ್ಲಿಗೆ ಕಳುಹಿಸಿದ್ದರೆ ಅವನು ಆ ಭರವಸದಿಂ ತನಗೆ ಜಯವಾದೀತೆಂದು ತಿಳಿದು ಪರ್ವತರಾಜನಂ ಒಡಂಬಡಿಸಿದ ಕಾರಣದಿಂದ ಆತನು ಈ ಕಾರ್ಯಕ್ಕೆ ಸಮ್ಮತಿಸಿದ್ದಾನು. ಅರಸುಗಳಿಗೆ ಮಹಾಲಾಭಭ್ರಾಂತಿಯುಂಟಾದರೆ ಸಖ್ಯವನ್ನಾಗಲಿ ಸತ್ಯವನ್ನಾಗಲಿ ದಾಕ್ಷಿಣ್ಯವನ್ನಾಗಲಿ ತ್ಯಜಿಸುವರೆಂಬುವುದು ಈ ಕಲಿಯುಗಧರ್ಮವು. ಗೊತ್ತಾದ ವರ್ತಮಾನಮಂ ತಿಳಿಯುವುದಕ್ಕೆ ಮುಂಚಿತವಾಗಿ ಹೀಗೇ ಸರಿಯೆಂದು ಯಾವುದನ್ನೂ ನಿಶ್ಚಯಿಸ

ಕೂಡದು. ಇದರ ಪ್ರತೀಕಾರಯತ್ನಮಂ ಸಹ ಮಾಡಕೂಡದು ಎಂದು ಯೋಚಿಸುತ್ತಿದ್ದನು. ಅಷ್ಟರಲ್ಲಿಯೇ ಮತ್ತೊಬ್ಬ ಚಾರನು ಬಂದು—ಸ್ವಾಮಿಾ, ಅಮಾತ್ಯರೇ, ಗಾಂಧಾರಪತಿಯ ಸೇನೆಯು ಬಂದು ನಮ್ಮ ಸರಯೂತೀರದ ಸುರಭಿವಾಪಿಯಲ್ಲಿದ್ದ ಗೋಲಕ್ಷಂಗಳಂ ಹಿಡಿದುಕೊಂಡು ಗೋಪರಂ ಪ್ರಹರಿಸಿ ಹೋದ ವರ್ತಮಾನಮಂ ನನಗೆ ಭಾವನಾದ ಈ ಚಾರನು ತಿಳಿದು ಬಂದನು ಎಂದು ಹೇಳಲು ; ಅದಂ ಕೇಳಿ ನಮಗೆ ತಿಳಿದಿದೆ ಹೋಗಿರಿ ಎಂದು ಅವರಂ ಕಳುಹಿಸಿ—ರಾಜಕಾರ್ಯವು ಪ್ರಬಲವಾಗಿದೆ. ಇದರ ಮೂಲಾನುಮೂಲಮಂ ಗೊತ್ತು ಮಾಡದೆ ಪ್ರಭುಗಳಿಗೆ ತಿಳುಹಿಸಕೂಡದು ಎಂದು ನಿಶ್ಚಯಿಸುತ್ತಿರಲು ; ಆ ಮರುದಿವಸ ಮತ್ತೊಬ್ಬ ಚಾರನು ಬಂದು—ಸ್ವಾಮಿಾ, ನಮ್ಮ ಚಂಪಕಾವತಿಯು ಯುದ್ಧಕ್ಕೆ ಸಾಧ್ಯವಾಗದಿರಲು ; ಮಗಧಪತಿಯ ಸೇನೆಯು ಯುದ್ಧಮಂ ಮಾಡುವಂತೆ ತೋರಿಸುತ್ತ ಸುರಂಗಮಂ ಹಾಕಿ ಪ್ರಾಕಾರಮಂ ಕೆಡಹಿ ಒಳಪೊಕ್ಕು ಸೂರೆಯಂ ಮಾಡುತ್ತ ಇರುವಲ್ಲಿ ಅಲ್ಲಿದ್ದ ಜಿನಶಾಂತನ ಬಂದಾನೊಂದು ಅಮೋಘರತ್ನಮಂ ಬಿಡಲಾರದೆ ತಾನೇ ಪರಿಗ್ರಹಿಸಿದನಂತೆ ಎಂದು ಹೇಳಿದನು. ಆ ಮಾತಿಗೆ ಮೊದಲು ನಮ್ಮಿಂದ ಪರಾಜಿತನಾಗಿ ಔತ್ತರೀಯರಂ ಸೇರಿದ್ದ ಮಗಧಪತಿಯು ಅಲ್ಲಿನ ಮರ್ಮಜ್ಞನಾದುದರಿಂದ ಈ ಕಾರ್ಯಮಂ ಮಾಡಿದ್ದಾನು. ಅವನ ದೇಶವು ನಮ್ಮ ವಶವಾಗಿ ಇರುವುದಾದರೂ ಮಗಧಪತಿಯೆಂಬ ಆಖ್ಯೆ ತಪ್ಪದು ಆಗಲಿ. ಅವನ ಜ್ಞಾತಿಯಾದ ರುದ್ರವರ್ಮನಂ ಕಳುಹಿಸಿ ಅವನಂ ಹಿಡಿದುತರಿಸುವೆನೆಂದು ಹೇಳಿದನು. ಅಷ್ಟರಲ್ಲೇ ಮತ್ತೊಬ್ಬ ದೂತನು ಬಂದು—ಸ್ವಾಮಿಾ, ನಮ್ಮ ಶೃಂಗಾರಪಾಳ್ಯಮಂ ರಾಜಬೀಜೋತ್ಪನ್ನನಾದ ಸೌರಂಭನಿಗೆ ಕೊಟ್ಟು ಕಾರ್ಯವನ್ನು ನೋಡುವಂತೆ ನೇಮಿಸಿದ್ದುದಕ್ಕೆ ಆತನು ಹೂಣರಂ ಕರೆಯಿಸಿ ಆ ಗಡಿಗಳನ್ನೂ ದುರ್ಗಗಳನ್ನೂ ಅವರ ವಶಮಂ ಮಾಡಿ ಅವರ ಮುಖದಿಂದಲೇ ಅಲ್ಲಿನ ಅಧಿಕಾರಮಂ ಕೈಕೊಂಡನಂತೆ ಸ್ವಜನವೆಂದು ರಕ್ಷಿಸಿದುದಕ್ಕೆ ಸ್ವಾಮಿದ್ರೋಹಮಂ ಮಾಡಿದನು ಎನಲು ; ಆ ಮಾತಿಗೆ—ಸೌರಂಭನು ಚಂದ್ರಗುಪ್ತನ ಭಾವಮೈದುನನಾದುದರಿಂದ ಆತನ ಅಭ್ಯುದಯಮಂ ಕೇಳಿ ಹೀಗೆ ಮಾಡಿದ್ದಾನು. ಆ ಚಂದ್ರಗುಪ್ತನ ಮಾತೃಪತ್ನಿಯರು ಅವನ ವಶದಲ್ಲಿಯೇ ಇದ್ದಾರು. ಒಳ್ಳೆಯದು ! ಎಲ್ಲಿ ಹೋದಾನು ? ಎಂದು ಹೇಳುತ್ತಿರುವ ಸಮಯದಲ್ಲಿ ಇಬ್ಬರು ತುರುಗಾರೂಢರಾದ ಚಾರರು ಬೀಗಿದ ಕಂಠದೇಶಗಳುಳ್ಳವರೂ ಆಯುಧರಹಿತರೂ ಆಗಿ ಅತಿವೇಗದಿಂ ನಗರಮಂ ಪ್ರವೇ

ಶಿಸುತ್ತ ಪುರದ್ವಾರದವರು ತಡೆಯಲು ; ಅವರಿಗೆ ಕೈಸನ್ನೆಗಳಂ ಸೂಚಿಸುತ್ತ ಓಡಿ ಬಂದು ರಾಕ್ಷಸನ ಎದುರಿನಲ್ಲಿ ಕುದುರೆಯನ್ನಿಳಿದು ನೆಲದಲ್ಲಿ ಜಲವೆಂದು ಬರೆದು ಮೂರ್ಛಿತರಾಗಲು ; ಅದಂ ನೋಡಿ ಅಲ್ಲಿನ ದೂತರು ಮೈಮೇಲೆ ನೀರುಗಳಂ ತಳಿದು ಪಾನಮಂ ಮಾಡಿಸಿದ ಸ್ವಲ್ಪಕಾಲದ ಮೇಲೆ ಆ ಚಾರರು ಚೇತರಿಸಿಕೊಂಡು ಬುದ್ಧೀ, ಅವಧರಿಸಿ. ನಾವು ಪರ್ವತದೇಶಾದಿದೇಶಗಳಿಗೆ ಹೋಗಿದ್ದ ಗೂಢಚಾರರು. ರಹಸ್ಯವಾದರೆ ವಿಜ್ಞಾಪಿಸತಕ್ಕ ರಾಜಕಾರ್ಯಮುಂಟು ಎನಲು ; ರಾಕ್ಷಸನು ಹಾಗೆ ಅವರನ್ನು ರಹಸ್ಯದಲ್ಲಿ ಕರೆದು—ಎಲೈ, ಚಾರರುಗಳಿರಾ, ನಿಮಗೆ ಇಷ್ಟು ಆಯಾಸವೇನು ? ತ್ವರಿತದಿಂ ಬಂದಿರಿ ? ಎನಲು ;

ಸ್ವಾಮಿ, ನಾವು ಶತ್ರುಗಳ ದಂಡಿನಿಂದ ಹೊರಟು ಹನ್ನೆರಡು ದಿವಸಗಳಾದುವು. ಎಂಟು ಹೊತ್ತು ಆಹಾರವೂ ಹದಿನೈದು ಹೊತ್ತು ಜಲಪಾನವೂ ದೊರಕಿದೆ. ನಿದ್ರೆಗೆ ಅವಕಾಶವೇ ಇಲ್ಲ. ದಿನ ಒಂದಕ್ಕೆ ಎಂಟು ಗಾವುದಗಳ ಪ್ರಕಾರ ಅಹೋರಾತ್ರಿಯಲ್ಲೂ ಪ್ರಯಾಣವು. ಸ್ವಾಮಿಯವರ ಅನುಪ್ರಭಾವದಿಂದ ತಮ್ಮ ಸನ್ನಿಧಿಗೆ ಬಂದೆವಲ್ಲದೆ ಈ ಭಾಗದಲ್ಲಿ ಮನುಷ್ಯಯತ್ನಮಂ ಕಾಣೆವು ಎನಲು ; ಎಲೈ, ಚಾರರುಗಳಿರಾ, ಶತ್ರುಗಳೆಂದರೇನು ? ಈ ಆತಂಕವೇನು ? ಎಂದೆನಲು ; ಬುದ್ಧೀ, ಸತ್ಯವಾಗಿ ಹೇಳುತ್ತೇವೆ. ಪರ್ವತದೇಶಾಧಿಪತಿಯು ತನಗೆ ವಶವರ್ತಿಗಳಾದ ಬಹುಜನಸಾಮಂತರಾಜರಿಂ ಕೂಡಿ ಅಪರಿಮಿತ ಸೇನಾಸಮೇತನಾಗಿ ನಂದರ ಮೇಲೆ ಕಾರ್ಯಭಾಗಕ್ಕೆ ಸನ್ನದ್ಧನಾಗಿ ಘನಾಶಿನೀ ತೀರದಲ್ಲಿ ಬಂದು ಇಳಿದಿದ್ದಾನೆ. ಅವನ ಪಕ್ಷದ ತುಂಟಪಾಳ್ಯಗಾರರು ನಮ್ಮ ದೇಶದ ಗಡಿಗಳನ್ನೂ ದುರ್ಗಗಳನ್ನೂ ಹಿಡಿಯುತ್ತ ಸಂಧ್ಯಾತಮೋಸಿಕರದಂತೆ ಆಕ್ರಮಿಸಿಕೊಂಡು ಬರುತ್ತಿದ್ದಾರೆ. ಇದು ನಾವು ಕಣ್ಣಾರ ಕಂಡುದು ಎನಲು ;

ಎಲೈ, ಚಾರರುಗಳಿರಾ, ಪರ್ವತಾಧಿಪತಿಗೂ ಲಂಪಾಕಪತಿಗೂ ಮನಸ್ತಾಪ ಹೆಚ್ಚಿ ಅನ್ಯೋನ್ಯರೂ ಯುದ್ಧಸನ್ನದ್ಧರಾಗಿದ್ದಾರೆಂದು ನಾವು ಕರ್ಣಾಕರ್ಣಿಕೆಯಾಗಿ ಕೇಳಿದುದುಂಟು. ಅದು ಮೃಷಾವರ್ತಮಾನವಾಗಿದ್ದೀತು ಎನಲು ;

ಸ್ವಾಮಿ, ಆ ಯರ್ಥವು ಅನೃತವಲ್ಲ. ಲಂಪಾಕಪತಿಯ ಮೇಲೆ ಕಾರ್ಯಭಾಗಕ್ಕೆ ಪರ್ವತೇಶ್ವರನ ಸೇನೆಯು ಪ್ರಯಾಣವಾಗಿದ್ದುದು ನಿಶ್ಚಯವೇ ಸರಿ. ಅಷ್ಟರಲ್ಲಿಯೇ ನಂದರಿಗೆ ಜ್ಞಾತಿಯಾಗಿರುವ ಮೌರ್ಯಪುತ್ರನಾದ ಚಂದ್ರಗುಪ್ತನು ಶಿಖೆಯಂ ಬಿಚ್ಚಿಕೊಂಡಿರುವ ಒಬ್ಬ ಬ್ರಾಹ್ಮಣನಿಂ ಸಮೇತನಾಗಿ ಪರ್ವತರಾಜ್ಯದ ಶಾಹುರೀನಗರಕ್ಕೆ ಬಂದು ಆ ಪರ್ವತೇಶ್ವರನಂ ಕಂಡು ಸನ್ಮಾನಿತನಾಗಿ

ಬಿಡಾರವಂ ಹೊಂದಿರಲು ; ಮತ್ತೊಂದು ದಿವಸ ಪರ್ವತರಾಜನ ನಿಯೋ
ಗಿಯು ಚಂದ್ರಗುಪ್ತನ ಸಮೀಪಕ್ಕೆ ಬಂದಿದ್ದು ಹಾಗೇ ಕಾಮರೂಪದೇಶಕ್ಕೆ
ಹೋಗಿ ಮತ್ತೆ ಕೆಲವು ದಿವಸಗಳ ಮೇಲೆ ಪುನಃ ಪರ್ವತರಾಜ್ಯದ ಆಸ್ಥಾನಕ್ಕೆ
ಬಂದು ತಲಪಿದನು. ಆಗಲೇ ಆ ರಾಯನು ಚಂದ್ರಗುಪ್ತನ ಸಂಗಡ ಬಂದು
ಇದ್ದ ಚಾಣಕ್ಯನೆಂಬ ಬ್ರಾಹ್ಮಣನಂ ಕರೆಯಕಳುಹಿಸಿ ಸನ್ಮಾನವಂ ಮಾಡಿಸಿ
ಆತನಂ ಬಿಡಾರಕ್ಕೆ ಕಳುಹಿಸಲು ; ಅಂದಿನಿಂದ ನಿಯೋಗಿಯು ಕಾಮರೂಪ
ದೇಶಕ್ಕೆ ಹೋದ ಬಳಿಕ ಆ ದೇಶಾಧಿಪತಿಯು ಲಂಪಾಕಪತಿಯಲ್ಲಿ ಮಹಾಕ್ರೋಧ
ಮುಳ್ಳವನಾಗಿ ಅವನ ಮೇಲೆ ಕಾರ್ಯಭಾಗಕ್ಕೆ ಸೇನಾಸಮೇತನಾಗಿ ಲಂಪಾಕ
ದೇಶಕ್ಕೆ ಹೋದನಂತೆ ಎಂದು ಅಲ್ಲಿನ ಪುರಜನರೆಲ್ಲರೂ ಪ್ರಸಿದ್ಧವಾಗಿ ಹೇಳಿಕೊ
ಳ್ಳುತ್ತಿದ್ದರು. ಆ ರಾತ್ರಿಯಲ್ಲಿಯೇ ಆ ರಾಯನ ಪುತ್ರನಾದ ಮಲಯಕೇತುವೆಂಬು
ವನು ಚಂದ್ರಗುಪ್ತನು ಇಳಿದಿದ್ದ ಬಿಡಾರಕ್ಕೆ ಬಂದಿದ್ದು ಪುನಃ ತಮ್ಮ ತಂದೆಯ
ಬಳಿಗೆ ಹೋಗಲು ; ಆ ಮಾರನೆಯ ದಿವಸವೇ ಲಂಪಾಕಪತಿಯ ದೇಶಕ್ಕೆ
ಪ್ರಯಾಣವಾಗಿದ್ದ ಸೇನೆಯನ್ನೂ ಇನ್ನೂ ಅನೇಕ ಸೇನೆಯನ್ನೂ ಕೂಡಿಸಿ
ಕೊಂಡು ಆ ರಾಯಂ ಇತ್ತಕಡೆ ಪ್ರಸ್ಥಾನಂ ಗೆಯ್ದಂ. ಆತನ ಸಾಮಂತನರ
ಪತಿಗಳು ಗಜಾರೂಢನಾದ ಚಂದ್ರಗುಪ್ತನಂ ಓಲೈಸುತ್ತ ಬಂದರು. ಮಲಯ
ಕೇತುವೆಂಬ ಆತನ ಕುಮಾರಕನು ವಿರೋಚನನೆಂಬ ತಮ್ಮನು ಇವರು ಸಮೇ
ತನಾಗಿ ಆಂದೋಳಿಕಾರೂಢನಾದ ಚಾಣಕ್ಯನು ಮುಂತಾಗಿ ಎಲ್ಲರೂ ಬಂದು
ಅಘನಾಶಿನೀ ತೀರದಲ್ಲಿ ಇಳಿದಿರಲು ; ನಾವು ವೇಷಾಂತರವಂ ಧರಿಸಿ ಆ ಸೇನೆ
ಗಳಂ ನೋಡುತ್ತ ಬರುವಲ್ಲಿ ಅಲ್ಲಿನ ಬೇಹುಗಾರರು ನಮ್ಮ ಕಪಟವಂ ತಿಳಿದು
ನಮ್ಮಂ ಹಿಡಿದು ಚಂದ್ರಗುಪ್ತನ ಸಮೀಪಕ್ಕೆ ಕರೆದುಕೊಂಡು ಹೋಗಲು ;
ಆತನು ದಯಾಳುವಾದುದರಿಂದ ಸೇನೆಗಳೆಲ್ಲವಂ ತೋರಿಸಿ ಕಶೆಗಳೊಳ್ ಪ್ರಹ
ರಿಸಿ ಇವರಂ ಹೊರಡಿಸಿ ಬಿಡಿರಿ ಎಂದು ಅವರಿಗೆ ನೇಮಿಸಲು ; ಆ ದೂತರು ಆಹೋ
ರಾತ್ರಿ ಏಳು ದಿನಗಳವರೆಗೂ ನಮ್ಮಂ ದಂಡಿನಲ್ಲಿ ಸುತ್ತಿಸಿ ಪ್ರಹರಿಸಿ ಬಿಟ್ಟುದರಿಂದ
ಪ್ರಾಣಸಮೇತರಾಗಿ ತ್ವರಿತದಿಂ ಸನ್ನಿಧಿಗೆ ಬಂದು ವಿಜ್ಞಾಪಿಸಿದೆವು. ಶತ್ರುಗಳ ಸೇನೆ
ಯು ಅಪರಿಮಿತವಾಗಿರುವುದರಿಂಪ ನಮ್ಮ ದೇಶಕ್ಕೆ ಮಹಾತಂಕವು ಸಂಭವಿಸಿದಂತೆ
ತೋರುತ್ತಿದೆ. ನಾವು ನೋಡಿದ ಮಟ್ಟಿಗೆ ಆ ಸೇನೆಗಳಂ ವಿವರಿಸುತ್ತಿದ್ದೇವೆ—ಪರ್ವ
ತೇಶ್ವರನಿಗೆ ವಶವರ್ತಿಗಳಾದ ಅರಸುಗಳ ಸೇನೆಗಳಲ್ಲಿ ಕುಲೂತಪತಿ ಚಿತ್ರವರ್ಮನ
ಸೇನೆಯು ಮೂರು ಲಕ್ಷವು ; ಮಲಯಪತಿ ಸಿಂಹನಾದನ ಅನೀಕವು ಎರಡು ಲಕ್ಷ

ವು ; ಕಾಶ್ಮೀರಪತಿ ಪುಷ್ಕರಾಕ್ಷನ ಚತುರಂಗವು ನಾಲ್ಕು ಲಕ್ಷ ; ಸಿಂಧುಪತಿ ಸಿಂಧುಷೇಣನ ಬಲವು ಮೂರು ಲಕ್ಷ; ಪಾರಶೀಕಪತಿ ಮೇಘನಾದನ ಸೈನ್ಯವು ನಾಲ್ಕು ಲಕ್ಷ ; ಮಗಧಪತಿ ವಾಹಿನಿಯು ಅರ್ಧಲಕ್ಷ ; ಗಾಂಧಾರಪತಿ ಸೇನೆಯು ನಾಲ್ಕು ಲಕ್ಷ ; ಶಕ ಸೇನೆಯು ಎರಡು ಲಕ್ಷ ; ಚೀಣರದು ಒಂದು ಲಕ್ಷ ; ಹೂಣರದು ಒಂದು ಲಕ್ಷ ; ಕಿರಾತರದು ಮೂರು ಲಕ್ಷ ; ಪಾರ್ವತೇಯ ಸೇನೆ ಶೇಖರನದು ಸಹ ಒಂಭತ್ತು ಲಕ್ಷ ; ಇಷ್ಟು ಸೇನಾಸಮೇತನಾಗಿ ಪ್ರಳಯಕಾಲದ ಭೂತಗಳ ಹಿಂಡುಗಳನ್ನು ಬಿಡಿಸಿಕೊಂಡು ಬಂದು ಪ್ರಪಂಚಮಂ ಕ್ಷೋಭೆಗೆಯ್ವಂತೆ ಪರ್ವತ ರಾಜನು ಪಾಟಲೀಪುರಾಭಿಮುಖನಾಗಿ ಬರುತ್ತಿದ್ದಾನೆ. ಈ ವಿವರವು ಚಿತ್ತಕ್ಕೆ ತಿಳಿದಿರಬೇಕೆಂದು ಚಾರರು ವಿಜ್ಞಾಪಿಸಲು ; ಅದಂ ಕೇಳಿ ರಾಕ್ಷಸನು ತನ್ನ ಮನಸ್ಸಿನಲ್ಲಿ—ಅಕಟಕಟಾ ! ಮೌರ್ಯರಂ ನಿಗ್ರಹಿಸಿ ತಾವು ಸುಖಿಗಳಾಗಬೇಕೆಂದಿದ್ದ ನಂದರಿಗೆ ಚಂದ್ರಗುಪ್ತನೆಂಬವನೊಬ್ಬನು ದೈವಯೋಗದಿಂದುಳಿದು ಶತ್ರುಶೇಷ ಮುಂಟಾಯಿತು. ಅಗ್ನಿಗೆ ವಾಯುವು ಸಹಾಯವಾದಂತೆ ಆತನಿಗೆ ದಕ್ಷನಾದ ಬ್ರಾಹ್ಮಣನು ಸಹಾಯವಾಗಲು ; ಪರ್ವತರಾಜನಂ ಒಡಂಬಡಿಸಿ ನಂದರ ಮೇಲೆ ದಂಡೆತ್ತಿ ಬರುವನೆಂಬುವುದು ದೈವ ಸಂಕಲ್ಪವೇ ಹೊರತು ಮನುಷ್ಯಪ್ರಯತ್ನವಲ್ಲವೆಂದು ತೋರುತ್ತಿದೆ. ಹೀಗಾದರೂ ಈ ಚಾರರು ಹೇಳಿದ ಮಾತುಗಳನ್ನು ಸಮನ್ವಯಿಸಿ ನೋಡಿದರೆ ಚಾಣಕ್ಯನು ತನ್ನ ಕಾರ್ಯಕ್ಕೋಸ್ಕರ ಪರ್ವತೇಶ್ವರನ ಮೇಲೆ ದಂಡೆತ್ತಿ ಬರುವ ಲಂಪಾಕಪತಿಗೂ ತಟಸ್ಥನಾಗಿದ್ದ ಕಾಮರೂಪಾಧಿಪತಿಗೂ ಇಲ್ಲದ ವೈರಮಂ ಗಂಟಿಕ್ಕಿ ಪರ್ವತೇಶ್ವರನ ಮೇಲೆ ಬಂದ ರಾಜಕಾರ್ಯಮಂ ಅನ್ಯತ್ರ ಪರ್ಯವಸಾನಗೊಳಿಸಿ ಇನ್ನೂ ಏನೋ ಬಹು ಆಶೆಯನ್ನುಂಟುಮಾಡಿ ಕರತಂದು ಇದ್ದಾನು. ಇದೆಲ್ಲವೂ ಆತನ ಸಾಹಸವಾಗಿಯೇ ಇದ್ದೀತು. ಹೀಗಾದರೆ ನಮ್ಮ ಸುಮತಿಯು ಹೇಳಿದಂತೆ ನಂದರಿಗೆ ಬಲವದ್ವಿರೋಧ ಮುಂಟಾದಂತಾಯಿತು. ಇದಕ್ಕಿಂತಲೂ ಅಧಿಕವಾದ ಪ್ರಯತ್ನಮಂ ನಾವು ಮಾಡಿದ ಬಳಿಕ ನಂದರ ಅದೃಷ್ಟವೆಂತಿರುವುದೋ ! ಎಂದು ಮುಹೂರ್ತಮಾತ್ರ ಚಿಂತಿಸಿ—ಎಲೈ ಚಾರರುಗಳಿರಾ, ಈ ಯರ್ಥವೆಲ್ಲಮಂ ಪ್ರಭುಗಳಾದ ನಂದರ ಸನ್ನಿಧಿಯಲ್ಲಿ ನೀವೇ ವಿಜ್ಞಾಪಿಸಿರಿ ಎಂದು ಹೇಳಿ ಕಳುಹಿಸಿ ಆ ಬಳಿಕ ರಾಯಸದವರಂ ಕರಿಸಿ ದಕ್ಷಿಣ ದೇಶದಲ್ಲಿರುವ ತಮ್ಮ ಸೇನೆಗಳಂ ತ್ವರಿತದಿಂ ಬರುವಂತೆ ಬರೆಸಿ ಕಳುಹಿಸಿದನಂತರ ಆ ರಾಯಸದವರಂ ಕುರಿತು ದಶಾರ್ಣದೇಶಾಧಿಪತಿಗೂ ಶೂರಸೇನಾಧಿಪತಿಗೂ ನಮ್ಮ ಹೆಸರಿನಿಂದ—

ಮೊದಲು ನಿಮಗೂ ಪರ್ವತ ದೇಶಾಧಿಪತಿಗೂ ಪರಸ್ಪರಕಲಹ ಪ್ರಸಕ್ತವಾಗಲು; ನೀವು ನಮ್ಮಂ ಸಹಾಯಕ್ಕೆ ಬರಬೇಕೆಂದು ಪ್ರಾರ್ಥಿಸಿ ಕಳುಹಿಸಿದ ಸಮಯದಲ್ಲಿ ನಾವು ನೋಡಿ ನಿಮಗೆ ಆಲೋಚಿಸತಕ್ಕ ಅರ್ಥಮಂ ತಿಳುಹಿಸಿ ಆ ಪರ್ವತರಾಜನಿಗೆ ಹೇಗೆ ಹೇಳಬೇಕೋ ಆ ಮೇರೆಗೆ ಹೇಳಿ ಕಳುಹಿಸಿ ಆಗ ಉಂಟಾಗುತ್ತಿದ್ದ ಮಹಾಕಲಹಮಂ ಶಮನಗೊಳಿಸಿ ಆ ಪರ್ವತಾಧಿಪತಿಗೆ ಒದಗಿದ್ದ ವಿಪತ್ತಂ ತಪ್ಪಿಸಿದ ಪ್ರತ್ಯುಪಕಾರಕ್ಕಾಗಿ ಈಗ ಆತನು ನಮ್ಮ ಮೇಲೆ ದಂಡೆತ್ತಿ ಬರುತ್ತಿದ್ದಾನೆ. ಕೃತಘ್ನನಾದ ಆ ಪರ್ವತಾಧಿಪತಿಯಂ ಹಿಂದಿರುಗಲೀಸದೆ ಸೇನಾಸಮೇತವಾಗಿ ಇಲ್ಲಿಯೇ ಧ್ವಂಸ ಮಾಡುತ್ತಿದ್ದೇವೆ. ಈ ವೇಳೆಯಲ್ಲಿ ನೀವು ನಮಗೆ ಪರಮ ಪ್ರಿಯರಾಗಿರುವುದು ಸತ್ಯವಾದರೆ ಇದೇ ಸಮಯದಲ್ಲಿ ನೀವು ಸೇನಾಯುಕ್ತರಾಗಿ ಪರ್ವತದೇಶಕ್ಕೆ ಹೋಗಿ ಅಲ್ಲಿನ ಗಡಿ ದುರ್ಗ ಇವುಗಳಂ ಹಿಡಿಯುತ್ತ ಅಲ್ಲಿರುವ ಸೇನೆಯು ಇಲ್ಲಿಗೆ ಬಾರದಂತೆ ಯುದ್ಧಮಂ ಮಾಡುತ್ತ ಆ ಶಾಹುರೀನಗರಮಂ ನೀವು ಸಾಧಿಸಿಕೊಂಡರೆ ಆ ದೇಶಕೋಶಗಳೆಲ್ಲವೂ ನಿಮಗೆ ಕೊಡಲ್ಪಟ್ಟಿರುವುವು ಎಂದು ಬರೆಯತಕ್ಕದು ಎಂದು ಹೇಳಿ ಕಾಗದಗಳಂ ಬರೆಸಿ ದಿವ್ಯಾಶ್ವಸಮೇತವಾಗಿ ಆ ಲೇಖನಗಳಂ ಚಾರರ ವಶಕ್ಕೆ ಕೊಟ್ಟು ಅವರಿಗೆ ಒಂದು ವರುಷದ ಸಂಬಳಮಂ ಉಚಿತವಾಗಿ ಇತ್ತು ಸೇನೆಗಳು ಪರ್ವತ ದೇಶಕ್ಕೆ ಸನ್ನದ್ಧವಾಗಿ ಹೊರಟುದಂ ನೋಡಿ ತ್ವರಿತದಿಂ ಬಂದು ತಿಳುಹಿಸಿರಿ ಎಂದು ಅವರಿಗೆ ನೇಮಿಸಿ ಕಳುಹಿಸಿ ಅಲ್ಲಿಂದ ನಂದರ ಸಮೀಪಕ್ಕೆ ಹೋಗಿ ಆಗ ಮುಂಚೆ ತಾನು ನೇಮಿಸಿದಂತೆ ಪರ್ವತ ದೇಶಾಧಿಪತಿಯ ಆಗಮನಮಂ ವಿಜ್ಞಾಪಿಸುತ್ತಿರುವ ಚಾರರಂ ಕುರಿತು—ಎಲೈ, ಇನ್ನೊಮ್ಮೆ ವಿವರವಾಗಿ ಪ್ರಭುಗಳಿಗೆ ಶ್ರುತಪಡಿಸಿರಿ ಎಂದು ಹೇಳಿ ನಂದರಿಗೆ ವೇದ್ಯವಾದ ಬಳಿಕ ಅವರಂ ಕುರಿತು—

ಅಯ್ಯಾ, ಅರಸುಗಳಿರಾ, ನಮ್ಮ ಅನ್ನಸತ್ರಮಂ ಬಿಟ್ಟುಹೋದ ಮೌರ್ಯಪುತ್ರನಾದ ಚಂದ್ರಗುಪ್ತನೆಂಬುವನು ಪರ್ವತರಾಜ್ಯಾಧಿಪತಿಯಂ ಕಂಡು ಒಡಂಬಡಿಸಿ ನಮ್ಮ ಮೇಲೆ ದಂಡನ್ನು ತೆಗೆದುಕೊಂಡು ಬರುತ್ತಿದ್ದಾನಂತೆ. ಆತನ ಬಳಿಯಲ್ಲಿ ಬಹುದೇಶಾಧಿಪತಿಗಳು ಸೇನಾಸಮೇತರಾಗಿ ಆತನು ಹೇಳಿದಂತೆ ನಡೆದುಕೊಳ್ಳುವರಂತೆ. ಚಂದ್ರಗುಪ್ತನು ಕಾರಾಗೃಹದಿಂದ ಮುಕ್ತನಾದ ಸಮಯದಲ್ಲಿ ಅವನಂ ಬಿಡಬಾರದೆಂದು ಅವನಿಗೆ ಅನ್ನಸತ್ರಾಧಿಕಾರಮಂ ನೇಮಿಸಿ ಇದ್ದರೂ ಅವನು ಅಷ್ಟುಮಾತ್ರದಲ್ಲಿ ಇರತಕ್ಕವನಾಗಿರಲಿಲ್ಲ. ಅವನಿಗೆ ತಕ್ಕ ಹಾಗೆ ಬ್ರಾಹ್ಮಣನ ಸಹಾಯವು ದೊರಕಿತು. ನಡೆದುಹೋದ ಮಾತಿಗೆ ಈಗ ನುಡಿದು

ಫಲವೇನು? ಪ್ರಕೃತದಲ್ಲಿ ಬರುವ ಶತ್ರುಗಳಿಗೆ ಎದುರಾಗಿ ನಮ್ಮ ಸೇನೆಗಳಂ ಕಳುಹಿಸಿ ನಿಗ್ರಹಿಸಬೇಕಲ್ಲದೆ ಉಪೇಕ್ಷೆಯಂ ಮಾಡಕೂಡದು. ಸದ್ಯಃ ನಮ್ಮ ಕಡೆಯ ಕೆಲವು ಗಡಿ ದುರ್ಗ ಇವುಗಳು ಶತ್ರುಗಳ ವಶವಾದುವಂತೆ. ಆದುದರಿಂದ ಸ್ವದೇಶದ ಪ್ರಜೆಗಳು ಮಹಾ ಭೀತಿಪಡುತ್ತಾರೆ. ಚಂದ್ರಗುಪ್ತನು ಸಕಲಾಶೆಯಂ ಬಿಟ್ಟು ಹೋದವನಾದುದರಿಂದ ತನಗೆ ಆಗುವದು ಆಗಲಿ. ನಮ್ಮ ಪುರದೇಶಗಳು ಅನ್ಯಾಕ್ರಾಂತವಾದರೆ ಸಾಕು. ತನ್ನ ವೈರಿಗಳಾದ ಜ್ಞಾತಿಗಳು ತನ್ನಂತೇ ಆಗ ಬೇಕೆಂಬುವುದು ಆತನ ಮನೋಗತವಾಗಿದ್ದೀತು. ಆ ಪರ್ವತೇಶ್ವರನಂ ಒಡಂಬಡಿಸುವಲ್ಲಿ ಎಷ್ಟು ಧನ ರಾಜ್ಯಗಳಂ ಕೊಡುವೆನೆಂದು ಹೇಳಿ ಕರೆದುಕೊಂಡು ಬಂದನೋ ತಿಳಿಯಕೂಡದು. ಇದರಿಂದ ಅಶಕ್ತರಾದವರು ಮೊದಲು ಸಂಧಿಗೆ ಮಾತನಾಡಬೇಕಲ್ಲದೆ ನಮ್ಮಂಥವರು ಸಂಧಿಗೆ ಮಾತನಾಡಕೂಡದು. ಪರ್ವತೇಶ್ವರನು ಧನಹೀನನಾದ ವಿಪ್ರನ ವಾಕ್ಕೌಶಲ್ಯಕ್ಕೆ ಮೋಹಿತನಾಗಿ ಬಂದಿರಬೇಕು. ಭೇದವಂ ಕಲ್ಪಿಸಿ ಕಾದ ಕಬ್ಬಿಣವಂ ಕಬ್ಬಿಣದಿಂ ಪ್ರಹರಿಸಿ ಕಾರ್ಯಕ್ಕೆ ಉಪಯೋಗಿಸಿಕೊಂಬಂತೆ ಶತ್ರುಗಳ ಮೇಲೆ ಮತ್ತೊಬ್ಬ ಶತ್ರುವಂ ನಿಲ್ಲಿಸಿ ಪರಸ್ಪರ ವಿರೋಧವಂ ತಂದಿಕ್ಕಿ ಪೂರ್ವಶತ್ರುಗಳ ನಿಗ್ರಹವಂ ಮಾಡಿಸಿ ಅನಾಯಾಸಲಬ್ಧವಾದ ಜಯದಿಂದ ನಾವು ಸುಖಿಗಳಾದೇವೆಂದರೆ—ಶತ್ರುಗಳು ಮಾರ್ಗ ಮಧ್ಯದಲ್ಲಿ ಬಂದು ದಿನೇ ದಿನೇ ಸನ್ನಿಹಿತರಾಗುತ್ತಿರುವುದರಿಂದ ಆ ಭೇದೋಪಾಯಕ್ಕೆ ಅವಕಾಶ ಸಾಲದೆ ಇದ್ದರೂ ನಮ್ಮ ಸೇನೆಗಳಂ ಜೊತೆಗೊಳಿಸಿ ಪ್ರೋತ್ಸಾಹಪಡಿಸಿ ಶತ್ರುವು ಸಮೀಪವರ್ತಿಯಾಗದಂತೆ ಎದುರಾಗಿ ಕಳುಹಿಸಿ ಅವಕಾಶವಂ ಮಾಡಿಕೊಂಡು ಪರ್ವತರಾಜನ ಸಂಗಡ ಬಂದಿರುವ ಅರಸುಗಳಿಗೆ ಸಾಮದಾನಪೂರ್ವಕವಾಗಿ ಭೇದೋಪಾಯವಂ ಕಲ್ಪಿಸಿ ಆ ಬಳಿಕ ದಂಡೋಪಾಯದಿಂದ ಪ್ರಬಲ ಶತ್ರುವಂ ನಿಗ್ರಹಿಸಬೇಕಾಯಿತು. ಅದರ ಸಂಗಡಲೇ ಚಂದ್ರಗುಪ್ತನು ಸಹ ನಷ್ಟನಾದಾನು ಎಂದು ರಾಕ್ಷಸನು ನಂದರಿಗೆ ಹೇಳುತ್ತಿರಲು; ಆ ಮಾತಿಗೆ ನಂದರು ಒಡಂಬಟ್ಟು—

ಅಯ್ಯಾ, ಅಮಾತ್ಯರೇ, ನಮ್ಮ ಮನೋಗತವಿದ್ದಂತೆ ನೀವು ಹೇಳಿದಿರಿ. ಈ ಯರ್ಥವು ಪ್ರಶಸ್ತವಾಗಿದೆ. ಇಂಥ ಕಾರ್ಯವನ್ನಾಚರಿಸುವುದರಲ್ಲಿ ದೇಶ ಕಾಲಜ್ಞರಾದ ನೀವಲ್ಲದೆ ಮತ್ತಾರು ಸಮರ್ಥರಾದಾರು? ನೀವು ನಮಗೆ ಮಂತ್ರಾಲೋಚನೆಗೆ ಯೋಗ್ಯರಾದ ಮಂತ್ರಿಮಾತ್ರರೆಂದೆನಕೂಡದು. ಅಶಕ್ಯವಾಗಿ ಬಂದು ಒದಗಿದ ಶತ್ರುಗಳಲ್ಲಿ ನೀವು ಯುದ್ಧೋದ್ಯುಕ್ತರಾಗಿ ವಿಜೃಂಭಿಸಿದರೆ

ತೃಣರಾಶಿಗೆ ಅಗ್ನಿ ಹೊಕ್ಕಂತೆ ಶತ್ರುಗಳ ಲಕ್ಷೋಪಲಕ್ಷವನ್ನಾದರೂ ಲಕ್ಷೀಕರಿಸದೆ ನಿಗ್ರಹಿಸತಕ್ಕವರೆಂಬ ಭರವಸವೂ ನಮಗುಂಟು. ಹೀಗೆ ಶತ್ರುಗಳಲ್ಲಿ ಭೇದಮಂ ಕಲ್ಪಿಸಿ ಹಗೆಗೆ ಸಹಾಯವಾಗಿ ಬಂದ ಅರಸುಗಳು ಪರ್ವತರಾಜನಲ್ಲಿ ಉಪೇಕ್ಷೆಯಿಂದಾದರೂ ಕಲಹದಿಂದಾದರೂ ತೊಲಗಿ ಹೋದರೆ ಉಳಿದ ಒಬ್ಬ ಪರ್ವತೇಶ್ವರನ ಸೇನೆಯಂ ಲೀಲಾಮಾತ್ರದಿಂದ ನಾವೇ ಸಂಹರಿಸುತ್ತಿದ್ದೇವೆ. ಆಗ ನೀವೇ ನೋಡಿ ಸಂತೋಷಪಟ್ಟೀರಿ ಎಂದು ಹೇಳಿ ರಾಕ್ಷಸನಂ ಅನರ್ಘ್ಯ ವಸ್ತ್ರಭೂಷಣಂಗಳಿಂದಲಂಕರಿಸಿ ವೀಳಯಮಂ ಕೊಟ್ಟು ಗೃಹಾಂತರಕ್ಕೆ ಹೋದರು.

ಆಗ ರಾಕ್ಷಸನು ಏಕಾಂತ ಗೃಹದಲ್ಲಿ ಕುಳಿತು ಈ ಪುರದೇಶಗಳಿಗೂ ಅರಸುಗಳಿಗೂ ಗ್ರಹಬಲವೆಂತಿರುವುದೋ? ಬುದ್ಧಿವಂತರಾದ ಜ್ಯೋತಿಷ್ಕರಂ ಕೇಳಿ ನಿಶ್ಚಯಿಸಬೇಕೆಂದು ಹೇಳಿಕೊಳ್ಳುತ್ತ ಅದು ಆ ಬಳಿಕ ಆದೀತು. ರಾಯಸದವರು ಬರಲೆಂದು ಕರೆಯ ಕಳುಹಿಸಿ ಅವರಂ ಕುಳ್ಳಿರಿಸಿಕೊಂಡು—

ಅಯ್ಯಾ, ರಾಜಶಾಸನಲೇಖಕರುಗಳಿರಾ, ಬರೆದು ಕಳುಹಿಸತಕ್ಕ ರಾಜಕಾರ್ಯವುಂಟು. ಬರೆಯುವವರಾಗಿರಿ ಎನಲು ; ಅವರು ಒಳ್ಳೆಯದೆಂದು ಕಾಗದ ಕಡ್ಡಿಗಳಂ ಪಿಡಿದು ಅಪ್ಪಣೆಯಾಗಬೇಕೆನಲು ; ಅದೇ ಸಮಯದಲ್ಲಿ ವಾದ ವಶ್ಯ ಜ್ಯೋತಿಷ ಮಂತ್ರ ನೀತಿಗಳಲ್ಲಿ ಕುಶಲನಾಗಿ ಕ್ಷಪಣಕ ವೇಷಮಂ ಧರಿಸಿ ಜೀವಸಿದ್ಧಿ ಎಂಬ ಪೆಸರಂ ತಳೆದಿದ್ದ ಇಂದುಶರ್ಮನು ಮೊದಲಿನಲ್ಲೇ ರಾಕ್ಷಸನನ್ನು ಆಶ್ರಯಿಸಿದ್ದವನಾದಕಾರಣದಿಂದ ದ್ವಾರದೇಶದಲ್ಲಿ ಬಂದು ನಿಂತು ನಾನು ಬಂದು ಇದ್ದೇನೆ. ಈ ಸಂಗತಿಯಂ ರಾಕ್ಷಸನಿಗೆ ತಿಳುಹಿಸಿರಿ ಎಂಬ ಅರ್ಥವನ್ನು ತನ್ನ ಕೈಯ್ಯಲ್ಲಿರುವ ನೌಲುಗರಿಯ ದೊಂದೆಯಿಂದ ದೂತರಿಗೆ ಸನ್ನೆ ಮಾಡಲು ; ಆ ದೂತರು ಹೋಗಿ ಆ ವರ್ತಮಾನಮಂ ರಾಕ್ಷಸನಿಗೆ ಹೇಳಿ ಆತನ ಅಪ್ಪಣೆಯಿಂದ ಕ್ಷಪಣಕನಂ ಒಳಯಿಂಕೆ ಬಿಡಲು ; ಆಗ ಕ್ಷಪಣಕನು—ಧರ್ಮಿಷ್ಠರಿಗೆ "ಶ್ರೇಯೋಸ್ತು" ಎಂದು ಹರಸಿ ಕುಳಿತನು, ಆತನಂ ನೋಡಿ ರಾಕ್ಷಸನು—

ಅಯ್ಯಾ, ಕ್ಷಪಣಕರೇ, ನೆನಸಿದಂತೆ ಒಳ್ಳೆಯ ಸಮಯದಲ್ಲಿ ಬಂದಿರಿ! ಎನಲು—

ಅಯ್ಯಾ, ಪ್ರಭುವಾದ ಅಮಾತ್ಯನೇ, ಸಂಗರಹಿತರಾಗಿ ವನವಾಸಕ್ಕೆ ಯೋಗ್ಯರಾದ ನಾವು ನಿಮ್ಮ ಆದರಣೆಯಿಂದ ನಿಮ್ಮಲ್ಲಿ ಮೌನಮಂ ತ್ಯಜಿಸಿ ನಿಮ್ಮನ್ನಗಲಲಾರದೆ ಶ್ರೇಯಸ್ಸನ್ನಪೇಕ್ಷಿಸುತ್ತಿದ್ದೇವೆ. ನಾಲ್ಕಾರು ದಿವಸಗಳಿಂದಲೂ ತಮ್ಮ ದರ್ಶನವೂ ದುರ್ಲಭವಾದ ಬಳಿಕ ಏನು ಪ್ರಯೋಜನಕ್ಕೆ ನಾವಿಲ್ಲಿರಬೇಕು? ಎಂದನು.

ಅದಕ್ಕೆ ಅಮಾತ್ಯನು—ಅಯ್ಯಾ, ಕ್ಷಪಣಕರೇ, ರಾಜಕಾರ್ಯ ಗೌರವದಿಂದ ನಿಮ್ಮಂ ಕರೆಯಿಸುವುದಕ್ಕೆ ಕೂಡಲಿಲ್ಲ. ಈಗ ನೀವೇ ಬಂದುದು ಒಳ್ಳೆಯದಾಯಿತು! ಒಂದು ಪ್ರಶ್ನೆಯಂ ಹೇಳಬೇಕೆನಲು; ಕ್ಷಪಣಕನು ಆತನ ಭಾವಮಂ ತಿಳಿದು ಸಮಯಜ್ಞನಾದುದರಿಂದ ಗ್ರಹಬಲಮಂ ನೋಡುವವನಂತೆ ನಟಿಸಿ—

ಅಯ್ಯಾ, ಅಮಾತ್ಯರೇ, ನೀವು ಕೇಳಿದ ಪ್ರಶ್ನೆಯು ರಾಜ್ಯಾತಂಕವನ್ನೂ ಶತ್ರುಗಳಾಗಮನವನ್ನೂ ಸೂಚಿಸುತ್ತದೆ. ಈ ಲಗ್ನಕ್ಕೆ ಶತ್ರುಸ್ಥಾನದ ಗ್ರಹವಂ ಶತ್ರುಗ್ರಹವು ನೋಡುವುದರಿಂದ ನಿಮ್ಮ ಮೇಲೆ ದಂಡೆತ್ತಿ ಬರುವ ಶತ್ರುವು ಜೀವವಂತನಾಗಿ ಹಿಂದಿರುಗಿ ಹೋಗಲಾರನು. ಇದಕ್ಕೆ ನನ್ನ ವ್ರತವೇ ಸಾಕ್ಷಿ; ನಿಮಗೆ ಕಾರ್ಯಾವಸಾನದಲ್ಲಿ ಜಯಲಾಭವೆಂದು ಹೇಳಬೇಕು. ಮತ್ತು ಬುಧಾಧಿ ಪಂಚಗ್ರಹಂಗಳು ಲಗ್ನಕ್ಕೆ ಭೇದಫಲಪ್ರದಾಯಕಗಳಾದುದರಿಂದ ಶತ್ರುವಿಗೆ ಸಹಾಯರಾಗಿ ಬಂದವರು ಭೇದಕ್ಕೆ ಒಳಗಾದಾರು. ಆಗ ದಂಡೋಪಾಯಾಚರಣೆಯಿಂದ ಶತ್ರು ಸಂಹೃತನಾದಾನು ಎಂದು ಹೇಳಿ ಚಾಣಕ್ಯನ ಸಂಕೇತವಾಕ್ಯಮಂ ನೆನೆದು ಇದೇ ಸಮಯವೆಂದು ತಿಳಿದು—ಅಯ್ಯಾ, ಅಮಾತ್ಯರೇ, ನಾನು ಹೇಳಿದುದು ನಿಮ್ಮ ಮನಸ್ಸಿಗೆ ಬಂದರೆ ಶತ್ರುಗಳ ಅನಿಷ್ಟ ನಿವೃತ್ತಿಗೋಸ್ಕರ ನದೀತೀರದಲ್ಲಿ ಜಪಶೀಲರಾದ ಬ್ರಾಹ್ಮಣರ ಮುಖದಿಂದ ಇದೇ ಶುಭಲಗ್ನದಲ್ಲಿ ಶತ್ರುಪಲಾಯನಜಪಾರಂಭವಾಗುವಂತೆ ಮಾಡಿಸಿದರೆ ಅನಿಷ್ಟನಿವೃತ್ತಿಯಾಗುವುದೆಂದು ಹೇಳಲು; ರಾಕ್ಷಸನು—

ಅಯ್ಯಾ, ಕ್ಷಪಣಕರೇ, ನೀವು ಹೇಳಿದರ್ಥವು ನಮ್ಮ ಮನಸ್ಸಿಗೆ ಬಂದಿತು. ಜ್ಯೋತಿಷದಲ್ಲಿ ನೀವು ಮಹಾಸಮರ್ಥರು. ವಿರಕ್ತಿಯಿಂದ ನಮ್ಮಂ ಬಿಡದೆ ಇಲ್ಲಿಯೇ ಇರಬೇಕು. ನಿಮಗೆ ಆಗತಕ್ಕ ಪ್ರಯೋಜನವಿದ್ದರೆ ಹೇಳಿರಿ ಎನಲು ಕ್ಷಪಣಕನು—

ಅಯ್ಯಾ, ಅಮಾತ್ಯರೇ, ಲೌಕಿಕಪ್ರಯೋಜನದಿಂದ ನಮಗೆ ಏನು ಫಲ? ಪುರದ ಹೊರಗೆ ಪರ್ಣಶಾಲೆಯಂ ರಚಿಸಿ ಅಲ್ಲಿ ಇರಹೇಳಿದರೆ ನಿಮಗೆ ಶ್ರೇಯಸ್ಸಂ ಚಿಂತಿಸುತ್ತಿರುವೆವು ಎಂದು ಹೇಳಿ ಮಾಯಾಧಾರವೇ ಎನುತ್ತ ಕಣ್ಣುಗಳಂ ಮುಚ್ಚಿ ಧ್ಯಾನಮಂ ಮಾಡುವವನಂತೆ ಸ್ತಬ್ಧನಾಗಿ ಕುಳಿತನು. ಆಗ ರಾಕ್ಷಸನು ಸೇನಾಪತಿಯಾದ ಬಾಗುರಾಯಣನಂ ಕರೆಯ ಕಳುಹಿಸಿ—

ಅಯ್ಯಾ, ಬಾಗುರಾಯಣನೇ, ಈಗ ಪರ್ವತೇಶ್ವರನು ಚಂದ್ರಗುಪ್ತನಂ ಪಕ್ಷೀಕರಿಸಿ ನಂದರ ಮೇಲೆ ದಂಡೆತ್ತಿ ಬರುವವನಾಗಿದ್ದಾನೆ. ಇಲ್ಲಿ ಕೆಲವು

ದುರ್ನಿಮಿತ್ತಂಗಳು ಕಾಣಿಸಿಕೊಂಡಿರುವುದರಿಂದ ಅನಿಷ್ಟನಿವೃತ್ಯರ್ಥವಾಗಿ ಬ್ರಾಹ್ಮಣರ ಮುಖದಿಂದ ಶಾಂತಿಗಳಂ ಮಾಡಿಸುವವನಾಗು. ಮತ್ತು ವಿಶೇಷವಾಗಿ ನದೀತೀರದಲ್ಲಿ ಜಪಶೀಲರಾದ ಬ್ರಾಹ್ಮಣರ ಕಡೆಯಿಂದ ಶತ್ರುಪಲಾಯನಂಗೆಯ್ವಂತೆ ಜಪಹೋಮಂಗಳಂ ಮಾಡುವುದಕ್ಕೆ ಬೇಕಾದುದಂ ಒದಗಿಸಿಕೊಂಡು ಹೋಮಶಾಲೆಯಂ ರಚಿಸಿ ಜಪಮಂ ಮಾಡಿಸುವವನಾಗು. ಇದೇ ಲಗ್ನದಲ್ಲಿ ಆರ್ತ್ವಿಜ್ಯಮಂ ನೇಮಿಸುವವನಾಗು. ರಾಜಕಾರ್ಯವು ಹೆಚ್ಚಿ ಬಂದರೆ ಈ ಪುರರಕ್ಷಣೆಯಂ ನೀನೇ ಮಾಡಬೇಕಾಗುತ್ತಿದೆ ಎಂದು ಹೇಳಿ ಆತನಂ ಕಳುಹಿಸಿದನು. ಅದಕ್ಕೆ ಭಾಗುರಾಯಣನು ಒಳ್ಳೆಯದೆಂದು ಅಲ್ಲಿಂದ ಬಂದು ಜಪಶೀಲರಾದ ಬ್ರಾಹ್ಮಣರನ್ನು ವಿಚಾರಿಸುತ್ತಿದ್ದನು. ಆ ಸಮಯದಲ್ಲಿ ಕ್ಷಪಣಕನಿಗೆ ಶಿಷ್ಯನಾದ ಸಿದ್ಧಾರ್ಥಕನೆಂಬವನು ಭಾಗುರಾಯಣನಲ್ಲಿ ವೈದ್ಯವೇಷಮಂ ಧರಿಸಿ ಆತನಿಗೆ ಪ್ರೀತಿಪಾತ್ರನಾಗಿರುವುದರಿಂದ ಮುಂದೆ ಆಗುವ ಕಾರ್ಯಕ್ಕೆ ಅನುಕೂಲವಾಗಿ ಉತ್ತರ ದಿಕ್ಕಿನ ರಾಜಕಾರ್ಯಪ್ರಯಾಣದಲ್ಲಿ ಪ್ರಥಮದೊಳ್ ಅರಸುಗಳು ಇಳಿಯುವ ಸ್ಥಾನಕ್ಕೆ ಅತಿದೂರವಾದ ಸರಯೂನದೀತೀರದಲ್ಲಿ ಜಪಶಾಲೆಯಂ ಮಾಡಿಸಬೇಕೆಂದು ನಿಶ್ಚಯಿಸಿ ಭಾಗುರಾಯಣನಂ ಕುರಿತು—

ಅಯ್ಯಾ, ಸೇನಾಪತಿಗಳೇ, ಶತ್ರುಪಲಾಯನ ಜಪಮಂ ಮಾಡಿಸುವ ವಿಷಯದಲ್ಲಿ ಗಂಗಾಸರಯೂಸಂಗಮದ ಪೂರ್ವಭಾಗವು ಜಪಶೀಲರಿಗೆ ಕ್ಷಿಪ್ರಫಲದಾಯಕವೆಂದು ನಾನು ಬಹುವಾಗಿ ಕೇಳಿಯುಂಟು. ಆದುದರಿಂದ ಆ ಸ್ಥಳವು ಜಪಶಾಲೆಗೆ ಯೋಗ್ಯವಾಗಿ ತೋರುತ್ತಿದೆ ಎಂದು ಹೇಳುವ ಸಮಯದಲ್ಲಿ ಈ ಸಿದ್ಧಾರ್ಥಕನಿಗೆ ಮಿತ್ರನಾದ ಮಾಸೋಪವಾಸಿ ಎಂಬುವನು ಮುನಿಯ ವೇಷಮಂ ಧರಿಸಿ ಮಾರ್ಗವಶಾತ್ ಹೋಗುವವನಂತೆ ಬೀದಿಯಲ್ಲಿ ನಡೆಯುತ್ತಿರಲು; ಸಿದ್ಧಾರ್ಥಕನು ಅವನಂ ಕಂಡು ಇದೇನಾಶ್ಚರ್ಯ! ಇವರಿಲ್ಲಿ ಬರುವುದಕ್ಕೆ ನಿಮಿತ್ತವೇನು? ಎನುತ್ತ ದೂರದಿಂದಲೇ ಎದ್ದು ವಿನಯದಿಂ ಕೈಮುಗಿಯುತ್ತಿರಲು; ಅದಂ ನೋಡಿ ಭಾಗುರಾಯಣನು—ಇದೇನೈ ಸಿದ್ಧಾರ್ಥಕನೇ! ಇವರಾರು ಎನಲು; ಆತನು—

ಅಯ್ಯಾ, ಸೇನಾಪತಿಗಳೇ, ಇವರೇ ಮಾಸೋಪವಾಸಿಗಳೆಂಬ ಮಹಾಮುನಿಗಳು. ಏನು ನಿಮಿತ್ತದಿಂದ ಬಂದರೋ! ಅವರ ಕುಶಲಮಂ ಕೇಳುವುದಂತಿರಲಿ. ಮೊದಲು ಯಾವ ರೀತಿಯಲ್ಲಿಯಾದರೂ ಈ ಜಪದ ಆರ್ತ್ವಿಜ್ಯಕ್ಕೆ ಇವರಂ ಸಮ್ಮತಿ ಪಡಿಸಿದರೆ ಕಾರ್ಯಸಿದ್ಧಿಯಾಗುವುದರಲ್ಲಿ ಸಂಶಯವಿಲ್ಲ ಎನಲು; ಆ

ಮಾತಿಗೆ ಭಾಗುರಾಯಣನು ಅವರಂ ಸನ್ಮಾನದಿಂದ ಕರೆದು ತಂದು ನಾನಾವಿಧದಿಂ ಹೇಳಿಸಿ ಆರ್ತ್ವಿಜ್ಯಕ್ಕೆ ಸಮ್ಮತಿ ಪಡಿಸಿದನು. ಸಿದ್ಧಾರ್ಥಕನು ಹೇಳಿದ ಸ್ಥಳದಲ್ಲಿ ಜಪಶಾಲೆಯಂ ರಚಿಸುವಂತೆ ಜನಗಳಿಗೆ ನೇಮಿಸಿ ಅದಕ್ಕೆ ಬೇಕಾದ ಪದಾರ್ಥಗಳಂ ಕೊಟ್ಟು ಆ ಮಾಸೋಪವಾಸಿಗಳು ಹೇಳಿದ ಬ್ರಾಹ್ಮಣರಂ ಕರೆಸಿ ಕೊಟ್ಟು ಜಪವಂ ಮಾಡಿಸುವಂತೆ ತನ್ನ ಕಡೆಯ ಜನಗಳಿಗೆ ನೇಮಿಸಿ ಕಳುಹಿಸಿದನು. ಅಲ್ಲಿ ಆರ್ತ್ವಿಜ್ಯಮಂ ಪಡೆದಿರುವ ಮಾಸೋಪವಾಸಿಯು ಶಿಷ್ಯಚತುಷ್ಟಯ ಸಮೇತನಾಗಿ ಚಾಣಕ್ಯನ ಆಗಮನಮಂ ನಿರೀಕ್ಷಿಸುತ್ತ ಜಪಹೋಮಮಂ ಮಾಡುವವನಂತೆ ಆ ಶಾಲೆಯಲ್ಲೇ ಇರುತ್ತಿದ್ದನು.

ಇತ್ತ ರಾಕ್ಷಸನಂ ಕುರಿತು ರಾಯಸದವರು—ಸ್ವಾಮೀ, ಬರೆಯುವುದಕ್ಕೆ ಏನು ಅಪ್ಪಣೆ? ಎಂದು ಕೇಳಲು; ಆಗ ಸಮೀಪದಲ್ಲಿ ಧ್ಯಾನಾರೂಢನಾಗಿರುವ ಕ್ಷಪಣಕನಂ ನೋಡಿ ಅವನಂ ಆಚೆಗೆ ಹೋಗು ಎಂಬುವುದಕ್ಕೆ ದಾಕ್ಷಿಣ್ಯಪಟ್ಟು ಈತನು ವಿರಕ್ತನು. ನಮ್ಮ ಆದರಣೆಯಿಂದ ನಮ್ಮಲ್ಲೇ ಹೊರತು ಅನ್ಯರಲ್ಲಿ ಈತನಿಗೆ ಮೌನವು. ಈ ಲೌಕಿಕ ವ್ಯವಹಾರದಲ್ಲಿ ಈತನಿಗೆ ಪ್ರಯೋಜನವಿಲ್ಲ. ಆದುದರಿಂದೀತನು ಇದ್ದರೂ ಬಾಧಕವಿಲ್ಲ ಎಂದು ನಿಶ್ಚಯಿಸಿ—

ಕೇಳಿರೈ, ರಾಯಸದವರುಗಳಿರಾ, ಕೆಲವರು ಗೂಢಮಂತ್ರಿಗಳು ನಮ್ಮ ಕಡೆಯಿಂದ ನಿಯೋಗಿತನದ ಸಂಬಳಮಂ ತೆಗೆದುಕೊಳ್ಳುತ್ತ ಪರರಾಜರ ಬಳಿಯಲ್ಲಿ ಪ್ರೀತಿಪಾತ್ರರಾಗಿಯೂ ವರ್ತಕರಾಗಿಯೂ ವ್ಯಾಪಾರಮುಖದಿಂ ಜೀವಿಸುತ್ತಿರುವರು. ಯಾರ್ಯಾರಂದರೆ—ಕುಲೂತಪತಿಯಲ್ಲಿ ಧನಗುಪ್ತನೂ ಮಲಯಪತಿ ಸಿಂಹನಾದನಲ್ಲಿ ಕೃಷ್ಣದಾಸನೂ ಕಾಶ್ಮೀರಪತಿಯಲ್ಲಿ ಶಾರಿಕಸೆಟ್ಟಿಯೂ ಸಿಂಧುಪತಿಯ ಬಳಿಯಲ್ಲಿ ಹೀರದಾಸನೂ ಪಾರಶೀಕಪತಿಯಲ್ಲಿ ಮುಕುಂದದಾಸನೂ ಗಾಂಧಾರಪತಿಯಲ್ಲಿ ವಜ್ರಲಾಲನೂ ಕಾಂಭೋಜನಲ್ಲಿ ಬಾಲದಾಸನೂ. ಇವರೆಲ್ಲರಿಗೂ ನಮ್ಮ ಹೆಸರಿನಿಂದ ಕಾಗದಗಳಂ ಬರೆಯತಕ್ಕುದೇನಂದರೆ—ನೀವು ನಂದರಲ್ಲಿ ಸ್ವಾಮಿಭಕ್ತಿಯುಳ್ಳವರಾದುದರಿಂದ ಮಾಡತಕ್ಕ ಸ್ವಾಮಿಕಾರ್ಯವೇನಂದರೆ—ನಿಮಗೆ ಆಶ್ರಯೀಭೂತರಾದ ಅರಸುಗಳು ನಂದವೈರಿಯಾದ ಚಂದ್ರಗುಪ್ತನಂ ವಹಿಸಿರುವ ಪರ್ವತರಾಜನಿಗೆ ನಿಯಮ್ಯರಾಗಿ ನಂದರ ಮೇಲೆ ದಂಡೆತ್ತಿ ಬರುವ ಅರ್ಥವು ನಿಮಗೆ ತಿಳಿದು ಇದೆಯಷ್ಟೆ. ಈ ವೇಳೆಯಲ್ಲಿ ಎಷ್ಟು ಧನವ್ಯಯವಾದರೂ ಆಗಲಿ. ನಿಮ್ಮ ಅರಸುಗಳಿಗೆ ಹೇಗೆ ಹೇಳಬೇಕೋ ಆ ಮೇರೆ ಹೇಳಿ ಒಡಂಬಡಿಸಿ ಏನಾದರೂ ಒಂದು ನಿಮಿತ್ತದಿಂದ ಚಂದ್ರಗುಪ್ತನಂ ಸಂಹರಿಸಿದರೆ

ಉತ್ತಮೋತ್ತಮವು. ಅದು ಅಶಕ್ಯವಾದರೆ ನಿಮಿತ್ತಾಂತರದಿಂದ ಪರ್ವತರಾಜನಂ ಬಿಟ್ಟು ನಂದರಿಗೆ ಸಹಾಯವಾಗುವುದು ಒಂದು ಪಕ್ಷ. ಅದೂ ಕೂಡದಿದ್ದರೆ ವ್ಯಾಜ್ಯಾಂತರದಿಂದ ಕಲಹಮಂ ಮಾಡಿಕೊಂಡು ತಮ್ಮ ತಮ್ಮ ದೇಶಗಳಿಗೆ ಹೋಗುವುದು ಒಂದು ಪಕ್ಷ. ಅದೂ ಸರಿಬಾರದಿದ್ದರೆ ನಂದ ಸೇನೆಗೂ ಪರ್ವತರಾಜನ ಸೇನೆಗೂ ಕೈಗೂಡಿ ಯುದ್ಧವಾಗುವ ಸಮಯದಲ್ಲಿ ನಂದವಾಹಿನಿಯ ಮೇಲೆ ಕೈಮಾಡದೆ ತಟಸ್ಥರಾಗಿರುವುದೆಂಬುವುದು ಇದು ಒಂದು ರೀತಿ. ಇವುಗಳಲ್ಲಿ ಯಾವ ಅರ್ಥಕ್ಕಾದರೂ ಒಡಂಬಡಿಸಿ ಆ ಅರಸುಗಳಿಗೆ ನಂದರಲ್ಲಿ ವಿಶ್ವಾಸವುಂಟಾಗುವಂತೆ ಮಾಡಿದರೆ ಅವರಿಗೆ ನೀವು ಹೇಳಿದರ್ಥವೆಲ್ಲವೂ ನಮಗೆ ಸಮ್ಮತವು. ಇದರಿಂದ ಬಲವದ್ವಿರೋಧವು ಘಟಿಸೀತೆಂಬ ಶಂಕೆ ತೋರಿದರೆ ನಾವು ಹೇಳಿದ ರೀತಿಗೆ ಅವರೆಲ್ಲರೂ ನಮಗೆ ಅನುಕೂಲರಾದಲ್ಲಿ ಆ ಅರಸುಗಳ ಸಹಾಯವು ಪರ್ವತರಾಜನಿಗೆ ತಪ್ಪುವುದರಿಂದ ಆತನು ನಮ್ಮಿಂದ ಹತನಾಗುವುದರಲ್ಲಿ ಸಂಶಯವಿಲ್ಲ. ಹೀಗೆ ನಮ್ಮ ಕಾರ್ಯವು ಜಯವಾದ ಬಳಿಕ ಆ ಅರಸುಗಳು ನಮಗೆ ಮಾಡಿದ ಉಪಕಾರಕ್ಕೆ ಪ್ರತ್ಯುಪಕಾರವಾಗಿ ಪರ್ವತರಾಜನ ದೇಶಕೋಶಂಗಳಂ ಸಮವಾಗಿ ಹಂಚಿಕೊಡುತ್ತಿದ್ದೇವೆ. ಹೀಗೆಂದು ಕಾಗದಗಳಂ ಬೇರೆ ಬೇರೆ ವರ್ತಕರಿಗೆ ಬರೆಯಿರಿ. ಮೊಹರಗಳಂ ಮಾಡಿ ಮೇಲೆ ಅವರವರ ಹೆಸರಂ ಬರೆದು ನಾಲ್ಕು ಮಂದಿ ಚಾರರಂ ಕರೆದು ಆ ಪತ್ರಿಕೆಗಳಂ ಅವರ ಕೈಯ್ಯಲ್ಲಿ ಕೊಟ್ಟು—ಎಲೈ ದೂತರುಗಳಿರಾ, ನೀವು ವೇಗಯುಕ್ತಂಗಳಾದ ಅಶ್ವಂಗಳನ್ನೇರಿ ವೇಷಾಂತರದಿಂ ಪರ್ವತರಾಜನ ಸೇನೆಗೆ ಹೋಗಿ ಈ ಲೇಖನಗಳಂ ಮೇಲೆ ಬರೆದಿರುವ ಮೇರೆಗೆ ಆಯಾ ದೇಶಾಧಿಪತಿಗಳ ವರ್ತಕರಿಗೆ ಕೊಟ್ಟು ಅವರಿಂದ ಬದಲು ಬರೆಸಿಕೊಂಡು ಶೀಘ್ರದಿಂದ ಬನ್ನಿರಿ ಎಂದು ಹೇಳಿ ಕಳುಹಿಸಿದನು. ಅಪ್ಪಣೆಯಾದ ಮೇರೆಗೆ ಎಂದು ಆ ಚಾರರು ಹೋದರು.

ಇತ್ತ ರಾಕ್ಷಸನ ಬಳಿಯಲ್ಲಿ ಕುಳಿತಿದ್ದ ಕ್ಷಪಣಕನು ಇದೆಲ್ಲಮಂ ತಿಳಿದು ಧ್ಯಾನದಿಂದೆಚ್ಚತ್ತವನಂತೆ ಕಣ್ಣುಗಳಂ ಬಿಟ್ಟು ಬುದ್ಧೇಶನೇ, ಎನಲು ; ಅದಂ ನೋಡಿ—ಕ್ಷಪಣಕರೇ, ನಿಮಗೆ ಭಿಕ್ಷಾಸಮಯವು ಮೀರಿಬರುತ್ತಿದೆ. ಹೋಗಿ ಬನ್ನಿರಿ ಎಂದು ರಾಕ್ಷಸನು ಹೇಳಲು ; ನಮ್ಮ ಪ್ರಭುವಿಗೆ ಜಯವಾಗಲೆಂದು ಕ್ಷಪಣಕನು ಹೋಗುತ್ತ ತನ್ನ ಮನಸ್ಸಿನಲ್ಲಿ—ಈಗ ರಾಕ್ಷಸನು ಪರ್ವತರಾಜನಿಗೂ ಆತನ ವಶವರ್ತಿಗಳಾದ ಅರಸುಗಳಿಗೂ ಭೇದಮಂ ಕಲ್ಪಿಸಿ ಪರ್ವತರಾಜನಂ ಉಪೇಕ್ಷಿಸುವಂತೆ ಮಾಡಲೋಸುಗ ಆ ಅರಸುಗಳ ಬಳಿಯಲ್ಲಿರುವ ವರ್ತಕ

ರಿಗೆ ಕಾಗದಗಳಂ ಬರೆದು ಕಳುಹಿಸಿ ಇದ್ದಾನೆ. ಈ ಕಾಗದಗಳ ಮೇರೆಗೆ ಅಲ್ಲಿ ಕಾರ್ಯನಡೆದು ರಾಕ್ಷಸನ ಭೇದೋಪಾಯಂ ಸಿದ್ಧಿಸಿದರೆ ಚಂದ್ರಗುಪ್ತನಂ ವಹಿಸಿರುವ ಚಾಣಕ್ಯರ ಸಂಕಲ್ಪವು ನಿಷ್ಫಲವಾದೀತು. ಈ ರಾಕ್ಷಸನ ಕಾಗದಗಳು ಆ ವರ್ತಕರುಗಳಿಗೆ ತಲಪುವುದಕ್ಕಿಂತಲೂ ಮುಂಚಿತವಾಗಿಯೇ ಚಾಣಕ್ಯರಿಗೆ ಈ ವರ್ತಮಾನಮಂ ತಿಳುಹಿಸದಿದ್ದರೆ ನಾನು ಇಲ್ಲಿ ಇದ್ದು ಫಲವೇನು ? ಅವರಿಗೆ ಮಿತ್ರನೆಂತಹೆನು ? ಎಂದು ನಿಶ್ಚಯಿಸಿ ರಾಕ್ಷಸನ ಬಳಿಯಲ್ಲಿ ನಡೆದ ವರ್ತಮಾನವೆಲ್ಲಮಂ ವಿವರವಾಗಿ ಬರೆದು ತನ್ನ ಶಿಷ್ಯನಾದ ವೇಗಶರ್ಮನ ಕೈಯ್ಯಲ್ಲಿ ಕೊಟ್ಟು—

ಎಲೈ, ಪ್ರಿಯ ಶಿಷ್ಯನೇ, ರಾಕ್ಷಸನ ಭೇದೋಪಾಯದಿಂದ ಚಾಣಕ್ಯರ ಸಂಕಲ್ಪವು ಅನ್ಯಥಾ ಆಗುವಂತೆ ತೋರುತ್ತದೆ. ಆದುದರಿಂದ ಈ ಮಂಟಪದ ಸಮೀಪದಲ್ಲಿ ಯಾರದೋ ದಿವ್ಯಾಶ್ವವು ಅಣಿಮಾಡಿ ಕಟ್ಟಿದೆ. ಇಗೋ, ಈ ಕಾಡಿಗೆಯಂ ಅದರ ಹಣೆಯಲ್ಲಿಟ್ಟು ನೀನೂ ಹಾಗೇ ಇಟ್ಟುಕೊಂಡು ಅದರ ಮೇಲೆ ಕುಳಿತರೆ ನೀನು ಪ್ರಾಣಿಮಾತ್ರಕ್ಕೆ ಗೋಚರನಾಗುವುದಿಲ್ಲ. ಈ ಚೂರ್ಣವಂ ನೀರಿನಲ್ಲಿ ಕದಡಿ ಕುಡಿದರೆ ಒಂದು ಮಾಸಪರಿಯಂತರವೂ ಹಸಿವು ಬಾಯಾರಿಕೆ ನಿದ್ರೆ ದಣುವು ಸಹ ಆಗುವುದಿಲ್ಲ. ಅಶ್ವಕ್ಕೂ ಇದೇ ರೀತಿಯಂ ಮಾಡಿ ರಾಜಮಾರ್ಗಮಂ ಬಿಟ್ಟು ಸಮೀಪವಾದ ಅರಣ್ಯಪಥವಂ ಹಿಡಿದು ಹೋಗಿ ಪರ್ವತರಾಜನ ಸೇನೆಯಲ್ಲಿರುವ ಚಾಣಕ್ಯರಿಗೆ ಈ ಕಾಗದವಂ ಕೊಡುವ ಸಮಯದಲ್ಲಿ ಕಾಡಿಗೆಯಂ ತೊಳೆದುಕೊಂಡು ಕೊಟ್ಟನಂತರ ಅವರು ಆಜ್ಞಾಪಿಸಿದಂತೆ ನಡೆಯುವನಾಗು. ಅಲ್ಲಿಂದ ಬಂದ ಬಳಿಕ ಯೋಗ್ಯನಾದ ನಿನಗೆ ವಾದವಿದ್ಯವನ್ನುಪದೇಶಿಸುವೆನೆಂದು ಕಾಡಿಗೆಯನ್ನೂ ಚೂರ್ಣವನ್ನೂ ಆತನಿಗೆ ಕೊಟ್ಟು ಕಳುಹಿಸಿದನು. ಆ ಬಳಿಕ ವೇಗಶರ್ಮನು ಹಾಗೆಯೇ ಹೊರಟು ಹೋಗುತ್ತಿದ್ದನು.

ಇತ್ತ ರಾಕ್ಷಸನು ಸ್ನಾನಾದಿಗಳಂ ಮಾಡಿ ರಾಜಾಸ್ಥಾನಕ್ಕೆ ಬರುತ್ತ ತನ್ನ ಮನಸ್ಸಿನಲ್ಲಿ—ಮೊದಲು ಈ ನಂದರು ನಿಷ್ಕಾರಣವಾಗಿ ಮಾಡಿದ ಮೌರ್ಯಪುತ್ರರ ವಧೆಯಿಂದ ನಮ್ಮ ಸೇನಾಪತಿಗಳೇ ಮುಖ್ಯರಾದ ಜನಗಳು ಇವರಲ್ಲಿ ವಿಶ್ವಾಸತಪ್ಪಿ ತಮ್ಮ ಕಾರ್ಯಾರ್ಥವಾಗಿ ಸ್ವಾಮಿಭೃತ್ಯರಂತೆ ನಟಿಸುತ್ತ ಈಗ ಚಂದ್ರಗುಪ್ತನು ನಂದರ ಮೇಲೆ ದಂಡೆತ್ತಿಬರುವುದಂ ತಿಳಿದು ಅವನಲ್ಲಿ ಅನುರಾಗವಂ ಮಾಡಿದ್ದಾರು. ಶೂದ್ರಸ್ತ್ರೀ ಪೌತ್ರನಾದ ಆತನು ರಾಜ್ಯಾರ್ಹನಲ್ಲವೆಂಬ ಪರಿಜ್ಞಾನವಂ ಬಿಟ್ಟಿದ್ದಾರು. ಈ ಯರ್ಥವಂ ಪರಿಶೋಧಿಸಿ ಅಧಿಕಾರವಂ

ಬದಲು ಮಾಡುವುದಕ್ಕೆ ರಾಜಕಾರ್ಯವು ಒದಗಿರುವ ಈ ಸಮಯದಲ್ಲಿ ಅದರ ಚರ್ಚೆಗೆ ಹೋಗಬಾರದು. ಈ ಸಮಯದಲ್ಲಿ ಆ ಸೇನಾಪತಿಗಳಂ ವಸ್ತ್ರಭೂಷಣಾದಿಗಳಿಂದುಪಚರಿಸಿ ಪ್ರೋತ್ಸಾಹಪಡಿಸಿ ಚಂದ್ರಗುಪ್ತನಲ್ಲಿ ಅವರಿಗೆ ಉಪೇಕ್ಷೆ ಬರುವಂತೆ ಮಾಡಿ ಯುದ್ಧಕ್ಕೆ ಕಳುಹಿಸಬೇಕೆಂದು ನಿಶ್ಚಯಿಸಿ ನಂದರು ಕುಳಿತಿದ್ದ ಸಭಾಸ್ಥಾನಕ್ಕೆ ಬಂದು ಆ ಸೇನಾನಾಯಕರೆಲ್ಲರಂ ಕರೆಯಕಳುಹಿಸಿ ಅವರಂ ಕುರಿತು—

ಅಯ್ಯಾ, ಸ್ವಾಮಿಕಾರ್ಯಧುರಂಧರರಾದ ಬಾಗುರಾಯಣಾದಿ ಸೇನಾಪತಿಗಳಿರಾ. ನಂದರಿಗೆ ವೈರಿಯಾದ ಚಂದ್ರಗುಪ್ತನು ಪರ್ವತೇಶ್ವರನಂ ಕರೆದುಕೊಂಡು ಯುದ್ಧಮುಖದಿಂದ ನಂದರಾಜ್ಯಾಧಿಪತ್ಯಕ್ಕೆ ತಾನು ಅರ್ಹನಲ್ಲದವನಾದರೂ ಈ ರಾಷ್ಟ್ರಮಂ ಶತ್ರುಗಳ ಪಾಲುಮಾಡಬೇಕೆಂಬ ಬುದ್ಧಿಯಿಂದ ಬರುತ್ತಿದ್ದಾನಂತೆ. ನೀವು ನಿಮ್ಮ ವಂಶಪರಂಪರೆಯಾಗಿ ಬಹುಕಾಲದಿಂದ ಈ ಸಂಸ್ಥಾನಕ್ಕೆ ಆಪ್ತರು. ನಂದರ ಅಭ್ಯುದಯವೇ ನಿಮ್ಮ ಶ್ರೇಯಸ್ಸು. ಮಹಾ ಶೂರರಾದ ನಿಮ್ಮ ಮುಂದೆ ನಿಲ್ಲುವುದಕ್ಕೆ ಪರ್ವತೇಶ್ವರನು ಎಷ್ಟರವನು? ಬಹು ಯುದ್ಧಗಳಿಂದ ಸ್ವಾಮಿಕಾರ್ಯಮಂ ಮಾಡಿ ಖ್ಯಾತಿವಂತರಾದ ನಿಮಗೆ ಈಗ ಒದಗಿರುವ ಕಾರ್ಯವು ಸ್ವಲ್ಪ ಯತ್ನದಿಂದ ಸಾಧ್ಯವು. ಹಾಗಾದರೂ ಶತ್ರುಗಳಂ ನಿಗ್ರಹಿಸುವ ಮಂತ್ರದಿಂದ ಅಹೋರಾತ್ರಿಗಳಲ್ಲಿಯೂ ಜಾಗರೂಕತೆಯನ್ನೂ ಸಮಯವನ್ನೂ ನಿರೀಕ್ಷಿಸುತ್ತ ಕಾರ್ಯಮಂ ನಿರ್ವಹಿಸುತ್ತ ಇನ್ನೂ ಯಶೋವಂತರಾಗುವುದು ನಿಮಗೆ ಪರಮ ಧರ್ಮವು. ನಿಮ್ಮ ಹತ್ತುಮಂದಿಯಲ್ಲಿ ನಿಮ್ಮಂತೆ ನಾನೂ ಒಬ್ಬನು. ನೀವು ಮಾಡತಕ್ಕ ಕಾರ್ಯವೇನಂದರೆ—ಅಯ್ಯಾ, ಬಾಗುರಾಯಣನೇ, ನೀನು ಎರಡು ಲಕ್ಷ ಸೇನೆಯಂ ಕೂಡಿಕೊಂಡು ಕೋಟೆ ಕೊತ್ತಲು ಉಕ್ಕಡ ಮುಂತಾದ ಸ್ಥಳಗಳಲ್ಲಿ ಫಿರಂಗಿ, ಶೂಲ ಪ್ರಾಸ ಪಟ್ಟಿಸ ಕುಂತ ಶತಘ್ನಿ ಖಡ್ಗ ತುಪಾಕ ಬಾಣ ಮದ್ದು ಗುಂಡು ಮೊದಲಾದ ಯುದ್ಧಸಾಮಗ್ರಿಗಳಂ ಒದಗಿಸಿಕೊಂಡು ಹೆಚ್ಚಾದ ಸಂಬಳಗಳಿಂದ ಜನಕ್ಕೆ ಉತ್ಸಾಹಾಭಿವೃದ್ಧಿಯಾಗುವಂತೆ ಮಾಡುತ್ತ ಹಳಬರಾಗಿದ್ದ ಜನರಂ ಮೇಲೆ ನೋಡುತ್ತ ಇರುವಂತೆ ನೇಮಿಸಿ ಕಾವಲವರಿಗೆ ಇದ್ದ ಕಡೆಯಲ್ಲೇ ಅನ್ನೋದಕಗಳಂ ಒದಗಿಸಿಕೊಡುತ್ತ ಅದೇ ಕಾರ್ಯದಮೇಲೆ ತಿರುಗುತ್ತ ಪುರಮಂ ರಕ್ಷಿಸುವವನಾಗು.

ಅಯ್ಯಾ, ಡಿಂಗಿರಾತ ಭದ್ರಭಟರುಗಳಿರಾ, ನೀವು ನಿಮ್ಮ ವಶದಲ್ಲಿರುವ ಎರಡು ಲಕ್ಷ ತುರುಗಂಗಳಂ ಎರಡು ಸಹಸ್ರ ಮದಗಜಂಗಳಂ ಮೂರು ಲಕ್ಷ

ಪದಾತಿಗಳಂ ತೆಗೆದುಕೊಂಡು ಶತ್ರುಗಳು ಬರುವ ಮಾರ್ಗಕ್ಕೆ ಇದಿರಾಗಿ ಹೋಗಿ ಅವಕಾಶವಾದರೆ ಅವರೊಡನೆ ಯುದ್ಧಮಂ ಮಾಡುತ್ತ ಶತ್ರುಗಳಿಗೆ ನೀರು ದೊರಕದಂತೆ ಮಾರ್ಗದಲ್ಲಿದ್ದ ಉದಕಗಳಂ ಕೆಡಿಸುತ್ತ ಅಶಕ್ಯವಾದ ಮಡುವುಗಳಲ್ಲಿ ವಿಷಮಂ ಕದಡಿ ತೃಣಕಾಷ್ಠಗಳಿಗೆ ಅಗ್ನಿಪ್ರವೇಶಮಂ ಗೆಯ್ಸಿ ನೆಳಲು ದೊರೆಯದಂತೆ ಮಾಡಿ ಆ ದೇಶದ ಪ್ರಜೆಗಳಿಗೆ ಕಂದಾಯಮಂ ಬಿಡಿಸಿ ದಂಡಿನ ಮಾರ್ಗಮಂ ತಪ್ಪಿಸಿ ಹೊರಚ್ಚಾದ ಕೋಟೆ ದುರ್ಗಗಳಿಗೆ ಕಳುಹಿಸುತ್ತ ಶತ್ರುಗಳ ಸೈನ್ಯಕ್ಕೆ ಬರುವ ಧನಧಾನ್ಯಂಗಳಂ ಸೂರೆಮಾಡುತ್ತ ರಾತ್ರಿಕಾಲದಲ್ಲಿ ಸಮಯ ದೊರಕಿದರೆ ಹೊಕ್ಕು ಪರರಾಜರ ಸೇನೆಯಂ ಭೇದಿಸುತ್ತ ಶತ್ರುಗಳ ವೈದ್ಯಪಾಚಕ ಪರಿಚಾರಕ ರಜಕ ಮಾಲ್ಯಕಾರರ ಮುಖದಿಂದ ಔಷಧ ಅನ್ನ ಗಂಧ ತಾಂಬೂಲ ಜಲ ವಸ್ತ್ರಮಾಲ್ಯಗಳಲ್ಲಿ ವಿಷಚೂರ್ಣಪ್ರಯೋಗಮಂ ಮಾಡಿಸುತ್ತ ಮದ್ಯ ಭಂಗಿ ಹೊಗೆಸೊಪ್ಪು ಕ್ಷಾರಾಮ್ಲ ತಿಲ ಗುಡ ಘೃತಗಳಲ್ಲಿ ಪಕ್ವವಾದ ವಿಷಚೂರ್ಣಮಂ ಬೆರಸಿ ಶತ್ರುಸೈನ್ಯದಲ್ಲಿ ರಾತ್ರಿವೇಳೆಯಲ್ಲಿ ಅಂಗಡಿಗಳಂ ಇಟ್ಟು ಅಗ್ಗವಾಗಿ ಮಾರಿ ಅರುಣೋದಯದ ಸಮಯದಲ್ಲಿ ಕಾಣಿಸಿಕೊಳ್ಳದಂತೆ ಕಪಟ ವರ್ತಕರಿಗೆ ನೇಮಿಸುತ್ತ ನಿಶಿಯಲ್ಲಿ ಆನೆ ಕುದುರೆಗಳ ಲದ್ದಿಗಳಲ್ಲಿ ವಿಷಚೂರ್ಣಮಂ ಕಲಸಿ ಅದರ ಧೂಮ ಮುಖದಿಂದ ಅವುಗಳಂ ಕೊಲ್ಲುತ್ತ ಗಾಳಿಗಿದಿರಾಗಿ ಅಗ್ನಿಗೆ ವಿಷಚೂರ್ಣವಂ ಎರಚಿ ಆ ಧೂಮಸ್ಪರ್ಶದಿಂದ ಶತ್ರುಜನಗಳಿಗೆ ಕ್ಷುದ್ರರೋಗಮುಂಟಾಗುವಂತೆ ಮಾಡುತ್ತ ಮಾರ್ಗದ ಇಕ್ಕಟ್ಟಾದ ಕಣಿವೆಗಳಲ್ಲಿ ನೆಲಸುರಂಗಮಂ ಮಾಡಿ ಮದ್ದುಗಳಂ ಹೂಳಿಸಿ ಬರುವ ಶತ್ರುಸೇನೆಗಿದಿರಾಗಿ ಯುದ್ಧಮಂ ಮಾಡುವವರಂತೆ ನಿಂತು ಶತ್ರುಗಳು ಗುಂಪುಕೂಡಿದುದಂ ಕಂಡು ಹಿಮ್ಮೆಟ್ಟುತ್ತ ಸುರಂಗಕ್ಕೆ ಅಗ್ನಿಯಂ ಮುಟ್ಟಿಸಿ ಅದರ ಘಾತದಿಂ ಶತ್ರುಗಳಂ ಸಂಹರಿಸುತ್ತ ಮಾರ್ಗದಲ್ಲಿ ಇರುವವರಾಗಿರಿ.

ಅಯ್ಯಾ, ಶೂರರಾದ ವಿಜಯವರ್ಮ ಬಲಗುಪ್ತರುಗಳಿರಾ, ಚಂದ್ರಗುಪ್ತನೆಂಬುವನು ಶೂದ್ರಸ್ತ್ರೀ ಪೌತ್ರನಾದುದರಿಂದ ರಾಜ್ಯಕ್ಕೆ ತಾನು ಬಾಧ್ಯನಾಗದಿದ್ದರೂ ಪರ್ವತರಾಜನಂ ಕರೆದುಕೊಂಡು ಅನಾಥಳಾದ ಸುಂದರಿಯಂ ವಿಟಜನರಾಕ್ರಮಿಸಲೆಣಿಸುವಂತೆ ಶೂರರಿಲ್ಲದ ಧನಿಕ ಸಂಘಮಂ ಚೋರರು ಹೊಗುವಂತೆ ಕೃಪಣನಾದ ಚಾಣಕ್ಯನೆಂಬ ವೈದಿಕನೊಡನೆ ಆಲೋಚಿಸುತ್ತ ಚಂದ್ರವಂಶಸ್ಥರಾದ ಮಹಾರಾಜರು ಬಹುಕಾಲ ಮೊದಲುಗೊಂಡು ಇಂದಿನವರೆಗೂ ಆಳುತ್ತ ಬಂದ ಸಿಂಹಾಸನಾಧೀಶರಿಂ ಪಾಲಿತವಾದ ಈ ರಾಜ್ಯವನ್ನು ನಿಕೃಷ್ಟರೂ ದೇವಬ್ರಾಹ್ಮಣ

ಕಂಟಕರೂ ಆದ ಕಿರಾತ ಮ್ಲೇಂಛ ಪಾರ್ವತೀಯರ ಪಾಲುಮಾಡಿ ಈ ರಾಷ್ಟ್ರಾಭಿ
ಮಾನಿಗಳಾದ ಶೂರರ ಸೊಕ್ಕನ್ನಡಗಿಸುವೆನೆಂದು ಬರುತ್ತಿದ್ದಾನೆ. ಈ ಪುರದೇಶ
ಗಳಲ್ಲಿ ಪತಿವ್ರತೆಯರಾಗಿ ಪರಪುರುಷರ ಮುಖಮಂ ನೋಡದಿರುವ ಅಂತಃಪುರ
ವಾಸಿನಿಯರಾದ ಶೂರಪತ್ನಿಯರು ಹೇರಳವಾಗಿ ಇರುವರು. ಪರಸ್ತ್ರೀಯರಂ
ಹಿಡಿಯುವುದೆಂಬುವುದು ಈಗ ಬರುವ ಶತ್ರುಗಳಿಗೆ ಜಾತಿಸ್ವಭಾವವು. ಈ ದೇಶ
ದಲ್ಲಿ ಅವರ ಸೇನಾಸಂಚಾರಮಾತ್ರದಿಂದ ಮಹಾ ಪ್ರಮಾದಮುಂಟಾಗುವುದ
ರಲ್ಲಿ ಸಂಶಯವಿಲ್ಲ. ಇಲ್ಲಿ ಬಹಳ ಶೂರಸಂಘಗಳಿರುವಲ್ಲಿ ಹೀಗೆ ಸಂಭವಿಸುವು
ದುಂಟೇ? ಎಂದರೆ—ಅದರೂ ಹೇಳುವೆನು ಕೇಳಿರಿ. ಶೂರರು ಮೂರು ತೆರನಾಗಿ
ಹರು. ಅದೆಂತೆಂದರೆ—ತನ್ನ ಬುದ್ಧಿಕೌಶಲ್ಯದಿಂದ ಉಂಟಾದ ಸಮಾಧಾನ ಭೇದ
ಗಳಿಂದ ದೂರದಲ್ಲೇ ಶತೃಗಳಂ ತನ್ನ ಸ್ವಾಮಿಯ ಪಾದಾಕ್ರಾಂತರಾಗುವಂತೆ
ಮಾಡುತ್ತ ನದಿಗಳು ಸಮುದ್ರಮಂ ಸೇರುವಂತೆ ಶತ್ರುಗಳ ಲಕ್ಷ್ಮಿಯರನ್ನು
ತನ್ನ ಸ್ವಾಮಿಯ ಸಾಮ್ರಾಜ್ಯಲಕ್ಷ್ಮಿಗೆ ಪರಿಚಾರಿಣಿಯರನ್ನಾಗಿ ಮಾಡುತ್ತಿರುವ
ಮಂತ್ರಿ ಒಬ್ಬ ಶೂರನು. ಆತನಿಗೆ ಬುದ್ಧಿಯೇ ಶತ್ರುನಿಗ್ರಹಶಸ್ತ್ರವು. ಪ್ರಧಾನ
ಶಸ್ತ್ರವೆಂಬುವುದು ಅಧಿಕಾರಲಾಂಛನವು. ಮತ್ತು ಬಹುಸೇನೆಯಂ ಕಟ್ಟಿ
ಅವರು ಮಾಡುವ ಕಾರ್ಯಮಂ ಧೈರ್ಯಸ್ಥೈರ್ಯವನ್ನರಿತು ಕಾರ್ಯಾನುಗುಣ
ವಾಗಿ ಸಂಬಳ ಸನ್ಮಾನಂಗಳಂ ಮಾಡುತ್ತ ಕಾರ್ಯದಕ್ಷರ ಮುಂದೆ ಹೇಡಿಗಳಂ
ಸನ್ಮಾನಿಸದೆ ನಿರಪರಾಧಿಗಳಂ ದಂಡಿಸದೆ ಹೇಡಿಗಳ ಮುಂದೆ ಶೂರರಿಗೆ ಅಪಮಾ
ನಮಂ ಮಾಡದೆ ತನ್ನಲ್ಲಿ ಭಯವಿಶ್ವಾಸಮಂ ಉಂಟುಮಾಡಿಕೊಳ್ಳುತ್ತ ಉತ್ಸಾಹ
ತಗ್ಗದಂತೆ ನಂಬಿಕೆಯಂ ಧೃಡಗೊಳಿಸುತ್ತ ಸೇನೆಯಂ ಪ್ರೋಷಿಸುತ್ತ ಯುದ್ಧ
ಕಾಲದಲ್ಲಿ ತಾನು ಮುಂದಾಗಿ ನಿಂತುಕೊಂಡು ಕೈಗೂಡಿದ ಸಮಯದಲ್ಲಿ ತಾನು
ಹಿಂದೆನಿಂತು ಜನಗಳಂ ಪ್ರೋತ್ಸಾಹಗೊಳಿಸಿ ಸೇನಾಮುಖದಿಂ ಶತ್ರುಗಳಂ ನಿಗ್ರ
ಹಿಸಿ ತಾನು ಜೀವವಂತನಾಗಿ ಸ್ವಾಮಿಗೆ ಯಶಸ್ಸಂ ತನಗೆ ಖ್ಯಾತಿಯಂ ಸಂಪಾದಿ
ಸುವ ಸೇನಾಪತಿಯೊಬ್ಬ ಶೂರನು. ಆತನೇ ಸೇನಾಧಿಪತ್ಯಕ್ಕೆ ಯೋಗ್ಯನು.
ಮತ್ತು ತನಗೆ ಸ್ವಾಮಿಯು ಕೊಟ್ಟಂಥ ಸಂಬಳ ಸನ್ಮಾನಂಗಳ ಸ್ಮರಣೆಯಿಂದ
ಇದಿರಾಗಿ ಬಂದ ಶತ್ರುಗಳ ಮೇಲೆ ಕಾಣಿಸಿಕೊಂಡು ದೈವಬಲವಿದ್ದರೆ ಶತ್ರುವಂ
ನಿಗ್ರಹಿಸಿ ಆದಿಲ್ಲದಿದ್ದರೆ ತಾನೇ ಶತ್ರುವಿನಿಂದ ಸಂಹೃತನಾಗುವನೊಬ್ಬ ಶೂರನು.
ಇವನೇ ಬಂಟಿಯರಾದ ಶೂರನೆಂಬವನು. ಈ ಶೂರನಿಗೆ ಸೇನಾಧಿಪತ್ಯಮಂ
ಕೊಟ್ಟರೆ ಕೋಪಬಂದ ಸಮಯದಲ್ಲಿ ಹಾನಿವೃದ್ಧಿಗಳಂ ತಿಳಿಯದೆ ಮೊದಲೇ

ತಾನು ಕಿರುಬನಂತೆ ಶತ್ರುಗಳ ಮೇಲೆ ಬಿದ್ದು ಅವರಿಂದ ತಾನು ಸಂಹೃತನಾಗಿ ತನ್ನ ಸೇನಾಸಂಹಾರಮಂ ಮಾಡಿಸಿ ಸ್ವಾಮಿ ಕಾರ್ಯಮಂ ಕೆಡಿಸುವನಾದುದರಿಂದ ಈ ಕಲಿಯುಗದಲ್ಲಿ ಇಂಥ ಶೂರನಿಗೆ ಸೇನಾಧಿಪತ್ಯ ನಿರ್ವಾಹವು ಅಪ್ರಸಿದ್ಧವೆಂದು ಹೇಳಬೇಕು. "ಸಂಘೇಶಕ್ತಿಃಕಲೌಯುಗೇ" ಎಂಬ ರೀತಿಯಲ್ಲಿ ಈ ಕಲಿಯುಗದೊಳ್ ಶೂರಸಂಘದಿಂದ ಜಯವೂ ಜಪಶೀಲರಾದ ಬ್ರಾಹ್ಮಣಸಂಘದಿಂದ ಶಾಪಾನುಗ್ರಹವೂ ಉಂಟಾಗುವುದೆಂದು ಹೇಳಬೇಕು. ಪ್ರಕೃತವೇನೆಂದರೆ—ಈ ಮೂರು ತೆರದ ಶೌರ್ಯವೂ ನಿಮ್ಮ ಒಬ್ಬರೊಬ್ಬರಲ್ಲೇ ಇರುವುದರಿಂದ ಶತ್ರುಗಳ ದೆಸೆಯಿಂದ ಅಭಿಭವ ಸಂಭವಿಸಲಾರದಿದ್ದರೂ ನೀವು ನಮ್ಮ ಸಾಮಂತರಾದ ಪಶ್ಚಿಮ ದೇಶಾಧಿಪತಿಗಳ ಸೇನೆಗಳನ್ನು ನಿಮ್ಮಿಬ್ಬರ ಎಂಟು ಲಕ್ಷ ಸೇನೆಯೊಡನೆ ಕೂಡಿಕೊಂಡು ಮುಂದೆ ಹೋಗುವ ಡಿಂಗಿರಾತ ಭದ್ರಭಟರಿಗೆ ಸಹಾಯಮಂ ಮಾಡುತ್ತ ಶತ್ರುಸೈನ್ಯವು ಸರಯೂ ನದಿಯ ಪೂರ್ವದಿಕ್ಕಿಗೆ ಬಾರದಂತೆ ಸಮಯೋಚಿತವಾಗಿ ಕಾದುಕೊಂಡು ಇರತಕ್ಕದು.

ಕೇಳಿರೈ, ಬುದ್ಧಿಸಂಪನ್ನರಾದ ಪುರುಷದತ್ತ ಲೋಹಿತಾಕ್ಷರುಗಳಿರಾ, ಈಗ ಪರ್ವತ ದೇಶಾಧಿಪತಿಯು ಸ್ವಬಲಪರಬಲವಿಚಾರಶೂನ್ಯನಾಗಿ ಮದಗಜದೊಡನೆ ಸೆಣಸಬೇಕೆಂಬ ಕತ್ತೆಕಿರುಬನಂತೆ ನಮ್ಮೊಡನೆ ಕಲಹಮಂ ಮಾಡಿ ಜೀವಿಸುವೆನೆಂದು ಬರುತ್ತಿದ್ದಾನೆ. ಅವನೆಂಥವನೆಂದರೆ—ಹಳ್ಳತಿಟ್ಟು ಕೊರಕಲುಗಳಿಂ ಕೂಡಿದ ಪರ್ವತ ಪ್ರಾಂತ್ಯಗಳಲ್ಲಿರುತ್ತ ವೆಚ್ಚಕ್ಕೆ ಇಲ್ಲದಿದ್ದರೆ ಕಿರಾತದಸ್ಯುಗಳಿಂ ಕಟ್ಟಿಕೊಂಡು ಗಿಡದ ಮರೆಯಿಂದ ಬಂದು ಪರದೇಶದ ಗ್ರಾಮ ಹುಂಡಿ ಇವುಗಳಿಂ ಕೊಳ್ಳೆಯಂ ಮಾಡಿ ಓಡಿಹೋಗಿ ಗಿಡಗಳ ಗುಂಪಂ ಸೇರುತ್ತ ಅಟ್ಟಿಕೊಂಡು ಹೋದರೆ ಅಲ್ಲಿಂದ ಮತ್ತೂ ಹಿಂದಕ್ಕೆ ಓಡುತ್ತ ಹೀಗೆ ಚೋರವೃತ್ತಿಯಲ್ಲಿ ಜೀವಿಸಿಕೊಂಡಿರುವ ವ್ಯಾಧರಂ ಗುಂಪುಮಾಡಿಕೊಂಡು ತನ್ನ ಕೀಕಸ ದೇಶಮಂ ಬಿಟ್ಟು ವಿಸ್ತಾರವಾಗಿ ಅರಣ್ಯವಲ್ಲದೆ ಸಮನಾಗಿರುವ ಈ ನಮ್ಮ ರಾಜ್ಯಕ್ಕೂ ಬಂದರೆ ನೀರಿನಿಂದ ಹೊರಗೆ ಬಂದ ಜಲಜಂತುವಿನಂತೆ ನಮ್ಮ ಬಾಧೆಯಂ ಸಹಿಸಿ ನಿರ್ವಹಿಸುವುದುಂಟೇ? ಹುತ್ತಗಳಿಂದ ಎದ್ದು ಬರುವ ಚೇಳಿನ ಹಿಂಡುಗಳಿಂ ಕೈಕಾಲು ಸೋಂಕದಂತೆ ಹುಲ್ಲಿನ ಬೆಂಕಿಯಲ್ಲಿ ಸುಡುವ ಹಾಗೆ ನಿಮ್ಮ ಎಂಟು ಲಕ್ಷ ಸೇನೆಗಳಿಂ ನಾಲ್ಕು ತಂಡಗಳಿಂ ಮಾಡಿಕೊಂಡು ವ್ಯೂಹಮಂ ರಚಿಸಿ ಶತ್ರುಸೇನೆಯು ಗಂಗಾ ನದಿಯಂ ದಾಟಿ ಗಿರಿವ್ರಜಮುಖವಾಗಿ ಶೋಣಭದ್ರಾನದಿಯಂ ದಾಟಿ ಬಾರದಂತೆ ಯುದ್ಧಮಂ ಮಾಡುತ್ತ ಇರಿ. ವ್ಯೂಹಂಭೇದಿಸದಿದ್ದರೆ ವ್ಯೂಹರಚನೆಯಲ್ಲಿ ಅಸ

ಮರ್ಥರಾದ ಶತ್ರುಗಳು ಮುಂದುವರಿದು ಬರಲಾರರು. ಶತ್ರು ದುರ್ಬಲನಾಗಿ ದ್ದಾಗ್ಯೂ ಇಷ್ಟು ಯತ್ನವೇಕಂದರೆ—ಮೊಲದ ಬೇಟೆಯಂ ಮಾಡುವವನು ವ್ಯಾಘ್ರಸಂಹಾರ ಸಾಮಗ್ರಿಯಂ ಸಂಪಾದಿಸಿ ತಿರುಗುತ್ತಿದ್ದರೆ ಅದು ನಿಷ್ಫಲವಾ ಗದಂತೆ ಶತ್ರುವು ಅಲ್ಪಸತ್ವನೆಂದು ಮಹಾ ಪ್ರಯತ್ನಮಂ ಮಾಡದೆ ಇರಕೂಡದು.

ಅಯ್ಯಾ, ರಾಜಸೇನನೇ, ಶತ್ರುಗಳ ಸೈನ್ಯದ ಜನಕ್ಕೆ ಬಂಧುಮಿತ್ರರಾಗಿ ನಮ್ಮ ಸೇನೆಯಲ್ಲಿ ಸಂಬಳಕ್ಕಿರುವ ಜನಗಳಂ ವಿಚಾರಿಸಿ ನಮ್ಮ ದಂಡಿನಲ್ಲಿ ಅಧಿ ಕಾರವಿದ್ದರೆ ಅದನ್ನು ತೆಗೆದು ಅವರಿಗೆ ಬೇರೆ ಉದ್ಯೋಗವನ್ನು ಕೊಟ್ಟು ದೇಶಾಂ ತರಕ್ಕೆ ಹೋಗಲೀಸದೆ ಅಟ್ಟವಣೆಯಲ್ಲಿ ಅಧಿಕಾರಮಂ ನೇಮಿಸಬೇಕೇ ಹೊರತು ಪುನಃ ಸೇನೆಯಲ್ಲಿ ಅಧಿಕಾರಮಂ ನೇಮಿಸಕೂಡದು. ಈ ಜನಕ್ಕೆ ರಾಷ್ಟ್ರಾಧಿ ಕಾರಮಂ ನೇಮಿಸಬಹುದೇ? ಎಂದರೆ—ಆ ಅಧಿಕಾರಗುಣವಿದ್ದರೆ ನೇಮಿಸ ಬಹುದು. ಅಧಿಕಾರವಿಲ್ಲದ ಪರದೇಶದ ಬಿಡುಮಂದಿಗಳನ್ನು ಇಮ್ಮಡಿಯಾಗಿದ್ದ ಸ್ವದೇಶಜನಗಳಿಗೆ ಕೂಡಿಸಿ ಅವರನ್ನು ಸೇನೆಯ ಹಿಂಗಡೆಯಲ್ಲಿ ಇಡಬೇಕು. ಪ್ರಜಾರಂಜಕತ್ವವೂ ಅರ್ಜಕತ್ವವೂ ಸ್ವಾಮಿಭಕ್ತಿಯೂ ಎಂಬ ಇವು ಮೂರು ರಾಷ್ಟ್ರಾಧಿಕಾರಿಯ ಮುಖ್ಯ ಗುಣಗಳು. ಪಾಪ ಭೀರುತ್ವವೂ ಶಾಸ್ತ್ರಜ್ಞತ್ವವೂ ವ್ಯವಹರ್ತೃತ್ವವೂ ಎಂಬ ಇವು ಮೂರು ನ್ಯಾಯಾಧಿಪತಿಯ ಗುಣಗಳು. ದಕ್ಷ ತ್ವವೂ ಸ್ವಾಮಿಭಕ್ತಿಯೂ ವಿಮರ್ಶೆಗಳೂ ಎಂಬ ಇವು ಮೂರು ಮಂತ್ರಿಸಿಷ್ಠ ಗುಣಗಳು. ಔದಾರ್ಯ ಶೌರ್ಯ ವಿಮರ್ಶೆ ಆಸ್ತಿಕತ್ವ ಅಪವಾದ ಭಯವೆಂಬಿವು ಪ್ರಭುನಿಷ್ಠಗುಣಗಳು. ಇವರಲ್ಲಿ ವ್ಯತ್ಯಾಸಮುಂಟಾದರೆ ರಾಜ್ಯದಲ್ಲಿ ದುರ್ಭಿಕ್ಷ ಭಯಗಳು ಸಂಭವಿಸುವುವು.

ಅಯ್ಯಾ, ಚಿತ್ರವರ್ಮನೇ, ನೀನು ಸಮರ್ಥರಾದ ಗೂಢಚಾರರಂ ಶತ್ರುಸೇ ನೆಗೆ ಕಳುಹಿಸಿ ಗುಂಪುಗೂಡಿದ್ದ ಬ್ರಾಹ್ಮಣ ಪಙ್ಕ್ತಿಗಳಲ್ಲಿಯೂ ಸೂಳೆಯರ ಮನೆಗಳಲ್ಲಿಯೂ ಅಡಿಗೆಯ ಪರಿಚಾರಕರ ಗುಂಪಿನಲ್ಲಿಯೂ ಜ್ಯೌತಿಷ್ಕರಲ್ಲಿಯೂ ಇರುತ್ತ ಶತ್ರುಗಳ ಉತ್ಸಾಹ ಉಪೇಕ್ಷೆ ಕೋಪ ಯುದ್ಧಾಭಿನಿವೇಶ ಸ್ವಜನ ಪ್ರೀತಿ ಮತ್ತತೆ ಮೊದಲಾದುವುಗಳಂ ತಿಳಿಯುತ್ತ ಅದಕ್ಕೆ ಪ್ರತೀಕಾರವಾದ ಯತ್ನಮಂ ಮಾಡುತ್ತ ಇರುವುದಲ್ಲದೆ ಯುದ್ಧಭೂಮಿಯ ಹಳ್ಳತಿಟ್ಟುಗಳನ್ನರಿತು ಸಮಯಾನುಗುಣವಾಗಿ ವ್ಯೂಹಮಂ ರಚಿಸುತ್ತ ಶತ್ರುಸೇನೆ ಸ್ವಲ್ಪವಾಗಿದ್ದರೆ ಹೆಚ್ಚಾಗಿ ಕಾಣಿಸುತ್ತ ಹೆಚ್ಚಾಗಿ ಇದ್ದರೆ ಸ್ವಲ್ಪವಾಗಿ ತೋರಿ ಅಧಿಕಮಂ ನಿಗ್ರ ಹಿಸುತ್ತ ಅಧಿಕವಾಗಿ ತೋರಿದರೆ ಹಿಂದೆ ಅತ್ಯಧಿಕ ಇದ್ದೀತೆಂದು ತೋರ್ಪಡಿ

ಸುತ್ತ ಇರಬೇಕು. ವ್ಯೂಹವಮಂ ರಚಿಸುವ ಕೌಶಲ್ಯವಮಂ ತಿಳಿದಿದ್ದರೆ ಸ್ವಸೇನೆಯು ಸ್ವಲ್ಪವಾಗಿದ್ದರೂ ಅಧಿಕ ಸೇನೆಯುಳ್ಳ ಶತ್ರುಗಳಂ ನಿಗ್ರಹಿಂಸಬಹುದು. ಹೀಗೆ ಒದಗಿದ ರಾಜಕಾರ್ಯವಮಂ ನಿರ್ವಹಿಸಿದ ಸೇನಾಪತಿಯು ಯಶೋವಂತನಾಗುವನು. ಪುತ್ರರು ಸಂಪಾದಿಸಿ ತಂದ ವಸ್ತುಗಳಿಂದ ಹೆತ್ತತಾಯಿಯು ಆ ತನಯರಂ ಪೋಷಿಸುವಂತೆಯೂ ಉದಕವು ಶಂಖವಮುಖದಿಂದ ಪಾವನ ತೀರ್ಥವಾಗುವಂತೆಯೂ ಗೋಪೋಷಣೆಗೆ ಕೊಟ್ಟ ತೃಣಜಲಗಳು ದೇವತಾಯೋಗ್ಯವಾದ ಕ್ಷೀರವಾಗುವಂತೆಯೂ ಪ್ರಜೆಗಳಿಂದ ತಂದು ರಾಜಕೋಶದಲ್ಲಿ ಕೂಡಿಸಿದ್ದ ವಸ್ತುಗಳು ಪುನಃ ಪ್ರಜಾರಕ್ಷಣೆಗೇ ಹೊರತು ರಾಜಭೋಗಕ್ಕೆ ಯೋಗ್ಯಗಳಾಗಲಾರವು. ಪ್ರಜಾದ್ರವ್ಯದಲ್ಲಿ ಪ್ರಭುವಿಗೆ ಸ್ವತ್ವವಿಲ್ಲದ ಮೇಲೆ ಪ್ರಭುವೃತ್ತಿ ಯಾವುದಂದರೆ—ನಿಜಭುಜಾರ್ಜಿತವಾದ ಶತ್ರುದ್ರವ್ಯದಿಂದ ಜೀವನವೆಂದು ಮಹಾ ಋಷಿಗಳ ಮತವಾದಕಾರಣ ಶ್ರೋತ್ರಿಯನು ಧಾರ್ಯಾಗ್ನಿಯಂ ಅದರ ಭಸ್ಮದಿಂದಲೇ ಆಚ್ಛಾದನಂಗೆಯ್ದು ರಕ್ಷಿಸುತ್ತ ಸುಕೃತಕ್ಕೆ ಪಾತ್ರನಾಗುವಂತೆ ಪ್ರಜಾ ದ್ರವ್ಯದಿಂದ ಪ್ರಜಾರಕ್ಷಣೆಯಂ ಮಾಡುವ ಅರಸು ಶ್ರೇಯೋವಂತನಾಗುವನು. ಪ್ರಜೆಗಳೆಂದರೆ—ಪ್ರಭು ಒಬ್ಬ ಹೊರತು ಮಿಕ್ಕವರೆಲ್ಲರೂ ಪ್ರಜೆಗಳು. ಅವರುಗಳ ರಕ್ಷಣೆಯಾವುದೆಂದರೆ—ವೃತ್ತಿಯಂ ಕಲ್ಪಿಸುವುದರಿಂದ ; ವೃತ್ತಿ ಕಲ್ಪನೆಯಾವುವೆಂದರೆ--ಕಾರ್ಯನಿರ್ವಾಹ ಯೋಗ್ಯತೆಯಂ ತಿಳಿದು ಜೀವವನ್ನುಂಟುಮಾಡುವುದು. ಆ ಜೀವನವು ಯಾವ ಮೂಲಕದಿಂದಂದರೆ—ಪ್ರಭುಮಾಡುವ ತ್ಯಾಗ ದಾನಗಳಿಂದ ಇಹದಲ್ಲಿ ಲೌಕಿಕ ಕಾರ್ಯವನ್ನು ಕುರಿತು ಕೊಡೋಣವೆಂಬುವುದೇ ತ್ಯಾಗವು. ಇದೇ ಕೀರ್ತಿದಾಯಕವು. ದೇಶಕಾಲ ಪಾತ್ರವರಿತು ಕೊಡೋಣವೆಂಬುವುದೇ ದಾನವು. ಇದು ಪರಲೋಕ ಸಾಧನವು. ದೀನಾನಾಥ ವಿಪನ್ನ ರಕ್ಷಣೆಯೂ ಉಪಕಾರವೂ ಎಂಬಿವು ಆ ಎರಡರಲ್ಲಿಯೇ ಅಂತರ್ಭೂತಗಳು ಇದರಲ್ಲಿ ವ್ಯತ್ಯಾಸವುಂಟಾದರೆ ಕಟುಕನಿಗೆ ಕೊಟ್ಟ ಗೋವಿನಂತೆಯೂ ಕುಲಹೀನನಿಗೆ ಕೊಟ್ಟ ಪುತ್ರಿಯಂತೆಯೂ ಇಹದಲ್ಲಿ ನಿಂದೆಯನ್ನೂ ಪರದಲ್ಲಿ ಹಾನಿಯನ್ನೂ ಉಂಟುಮಾಡುವುದು. ಇದಂ ಶಾಸ್ತ್ರ ಸಜ್ಜನ ಮುಖದಿಂ ತಿಳಿದು ಪ್ರಮತ್ತನಾಗದೆ ಪ್ರಜಾರಕ್ಷಣೆಯಂ ಮಾಡುವ ಅರಸಿಗೂ ಕಾರ್ಯಾನುಗುಣವಾದ ಸಂಬಳಗಳಿಂದ ತುಷ್ಟರಾದ ಭೃತ್ಯರಿಗೂ ಇಹ ಲೋಕದಲ್ಲಿ ಯಶಸ್ಸೂ ಪರಲೋಕವಲ್ಲಿ ಶ್ರೇಯಸ್ಸೂ ಉಂಟಾಗುವುವು. ಈ ರೀತಿಯಾಗಿ ಅಮಾತ್ಯರಾಕ್ಷಸನು ಬಾಗುರಾಯಣಾದಿ ಸೇನಾಪತಿಗಳಿಗೆ ನಿರೂಪಿಸಿ ಬೊಕ್ಕಸ

ದಿಂದನರ್ಘ್ಯಂಗಳಾದ ಮುಕ್ತಾಹಾರಂಗಳಂ ತುರಾಯಿಗಳಂ ವಜ್ರದ ಕಡಗಗಳಂ ರತ್ನಬಾಪುರಿಗಳಂ ಉಂಗುರಗಳಂ ತರಿಸಿ ಅವರನ್ನು ತಾನೇ ಅಲಂಕರಿಸಿ ದಿವ್ಯ ದುಕೂಲಗಂಧಮಾಲ್ಯಂಗಳಂ ಧರಿಸಿ ಕರ್ಪೂರವೀಳೆಯಮಂ ಕೊಟ್ಟು ಸನ್ಮಾನಂ ಗೆಯ್ಯುತ್ತಿರಲು; ಆಗ ನಂದರು ದಂಡೆತ್ತಿಹೋಗುವ ಸೇನಾಪತಿಗಳಂ ಕುರಿತು—

ಅಯ್ಯಾ ಸೇನಾಪತಿಗಳಿರಾ, ಅಮಾತ್ಯರು ನೇಮಿಸಿದಂತೆ ಜಾಗ್ರತೆಯಿಂದ ರಾಜಕಾರ್ಯವಂ ಲೋಪವಿಲ್ಲದಂತೆ ನಿರ್ವಹಿಸತಕ್ಕುದು ಎಂದು ನೇಮಿಸಿದರು. ಆ ಮಾತಿಗೆ ಮಹಾಪ್ರಸಾದವೆಂದು ನಮಸ್ಕರಿಸಿ ಸೇನಾಪತಿಗಳೆಲ್ಲರೂ ಅಪ್ಪಣೆಯಂ ತೆಗೆದುಕೊಂಡು ಹೊರಟರು. ಆಗ ಬಾಗುರಾಯಣನು ಬಹು ಸೇನೆಯಂ ಕೂಡಿಸಿಕೊಂಡು ಯುದ್ಧಸಾಮಗ್ರ್ಯವಂ ಒದಗಿಸಿ ಕೋಟೆಕೊತ್ತಲು ಇವು ಗಳೇ ಮುಖ್ಯವಾದ ಸ್ಥಳಗಳಲ್ಲಿ ಸೇನೆಯಂ ನಿಲ್ಲಿಸಿ ಪುರವಂ ರಕ್ಷಿಸುತ್ತಿದ್ದನು. ಮಿಕ್ಕ ಸೇನಾಪತಿಗಳೆಲ್ಲರೂ ಯುದ್ಧಸನ್ನದ್ಧರಾಗಿ ಶತ್ರುಸೇನೆಯಂ ಕುರಿತು ಹೊರಟುಹೋದರು. ಆಗ ನಂದರು ದೂತರ ಮುಖವಂ ನೋಡಿ—

ಎಲೈ, ಇಷ್ಟುದಿವಸದ ವರೆಗೂ ನಮ್ಮಿಂದ ಬಹುಮಾನಿತರಾಗಿದ್ದು ಈಗ ವ್ಯಾಜಾಂತರದಿಂದ ಹೇಡಿಗಳಾಗಿ ಯುದ್ಧಕ್ಕೆ ಹೋಗದೆ ನಿಂತವರನ್ನು ಯಥೋಕ್ತ ವಾಗಿ ಶಿಕ್ಷಿಸುವುದಾಗುವುದೆಂದು ಪುರದ ಬೀದಿಗಳಲ್ಲಿ ಡಂಗುರವಂ ಹಾಕಿ ಸಾರಿಸತಕ್ಕುದು. ಗಂಗಾಸರಯೂಸಂಗಮದ ಉತ್ತರಭಾಗದಲ್ಲಿ ತಿಟ್ಟಾಗಿ ಇರುವ ಸ್ಥಳವಂ ನೋಡಿ ಅಲ್ಲಿ ರಾಜಭವನದಂತೆ ರಾಜಯೋಗ್ಯವಾದ ಗುಡಾ ರವಂ ಹಾಕಿ ಅದರ ಸುತ್ತಲೂ ತೀಕ್ಷ್ಣಂಗಳಾದ ಶೂಲಗಳಂ ನೆಡಿಸಿ ಅದರ ಸುತ್ತಲೂ ಭಲ್ಲೆಯದವರಂ ನಿಲ್ಲಿಸಿ ಅದರ ಹೊರಗೆ ಖಡ್ಗಪಾಣಿಗಳಾದ ತುರಗಾ ರೂಢರಂ ನೆಲೆಗೊಳಿಸಿ ಅದರ ಹೊರವಳಯದಲ್ಲಿ ಫಿರಂಗಿಗಳಂ ಜೋಡಿಸಿ ಜಾವಿ ಗೆಯವರಂ ಸಂಧಾನಿಸಿ ಅದರ ಸುತ್ತಲೂ ಮಹಾಗಂಭೀರವಾದ ಅಗಳಂ ತೋಡಿಸಿ ಅದಕ್ಕೆ ನದೀಜಲವು ಬರುವಂತೆ ಮಾಡಿ ಸಿದ್ಧವಾಗಿರತಕ್ಕುದು. ಬುಧವಾರದ ದಿವಸ ನಾವೇ ಜಯಾರ್ಥವಾಗಿ ಅಲ್ಲಿಗೆ ತೆರಳುತ್ತಿದ್ದೇವೆ. ರಾಜಪುತ್ರರುಗಳಿರಾ, ನೀವೆಲ್ಲರೂ ನಿಮ್ಮ ವಾಹನಂಗಳನ್ನೇರಿಕೊಂಡು ಸಂಗಡ ಬರುತಕ್ಕುದು ಎಂದು ನೇಮಿಸಿ ಅಮಾತ್ಯರಾಕ್ಷಸನಂ ನೋಡಿ—

ಅಯ್ಯಾ ಅಮಾತ್ಯರೇ, ಬೇಸಿಗೆಯಲ್ಲಿ ವಿಜೃಂಭಿಸುವ ಅಗ್ನಿಗೆ ಚಂಡಮಾ ರುತಸಹಾಯವಾದಂತೆ ಯುದ್ಧಕುತೂಹಲವುಳ್ಳ ನಮಗೆ ನಿಮ್ಮ ಬುದ್ಧಿಸಹಾಯ ವಿರುವಲ್ಲಿ ಶತ್ರುವರ್ಗವು ತೃಣಪ್ರಾಯವು. ಮಹೋರಗಂಗಳಂತಿಪ್ಪ ಈ

ಖಡ್ಗಮುಖದಿಂದ ಶತ್ರುಗಳಂ ಸಂಹರಿಸಿ ಮುಂದಲೆಯಂ ಪಿಡಿದು ದುಷ್ಟಸ್ತ್ರೀಯ ನ್ನೆಳೆದುತರ್ಪಂತೆ ಶತ್ರುಲಕ್ಷ್ಮಿಯರಂ ಕರುತರುತ್ತಿದ್ದೇವೆ ಎಂದು ಹೇಳಿ ಅನರ್ಘ್ಯವಸ್ತ್ರಭೂಷಣಗಂಧಮಾಲ್ಯಕರ್ಪೂರವೀಳೆಯಂಗಳನ್ನಿತ್ತು ರಾಕ್ಷಸನನ್ನುಪ ಚರಿಸಿ ಕಳುಹಿಸಿ ಆ ಬಳಿಕ ತಮ್ಮ ಆಯುಧಶಾಲೆಗೆ ಬಂದು ತಮಗೆ ಅಭಿಮತ ವಾದಾಯುಧಗಳಂ ತೆಗೆಸಿ ಪೂಜಿಸಿ ತಮ್ಮ ತಮ್ಮ ಅಂತಃಪುರಕ್ಕೆ ಬರುತ್ತಿದ್ದರು.

ಅತ್ತಲಾಕ್ಷಪಣಕನ ಶಿಷ್ಯನಾದ ವೇಗಶರ್ಮನು ತನ್ನ ಗುರುವು ಕೊಟ್ಟ ಕಾಗದವಂ ತೆಗೆದುಕೊಂಡು ಅರಣ್ಯಮಾರ್ಗವಾಗಿ ತ್ವರಿತದಿಂ ಹೋಗಿ ತುರಗವ ನ್ನಿಳಿದು ಪರ್ವತರಾಜನ ಸೇನೆಯಲ್ಲಿರುವ ಚಾಣಕ್ಯನಂ ಕಂಡು ತನ್ನ ಕಾಡಿಗೆಯ ನ್ನಳಿಸಿಕೊಂಡು ಅಭಿವಂದಿಸಿ ಆ ಕಾಗದವಂ ಕೊಡಲು; ಅದನ್ನು ನೋಡಿಕೊಂಡು ಚಾಣಕ್ಯನು ಚಂದ್ರಗುಪ್ತನಿಗೆ—

ಅಯ್ಯಾ ಕುಮಾರಕನೇ, ಈಗ ರಾಕ್ಷಸನು ಪರ್ವತರಾಜನಿಗೂ ಈತನ ಸಂಗಡ ಬಂದಿರುವ ಅರಸುಗಳಿಗೂ ಅಂತಃಕಲಹವನ್ನುಂಟುಮಾಡಿ ಅನಾಯಾಸ ದಿಂದ ತನಗೆ ಜಯವಂ ಸಂಪಾದಿಸುವುದಕ್ಕಾಗಿ ನಂದರಿಗೆ ಭೃತ್ಯರೆನಿಸಿ ಈ ಅರಸು ಗಳ ಬಳಿಯಲ್ಲಿ ಪ್ರೀತಿಪಾತ್ರರಾಗಿ ವರ್ತಕಧರ್ಮದಿಂದಿರುವ ಧನಗುಪ್ತಾದಿ ಎಂಟುಮಂದಿ ಗೂಢಮಂತ್ರಿಗಳಿಗೆ ಕಾಗದವಂ ಬರೆದು ಚಾರರ ಮುಖದಿಂ ಕಳುಹಿಸಿದ್ದಾನೆ. ಈ ಅರ್ಥವಂ ತಿಳಿದಿರಬೇಕೆಂದು ನಮ್ಮ ಮಿತ್ರನಾದ ಇಂದು ಶರ್ಮನು ಆ ವರ್ತಕರ ಹೆಸರುಗಳನ್ನು ಬರೆಸಿ ಕಳುಹಿಸಿದ್ದಾನೆ. ಈ ಕಪಟವೇ ನಂದರ ನಾಶಕ್ಕೆ ಕಾರಣವಾದೀತು. ಅವರು ಎಲ್ಲಿಗೆ ಹೋದಾರು ? ಈಗಲೇ ಈ ಅರ್ಥವಂ ಪರ್ವತರಾಜನಿಗೆ ತಿಳುಹಿಸಿ ಅದಕ್ಕೆ ಪ್ರತೀಕಾರವನ್ನಾಚರಿಸಿ ಜಯವಂ ಸಂಪಾದಿಸಬೇಕು. ಈಗ ಪರ್ವತರಾಜನ ಬಲಕ್ಕಿಂತಲೂ ನಂದವಾಹಿನಿಯು ಅಧಿಕವಾಗಿ ಬಹು ಸೇನಾಪರಿವೃತರಾಗಿರುವುದರಿಂದ ಆ ಅನೀಕವಂ ಸಂಹರಿಸಿ ಆ ಬಳಿಕ ನಂದನಿಗ್ರಹವಂ ಮಾಡುವುದಕ್ಕೆ ಯತ್ನವಂಗೈದರೆ ಯುದ್ಧಮುಖದಲ್ಲಿ ಉಭಯಸೇನೆಗಳೂ ಹತವಾಗಿ ನಂದರ ಸಂಹಾರವಶಕ್ಯವಾಗುವುದು. ಅದರಿಂದ ಸೇನಾಸಮೇತರಾದ ನಂದರಂ ಸಂಹರಿಸಕೂಡದು. ನಾಗಸ್ವರದ ಧ್ವನಿಗೆ ಭ್ರಮಿಸಿ ಹುತ್ತವಂ ಬಿಟ್ಟು ಹೊರಗೆ ಬಂದ ಸರ್ಪಗಳಂ ಗಾರುಡಿಗನು ಹಿಡಿಯುವಂತೆ ಛದ್ಮನೆಯಿಂದ ನಂದರಂ ಸೇನೆಯಿಂದ ಹೊರಚಚ್ಚುಮಾಡಿ ಆ ಸಮಯದಲ್ಲಿಯೇ ಸಂಹರಿಸಬೇಕಾಯಿತು ಎಂದು ಹೇಳಿ ವೇಗಶರ್ಮನಂ ನೋಡಿ—ಎಲೈ, ನಾವು ಅರಸಿನ ಬಳಿಗೆ ಹೋಗಿ ಬರುವೆವು ಎಂದು ನುಡಿದು ಪರ್ವತರಾಜನ ಬಳಿಗೈದಿ ಉಚಿತಪ್ರಕಾರದಲ್ಲಿ ಕುಳಿತು—

ಅಯ್ಯಾ ರಾಯನೇ, ಈ ಕಾಲದಲ್ಲಿ ಧನಮೂಲಕದಿಂದ ಮಿತ್ರರು ಶತ್ರುಗಳಾದಾರು. ಶತ್ರುಗಳು ಮಿತ್ರರಾದಾರು. ಅದೇನಂದರೆ—ಈಗ ಪಾಟಲೀಪುರದಲ್ಲಿ ಅಮಾತ್ಯರಾಕ್ಷಸನು ಚಂದ್ರಗುಪ್ತನಿಗೆ ನೀನು ಕೊಟ್ಟ ಅಭಯವಂ ತಿಳಿದು ನಿನಗೆ ಚಂದ್ರಗುಪ್ತನಲ್ಲಿ ಉಪೇಕ್ಷೆಯನ್ನುಂಟುಮಾಡುವುದು ಅಶಕ್ಯವಾದುದರಿಂದ ನಿಮಗೂ ನಿಮ್ಮ ವಶವರ್ತಿಗಳಾಗಿರುವ ಅರಸುಗಳಿಗೂ ಕಲಹವಂ ಗಂಟಿಕ್ಕಿ ತನಗೆ ಅಶಕ್ಯವಾಗಿ ಬಂದಿರುವ ರಾಜಕಾರ್ಯವಂ ಅನಾಯಾಸವಾಗಿ ಪರಿಹರಿಸಿಕೊಳ್ಳಬೇಕೆಂದು ಯತ್ನವಂಮಾಡಿ ಅಲ್ಲಿಯ ಅರಸುಗಳ ಬಳಿಯಲ್ಲಿರುವ ವರ್ತಕರಿಗೆ ಕಾಗದಗಳಂ ಬರೆದು ಚಾರರಂ ಕಳುಹಿಸಿರುವ ವರ್ತಮಾನವು ನಮಗೆ ತಿಳಿದಿರುವುದರಿಂದ ಅದಂ ಪರಿಶೋಧಿಸಬೇಕೆಂದು ಹೇಳುತ್ತಿದ್ದನು. ಆ ಸಮಯದಲ್ಲಿ ಹೊರಗೆ-ಕೋ! ಎಂದು ಮೊರೆಯಿಡುತ್ತ ಕಟ್ಟನ್ನು ಸಡಲಿಸಿ ನೀರು ಕೊಟ್ಟರೆ ಉಂಟಾದರ್ಥವಂ ಹೇಳುವೆನೆಂದು ಕೂಗುವ ಧ್ವನಿಯಂ ಕೇಳಿ ಆ ರಾಯನು ದೂತರ ಮುಖವಂ ನೋಡಲು ; ಅವರು ಹೋಗಿ ವಿಚಾರಿಸಿ ಆ ಜೋಗಿಯ ವೇಷವಂ ಧರಿಸಿದ್ದ ಚಾರನ ಸಿಂಗನಾತದಲ್ಲಿ ಇದ್ದ ಕಾಗದಗಳಂ ತಂದು ಆ ರಾಯನ ಮುಂದಿಟ್ಟು—ಬುದ್ಧೀ, ಈಗ ಕೂಗಿದವನು ಪಾಟಲೀಪುರದ ಗೂಢಚಾರನಂತೆ. ಈ ದಂಡಿನಲ್ಲಿ ಪರದೇಶಸ್ವದೇಶಜನವಂ ವಿಂಗಡಿಸಿ ನೋಡುವ ಶೋಧರನ ಕಡೆಯವರು ತಿಳಿದು ಅವನಂ ಬಂಧಿಸಿ ತಂದು ಇದ್ದಾರೆ. ಅವನಲ್ಲಿ ಇದ್ದ ಕಾಗದಗಳು ಇವು ಎನಲು ; ಆ ಪತ್ರಿಕೆಗಳಂ ಓದಿಸುವಲ್ಲಿ ಕುಲೂತಪತಿ ಚಿತ್ರವರ್ಮನ ಬಳಿಯಲ್ಲಿರುವ ಧನಗುಪ್ತನಿಗೂ ಕಾಶ್ಮೀರಪತಿಯಲ್ಲಿರುವ ಶಾರೀಕಶೆಟ್ಟಿಗೂ ರಾಕ್ಷಸನು ಬರೆದು ಕಳುಹಿಸಿದ ಕಾಗದಗಳಾಗಲು ; ಅದರ ವಿವರಂಗಳಂ ಆ ರಾಯನು ತಿಳಿದು ಚಾಣಕ್ಯನಿಗಿಂತೆಂದನು—

ಬುದ್ಧಿಸಂಪನ್ನರಾದ ಚಾಣಕ್ಯರೇ, ಈಗ ರಾಕ್ಷಸನ ವಿಷಯವಾಗಿ ನೀವು ಹೇಳಿದರ್ಥವು ನಿದರ್ಶನಕ್ಕೆ ಬಂದಿತು. ಹೀಗೆ ಇನ್ನೂ ಯಾರ್ಯಾರಿಗೆ ಬರೆದು ಕಳುಹಿಸಿರುವನೋ ತಿಳಿಯಲಶಕ್ಯವಾಗಿದೆ. ಹೀಗೆ ಹೇಳಿ ಆ ಕಾಗದಗಳಂ ಚಾಣಕ್ಯನಿಗೆ ತೋರಿಸಲು ; ಅದಂ ನೋಡಿ ಚಾಣಕ್ಯನು ತನಗೆ ಕ್ಷಪಣಕನು ಬರೆದು ಕಳುಹಿಸಿದ ಕಾಗದವಂ ರಾಯನಿಗೆ ತೋರಿಸಲು ; ಅದರಲ್ಲಿ ಎಂಟುಮಂದಿ ವರ್ತಕರು ನಂದರ ಕಡೆಯವರು ಎಂದು ನಿದರ್ಶನವಾಗಲು ; ಆಗ ರಾಯನು ಚಾಣಕ್ಯನಂ ನೋಡಿ—ಈ ಜನಗಳಿಗೆ ಯಾವ ದಂಡನೆಯಂ ಮಾಡಬೇಕು ? ಎನಲು—

ಅಯ್ಯಾ ರಾಯನೇ, ಶತ್ರುನಿಗ್ರಹಾರ್ಥವಾಗಿ ನಿನಗೆ ನಿಯಮ್ಯರಾಗಿ ಬಂದಿರುವ ಅರಸುಗಳಲ್ಲಿ ಪ್ರೀತಿಪಾತ್ರರಾಗಿ ಇದ್ದುಕೊಂಡಿರುವ ಈ ವರ್ತಕರಂ ದಂಡಿಸಿದರೆ ಆ ಅರಸುಗಳಿಗೆ ಮುಖಭಂಗವಾದೀತು. ಇದು ಸಮಯವಲ್ಲವಾದುದರಿಂದ ಈಗ ಇವರಂ ದಂಡಿಸದೆ ಈ ವರ್ತಕರಿಗೆ ಕಾವಲಿಟ್ಟು ಅವರವರ ದೇಶಕ್ಕೆ ಕಳುಹಿಸುವಂತೆ ಆಯಾ ಅರಸುಗಳಿಗೆ ನೇಮಿಸುವುದೇ ಕರ್ತವ್ಯವೆಂದು ಹೇಳಿದನು. ಆಗ ಅರಸು ಚಿತ್ರವರ್ಮಮುಖ್ಯರಾದ ದೇಶಾಧಿಪತಿಗಳಂ ಕರೆಯಕಳುಹಿಸಿ—

ಅಯ್ಯಾ ಅರಸುಗಳಿರಾ, ನಿಮ್ಮ ಬಳಿಯಲ್ಲಿರುವ ಈ ಬಗೆಯ ವರ್ತಕರು ನಂದಭೃತ್ಯರೆಂದು ನಿದರ್ಶನಕ್ಕೆ ಬಂದುದರಿಂದ ಈಗ ಇವರಂ ದಂಡಿಸದೆ ಕಾವಲಿಟ್ಟು ಸ್ವದೇಶಗಳಿಗೆ ಕಳುಹಿಸಿರಿ. ಅವರ ದೋಷವಂ ತಿಳಿಯಬೇಕಾದರೆ ಹಿಂದ ಣಿಂದಾದೀತು ಎಂದನು. ಅವರು ಆ ಮಾತಿಗೆ ಏನು ನಡೆದಿರುವುದೋ! ಎಂದು ಶಂಕಿತರಾಗಿ ಅಪ್ಪಣೆಯ ಮೇರೆಗೆ ಆಗಲಿ ಎಂದು ಕೈಮುಗಿದು ಬಂದು ತಮ್ಮ ಕಡೆಯ ಎಂಟುಜನ ವರ್ತಕರಂ ಕಾವಲಿಟ್ಟು ಹೊರಡಿಸುತ್ತಿರಲು ; ಅಷ್ಟರಲ್ಲಿಯೇ ಜೋಗಿಯ ವೇಷವಂ ಧರಿಸಿ ಪಾಟಲೀಪುರದಿಂದ ಬಂದ ಚಾರನಿಗೆ ನಾಸಿಕಾಚ್ಛೇದನವಂ ಮಾಡಿಸಿ ದಂಡಿನಲ್ಲಿ ಡಂಗುರವಂ ಹಾಕಿ ಸಾರುತ್ತ ಬರುತ್ತಿರಲು ; ಇದೆಲ್ಲವಂ ನೋಡಿ ಪಾಟಲೀಪುರದಿಂದ ಬಂದ ಮಿಕ್ಕ ಚಾರರೂ ಭಯಗ್ರಸ್ತರಾಗಿ ತಮ್ಮ ಬಳಿಯಲ್ಲಿದ್ದ ಕಾಗದಗಳಂ ಹರಿದು ಭಕ್ಷಿಸಿ ತಪ್ಪಿಸಿಕೊಂಡು ಹಿಂತಿರುಗಿ ಓಡಿದರು. ಇತ್ತ ಚಾಣಕ್ಯನು ಪರ್ವತರಾಜನಂ ಕುರಿತು—

ಅಯ್ಯಾ ರಾಯನೇ, ನಂದಮಂತ್ರಿಯಾದ ರಾಕ್ಷಸನು ನಿಮಗೂ ನಿಮ್ಮ ಕಡೆಯ ಅರಸುಗಳಿಗೂ ಮಿತ್ರಭೇದವಂ ಕಲ್ಪಿಸಿ ತಾನು ಸುಖಿಯಾದೇನೆಂದು ರಹಸ್ಯವಾಗಿ ಮಾಡಿದ ಯತ್ನವು ಇಲ್ಲಿ ನಡೆಯದೆ ಪ್ರಕಟವಾದುದರಿಂದ ಪ್ರವಾಹಕ್ಕೆ ಮಳಲ ಸೇತುವೆಯಂ ಕಟ್ಟಿದವನಂತೆ ಭಗ್ನಮನೋರಥನಾದನು. ಇದು ನಿನಗೆ ಒಂದು ಜಯವೆಂದು ಹೇಳಬೇಕು. ಇನ್ನು ನೀನು ಸುಮ್ಮನಿರಬಾರದು. ಎಲ್ಲರಿಗೂ ತಿಳಿಯುವಂತೆ ಪ್ರಕಟವಾಗಿ ಕಾರ್ಯಪ್ರಯತ್ನವಂ ಮಾಡಿ ಜಯವಂ ಸಂಪಾದಿಸುವನಾಗು. ಹೇಗೆಂದರೆ—ನಂದರಿಗೆ ಮಿತ್ರನಾದ ಕಾಶೀರಾಜನಿಗೂ ಮೈಥಿಲನಿಗೂ ಮತ್ಸ್ಯದೇಶಾಧಿಪತಿಗೂ ನೀವು ಸೇನಾಸಮೇತರಾಗಿ ನಮಗೆ ಸಹಾಯವಾಗಿ ಬರಬೇಕೆಂದು ನಿರೂಪಂಗಳನ್ನು ಬರೆಯಿಸಿ ನಿಯೋಗಿಗಳ ಕೈಯಲ್ಲಿ ಕೊಟ್ಟು ಕಳುಹಿಸುವನಾಗು. ಅದರಿಂದಾಗುವ ಕಾರ್ಯಲಾಭವಂ ನೀನೇ ನೋಡುತ್ತಿರುವೆ ಎಂದು ಹೇಳಿ ಆ ರಾಯನ ಸಮ್ಮತಿಯಿಂದ ಕಾಶೀರಾಜಮುಖ್ಯರಾದ

ಮೂರುಮಂದಿ ಅರಸುಗಳಿಗೆ ಸಹಾಯಕ್ಕೆ ಬರುವಂತೆ ಲೇಖನವಂ ಬರೆಯಿಸಿ ಮೋಹರವಂಮಾಡಿ ನಿಯೋಗಿಗಳ ಕೈಯಲ್ಲಿ ಕೊಟ್ಟು ಇಬ್ಬರಿಗೆ ಹೇಳತಕ್ಕ ಮಾತುಗಳಂ ಹೇಳಿ ಕಳುಹಿಸಿ ಕಾಶೀಪಟ್ಟಣಕ್ಕೆ ಹೋಗುವ ಕಮಲಾಪೀಡನೆಂಬ ನಿಯೋಗಿಯಂ ಕರೆದು ರಹಸ್ಯದಲ್ಲಿ ಆತ ಮಾಡತಕ್ಕ ಕಾರ್ಯಗಳೆಲ್ಲವಂ ವಿವರ ವಾಗಿ ಹೇಳಿ ಅವನಂ ಕಳುಹಿಸಿ ಚಾಣಕ್ಯನು ತಾನಿದ್ದೆಡೆಗೆ ಬಂದನು.

ಅತ್ತಲಾ ಪಾಟಲೀಪುರದಲ್ಲಿರುವ ಕ್ಷಪಣಕನು ತನ್ನ ಮನಸ್ಸಿನಲ್ಲಿ—ರಾಕ್ಷ ಸನು ಪರ್ವತರಾಜನಿಗೂ ಅವರ ಬಳಿಯ ಅರಸುಗಳಿಗೂ ಅಂತಃಕಲಹವುಂಟಾ ಗುವಂತೆ ವರ್ತಕರಿಗೆ ಬರೆದಿದ್ದ ಕಾಗದಗಳು ಅವರಿಗೆ ತಲಪುವುದಕ್ಕೆ ಮುಂಚಿತ ವಾಗಿಯೇ ನನ್ನ ಶಿಷ್ಯನಾದ ವೇಗಶರ್ಮನ ಮುಖದಿಂದ ಈ ರಾಕ್ಷಸನು ಮಾಡಿ ರುವ ಭೇದವು ಚಾಣಕ್ಯರಿಗೆ ತಿಳಿಯುವ ಕಾರಣದಿಂದ ರಾಕ್ಷಸನ ಯತ್ನವು ಭಗ್ನ ವಾಗುವುದು ಸಿದ್ಧವು. ಈ ವರ್ತಮಾನವು ರಾಕ್ಷಸನಿಗೆ ತಿಳಿದರೆ ಭಗ್ನಮನೋ ರಥನಾಗಿ ಬೇರೆ ಯಾರಲ್ಲಿಯೂ ಸಂಶಯಪಡದೆ ನೂತನಪರಿಚಿತನಾದ ನನ್ನಲ್ಲಿ ಸಂದೇಹಪಟ್ಟು ನನ್ನ ಸ್ವಭಾವವಂ ಪ್ರತ್ಯಕ್ಷಪರೋಕ್ಷಗಳಲ್ಲಿ ವಿಚಾರಿಸದೆ ಇರನು. ಆಗ ನನ್ನಲ್ಲಿರುವ ಕಪಟವು ಆತನಿಗೆ ನಿದರ್ಶನಕ್ಕೆ ಬಂದರೆ ಪುಲಸ್ತ್ಯಪು ತ್ರನ ಕಾರ್ಯಕ್ಕೋಸ್ಕರ ಋಷಿವೇಷವಂ ಧರಿಸಿ ಆಂಜನೇಯನಂ ವಂಚಿಸಲೆಣಿ ಸಿದ ಕಾಲನೇಮಿಯ ದುರ್ದಶೆಯು ನನಗೂ ಸಂಭವಿಸುವುದರಿಂದ ನಾನು ಕೆಲವು ದಿವಸ ಜಾಗರೂಕನಾಗಿರಬೇಕೆಂದು ನಿಶ್ಚಯಿಸಿ ತನ್ನ ಶಿಷ್ಯರಂ ಕುರಿತು—

ಎಲೈ ಶಿಷ್ಯರುಗಳಿರಾ, ಪ್ರಕೃತದಲ್ಲಿ ನಮ್ಮ ಕಪಟಗಳು ರಾಕ್ಷಸನಿಗೆ ತಿಳಿ ಯುವಂತೆ ತೋರುತ್ತಿದೆ. ಕೆಲವು ದಿವಸ ನಾವು ಜಾಗರೂಕರಾಗಿರಬೇಕು. ನೀವು ನಮ್ಮಲ್ಲಿ ವಿಶೇಷವಾಗಿ ಬಾರದೆ ನಿಮ್ಮ ಕೆಲಸಗಳಲ್ಲಿ ಎಚ್ಚರಿಕೆಯುಳ್ಳವ ರಾಗಿರಬೇಕು ಎಂದು ನೇಮಿಸಿ ಕಳುಹಿಸಿ ತಾನು ಪುರದ ಹೊರಗಣ ಜಗತಿಯ ಕಟ್ಟೆಯನ್ನು ಆಶ್ರಯಿಸಿದ್ದನು.

ಅತ್ತ ಚಾಣಕ್ಯನು ತಾನಿದ್ದೆಡೆಗೆ ಹೋಗಿ ವೇಗಶರ್ಮನಂ ಕುರಿತು—ಎಲೈ, ಪಾಟಲೀಪುರದಲ್ಲಿ ನಮ್ಮ ಕಡೆಯವರು ಯಾವ ಯಾವ ಅಧಿಕಾರಿಯಲ್ಲಿ ಯಾರು ಯಾರು ಇರುವರು? ಏನೇನು ಮಾಡುವರು? ಎಂದು ಕೇಳಲು—

ಸ್ವಾಮಿ ಉಪಾಧ್ಯಾಯರೇ, ಕ್ಷಪಣಕವೇಷವಂ ಧರಿಸಿದ ನಮ್ಮ ಉಪಾ ಧ್ಯಾಯರು ಅಮಾತ್ಯರಾಕ್ಷಸನಲ್ಲಿ ಜ್ಯೋತಿಷ ಮೊದಲಾದ ವಿದ್ಯಾಕೌಶಲಗಳಂ

ತೋರಿಸುತ್ತ ರಾಜಕಾರ್ಯವಂ ತಿಳಿಯುತ್ತ ಅವನಿಗೆ ಆಪ್ತರಂತಿದ್ದಾರೆ. ಸಿದ್ಧಾರ್ಥಕನು ಭಾಗುರಾಯಣಶಕಟದಾಸರಲ್ಲಿ ಆಪ್ತವೈದ್ಯನಂತಿದ್ದಾನೆ. ಮಾಸೋಪವಾಸಿಯು ಮುನಿವೇಶವಂ ಧರಿಸಿ ಅರಸುಗಳು ಇಳಿಯುವ ಸ್ಥಾನಕ್ಕೆ ಸಮೀಪವಾಗಿ ಸರಯೂಸಂಗಮದ ಪೂರ್ವದಿಕ್ಕಿನಲ್ಲಿ ಮಾಡಿಸಿರುವ ಶತ್ರುಪಲಾಯನಜಪಶಾಲೆಯೊಳ್ ಆರ್ತ್ವಿಜ್ಯವಂ ಕೈಕೊಂಡು ಶಿಷ್ಯಚತುಷ್ಟಯಸಮೇತನಾಗಿ ಜಪಹೋಮಂಗಳಂ ಮಾಡುವವನಂತೆ ತಮ್ಮ ಆಗಮನವನ್ನಪೇಕ್ಷಿಸುತ್ತ ಅಲ್ಲಿಯೇ ಇದ್ದಾನೆ. ಸಮಿದ್ಧಾರ್ಥಕನು ಸಾಮುದ್ರಿಕಲಕ್ಷಣಗಳನ್ನು ಹೇಳುತ್ತ ಭದ್ರಭಟಾದಿಗಳಲ್ಲಿ ತಿರುಗುತ್ತಿದ್ದಾನೆ. ಪಶುಲೋಮಕನು ಮಂತ್ರಜ್ಞನಾಗಿ ಡಿಂಗಿರಾತನ ಹೆಂಡತಿಯ ಪಿಶಾಚವಂ ಬಿಡಿಸುವವನಂತೆ ಇದ್ದಾನೆ. ಇವರೆಲ್ಲರೂ ತಾವು ತಿಳಿದ ವರ್ತಮಾನವಂ ನಮ್ಮ ಉಪಾಧ್ಯಾಯರಿಗೆ ತಿಳುಹಿಸುತ್ತ ಎಲ್ಲಾ ಕಡೆಯಲ್ಲೂ ತಿರುಗುತ್ತಿದ್ದಾರೆ. ನಾನು ನಮ್ಮ ಉಪಾಧ್ಯಾಯರು ಹೇಳಿದಂತೆ ಕೇಳಿಕೊಂಡು ಇದ್ದೇನೆ ಎಂದು ಹೇಳಲು; ಆಗ ಚಾಣಕ್ಯನು—ಆಶ್ರಮದಲ್ಲಿ ಮೊದಲು ನಾನು ಇಂದುಶರ್ಮನಿಗೆ ಹೇಳಿಕಳುಹಿಸಿದಂತೆ ನಂದಸಂಹಾರಸಾಧನಂಗಳಂ ಸಿದ್ಧಮಾಡಿಕೊಂಡಿದ್ದಾನೆ. ಮುಂದಣ ಕಾರ್ಯದ ಯತ್ನವಂ ಮಾಡುವುದಕ್ಕೆ ವೇಗಶರ್ಮನ ಮುಖದಿಂದ ಮಾಸೋಪವಾಸಿಗೆ ಹೇಳಿಕಳುಹಿಸಬೇಕು ಎಂದು ನಿಶ್ಚಯಿಸಿ—

ಎಲೈ ವೇಗಶರ್ಮನೇ, ನೀನು ಹೇಳಿದುದೆಲ್ಲಾ ಮನಸ್ಸಿಗೆ ಬಂದಿತು. ಈಗ ಜಪಶಾಲೆಯಲ್ಲಿ ಬುದ್ಧಿವಂತನಾಗಿರುವ ಮಾಸೋಪವಾಸಿಗೆ ನಾವು ಹೇಳಿದೆವೆಂದು ರಹಸ್ಯವಾಗಿ ಹೇಳತಕ್ಕ ಮಾತುಗಳಾವುವೆಂದರೆ—ನಂದರು ಪುರದಿಂದ ಹೊರಟು ದಂಡಿನ ಪಾಳೆಯದ ಗೂಡಾರಕ್ಕೆ ಬರುವ ಸಮಯದಲ್ಲಿ ಶಿಷ್ಯಸಮೇತನಾಗಿ ಹೋಗಿ ಅವರಂ ಕಾಣಿಸಿಕೊಂಡು ಫಲಮಂತ್ರಾಕ್ಷತೆಯಂ ಕೊಟ್ಟು ಪ್ರಕೃತೋಚಿತವಾದ ಮಧುರವಾಕ್ಯವಂ ಹೇಳಿ ಯಾವುದಾದರೂ ಒಂದು ಮನುಷ್ಯವ್ಯಾಪಾರವಂ ಸೂಚಿಸಿ ಅವರಂ ಭ್ರಮೆಗೊಳಿಸಿ ಆ ಮೂರನೆಯ ದಿವಸ ಮಾಡುವ ಹೋಮದ ಪೂರ್ಣಾಹುತಿಯ ದರ್ಶನಕ್ಕೆ ನಂದರು ನಾಲ್ಕನೆಯ ಜಾವದಲ್ಲಿ ಜಪಶಾಲೆಗೆ ಬರುವಂತೆ ನಿಷ್ಕರ್ಷೆಯಂಮಾಡಿ ಜಪಶಾಲೆಯ ಸುತ್ತಲೂ ಶೂದ್ರಾದಿದರ್ಶನವಾಗದಂತೆ ಹೇಳಿ ಮಾಡಿಸು. ಈ ರೀತಿಯಾಗಿ ಹೇಳಿ ನಡೆದ ಸಂಗತಿಯಂ ತಿಳಿದು ಪುನಃ ನಾವಿದ್ದೆಡೆಗೆ ಬಂದು ತಿಳುಹಿಸುವನಾಗು. ಇಂದುಶರ್ಮನಿಗೆ—ನಿನ್ನಲ್ಲಿ ರಾಕ್ಷಸನಿಗೆ ಕಾಪಟ್ಯಂ ತೋರದಂತೆ ಜಾಗರೂಕನಾಗಿ ನಡೆದುಕೊಳ್ಳ

ವುದೆಂದು ನಾವು ಹೇಳಿದೆವೆಂಬುದಾಗಿ ಆತನಿಗೆ ಹೇಳುವನಾಗು ಎಂದು ಹೇಳಿ ವೇಗಶರ್ಮನಂ ಕಳುಹಿಸಿ ತಾನು ಅಹ್ನಿಕಕ್ಕೆ ಹೋದನು.

ಅತ್ತಲಾ ಚಾಣಕ್ಯನು ಹೇಳಿಕಳುಹಿಸಿದ ಮೇರೆಗೆ ಕಮಲಾಪೀಡನೆಂಬ ಪರ್ವತೇಶ್ವರನಿಯೋಗಿಯು ಕಾಶೀಪಟ್ಟಣವಂ ಸೇರಿ ತನ್ನ ಕಡೆಯ ಚಾರರಿಬ್ಬರಂ ಕಾಶೀಪಟ್ಟಣದಿಂದ ಪಾಟಲೀಪುರಕ್ಕೆ ಹೋಗುವ ಮಾರ್ಗಮಧ್ಯದಲ್ಲಿ ನಿಂತು ಕಾಶೀಪಟ್ಟಣದ ಅಸ್ಥಾನದಿಂದ ದೂತರು ಪಾಟಲೀಪುರಕ್ಕೆ ಹೋಗಿಬರುವುದಂ ತಿಳಿದು ಬಂದು ತನಗೆ ಹೇಳುವಂತೆ ನೇಮಿಸಿ ಕಳುಹಿ ರಥದಿಂದಿಳಿದು ಉಚಿತ ಪ್ರಕಾರದಿಂದ ಕಾಶೀರಾಜನಂ ಕಂಡು ತಾನು ಪರ್ವತೇಶ್ವರನ ನಿಯೋಗಿ ಎಂದು ಹೇಳಿ ಕೈಗಾಣಿಕೆಗಳಂ ಒಪ್ಪಿಸಿ ಯೋಗ್ಯತಾನುಸಾರವಾಗಿ ಮಾತನಾಡಿ ತನ್ನ ಬಳಿಯ ಲೇಖನವನ್ನೀಯಲು; ಅದಂ ಕಾಶೀರಾಜಂ ತಾನೇ ಬಿಚ್ಚಿ ಓದಿಕೊಂಡನು. ಅದರಲ್ಲಿದ್ದ ಒಕ್ಕಣೆ ಏನೆಂದೊಡೆ—

ಶ್ರೀಮತು ನಮ್ಮ ಪರಮಪ್ರಿಯರಾದ ಕಾಶೀರಾಜಮಹಾರಾಜರಿಗೆ ಪರ್ವತೇಶ್ವರರು ಮಾಡುವ ವಿಜ್ಞಾಪನೆ. ಈಗ ಶತ್ರುಗಳಿಗೆ ಭೀತನಾಗಿ ಬಂದು ನಮ್ಮ ಶರಣುಹೊಕ್ಕಿರುವ ಚಂದ್ರಗುಪ್ತನಿಗೆ ಅಭಯವಂಕೊಟ್ಟು ಆತನ ಪಿತ್ರಾರ್ಜಿತವಾದ ರಾಜ್ಯವಂ ನಂದರ ಕಡೆಯಿಂದ ತೆಗೆದು ಆತನಿಗೆ ಆ ರಾಜ್ಯಾಧಿಪತ್ಯವನ್ನುಂಟುಮಾಡುವುದಕ್ಕೆ ದಂಡೆತ್ತಿ ಹೊರಟುಬಂದಿದ್ದೇವೆ. ಈ ವೇಳೆಯಲ್ಲಿ ನೀವು ಸೇನಾಸಮೇತರಾಗಿ ಬಂದು ನಮಗೆ ಸಹಾಯವಂ ಮಾಡಿದರೆ ನೀವು ಮಾಡಿದ ಉಪಕಾರವು ಬಹುಕಾಲ ಸ್ಮರಣೆಗೆ ಬರುವುದು. ಕಡಮೇ ಯಾವುದಿದ್ದರೂ ನೀವು ಹೇಳಿದಂತೆ ಆಗುವುದು ಎಂದು ಬರೆದಿರುವುದಂ ನೋಡಿಕೊಂಡು ತನ್ನ ಮನಸ್ಸಿನಲ್ಲಿ—ಈ ನಿಯೋಗಿಯು ಬಂದಿರುವ ವರ್ತಮಾನವಂ ನಮ್ಮ ಪ್ರಭುಗಳಾದ ನಂದರು ಮುಂಚಿತವಾಗಿಯೇ ತಿಳಿದರೆ ನಮ್ಮಲ್ಲಿ ವಿಶ್ವಾಸವಂ ಬಿಡುವರು. ನಾನು ಅವರ ಕೋಪಕ್ಕೂ ಪಾತ್ರನಾದೇನು. ಆದುದರಿಂದ ಈಗಲೇ ಜಾಗ್ರತೆಯಾಗಿ ಈ ಅರ್ಥವು ನಂದರಿಗೆ ತಿಳಿಯುವಂತೆ ಮಾಡಬೇಕೆಂದು ನಿಶ್ಚಯಿಸಿ ಬಂದಿದ್ದ ನಿಯೋಗಿಯಂ ಕುರಿತು—

ಅಯ್ಯಾ ನಿಯೋಗಿಯೇ, ಇದಕ್ಕೆ ಉತ್ತರವಂ ನಾಳೆ ಹೇಳುವೆವು. ನೀನು ಹೋಗಿ ಬಿಡಾರದಲ್ಲಿ ಇರುವನಾಗು ಎಂದು ಹೇಳಿ ವೀಳೆಯವಂ ಕೊಡಿಸಲು; ಆ ನಿಯೋಗಿಯು ಕೈಮುಗಿದು ಬಂದು ಆ ರಾಜಾಸ್ಥಾನದ ಬಾಗಿಲಲ್ಲಿ ಚರರಂ ನಿಲ್ಲಿಸಿ ನಾವು ಬಿಡಾರಕ್ಕೆ ಹೋದಬಳಿಕ ಇಲ್ಲಿ ನಡೆದ ವರ್ತಮಾನವಂ ತಿಳಿದು

ಬರುವುದು ಎಂದು ನೇಮಿಸಿ ಬಿಡಾರಕ್ಕೆ ಹೋದನು. ಆಗ ಕಾಶೀರಾಜನು ತನ್ನ ಹೆಸರಿನಿಂದ ನಂದರಿಗೆ ಕಾಗದವಂ ಬರೆಯಿಸಿ ಅದರಲ್ಲಿ ನಿಯೋಗಿಯು ತಂದುಕೊಟ್ಟ ಕಾಗದವಂ ಜೋಡಿಸಿ ಮೋಹರವಂಮಾಡಿ ವೇಗಶಾಲಿಗಳಾದ ತುರಗಾರೂಢರಿಬ್ಬರಂ ಕರೆದು—

ಎಲೈ, ಈ ಕಾಗದವಂ ತ್ವರಿತದಿಂದ ಈ ದಿನವೇ ಪಾಟಲೀಪುರಕ್ಕೆ ತೆಗೆದು ಕೊಂಡು ಹೋಗಿ ಮಂತ್ರಿಯಾದ ಅಮಾತ್ಯರಾಕ್ಷಸನ ಕೈಯ್ಯಲ್ಲಿ ಕೊಟ್ಟು ಇದಕ್ಕೆ ಉತ್ತರವಂ ಬರೆಯಿಸಿಕೊಂಡು ನಾಳೆಯಸಾಯಂಕಾಲಕ್ಕೇ ಬರುತಕ್ಕದ್ದು ಎಂದು ನೇಮಿಸಿ ಕಾಗದವಂ ಕೊಡಲು; ಬುದ್ಧೀ ಎಂದು ಆ ತುರಗಾರೂಢರಾದ ಚಾರರು ತ್ವರಿತದಿಂದ ಪಾಟಲೀಪುರಕ್ಕೆ ಹೋಗಿ ರಾಕ್ಷಸನಂ ಕಂಡು ಕಾಗದವಂ ಕೊಟ್ಟರು. ರಾಕ್ಷಸನು ಅದಂ ಓದಿಕೊಂಡು ನಂದರ ಸಮೀಪಕ್ಕೆ ಹೋಗಿ ಓದುವಲ್ಲಿ ಅದರಲ್ಲಿದ್ದ ಒಕ್ಕಣೆ ಏನಂದರೆ—

ಶ್ರೀಮತು ರಾಜಾಧಿರಾಜರಾದ ನಂದಸಾರ್ವಭೌಮರಿಗೆ ಪ್ರೀತಿಪಾತ್ರನಾದ ಕಾಶೀರಾಜನು ಮಾಡುವ ವಿಜ್ಞಾಪನೆ ಏನಂದರೆ—ಈಗ ನಾನು ತಮ್ಮನ್ನನುವ ರ್ತಿಸುತ್ತ, ತಮಗೆ ಪ್ರೀತಿಪಾತ್ರನಾಗಿರುವುದಂ ಪರ್ವತರಾಜನು ತಿಳಿಯದೆ ಮುಗ್ಧತನದಿಂದ ನನ್ನಂ ತನಗೆ ಸಹಾಯವಾಗಿ ಬರಬೇಕೆಂದು ಕಾಗದವಂ ಬರೆದು ನಿಯೋಗಿಯ ಕೈಯ್ಯಲ್ಲಿ ಕಳುಹಿಸಿದ್ದಾನೆ. ಅತನು ನನಗೆ ಕಳುಹಿಸಿದ ಕಾಗದ ವನ್ನೂ ತಮಗೆ ಕಳುಹಿಸಿದ್ದೇನೆ; ಚಿತ್ತಕ್ಕೆ ತಿಳಿದಿರಬೇಕು. ಈಗ ಬಂದಿರುವ ನಿಯೋಗಿಯಂ ಕಾವಲಿಟ್ಟು ಸನ್ನಿಧಿಗೆ ಕಳುಹಿಸತಕ್ಕದ್ದೋ? ಹೋಗೆಂದು ಹೊರಡಿಸಿಬಿಡತಕ್ಕದ್ದೋ? ಆ ವಿಷಯದಲ್ಲಿ ಅಪ್ಪಣೆಯಾಗಬೇಕು. ಹೀಗೆಂದು ಬರೆದಿದ್ದ ಕಾಗದಗಳನ್ನೋದಿಕೊಂಡು ರಾಕ್ಷಸನು ನಂದರಿಗೆ—

ಅಯ್ಯಾ ಅರಸುಗಳಿರಾ, ಮೊದಲು ನಾನು ಪರ್ವತರಾಜನಿಗೂ ಅತನ ಬಳಿಯ ಅರಸುಗಳಿಗೂ ಕಲಹಮುಂಟಾಗುವಂತೆ ಮಾಡಿರುವ ಭೇದೋಪಾಯವ ನ್ನರಿಯದೆ ಪರ್ವತರಾಜಂ ನಮ್ಮ ಕಡೆಯ ಅರಸುಗಳಂ ತನಗೆ ಸಹಾಯರನ್ನಾಗಿ ಮಾಡಿಕೊಳ್ಳಬೇಕೆಂದು ಕಾಶೀರಾಜನ ಬಳಿಗೆ ನಿಯೋಗಿಯಂ ಕಳುಹಿಸಿ ಇದ್ದಾನೆ. ಇದು ಏನು ನಿಮಿತ್ತವೋ! ವಿಮರ್ಶೆಯಂ ಮಾಡಬೇಕೆಂದು ಹೇಳುತ್ತಿರುವ ಸಮಯದಲ್ಲಿ ಇದೇ ಮೇರೆಗೆ ಮತ್ಸ್ಯದೇಶಾಧಿಪತಿಯ ದೂತರು ಕಾಗದವಂ ತಂದು ರಾಕ್ಷಸನಿಗೆ ಕೊಡಲು; ಅದರ ವಿವರವನ್ನೂ ನಂದರಿಗೆ ತಿಳುಹಿಸಿ ನಮ್ಮ ಕಡೆಯ ಅರಸುಗಳಲ್ಲಿ ಹೀಗೆ ಎಷ್ಟು ಮಂದಿಗೆ ಬರೆಸಿಕಳುಹಿಸಿದ್ದಾನೋ!

ನಮಗೆ ಪ್ರಿಯರಾದ ಅರಸುಗಳು ಮತ್ತೊಬ್ಬರಿಗೆ ಸಹಾಯವಾಗುವ್ರದುಂಟೇ? ಪರ್ವತರಾಜನು ದೂರಾಲೋಚನೆಯುಳ್ಳವನಲ್ಲ ಎಂದು ಹೇಳಿ ಮತ್ತೊಂದರ್ಥವಂ ಯೋಚಿಸಿ ನಾವು ಪರ್ವತರಾಜನಲ್ಲಿ ಮಾಡಿರುವ ಭೇದೋಪಾಯವು ಸಿದ್ಧಿಸಿದರೆ ಇನ್ನೂ ಒಂದು ಶತ್ರುಜಯಪ್ರಯತ್ನ ಇರುವುದಾದುದರಿಂದ ಪರ್ವತರಾಜನು ಸಹಾಯಕ್ಕೆ ಅಪೇಕ್ಷಿಸಿರುವ ನಮ್ಮ ಮಿತ್ರರಾದ ಅರಸುಗಳ ಮುಖದಿಂದಲೇ ಆತನಂ ನಷ್ಟಗೊಳಿಸಬೇಕು. ಇದರಲ್ಲಿ ಮತ್ಸ್ಯದೇಶಾಧಿಪತಿಯು ನಮಗೆ ಮಿತ್ರನಾದರೂ ಕಾರ್ಯದಕ್ಷನಾಗಿ ತೋರುವುದಿಲ್ಲ. ಕಾಶೀರಾಜನು ಇಲ್ಲಿಗೆ ಸಮೀಪದೇಶದಲ್ಲಿ ಇರುವವನೂ ಪರಮಮಿತ್ರನೂ ಕಾರ್ಯದಕ್ಷನೂ ಆಗಿರುವುದರಿಂದ ಈತನ ಮುಖದಿಂದಲೇ ಕಾರ್ಯವಾಗುವಂತೆ ಮಾಡಬೇಕೆಂದು ನಿಶ್ಚಯಿಸಿ ನಂದರಿಗೆ ಆ ಯೋಚನೆಯಂ ತಿಳುಹಿಸಿ ಅವರ ಸಮ್ಮತಿಯಿಂದ ಪ್ರಕೃತೋಚಿತವಾಗಿ ಕಾಶೀರಾಜನಿಗೆ ನಿರೂಪವಂ ಬರೆಸಿ ಮೋಹರವಂ ಮಾಡಿಸಿ ಆತನ ಚಾರರ ಕೈಯ್ಯಲ್ಲಿ ಕೊಟ್ಟು—ಎಲೈ, ಈ ದಿವಸವೇ ಕಾಶೀರಾಜನಿಗೆ ಈ ನಿರೂಪವಂ ಕೊಡಿರಿ ಎಂದು ಹೇಳಿಕಳುಹಿಸಿದನು.

ಅನಂತರ ಆ ದೂತರು ಕಾಶೀಪಟ್ಟಣಕ್ಕೆ ಬರುತ್ತಿರಲು; ಕಾಶೀರಾಜನ ಆಸ್ಥಾನದ ಬಳಿಯಲ್ಲಿದ್ದ ಪರ್ವತರಾಜನ ನಿಯೋಗಿಯ ಚಾರರು ಬಂದು—ಸ್ವಾಮಿ ನಿಯೋಗಿಗಳೇ, ನೀವು ಬಿಡಾರಕ್ಕೆ ಬಂದ ಬಳಿಕ ತುರಗಾರೂಢರಾದ ಇಬ್ಬರು ಚಾರರು ಆಸ್ಥಾನದಿಂದ ಹೊರಟು ಬಹುತ್ವರೆಯಿಂದ ಈ ಪುರದ ಪೂರ್ವದ್ವಾರಮಾರ್ಗವಂ ಹಿಡಿದು ಹೋದರು ಎಂದು ಹೇಳಿದರು. ಅದಂಕೇಳಿ ಕಾಶೀರಾಜಂ ಹೇಳಿದಂತೆ ನಿಯೋಗಿಯು ಪ್ರಾತಃಕಾಲದಲ್ಲಿ ಆಸ್ಥಾನಕ್ಕೆ ಹೋಗಿ ತಾನು ಬಂದು ಇದ್ದೇನೆ ಎಂದು ತಿಳಿಯಪಡಿಸಲು; ಈಗ ಸಮಯವು ದೊರಕದು ನಾಳೆ ಬರಬಹುದೆಂದು ಆ ರಾಯನು ಹೇಳಿಕಳುಹಿಸಿದನು. ಅದಂಕೇಳಿ ನಿಯೋಗಿಯು ತನ್ನ ಬಿಡಾರಕ್ಕೆ ಬಂದಿರಲು, ಅಂದಿನ ಸಾಯಂಕಾಲಕ್ಕೆ ತುರಗಾರೂಢರಾಗಿ ಪಾಟಲೀಪುರಕ್ಕೆ ಹೋಗಿದ್ದ ಚಾರರು ಬಂದು ರಾಕ್ಷಸನ ಕಾಗದವನ್ನು ಕಾಶೀರಾಜನಿಗೆ ಕೊಡಲು; ಅದಂ ಓದುವಲ್ಲಿ ಅದರಲ್ಲಿದ್ದ ಬಕ್ಕಣೆ ಏನೆಂದರೆ—

ಶ್ರೀಮತು ನಮ್ಮ ಪರಮಪ್ರಿಯರಾದ ಕಾಶೀರಾಜರಿಗೆ ನಂದರು ಮಾಡುವ ವಿಜ್ಞಾಪನೆ ಏನೆಂದರೆ—ನೀವು ಕಳುಹಿಸಿಕೊಟ್ಟ ಎರಡು ಕಾಗದಗಳೂ ಬಂದು ತಲಪಿದುವು. ಅವುಗಳ ಅಭಿಪ್ರಾಯವು ತಿಳಿಯಲಾಯಿತು. ನಮಗೂ ತಮಗೂ ಇರುವ ಮಿತ್ರತ್ವವನ್ನರಿಯದೆ ಪರ್ವತರಾಜನು ಮೂಢತನದಿಂದ ನಿಮಗೆ ಬರೆಸಿ

ಕಳುಹಿಸಿರುವುದು ನಮ್ಮ ಕಾರ್ಯಕ್ಕೆ ಅನುಕೂಲವೇ ಆಯಿತು. ಅದಂತಿರಲಿ. ನಮಗೆ ಉಂಟಾಗುವ ಅಭ್ಯುದಯವೇ ನಿಮ್ಮದೆಂದು ತಿಳಿದು ಇದೇ ಸಮಯದಲ್ಲಿ ನಿಮಗೆ ಪರ್ವತರಾಜನು ಬರೆಸಿ ಕಳುಹಿಸಿದ ಮೇರೆಗೆ ನೀವು ಒಪ್ಪಿಕೊಂಡು ಸೇನಾಸಮೇತರಾಗಿ ಆತನಿಗೆ ಸಹಾಯವಂ ಮಾಡುವವರಂತೆ ಹೋಗಿ ಮಾರ್ಗ ಮಧ್ಯದಲ್ಲಿ ಇಳಿದಿದ್ದರೆ ತನ್ನ ಮಾತಂ ಮೀರದೆ ಸಹಾಯಕ್ಕೆ ಬಂದರೆಂದು ಪ್ರೇಮ ದಿಂದ ಆ ಪರ್ವತರಾಜನು ನಿಮ್ಮನ್ನೆದುರುಗೊಂಡು ಕರೆದುಕೊಂಡು ಹೋಗುವು ದಕ್ಕೆ ಚಂದ್ರಗುಪ್ತನನ್ನೇ ಕಳುಹಿಸ್ಯಾನು. ಹಾಗೆ ಆದರೆ ಆ ಸಮಯದಲ್ಲಿ ಚಂದ್ರಗುಪ್ತನಂ ಸಂಹರಿಸತಕ್ಕದು. ಅದಿಲ್ಲದೆ ತನಗೆ ಪುತ್ರನಾದ ಮಲಯ ಕೇತುವಂ ಕಳುಹಿಸಿಕೊಟ್ಟರೆ ಸರ್ವಪ್ರಯತ್ನದಿಂದ ಆತನಂ ಸೆರೆವಿಡಿದು ನಾವಿದ್ದೆಡೆಗೆ ಕರತರತಕ್ಕದು. ಇದಲ್ಲದೆ ಮತ್ತಾರನ್ನಾದರೂ ಕಳುಹಿಸಿಕೊ ಟ್ಟರೂ ಒಡಂಬಟ್ಟು ಪರ್ವತರಾಜನ ಸೇನೆಯಲ್ಲಿಳಿದು ಸಮಯವರಿತು ಚಂದ್ರ ಗುಪ್ತನಂ ಸಂಹರಿಸಿದರೆ ಈಗಿನ ರಾಜಕಾರ್ಯವು ನಿಮ್ಮಿಂದಲೇ ನಿರ್ವಹಿಸಿದಂತಾ ಗುವುದು ನೀವು ಮಿತ್ರರಾಗಿ ಕಾಲದೇಶಜ್ಞರಾದುದರಿಂದ ಕಾರ್ಯನಿರ್ವಾಹವಂ ಮಾಡೀರಿ ಎಂದು ಬರೆದು ಕಳುಹಿಸಿದೆ. ಮುಂದೆ ನಿಮ್ಮ ಮನ ಬಂದಂತೆ ನಾವು ನಡೆದುಕೊಳ್ಳಲುಳ್ಳವರು. ಈ ಪ್ರಕಾರವಾಗಿ ಲೇಖನಗೊಳಿಸಿರುವುದಂ ನೋಡಿ ಕೊಂಡು ಈಗಿನ ರಾಜಕಾರ್ಯವಂ ನಂದರು ನನ್ನ ಮುಖದಿಂದಲೇ ಮಾಡಿಕೊಳ್ಳ ಬೇಕೆಂದು ಬರೆದು ಕಳುಹಿಸಿದ್ದಾರೆ. ಇದು ರಾಕ್ಷಸನ ಆಲೋಚನೆ ಎಂದು ನಿಶ್ಚಯಿಸಿ ಕಾಶೀರಾಜನು ತನ್ನ ಮಂತ್ರಿಯ ಸಂಗಡ ಈ ಅರ್ಥವನ್ನಾಲೋಚಿಸಿ ಕರ್ತವ್ಯವೆಂದು ತಿಳಿದು ಆಗಲೇ ಪರ್ವತರಾಜನ ನಿಯೋಗಿಯಂ ಕರೆದುತನ್ನಿ ಎಂದು ದೂತರಂ ಕಳುಹಿಸಿದನು.

ಅಷ್ಟರಲ್ಲಿಯೇ ಕಾಶೀಮಾರ್ಗದಲ್ಲಿ ಇದ್ದ ಚಾರರು ಬಂದು ಆ ನಿಯೋ ಗಿಯಂ ಕುರಿತು—ಸ್ವಾಮೀ, ನೆನ್ನೆ ದಿನಸ ಈ ಕಾಶೀಪಟ್ಟಣದಿಂದ ಪಾಟಲೀ ಪುರಾಭಿಮುಖವಾಗಿ ಹೋಗಿದ್ದ ತುರಗಾರೂಢರಿಬ್ಬರು ಈಗಲೇ ಬಹು ತ್ವರಿತದಿಂ ಇಲ್ಲಿಯ ಆಸ್ಥಾನದ ಬಳಿಗೆ ಬಂದರು ಎಂದು ಹೇಳುವ ಸಮಯದಲ್ಲಿಯೇ ಕಾಶೀರಾಜನ ದೂತರು ಬಂದು ಅರಸುಗಳ ಅಪ್ಪಣೆಯಾಗಿದೆ ಬರಬೇಕೆಂದು ಕರೆಯಲು ; ನಿಯೋಗಿಯು ಹೋಗಿ ಕಾಶೀರಾಜನಂ ಕಂಡು ಉಚಿತಪ್ರಕಾರ ವಾಗಿ ಕುಳ್ಳಿರಲು ; ಆ ರಾಯನು—

ಅಯ್ಯಾ ನಿಯೋಗಿಯೇ, ಗುಣಸಂಪನ್ನರಾದ ಪರ್ವತರಾಜರು ನಮ್ಮ ಸಹಾಯವನ್ನಪೇಕ್ಷಿಸಿದ ಬಳಿಕ ನಾವು ಮೀರಕೂಡದು. ಸೇನಾಸಮೇತರಾಗಿ ನಾಳೆ ನಾವೇ ಹೊರಡುತ್ತಿದ್ದೇವೆ. ಈ ಅರ್ಥವಂ ಬರೆದು ಕಳುಹಿಸುವನಾಗು ಎಂದನು. ಅದಂ ಕೇಳಿ ನಿಯೋಗಿಯು—

ರಾಜಾಧಿರಾಜರಾದ ಕಾಶೀರಾಜರೇ, ಲೋಕಪೂಜ್ಯರಾದ ದಿವೋದಾಸ ಮಹಾರಾಜರ ವಂಶಸ್ಥರಾಗಿಯೂ ಗುಣವಂತರಾಗಿಯೂ ಶೂರರಾಗಿಯೂ ಇರುವ ತಾವು ನಮ್ಮ ಪರ್ವತರಾಜರ ಸಹಾಯಕ್ಕೆ ಬರುವಲ್ಲಿ ಉಚಿತಪ್ರಕಾರದಿಂ ತಮ್ಮನ್ನು ಎದುರುಗೊಂಡು ಕರೆದುಕೊಂಡು ಹೋಗುವುದಕ್ಕೆ ನಮ್ಮ ಅರಸುಗಳೇ ಬರಬೇಕು. ಅಥವಾ ಚಂದ್ರಗುಪ್ತನಾಗಲಿ ಮಗನಾದ ಮಲಯಕೇತುವಾಗಲಿ ಬರಬೇಕಾಗುವುದು. ತಾವು ಸಮ್ಮತಿಸಿರುವ ಅರ್ಥವಂ ಬರೆದು ಕಳುಹಿಸುತ್ತಿದ್ದೇನೆ. ಅದಕ್ಕೆ ಉತ್ತರ ಬಂದಬಳಿಕ ವಿಜ್ಞಾಪಿಸುವೆನು. ಆಗ ತಾವು ಪ್ರಯಾಣವಂ ಬೆಳಸಬಹುದು ಎಂದು ಹೇಳಲು; ಆ ಮಾತಿಗೆ ರಾಯನು ಸಮ್ಮತಿಪಟ್ಟು ನಿಯೋಗಿಯಂ ಬಿಡಾರಕ್ಕೆ ಕಳುಹಿಸಿದನು. ಆಗ ನಿಯೋಗಿಯು ಅಲ್ಲಿ ನಡೆದ ವರ್ತಮಾನಗಳೆಲ್ಲವಂ ವಿವರವಾಗಿ ಬರೆದು ಮೋಹರವಂ ಮಾಡಿ ಚಾರನ ಕೈಯ್ಯಲ್ಲಿ ಕೊಟ್ಟು ಇದಂ ತ್ವರಿತದಿಂದ ತೆಗೆದುಕೊಂಡು ಹೋಗಿ ಚಾಣಕ್ಯರಿಗೆ ಕೊಡು ಎಂದು ನೇಮಿಸಿ ಕಳುಹಿಸಿದನು. ಕಾಗದವನ್ನು ತೆಗೆದುಕೊಂಡು ಆ ಚಾರನು ಹಾಗೆಯೇ ತೆರಳುತ್ತಿದ್ದನು.

ಮರುದಿವಸ ಆ ರಾಯನು ಆ ನಿಯೋಗಿಯಂ ಕರೆಯಕಳುಹಿಸಿ ಏನಯ್ಯಾ, ನಿಮ್ಮ ಅರಸುಗಳಿಗೆ ಬರೆದಿದ್ದುದಕ್ಕೆ ಉತ್ತರ ಬಂದಿತೇ? ಎನಲು; ಬುದ್ಧೀ, ನಾಳೆ ನಾಡಿದ್ದರಲ್ಲಿ ಬಂದೀತು ವಿಜ್ಞಾಪಿಸುವೆನು ಎಂದನು. ಹಾಗೇ ಮತ್ತೊಂದು ದಿವಸ ಕೇಳುವಲ್ಲಿ ರಾಜಕಾರ್ಯಂ ಬಲವಾಗಿ ಮಾರ್ಗಕ್ಕೆ ತಡೆಯಾಗಿದ್ದೀತು. ಅದರಿಂದ ಪ್ರತ್ಯುತ್ತರಕ್ಕೆ ಸಾವಕಾಶವಾಗಿದೆ ಎಂದು ಹೇಳುತ್ತ ಕಾಲಹರಣವಂ ಮಾಡುತ್ತ ಕಾಶೀರಾಜನಂ ಹೊರಡಲೀಸದೆ ಮಣಿಕರ್ಣಿಕಾಸ್ನಾನತತ್ಪರನಾಗಿ ಚಾಣಕ್ಯರು ಹೇಳಿಕಳುಹಿಸಿದಂತೆ ಶುಭಸಮಾಚಾರ ಬರುವುದಂ ನಿರೀಕ್ಷಿಸುತ್ತ ಆ ನಿಯೋಗಿಯು ಕಾಶೀಪಟ್ಟಣದಲ್ಲಿಯೇ ಇರುತ್ತಿದ್ದನು.

ಇತ್ತ ಆ ನಿಯೋಗಿಯ ಕಾಗದವಂ ಚಾರರು ಚಾಣಕ್ಯರಿಗೆ ಕೊಡಲು; ಅದಂ ಓದಿಕೊಂಡು ಅದರರ್ಥವಂ ಚಾಣಕ್ಯನು ಪರಿಭಾವಿಸುತ್ತಿದ್ದನು. ಏನಂದರೆ—ತಾನು ನಿಯೋಗಿಯ ಕೈಯ್ಯಲ್ಲಿ ಕೊಟ್ಟ ಕಾಗದವಂ ಕಾಶೀರಾಜನು

ಓದಿಕೊಂಡು ಏನೇನು ಕೆಲಸವಂ ಮಾಡಿದನೋ? ಅದಕ್ಕೆ ಅಮಾತ್ಯನು ಏನು ಯುಕ್ತಿಯಂ ಕಲ್ಪಿಸಿ ಬರೆದನೋ? ಅದನ್ನೆಲ್ಲಾ ಊಹಿಸಿ ನಿಶ್ಚಯಿಸಿ ನಾನು ಮಾಡಿದ ಧರ್ಮವಂ ತಿಳಿಯದೆ ರಾಕ್ಷಸನೇ ಕಾಶೀರಾಜನ ಮುಖದಿಂದ ಮೋಸವಂ ಮಾಡಿಸಿ ಪರ್ವತರಾಜನಂ ನಿಗ್ರಹಿಸುವೆನೆಂದು ಆಲೋಚಿಸಿ ಇದ್ದಾನೆ. ಈ ಅರ್ಥವಂ ನಂದರೂ ತಿಳಿದು ಇದ್ದಾರು. ಹೀಗೆ ನಂದರು ತಿಳಿದಿರಬೇಕೆಂದೇ ನಾನು ಕಪಟವಂ ಮಾಡಿದುದು. ನಂದರಿಗೂ ಅವರ ಸೇನೆಗೂ ವಿಯೋಗವಾಗುವುದಕ್ಕೆ ಇದೇ ಕಾರಣವಾದೀತು. ಆದುದರಿಂದ ಇದು ನಂದನಿಗ್ರಹಕ್ಕೆ ಪ್ರಥಮಸಾಧನವು. ಮಾಸೋಪವಾಸಿಯ ವಾಕ್ಯವು ದ್ವಿತೀಯಸಾಧನವಾಗಬೇಕು. ಶೇಖರ ಸೇನೆಯೇ ತೃತೀಯಸಾಧನವಾದೀತು. ಈ ಮೂರು ಸಾಧನಗಳುಂಟಾಗುವಲ್ಲಿ ನಂದರು ಯಾವ ಪಾತಾಳವಂ ಹೊಕ್ಕಾರು! ಎಂದು ಚಾಣಕ್ಯನು ನಿಷ್ಕರ್ಷೆಯಂ ಮಾಡಿ ಸಾಂಧ್ಯನಿಯಮಕ್ಕೆ ತೆರಳುತ್ತಿದ್ದನೆಂಬಲ್ಲಿಗೆ ಮುದ್ರಾಮಂಜೂಷದಲ್ಲಿ ರಾಕ್ಷಸಭೇದೋಪಾಯಭಂಗಕಥನಮೆಂಬ ಪಂಚಮಾಶಯವು ಸಮಾಪ್ತಮಾದುದು.

---

## ಷಷ್ಠಾಶಯ ಪ್ರಾರಂಭವು.

---

### ನಂದರ ಪ್ರಯಾಣವು

ಅನಂತರದಲ್ಲಿ ಚಾಣಕ್ಯನಿಂದ ನಿಯುಕ್ತನಾದ ವೇಗಶರ್ಮನು ಮೊದಲಿನಂತೆ ತುರಗವನ್ನೇರಿ ನಂದರ ಶತ್ರುಪಲಾಯನಪಾಪಶಾಲೆಯಲ್ಲಿರುವ ಮಾಸೋಪವಾಸಿಯಂ ಕಂಡು ಅವನಿಗೆ ಚಾಣಕ್ಯರು ಹೇಳಿದ ವಾಕ್ಯವೆಲ್ಲವಂ ಗೋಪ್ಯವಾಗಿ ಹೇಳಲು; ಆ ಮಾತಿಗೆ ಮಾಸೋಪವಾಸಿಯು ಚಾಣಕ್ಯನಿರುವ ದಿಕ್ಕಿಗೆ ಕೈಮುಗಿದು—ಅಯ್ಯಾ ವೇಗಶರ್ಮನೇ, ಮಹಾತ್ಮರಾದ ಚಾಣಕ್ಯರು ನನ್ನಂ ತಮ್ಮ ಶಿಷ್ಯನಂತೆ ಭಾವಿಸಿ ಹೇಳಿಕಳುಹಿಸಿದ ಕಾರ್ಯವಂ ಇಷ್ಟುಮಾತ್ರ ನಿರ್ವಹಿಸದಿದ್ದರೆ ಪುನಃ ಅವರ ದರ್ಶನಕ್ಕೆ ಪಾತ್ರನೆಂತಹೆನು? ನೀನು ವೇಳೆವೇಳೆಗೆ ಬರುತ್ತಿರುವನಾಗು ಎಂದು ಹೇಳಿ ವೇಗಶರ್ಮನಂ ಕಳುಹಿಸಲಾಗಿ ಅಲ್ಲಿಂದ ವೇಗಶರ್ಮನು ಕ್ಷಪಣಕನ ಬಳಿಗೆ ಹೋಗಿ ಚಾಣಕ್ಯನು ಹೇಳಿಕಳುಹಿಸಿದರ್ಥವನೆಲ್ಲವಂ ಆತನಿಗೆ ತಿಳುಹಿಸಿ ಆತನು ಹೇಳಿದಂತೆ ತಾನು ವಿಂಗಡವಾಗಿದ್ದನು.

ಇತ್ತಲಾಗಿ ಮೊದಲು ರಾಕ್ಷಸನು ಕೊಟ್ಟ ಭೇದೋಪಾಯಪತ್ರಿಕೆಯ ಮೂಲದಿಂದ ನಾಸಿಕಾಚ್ಛೇದನಪೂರ್ವಕವಾಗಿ ಸಾರಿಸಿಕೊಂಡು ಬಂದ ಜೋಗಿ

ಯನ್ನೂ ಎಂಟುಮಂದಿ ಕಪಟವರ್ತಕರಂ ಕಾವಲಿಟ್ಟು ಆ ದಂಡಿನಿಂದ ಹೊರಡಿಸಿದುದನ್ನೂ ನೋಡಿ ತಮ್ಮ ಕೈಯ್ಯಲ್ಲಿದ್ದ ಪತ್ರಿಕೆಗಳಂ ಪರಿಹರಿಸಿ ತಪ್ಪಿಸಿಕೊಂಡು ಓಡಿಬಂದ ಕಡಮೆ ಚಾರರು ಪಾಟಲೀಪುರವಂ ಸೇರಿ ರಾಕ್ಷಸನಂ ಕಂಡು ಕೈಮುಗಿದು ಆಯಾ ವೃತ್ತಾಂತವಂ ತಿಳುಹಿಸಿದುದಲ್ಲದೆ ಇಲ್ಲಿಂದ ಹೋಗಿರುವ ನಮ್ಮ ಡಿಂಗಿರಾತನ ಸೇನೆಗೂ ಶತ್ರುಸೇನೆಗೂ ಮಧ್ಯೆ ಆರು ಯೋಜನ ಅವಕಾಶವಿದೆ. ಶತ್ರುಗಳು ಸಮೀಪವಾಗಿ ತೆರಳಿಬಂದರು. ನಾಳೆ ನಾಡಿದ್ದರಲ್ಲಿ ಉಭಯ ಸೇನೆಗೂ ಕೈಗೂಡುವಂತೆ ತೋರುತ್ತಿದೆ ಎಂದು ಹೇಳಲು ; ಆ ಚಾರರ ಮಾತಂ ಕೇಳಿ ರಾಕ್ಷಸನು—ತಾನು ಶತ್ರುಗಳಲ್ಲಿ ಮಾಡಿದ ಭೇದೋಪಾಯಕ್ಕೆ ಹೀಗೆ ಎಂದಿಗೂ ಭಂಗವುಂಟಾದುದಿಲ್ಲವೆಂದು ತಲೆದೂಗಿ ಈಗ ಶತ್ರುಸೇನೆಯಲ್ಲಿ ಸಿಕ್ಕಿದ ಒಬ್ಬ ಚಾರನ ಕೈಯ್ಯಲ್ಲಿದ್ದ ಎರಡು ಕಾಗದಗಳಿಂದ ಇಬ್ಬರು ವರ್ತಕರು ಮಾತ್ರ ಪ್ರಕಟಕ್ಕೆ ಬರಬೇಕಲ್ಲದೆ ಎಂಟು ಜನ ವರ್ತಕರಂ ದಂಡಿನಿಂದ ಹೊರಡಿಸಿದುದಕ್ಕೆ ನಿಮಿತ್ತವು ಗೊತ್ತಾಗಲಿಲ್ಲ. ಶತ್ರುಗಳಿಗೆ ನಮ್ಮ ಆಲೋಚನಾ ರಹಸ್ಯವು ತಿಳಿಯುವುದಕ್ಕೆ ರಾಜಸನ್ನಿಧಿಯ ರಾಯಸದವರು ಕುಲಪರಂಪರೆಯಿಂದ ಆಪ್ತರಾಗಿರುವ ಕಾರಣ ಅವರಲ್ಲಿ ಈ ದೋಷವಂ ಹೇಳಕೂಡದು. ರಾಜಕಾರ್ಯರಹಸ್ಯಾಲೋಚನೆಯಲ್ಲಿ ಇಬ್ಬರು ಹೊರತು ಅನ್ಯವಾದ ಪಂಜರಸ್ಥ ಶುಕವೂ ಸಹ ಇರಕೂಡದು ಎಂದು ನೀತಿಪ್ರವರ್ತಕರ ವಚನವಿರುವುದು. ಆ ವೇಳೆಯಲ್ಲಿ ತಪಸ್ವಿಯಾದ ಕ್ಷಪಣಕನು ಧ್ಯಾನಾಸಕ್ತನಾಗಿ ಇದ್ದನು. ಆದರೂ ಅವನಲ್ಲಿ ಕಪಟಮುಂಟಾಗಿದ್ದರೆ ಅದೇ ನಾನು ಮಾಡಿದ ಕಾರ್ಯವು ಭಂಗವಾದುದಕ್ಕೆ ಕಾರಣವಾಗುವುದು. ಮೀರಿಹೋದ ಕೆಲಸಕ್ಕೆ ವಿಮರ್ಶೆಯಿಂದ ಪ್ರಯೋಜನವಿಲ್ಲವೆಂದು ಉಪೇಕ್ಷೆಯಂ ಮಾಡದೆ ಈ ಕ್ಷಪಣಕನಂ ಪರೀಕ್ಷಿಸಬೇಕೆಂದು ನಿಶ್ಚಯಿಸಿ ಹೇಳಿದ ಕಾರ್ಯವಂ ಮಾಡುವುದರಲ್ಲಿ ನಿಪುಣನಾದ ಒಬ್ಬ ಬ್ರಾಹ್ಮಣನಂ ಕರೆದು ರಹಸ್ಯದಲ್ಲಿ—ನೀನು ಕ್ಷಪಣಕನ ಪ್ರತ್ಯಕ್ಷಪರೋಕ್ಷಗಳಲ್ಲಿ ಅವನ ಶೀಲಸ್ವಭಾವಗಳಂ ಚನ್ನಾಗಿ ಪರೀಕ್ಷಿಸಿ ಬಂದು ನನಗೆ ತಿಳಿಸುವನಾಗು ಎಂದು ಹೇಳಿಕಳುಹಿಸಿ ಚಾರರಂ ನೋಡಿ—ತನ್ನ ಮನಸ್ಸಿನಲ್ಲಿ ಚಂದ್ರಗುಪ್ತನಂ ಪಕ್ಷೀಕರಿಸಿರುವ ಚಾಣಕ್ಯನು ಬಹು ಸಾಹಸವಂತನೆಂದು ತೋರುತ್ತದೆ. ಮುಂದೆ ನಂದರ ಅದೃಷ್ಟವೆಂತಿರುವುದೋ ? ಎಂದು ವ್ಯಸನಪಡುತ್ತ—ಎಲೈ ಚಾರರುಗಳಿರಾ, ಶತ್ರುಸೇನೆಯ ಮುಂದಣ ಭಾಗದಲ್ಲಿ ಬರುವ ಸೇನಾಪತಿಯು ಯಾರು ? ಹಿಂಗಡೆಯಲ್ಲಿ ಯಾರು ? ಆದರ ರೀತಿ ಎಂತಿರುವುದು ? ಹೇಳಿರಿ ಎನಲು—

ಸ್ವಾಮೀ, ನಾವು ಕಂಡರ್ಥವಂ ಪೇಳುವೆವು. ಶತ್ರುಸೇನಾಗ್ರಭಾಗದಲ್ಲಿ ಭಿಲ್ಲಮಾತಂಗನೆಂಬ ಕಿರಾತಾಧಿಪತಿಯ ಸೇನೆಯು ಅನೇಕ ವ್ಯೂಹಮಂ ರಚಿಸಿಕೊಂಡು ಕಾರ್ಮುಗಿಲ ತಂಡಗಳೋ, ಕಲಿಪುರುಷನ ಬಳಗವೋ, ವಾಯುವೇಗದಿಂ ನಡುಗುವ ತಮಾಲವೀಧಿಯೋ, ಚಲಿಸುವ ಕಾಲಯಮನ ಭಟರೋ, ಭೂತಳವಂ ಭೇದಿಸಿ ಬಂದ ದಾನವಕುಲವೋ, ಅರ್ಜುನನ ಶರಘಾತದಿಂ ಮುರಿದು ಓಡಿ ನಷ್ಟರಾಗಿ ಪಿಶಾಚರೂಪವಂ ತಾಳಿದ ನಿವಾತಕವಚರ ಗುಂಪೋ ಎಂಬಂತೆ ನೀಲವರ್ಣವಾದ ಧ್ವಜದಿಂ ಕೂಡಿ ಬರುತ್ತಿಹುದು. ಅದರ ಹಿಂಗಡೆಯಲ್ಲಿ ರಕ್ತವಸ್ತ್ರದಿಂ ರಂಜಿಸುತ್ತ ಸಂಧ್ಯಾರಾಗದಿಂ ಯುಕ್ತವಾದ ಪಶ್ಚಿಮದಿಕ್ತಟದಂತೆ ಹಂಸಚರಣಲಕ್ಷಣಲಕ್ಷಿತವಾದ ಧ್ವಜಪತಾಕೆಗಳಿಂದ ಅತಿರೌದ್ರವಾದ ಹೂಣಸೇನೆಯು ಬರುತ್ತಿಹುದು. ಅದರ ಹಿಂದುಗಡೆಯಲ್ಲಿ ಕದಳೀಕಾವನನಿಕರದಂತೆ ಹರಿದ್ವರ್ಣರಂಜಿತವಸನಯುತವಾಗಿ ಮಯೂರಪಿಂಛಲಕ್ಷಣಲಕ್ಷಿತವಾದ ಧ್ವಜದಿಂ ಕೂಡಿ ಭಯಾನಕವಾದ ಚೀನಸೇನೆಯು ಬರುತ್ತಿಹುದು. ಅದರ ಹಿಂದೆ ಪಕ್ವಮಾಂಸರಾಶಿಯಂತೆ ಕಾಷಾಯವಸ್ತ್ರಾಲಂಕೃತವಾಗಿ ತ್ರಿಪುಂಡ್ರಲಾಂಛನಲಾಂಛಿತವಾದ ಧ್ವಜದಿಂ ಕೂಡಿ ಮೃತ್ಯುವಿನ ಬಳಗವೋ ಎಂಬಂತೆ ಶಕಸೇನೆಯು ಬರುತ್ತಿಹುದು. ಅದರ ಪಾರ್ಶ್ವದಲ್ಲಿ ಕುಯ್ಲಿಗೆ ಬಂದ ಗದ್ದೆಯಂತೆ ಪೀತವರ್ಣವರ್ಣಿತವಸನನಿಕರದಿಂ ಶೋಭಿಸುತ್ತ ಕಾಳಿಕಾಪುತ್ರತಂಡದಂತೆ ಹರಿಣಲಾಂಛನಲಾಂಛಿತವಾದ ಧ್ವಜದಿಂ ಕೂಡಿ ಅತಿಭೀಷಣವಾದ ಸಿಂಧುಪತಿಯ ಸೇನೆಯು ಬರುತ್ತಿಹುದು. ಅದರ ವಾಮಭಾಗದಲ್ಲಿ ಸುವರ್ಣಸೈಕತಭೂಮಿಯಂ ನೋಡಿದಂತೆ ಕಪಿಲವರ್ಣವರ್ಣಿತವಸನನಿಕರದಿಂ ಹೊಳೆ ಹೊಳೆಯುತ್ತ ಅಶನಿಘಾತದಿಂ ಕೂಡಿ ಭೂಮಿಯನ್ನಡರುವ ಕಾರ್ಮುಗಿಲ ಮಿಂಚುಗಳ ತಂಡದಂತೆ ಕಾಳಧ್ವಜದಿಂದತಿಘೋರವಾದ ಮಲಯಪತಿಸಿಂಹನಾದನ ಸೇನೆಯು ಬರುತ್ತಿಹುದು. ಅದರ ಹಿಂದೆ ಭೂಭಾಗವೆಲ್ಲವೂ ಚಿತ್ರಾಸ್ತರಣಮಯವಾದಂತೆ ಚಿತ್ರವಸ್ತ್ರಶೋಭಿತವಾಗಿ ಚಿತ್ರಮೃಗಲಾಂಛಿತಕೇತನದಿಂ ಕೂಡಿ ಪ್ರಳಯಭೈರವನ ಅನುಚರನಿಕರದಂತೆ ಚಿತ್ರವರ್ಮನ ಸೇನೆಯು ಬರುತ್ತಿಹುದು. ಅದರ ಹಿಂದುಗಡೆಯಲ್ಲಿ ಶರತ್ಕಾಲಮೇಘನಿಕರದಂತೆ ಶುಭ್ರವಸ್ತ್ರವಂ ಧರಿಸಿ ಆದಿವರಾಹಫೂತ್ಕಾರಜಲಬಿಂದುನಿಕರದಂತೆ ಶುಭ್ರವಸ್ತ್ರಾನ್ವಿತವಾಗಿ ಭೂತಗಳ ಹಿಂಡು ಬಿಡಿಸಿಕೊಂಡಂತೆ ಧೂಮರೇಖಾಲಾಂಛನಲಾಂಛಿತವಾಗಿರ್ಪುದರಿಂ ನೋಟಕರಿಗೆ ಮೇಘಪಙ್ಕ್ತಿಯೆಂಬ ಭ್ರಮೆಯನೆಸಗುವ

ಪತಾಕಾನೀಕಯದಿಂಯುಕ್ತವಾಗಿ ಅತಿಭಯಂಕರವಾದ ಪಾರ್ವತೇಯಸೇನೆಯು ಬರುತ್ತಿಹುದು. ಅದರ ಹಿಂದೆ ಶಿಶಿರಾಂತದ ವನನಿಕರದಂತೆ ಬಭ್ರುವರ್ಣವಾಗಿ ಪ್ರಾಣಿಗಳಂ ಭಕ್ಷಿಸಲು ಬರುವ ವ್ಯಾಘ್ರನಿವಹದಂತೆ ವ್ಯಾಘ್ರಲಾಂಛನಲಾಂಛಿತವಾದ ಧ್ವಜಪಟದಿಂ ಕೂಡಿ ಸಾಗರತರಂಗಮಾಲೆಯೊಳ್ ಪ್ರತಿಬಿಂಬಿಸಿದ ಸೂರ್ಯಪ್ರಭಾಪಟಲದಂದದಿಂ ಹೊಳೆಹೊಳೆವ ಖಡ್ಗಕುಂತಳಗಳಿಂದ ಅತಿಭೀಷಣವಾದ ಸಿಂಧುಪತಿಯ ಸೇನೆಯು ಬರುತ್ತಿಹುದು. ಈ ಸೇನೆಯೆಲ್ಲವೂ ಆಕಾಶದಲ್ಲಿ ನೋಡುವ ಅನಿಮಿಷರ್ಗೆ ವೀರಲಕ್ಷ್ಮಿಯನ್ನುದ್ದೇಶಿಸಿ ಮಾಡುವ ಚಿತ್ರನೀರಾಜನೋಪಚಾರದಂತೆ ತೋರುತಿರ್ಪುದು ಎಂದು ಚಾರರು ಬಿನ್ನೈಸಲು; ಅದಂ ಕೇಳಿ ರಾಕ್ಷಸನು—ಆಹಾ! ಶತ್ರು ಸಮೀಪವರ್ತಿಯಾದನು. ಈ ಪುರರಕ್ಷಣೆಗೆ ಇನ್ನು ಸನ್ನಾಹವಂ ಮಾಡಬೇಕು ಕಾಲವಿಳಂಬವಂ ಮಾಡಬಾರದೆಂದು ಯೋಚಿಸುತ್ತ ನಂದರ ಬಳಿಗೆ ಬರುತ್ತಿದ್ದನು.

ಆಗ ವೃದ್ಧನಾದ ಸರ್ವಾರ್ಥಸಿದ್ಧಿರಾಜನು ಅಮಾತ್ಯರಾಕ್ಷಸನಂ ಕಂಡು ಆತನ ಹಸ್ತಲಾಘವದಿಂದ ತನ್ನ ಪುತ್ರರಾದ ನಂದರ ಬಳಿಗೆ ಬಂದು ಉಚಿತ ಪ್ರಕಾರದಿಂದ ಎಲ್ಲರೂ ಕುಳ್ಳಿರಲು; ನಂದರಿಗಿಂತೆಂದನು—

ಅಯ್ಯಾ ಪುತ್ರರುಗಳಿರಾ, ಪರ್ವತರಾಜನೆಂಬವನು ಬಹು ದೇಶಾಧಿಪತಿಗಳಂ ಕೂಡಿಕೊಂಡು ನಮ್ಮ ಮೇಲೆ ದಂಡೆತ್ತಿಬರುವನಂತೆ. ನೀವು ಶೂರರಹುದು. ಶತ್ರುಸಂಘವು ಪ್ರಬಲವಾದರೆ ಸಮಯೋಚಿತವಾಗಿ ಸಂಧಿಯಂ ಮಾಡಿಕೊಂಡು ಸ್ವಲ್ಪಕಾಲದ ಮೇಲೆ ಆತನ ಬಳಿಯ ಅರಸುಗಳಿಗೆ ಭೇದವಂ ಕಲ್ಪಿಸಿ ಹೊರಚ್ಛು ಮಾಡಿ ತರುವಾಯ ಆ ಪರ್ವತರಾಜನ ಮೇಲೆ ದಂಡೆತ್ತಿಹೋದರೆ ನಿಗ್ರಹಕ್ಕೆ ಸಾಧ್ಯನಾದಾನು. ಇದು ನಮಗೆ ಅಪಮಾನವಲ್ಲ. ಇದು ಒಂದು ರಾಜಧರ್ಮವು. ನಾನು ವೃದ್ಧನಾದೆನು. ಈ ಅರ್ಥವು ನಮ್ಮ ಅಮಾತ್ಯರಾಕ್ಷಸನಿಗೆ ಸಮ್ಮತವಾದರೆ ಹಾಗೆ ಮಾಡಿರಿ ಎಂದು ಹೇಳಿದನು. ಆ ಮಾತಿಗೆ ರಾಕ್ಷಸನು—

ಜೀಯಾ, ತಾವು ಅಪ್ಪಣೆಕೊಡಿಸಿದರ್ಥವು ಯುಕ್ತವೇ ಅಹುದು. ಆದರೂ ನನಗೆ ತೋರಿದರ್ಥವಂ ವಿಜ್ಞಾಪಿಸುವೆನು. ಅವಧರಿಸಬೇಕು ಎಂದು ಕೈಗಳಂ ಮುಗಿದು—ಬಹು ಸಾಮಂತರಿಂದ ಪೂಜಿತವಾದ ಪಾದಪದ್ಮಗಳಿಂದೊಪ್ಪುವ ನಿಮ್ಮ ದೇಶವನ್ನು ಶತ್ರುವಾಗಿ ಬಂದ ಪರ್ವತರಾಜನು ಮೆಟ್ಟಿದ ಮಾತ್ರಕ್ಕೆ ಸಂಧಿಗೆ ಮಾತನಾಡಿದರೆ ನಮ್ಮಂ ಅಶಕ್ತರೆಂದು ತಿಳಿದು ರಾಜ್ಯಕೋಶಂಗಳಂ ಬಯ

ಸ್ಯಾನು. ಇದು ಸ್ವಲ್ಪದಲ್ಲಿ ಪರ್ಯವಸಾನವಾಗಲಾರದು. ಬಹು ಶೂರಸಂಘ ಸಮೇತವಾದ ನಮ್ಮ ಸೇನೆಯು ಶತ್ರುಗಳ ಮೇಲೆ ಯುದ್ಧವಂ ಮಾಡುವಂತೆ ನೇಮಿಸಿದರೆ ಪಲಾಯನವನ್ನೇ ಮಾಡಿಯಾನು. ಅಥವಾ ಸಮಯುದ್ಧವಾಗಿ ಹಾನಿಯೂ ಸಮವಾದರೆ ಸ್ವದೇಶವಾದುದರಿಂದ ಕೂಡಲೇ ಯುದ್ಧವಂ ಮಾಡುವುದಕ್ಕೆ ನಮಗೆ ಅನುಕೂಲವಾಗುವುದು. ಶತ್ರುಗಳಿಗೆ ಇದು ಪರದೇಶವಾದುದರಿಂದ ನಷ್ಟವಸ್ತುಗಳಂ ಜೊತೆಗೊಳಿಸುವುದಕ್ಕೆ ಕೂಡಲೇ ಅನುಕೂಲವಾಗಲಾರದು. ಅಷ್ಟರಲ್ಲಿಯೇ ನಮ್ಮ ಬಾಧೆ ಹೆಚ್ಚಾದರೆ ನಿಂತು ನಿರ್ವಹಿಸಲಾರದೆ ಶತ್ರು ಪಲಾಯನವನ್ನೈದಿಯಾನು. ಅಲ್ಲದಿದ್ದರೆ ತಾನೇ ಮೊದಲು ನಮ್ಮಲ್ಲಿ ಸಂಧಿಗೆ ಬಂದಾನು. ಆಗಲೂ ನಮ್ಮ ಕಾರ್ಯಕ್ಕೆ ಜಯವಹುದು. ಮತ್ತು ದೈವಯೋಗದಿಂದ ನಮ್ಮ ಸೇನೆಯು ಹಿಮ್ಮೆಟ್ಟಿದರೆ ಆಗ ನಾವು ಸಂಧಿಗೆ ಮಾತನಾಡುವುದು ವಿಹಿತವು. ಆದುದರಿಂದ ಶತ್ರುಗಳ ಮೇಲೆ ನಮ್ಮ ಪರಾಕ್ರಮವಂ ತೋರಿಸಿದ ಬಳಿಕ ಸಮಯವಿದ್ದಂತೆ ಮಾಡಬಹುದು ಎಂದು ವೃದ್ಧನಾದ ಅರಸನಿಗೆ ಹೇಳುತ್ತಿರಲು; ಆಗ ನಂದರು ತಂದೆಗಿಂತೆಂದರು—

ಅಪ್ಪಾಜಿಯವರೇ, ಮೊದಲು ಕೆಲವು ದೇಶಾಧಿಪತಿಗಳು ಪರಸ್ಪರ ಕೃತಸಂಕೇತರಾಗಿ ನಮ್ಮ ಬಂಗಾಳಪತಿ ಓಢ್ರದೇಶಾಧಿಪ ಮೈಥಿಲ ಮಗಧಾಧಿಪತಿ ವಿಂಧ್ಯಸ್ಥ ಕಿರಾತಾಧಿಪ ಕಳಿಂಗ ಈ ಮುಖ್ಯರಾದವರು ನಮ್ಮ ಮೇಲೆ ದಂಡೆತ್ತಿ ಬಂದು ಕಾಣಿಸಿಕೊಂಡಾಗ ತಾವು ಮಾಡಿದ ಸಮ್ಮಾನಗಳಿಂದ ನಮ್ಮ ಸೇನಾನಾಯಕರು ಬಲಸಮೇತರಾಗಿ ಈ ಅರಸುಗಳ ಮೇಲೆ ಕವಿದು ಯುದ್ಧವಂ ಮಾಡುತ್ತ ತಾವು ತೆರಳುವಷ್ಟರಲ್ಲೇ ಅವರೆಲ್ಲರಂ ಹಿಡಿದುತಂದು ತಮ್ಮ ಸನ್ನಿಧಿಗೆ ಒಪ್ಪಿಸಲಿಲ್ಲವೇ? ಇದು ನಾವು ಕಂಡರ್ಥವೇ ಅಹುದಪ್ಪ! ಇವರೆಲ್ಲರಿಗಿಂತಲೂ ಈ ಪರ್ವತರಾಜನು ಅಧಿಕನೇ? ಯಾಕೆ ಚಿತ್ತಕ್ಕೆ ವಿಕಲ್ಪವು? ಈಗ ಯುದ್ಧವಂ ಮಾಡಿ ಶತ್ರುಸೇನೆಯಂ ಸಂಹರಿಸಿ ಪುತ್ರಸಮೇತನಾದ ಪರ್ವತರಾಜನಂ ಬಂಧಿಸಿ ತರುವುದಂ ನೋಡಿ ತಾವೇ ಸಂತೋಷಪಡುವಿರಿ ಎಂದು ತಂದೆಗೆ ಹೇಳಿ ಆಗ ರಾಕ್ಷಸನಂ ನೋಡಿ—ಅಮಾತ್ಯರೇ, ನಮ್ಮ ವಿಜಯಯಾತ್ರೆಗೆ ಪ್ರಶಸ್ತವಾದ ಮುಹೂರ್ತವಂ ಜ್ಯೋತಿಷಜ್ಞರಿಂದ ನಿಶ್ಚಯಪಡಿಸಿ ನೀವು ಸಿದ್ಧವಾಗಿರಿ ಎಂದು ಹೇಳಿ ಆತನಂ ಕಳುಹಿಸಿ ಅಂತಃಪುರವನ್ನೈದಿದರು.

ಇತ್ತ ಕ್ಷಪಣಕನ ಪರೀಕ್ಷೆಗೆ ರಾಕ್ಷಸನಿಂದ ನಿಯುಕ್ತನಾಗಿ ಹೋಗಿದ್ದ ಚಾರನು ಪುರದ ಹೊರಗಣ ಜಗತಿಯ ಕಟ್ಟೆಯಲ್ಲಿ ಸ್ಥಾಣುವಿನಂತೆ ಚಲಿಸದೆ

ಕುಳಿತಿರುವ ಕ್ಷಪಣಕನಂ ದೂರದಿಂದಲೇ ನೋಡಿ ಇವನು ಎಲ್ಲಿ ತಿರುಗುವನು? ಏನು ಮಾಡುವನು? ಇವನಲ್ಲಿಗೆ ಯಾರು ಬಂದುಹೋಗುವರು? ಎಂಬುವುದನ್ನು ತಿಳಿಯಬೇಕೆಂದು ಪ್ರಚ್ಛನ್ನನಾಗಿ ನೋಡುತ್ತಿರುವಲ್ಲಿ ಆತನು ಒಂದೆರಡು ದಿವಸ ಪರ್ಯಂತರವೂ ಅನ್ನೋದಕಗಳನ್ನಪೇಕ್ಷಿಸದೆ ಮರದ ಮೊದ್ದಿನ ಹಾಗೆ ಕುಳಿತಿರುವುದಂ ಕಂಡು—ಈತನು ಎಲ್ಲರಂತೆ ಸಾಧಾರಣನಲ್ಲ! ಆರೂಢಯೋಗಿಯಾಗಿರಬೇಕು! ಆದರೂ ನಾನು ಇವನಲ್ಲಿ ಶಿಷ್ಯಭಾವದಿಂದಿರುತ್ತ ಈತನ ಶೀಲಸ್ವಭಾವಗಳಂ ತಿಳಿಯಬೇಕು ಎಂದು ನಿಶ್ಚಯಿಸಿ ಬೌದ್ಧಮತಸ್ಥನಂತೆ ಹೋಗಿ ಆ ಕ್ಷಪಣಕನಿಗೆ ಪ್ರದಕ್ಷಿಣನಮಸ್ಕಾರಗಳಂ ಮಾಡಿ ಕೈಗಳಂ ಜೋಡಿಸಿ ನಿಂತುಕೊಂಡನು. ಆತನಂ ನೋಡಿ ತನ್ನ ಪಿಂಛದಿಂದ—ಕುಳ್ಳಿರು. ಏನು ಬಂದೆ? ಎಂದು ಸನ್ನೆಯಂ ಮಾಡಲು; ಗುರುವೇ, ಸಂಸಾರಬಡಬಾಗ್ನಿಯಿಂ ತಪ್ತನಾಗಿ ಪಾದಕಮಲವಂ ಸೇರಿ ಆ ಸಂತಾಪದಿಂ ಮುಕ್ತನಾದೇನೆಂಬ ಲವಲವಿಕೆಯಿಂದ ಬಂದೆನು. ಮೌನವಂ ನನ್ನಲ್ಲಿ ತ್ಯಜಿಸಿ ಪರತತ್ವವನ್ನುಪದೇಶಿಸಿ ಕೃತಾರ್ಥನಂ ಮಾಡಬೇಕೆಂದು ಪಾದಗಳಂ ಹಿಡಿದಿರುವವನ ಮುಖವಂ ಚೆನ್ನಾಗಿ ನೋಡಿ ಹಣೆಯಲ್ಲಿರುವ ತಿಲಕದ ಕಲೆಯಂ ಕಂಡು ಇವನು ಬೌದ್ಧನಲ್ಲ. ಬೌದ್ಧರು ಶೂನ್ಯಲಲಾಟರು. ಈತನಿಗೆ ತಿಲಕದ ಕಲೆ ಇರುವುದರಿಂದ ರಾಕ್ಷಸನಿಂ ಪ್ರೇಷಿತನಾಗಿ ವೇಷವಂ ಧರಿಸಿ ನಮ್ಮ ಪರೀಕ್ಷಾರ್ಥವಾಗಿ ಬಂದಿರಬೇಕು. ಇದೇ ನಿಶ್ಚಯವು. ಆದರೆ ಇವನಿಗೆ ತಕ್ಕ ಹಾಗೆ ಮಾಡಿ ಕಳುಹಿಸಬೇಕು ಎಂದು ನಿಶ್ಚಯಿಸಿ ಮೌನವಂ ಬಿಟ್ಟು—ಎಲೈ ತತ್ವಾಧಿಕಾರಿಯೇ, ನಿನ್ನಂ ನೋಡಿದರೆ ಗುರುಭಕ್ತನಂತೆ ತೋರುತ್ತಿದೆ, ನೀನು ದಿಗಂಬರ ಸಿದ್ಧಾಂತೋಪದೇಶವಂ ಹೊಂದುವುದಕ್ಕೆ ಯೋಗ್ಯನಾದುದರಿಂದ ಆದಿಸಂಸ್ಕಾರದಲ್ಲಿ ಯಾವ ಸಂಪ್ರದಾಯದಿಂದ ನಿನಗೆ ವ್ಯಾಹೃತಿಯನ್ನುಪದೇಶಿಸಿ ಇದ್ದಾರೆ? ಅದನ್ನು ಹೇಳೆಂದೆನಲು; ಅದಕ್ಕೆ ತಬ್ಬಿಬ್ಬಾಗಿ ಯೋಚಿಸಿ ಏನೋ ಒಂದು ವಿಧವಾಗಿ ಉಸುರಿದನು. ಅದಕ್ಕೆ ಒಪ್ಪಿಕೊಂಡವನಂತೆ ನಟಿಸಿ ಇದು ಕೃತ್ರಿಮವಾಗಿರುವುದು ನಿಶ್ಚಯವೆಂದು ತಿಳಿದು ತನ್ನ ಪಿಂಛಸಮ್ಮಾರ್ಜನೆಯಿಂದ ಅವನ ಶರೀರವನ್ನಭಿಮಂತ್ರಿಸಿದಂತೆ ಮಾಡಿ ಅವನಿಗೆ ಮುಂಡನವಂ ಮಾಡಿಸಿ ಅವನ ವಸ್ತ್ರಗಳೆಲ್ಲವಂ ಮಾರ್ಗಸ್ಥರಿಗೆ ಕೊಡಿಸಿ ಮತ್ತೊಂದು ನವಿಲಗರಿಯ ದೊಂದೆಯಂ ಅವನ ಕೈಯ್ಯಲ್ಲಿ ಕೊಟ್ಟು ಅನ್ನಪಾನಕ್ಕೆ ಕಪ್ಪರವನ್ನಿತ್ತು ಮನಃಪರಿಪಾಕಕ್ಕೆ ಬರುವ ಪರ್ಯಂತರ ಅಯಾಚಿತವೃತ್ತಿಯಿಂ ಜೀವಿಸುತ್ತ ಚೈತ್ಯವಂದನಾದಿಗಳಂ ಮಾಡುತ್ತ ಗುರುಭಕ್ತಿ

ನಿರತನಾಗಿದ್ದರೆ ಮನಃಪರಿಪಾಕವಂ ತಿಳಿದು ನಿನಗೆ ಪರತತ್ವವನ್ನುಪದೇಶಿಸುವೆವು. ನಮ್ಮ ಪೀಠಕ್ಕೆ ಮುಂದೆ ನೀನೇ ಕರ್ತನಾಗುವೆ ಎಂದು ಹೇಳಿ ಪ್ರಾತಃಕಾಲದಲ್ಲಿ ಹನ್ನೆರಡು ನಮಸ್ಕಾರವಂ ಮಾಡಿ ಚೈತ್ಯವಂದನೆಯಂ ಅಷ್ಟೋತ್ತರಶತವಾರಂಗೆಯ್ದು ಭಿಕ್ಷಾಟನೆಯನ್ನಾಚರಿಸುತ್ತ ಪ್ರಾಣಧಾರಣೆಯಂ ಮಾಡಿಕೊಂಡು ಇದೇ ಮೇರೆ ಸಾಯಂಕಾಲದಲ್ಲಿಯೂ ನಡೆಯುತ್ತ ಇರು ಎಂದು ಹೇಳಿ ಮೌನವಂ ಧರಿಸಿದನು.

ಇದೆಲ್ಲವಂ ಆ ಚಾರನು ಆಲೋಚಿಸಿ ತನಗೆ ಬಂದ ದುರ್ದಶೆಯಂ ನೆನೆನೆನೆದು ಖಿನ್ನನಾಗಿ ಪ್ರಕೃತದಲ್ಲಿ ಮಾಡದೇ ಇದ್ದರೆ ತೀರದೆಂದು ತಿಳಿದು ಕ್ಷಪಣಕನಿಗೆ ಹನ್ನೆರಡು ನಮಸ್ಕಾರವಂ ಮಾಡಿ ಜಗತಿಯ ಕಟ್ಟೆಗೆ ನೂರೆಂಟು ಪ್ರದಕ್ಷಿಣನಮಸ್ಕಾರವಂಗೆಯ್ದು ಬಳಲಿ ಬೆಂಡಾಗಿ ಬಾಯಾರಿ ಕೈಕಾಲು ಸೋತು ಕಪ್ಪರೆಪಿಂಚಂಗಳಂ ಪಿಡಿದು ಗುರುವಿಗಭಿವಂದಿಸಿ ಭಿಕ್ಷಕ್ಕೆ ಅಪ್ಪಣೆಯಂ ತೆಗೆದುಕೊಂಡು ನಗ್ನನಾದುದರಿಂದ ಊರ ಕಡೆಗೆ ಬರುವುದಕ್ಕೆ ಲಜ್ಜಿತನಾಗಿ ಮಾರ್ಗವಂ ಬಿಟ್ಟು ಅರಣ್ಯಕ್ಕೆ ಪಲಾಯನಂಗೆಯ್ದು ಕಪ್ಪರೆಪಿಂಚಂಗಳಂ ಬಿಸುಟು ಅಲ್ಲಿಯೇ ಪ್ರಚ್ಛನ್ನನಾಗಿ ನಿಶೆಯಂ ನಿರೀಕ್ಷಿಸುತ್ತ ಅಲ್ಲಿದ್ದು ವಲ್ಕಲ ಕೌಪೀನವಂ ಧರಿಸಿ ತನ್ನ ಮನೆಯಂ ಸೇರಿ ರಾಕ್ಷಸನಿಗೆ ನಡೆದರ್ಥವಂ ಹೇಳುವುದಕ್ಕೆ ಲಜ್ಜಿತನಾಗಿ ವಸ್ತ್ರಗಳನ್ನಲಂಕರಿಸಿಕೊಂಡು ಪ್ರಕೃತವಂ ಯೋಚಿಸುತ್ತ ಹೋಗಿ ರಾಕ್ಷಸನಂ ಕಂಡು ಕೈಮುಗಿದು—

ಬುದ್ಧೀ, ಅಪ್ಪಣೆಯ ಮೇರೆ ಪ್ರತ್ಯಕ್ಷಪರೋಕ್ಷಗಳಲ್ಲಿ ಮಾಡಿದ ಎಷ್ಟೋ ವಿಧವಾದ ಪರೀಕ್ಷೆಯಿಂದ ಕ್ಷಪಣಕನಲ್ಲಿ ಲೇಶವಾದರೂ ಕಪಟವು ಕಾಣಿಸಲಿಲ್ಲ. ಸರ್ವಸಂಗವಂ ತ್ಯಜಿಸಿದ ಮಹಾಯೋಗಿಯೇ ಸರಿ ಎಂದು ವಿಜ್ಞಾಪಿಸಿದನು.

ಅದಂ ಕೇಳಿ ಕ್ಷಪಣಕನಲ್ಲಿಯೂ ಕಪಟವಿಲ್ಲದ ಬಳಿಕ ಪರ್ವತರಾಜನು ನಮ್ಮ ಕಾಗದದ ಮುಖದಿಂದ ಇಬ್ಬರು ವರ್ತಕರಂ ನಮಗೆ ಅನುಕೂಲವಾದವರೆಂದು ನಿಶ್ಚಯಿಸಿ ಉಳಿದ ಅರಸುಗಳ ಬಳಿಯಲ್ಲಿರುವ ಪ್ರಮುಖವರ್ತಕರೂ ಇಂಥವರೇ ಆಗಿ ಇದ್ದಾರು ಎಂಬ ಊಹೆಯಿಂದ ಆ ಆರುಮಂದಿಯನ್ನೂ ಹೊರಡಿಸಿ ಇದ್ದಾನು ಎಂದು ನಿಶ್ಚಯಿಸಿ ಕ್ಷಪಣಕನಲ್ಲಿ ಸಂಶಯವಂ ಬಿಟ್ಟು ರಾಕ್ಷಸನು ಕಾರ್ಯಾಂತರವಂ ನೋಡುತ್ತಿದ್ದನು.

ಅತ್ತಲಾ ಪರ್ವತರಾಜನು ತಮ್ಮ ಸೇನೆಗೆ ನಂದವಾಹಿನಿಯು ಸಮೀಪವಾದುದಂ ತಿಳಿದು ಮಾರ್ಗಾಂತರದಿಂದ ಬಲವಂ ಕಳುಹಿಸಿ ಪಾಟಲೀಪುರವಂ ಮುತ್ತುವಂತೆ ಮಾಡಬೇಕೆಂದು ಶಬರವರ್ಮನೊಡನೆ ಆಲೋಚಿಸಲು—

ಜೀಯಾ, ತಾವು ಹೇಳಿದರ್ಥವು ಪ್ರಶಸ್ತವಾಗಿ ತೋರುತ್ತಿದೆ. ನಂದರು ರಾಕ್ಷಸಸಮೇತರಾಗಿ ಬುಧವಾರದಲ್ಲಿ ಪುರದಿಂ ಹೊರಟು ಸೈನ್ಯಕ್ಕೆ ಬರುವ ವರ್ತಮಾನಂ ತಿಳಿದುದರಿಂದ ಆ ದಿವಸ ರಾತ್ರಿ ಪಾಟಲೀಪುರವಂ ಲಗ್ಗೆಮಾಡುವ ನಮ್ಮ ಸೇನೆಯನ್ನೆರಡು ಭಾಗವಂ ಮಾಡಿ ಒಂದು ಭಾಗವಂ ಸಂಗಡ ಇರುವಂತೆ ನೇಮಿಸಿ ಉಳಿದ ಭಾಗವಂ ಎರಡು ತಂಡವಂ ಮಾಡಿ ಸರಯೂನದಿಯನ್ನನುಸರಿಸಿ ಹೋಗಿ ಪಾಟಲೀಪುರದ ಉತ್ತರಪಶ್ಚಿಮದಿಕ್ಕುಗಳಲ್ಲಿ ಲಗ್ಗೆಯಂ ಮಾಡುವಂತೆಯೂ ಮಗಧದೇಶದ ಗಿರಿವ್ರಜದ ಮಾರ್ಗವಾಗಿ ಹೊರಟು ಗಂಡಕೀ ಶೋಣಭದ್ರೆಗಳೆಂಬ ನದಿಗಳಂ ದಾಂಟಿ ಪಾಟಲೀಪುರದ ಪೂರ್ವದಿಕ್ಕಿನಲ್ಲೂ ಪಶ್ಚಿಮದಕ್ಷಿಣದಿಕ್ಕುಗಳಲ್ಲೂ ಲಗ್ಗೆಯಂ ಮಾಡುವಂತೆಯೂ ಸೇನಾಪತಿಗಳಿಗೆ ಅಪ್ಪಣೆಯಾದರೆ ಅವರು ಮಾಡಿರುವ ಪ್ರಯತ್ನಕ್ಕೆ ವ್ಯತ್ಯಾಸವುಂಟಾಗಿ ನಮ್ಮ ಕಾರ್ಯಕ್ಕನುಕೂಲವಾಗಬಹುದು ಎಂದು ವಿಜ್ಞಾಪಿಸಿದನು. ಆ ಮಾತಿಗೆ ಪರ್ವತೇಶ್ವರನು ಸಮ್ಮತನಾಗಿ ಶೇಖರಮುಖ್ಯರಾದ ಅರಸುಗಳಂ ಕರೆಯ ಕಳುಹಿಸಿ—

ಅಯ್ಯಾ ಶೂರರಾದ ಅರಸುಗಳಿರಾ, ಶತ್ರುಸೇನೆಯು ಸಮೀಪಕ್ಕೆ ಒದಗಿ ಬಂದಿರುವುದರಿಂದ ಇದೇ ಸಮಯದಲ್ಲಿ ಪಾಟಲೀಪುರವಂ ಮುತ್ತಿ ಲಗ್ಗೆಯಂ ಮಾಡಬೇಕು. ಬುಧವಾರದ ದಿವಸ ನಂದರು ರಾಕ್ಷಸಮೇತರಾಗಿ ದಂಡಿನ ಪಾಳೆಯಕ್ಕೆ ಬರುತ್ತಾರೆ. ಆ ದಿನ ರಾತ್ರಿ ಪಾಟಲೀಪುರಕ್ಕೆ ಕಿರಾತಸೇನೆಯೂ ಹೂಣಸೇನೆಯೂ ಸರಯೂನದಿಯನ್ನನುಸರಿಸಿ ಹೋಗಿ ಗಂಗಾನದಿಯಂ ದಾಂಟಿ ಪುರವಂ ಹಿಡಿದು ಉತ್ತರಪಶ್ಚಿಮದಿಕ್ಕುಗಳಲ್ಲಿ ಲಗ್ಗೆಯಂ ಹತ್ತಲಿ. ಶಕಚೀನಪತಿಗಳು ಸಮಸ್ತ ಸೇನಾಸಮೇತರಾಗಿ ಗಿರಿವ್ರಜಮಾರ್ಗದಿಂದ ಹೊರಟು ಗಂಡಕೀ ಶೋಣಭದ್ರೆಗಳಂ ದಾಂಟಿ ಪಾಟಲೀಪುರದ ಪೂರ್ವದಕ್ಷಿಣ ಭಾಗಗಳಲ್ಲಿ ಮುತ್ತಿಗೆಯಂ ಹಾಕುವವರಾಗಲಿ. ಉಳಿದ ಅರಸುಗಳ ಸೇನೆಯೆಲ್ಲವೂ ನಂದರ ಮೂಲಬಲಕ್ಕೆದುರಾಗಿ ನಿಂತು ಯುದ್ಧವಂ ಮಾಡಲಿ ಎಂದು ನಿರೂಪಿಸಿದನು. ಅದಕ್ಕೆ ಅರಸುಗಳೆಲ್ಲರೂ ಅಪ್ಪಣೆಯ ಮೇರೆಗೆ ಆಗಲೆಂದು ತಮ್ಮ ತಮ್ಮ ಸೇನಾಸಮೇತರಾಗಿ ಹೊರಡುತ್ತಿದ್ದರು.

ಅತ್ತಲಾ ನಂದರು ಅಂತಃಪುರದಲ್ಲಿ ತಮ್ಮ ತಮ್ಮ ಪತ್ನಿಯರೊಡನೆ ವಿಲಾಸದಿಂದಿರ್ದು ಆ ಬಳಿಕ ನಾಳಿನ ಪ್ರಾತಃಕಾಲದಲ್ಲಿ ನಮಗೆ ವಿಜಯಪ್ರಯಾಣವೆಂದು ಸತಿಯರಿಗೆ ಪೇಳಲು; ಆ ಮಾತಂ ಕೇಳಿ ಆ ಸ್ತ್ರೀಯರು ಮುಂದೆ ಉಂಟಾಗುವ ಶೋಕಬಾಷ್ಪಸಮುದ್ರವನ್ನೆದುರುಗೊಂಡು ಕರತರಲೋಸಿ ಹೊರಡುವ ನದಿ

ಗಳೋ ಎಂಬಂತೆ ಧಾರಾಳವಾಗಿ ಹೊರಹೊಮ್ಮುವ ಕಂಬನಿಗಳಂ ಸುರಿಸುತ್ತ—ಎಲೈ ಪ್ರಾಣಕಾಂತನೇ, ಒಂದು ನಿಮಿಷಮಾತ್ರವೂ ಅಗಲದೆ ನಿನ್ನಂ ಕೂಡಿದ್ದು ಈಗ ನೀನು ತೆರಳಿದ ಬಳಿಕ ನಿನ್ನಂ ಬಿಟ್ಟು ನನ್ನ ಪ್ರಾಣಂಗಳೆಂತು ನಿಲ್ಲುವುವು? ಎಂದು ಒಬ್ಬ ರಮಣಿಯು ಹೇಳುವಂಥವಳಾದಳು. ಮತ್ತೊಬ್ಬ ಸ್ತ್ರೀಯು—ಎಲೈ ಜೀವಿತೇಶನೇ, ನಿನ್ನ ಮುಖಚಂದ್ರದರ್ಶನದಿಂದ ಸುಖಿಸುವ ನಮ್ಮ ಮನಃಕುವಲಯಂಗಳಂ ಬಾಡುವಂತೆ ಮಾಡಿ ನೀನೆಲ್ಲಿಗೆ ತೆರಳುವೆ ? ಎಂದು ಹೇಳಿದಳು. ಮತ್ತೋರ್ವ ಕನ್ಯೆಯು—ಎಲೈ ಪ್ರಿಯನೇ, ಸುಧಾಸಾರದಂತೆ ಬಹು ಮಧುರವಾದ ತ್ವದೀಯ ಕರುಣಾರಸಪಾನದಿಂದಲೇ ಜೀವಿಸುವ ನಮ್ಮನ್ನು ಅಗಲಿ ಹೊರಡುವುದುಚಿತವೇ ? ಎಂದು ನುಡಿದಳು. ಇನ್ನೊಬ್ಬ ಬಾಲೆಯು—ಎಲೈ ಅರಸನೇ, ನಾನು ನೂತನಾಭರಣವನ್ನು ಅಲಂಕರಿಸಿಕೊಂಡು ಕುಸುಮವಂ ಮುಡಿಯುವುದರೊಳಗಾಗಿಯೇ ಬರುವ ಹಾಗಿದ್ದರೆ ಹೋಗಬಹುದು ಎಂದು ಉಸುರಿದಳು. ಮತ್ತೊಬ್ಬ ಪಸುಳೆಯು—ಎಲೈ ಅರಸೇ, ನಾನು ಧಮ್ಮಿಲ್ಲವಂ ರಚಿಸಿ ನೂತನ ಪುಷ್ಪಾಲಂಕೃತಳಾಗುವುದರೊಳಗೆ ಬಾರದೆ ಇದ್ದರೆ ನಿನ್ನಂ ನಂಬುವಳಲ್ಲ ಎಂದು ಬಕ್ಕಣಿಸಿದಳು. ಇನ್ನೊಬ್ಬ ಪ್ರೌಢೆಯು—ಎಲೈ ಕಾಂತನೇ, ನಾಳೆ ನನಗೆ ವ್ರತವು ಸಾಂಗವೆಂಬುದಂ ತಿಳಿದು ಪ್ರಸ್ಥಾನವಂ ಮಾಡುವುದು ಶಾಸ್ತ್ರವಿರುದ್ಧವಾದುದರಿಂದ ಪುನಃ ನಾಳೆ ಬರುವುದಾದರೆ ನಿನ್ನ ಮನವಿದ್ದಂತಾಗಲಿ ಎಂದಳು. ಮತ್ತೊಬ್ಬ ಸುಂದರಿಯು—ಎಲೈ ರಮಣನೇ, ಮೊದಲಿನಂತೆ ಇಲ್ಲದ ಪ್ರಯಾಣವಂ ಹೇಳುವ ನಿನ್ನ ಛದ್ಮನೆಯಂ ಸಾಕುಮಾಡು. ಇದೇನು ಚಂದವು? ಎಂದು ತನ್ನ ದೂತಿಯ ಮುಖಾಂತರವಾಗಿ ಸೂಚಿಸಿ ಕಳುಹಿಸಿದಳು. ಇನ್ನೊಬ್ಬ ರಮಣಿಯು—ಎಲೈ ಇನಯನೇ, ನೀನು ಪ್ರಯಾಣವೆಂದು ಉಸುರುವುದು ನನ್ನ ಮನಃಪರೀಕ್ಷೆಯಂ ಮಾಡಲೆಣಿಸಿದ ಬಗೆಯೋ ? ಇಲ್ಲವೇ ವಂಚನೆಯೋ ? ಎಂದಳು. ಮತ್ತೊಬ್ಬ ಶೂರಪತ್ನಿಯು—ಎಲೈ ರಮಣನೇ, ಬಹು ಕಾಲದಿಂದ ಶತ್ರುಗಳೆಂಬುವರು ಈ ಪುರಸಮೀಪಕ್ಕೇ ಬಂದುದಿಲ್ಲವಂತೆ. ಈಗಿನ ರಾಜಕಾರ್ಯವು ಬಹು ಶ್ರಮಸಾಧ್ಯವೆಂದು ತೋರುತ್ತಿದೆ. ಶತ್ರುಗಳ ಮೇಲೆ ಶೌರ್ಯವಂ ತೋರಿಸಿ ಹಿಮ್ಮೆಟ್ಟದೆ ಖ್ಯಾತಿಯಂ ಸಂಪಾದಿಸುವುದು ಕ್ಷಾತ್ರಧರ್ಮವು. ಅದೃಷ್ಟವಿದ್ದರೆ ಪುನರ್ದರ್ಶನವು ಘಟಿಸುವುದು. ಇಲ್ಲದಿದ್ದರೆ ನೀನಿದ್ದಲ್ಲಿಗೆ ನಾನೂ ಬರತಕ್ಕವಳು ಎಂದು ಹೇಳಿದಳು. ಇನ್ನೊಬ್ಬ ರಾಜಪುತ್ರಿಯು—ಎಲೈ ಪ್ರಾಣೇಶನೇ, ಹಿಂದೆ ಧರ್ಮರಾಜನ ಅಶ್ವಮೇಧಕ್ರತುವಿನಲ್ಲಿ ನಡೆದಿರುವ ಸುಧನ್ವನ ಕಥೆಯನ್ನು

ಕೇಳ್ದರಿಯೆಯಾ? ಚಂದ್ರವಂಶಲತೆಗೆ ಅಂಕುರಪ್ರಾಯವಾದ ಸಂತಾನವನ್ನು ನನ್ನಲ್ಲಿ ಈ ದಿವಸ ಪಡೆದು ನಾಳೆ ಪ್ರಯಾಣವಂ ಮಾಡಬಹುದೆಂದಳು. ಆಗ ನಂದನ ಜ್ಯೇಷ್ಠಪತ್ನಿಯು—ಎಲೈ ಜೀವಿತೇಶನೇ, ರಾಮಾಯಣದಲ್ಲಿ ತನ್ನ ತಮ್ಮನಾದ ಸುಗ್ರೀವನೊಡನೆ ಉದ್ದುರುಟುತನದಿಂದ ಯುದ್ಧಕ್ಕೆ ತೆರಳುವ ವಾಲಿಯು ಸತಿಯಾದ ತಾರಾದೇವಿಯ ಹಿತೋಕ್ತಿಯನ್ನುಲ್ಲಂಘಿಸಿ ಹೋಗಿ ಶ್ರೀರಾಮನ ಬಾಣದಿಂದ ಹತನಾದನೆಂಬ ಸಂಗತಿಯಂ ಕೇಳಿರುವೆಯಷ್ಟೆ. ಅದೇ ಮೇರೆಗೆ ನೀವು ನಿರಪರಾಧಿಗಳಾದ ನಿಮ್ಮ ತಮ್ಮಂದಿರಾದ ಮೌರ್ಯ ಮೈದುನರನ್ನು ಪುತ್ರಸಹಿತವಾಗಿ ಸಂಹರಿಸುವಲ್ಲಿ ಧರ್ಮಸಂತಾನವೃದ್ಧಿಗೋಸ್ಕರ ಉಳಿದ ಚಂದ್ರಗುಪ್ತನು ಚಾಣಕ್ಯನೆಂಬ ಬ್ರಾಹ್ಮಣನನ್ನು ಶರಣುಹೊಕ್ಕಕಾರಣ ಆತನು ನಿರ್ವ್ಯಾಜವಾಗಿ ನಿಮ್ಮನ್ನು ಸಂಹರಿಸ ಕೂಡದು ಎಂದು ಅನ್ನಸತ್ರದಲ್ಲಿ ನಿಮ್ಮಾಸನದ ಮೇಲೆ ಮಲಗಿರಲು ; ನೀವು ಆ ಬ್ರಾಹ್ಮಣನ ಕುಮಂತ್ರಾಲೋಚನೆಯನ್ನೂ ಆತನ ತೇಜಸ್ಸನ್ನೂ ತಿಳಿಯದೆ ಅಪಮಾನಮಂ ಗೆಯ್ದುದಕ್ಕೆ ನಿಮ್ಮಂ ಸಂಹರಿಸುವೆನೆಂದು ಕ್ರೂರಪ್ರತಿಜ್ಞೆಯಂ ಮಾಡಿ ಆತನು ಹೊರಟು ಹೋದ ದಿವಸವೇ ಚಂದ್ರಗುಪ್ತನೂ ಹೋಗಿ ಏನೇನೋ ಸಾಹಸಮಂ ಮಾಡಿ ಈ ಪರರಾಜರಂ ಕರೆದುಕೊಂಡು ಬಂದು ನಮ್ಮನ್ನು ಜಯಿಸಲು ಇಷ್ಟು ಪ್ರಯತ್ನಮಂ ಮಾಡಿರುವುದರಿಂದ ಮುಂದೆಯೂ ಅವರ ಕಾರ್ಯವೇ ದಿಗ್ವಿಜಯವಾದೀತು. ಅದು ಹೇಗೆಂದರೆ—ನಿಮ್ಮಲ್ಲಿ ನಿರ್ವ್ಯಾಜವಾಗಿ ಸ್ವಜನಸಂಹೃತಿದೋಷವೂ ಚಂದ್ರಗುಪ್ತನಲ್ಲಿ ಅಪಕಾರಿಗಳಿಗೆ ಪ್ರತಿಯಾಗಿ ಅಪಕಾರಮಂ ಮಾಡಲಹುದೆಂಬ ಧರ್ಮವೂ ಇರುವುದರಿಂದ ಧರ್ಮವು ಎಲ್ಲಿದೆಯೋ ಅಲ್ಲಿಯೇ ದೈವಸಹಾಯವೂ ಇರುವಕಾರಣ ಅವನಿಗೆ ಅಂಥಾ ನೀತಿಜ್ಞನಾದ ಬ್ರಾಹ್ಮಣನ ಸಹಾಯಂ ದೊರಕಿತು. ನಿಮ್ಮಲ್ಲಿ ದೋಷವಿದ್ದ ನಿಮಿತ್ತ ಅಂಥಾ ಬ್ರಾಹ್ಮಣದ್ವೇಷವೂ ನಿಮಗೆ ಘಟಿಸಿತು. ಆದಪ್ರಯುಕ್ತ ಈ ವೇಳೆಯಲ್ಲಿ ಅಮಾತ್ಯರಾಕ್ಷಸನ ಮುಖದಿಂ ಚಂದ್ರಗುಪ್ತನಿಗೆ ಸಂಧಿಯಂಗೈಸಿ ಕರತಂದು ಸನ್ಮಾನಮಂ ಮಾಡಿ ಮೈದುನರಾದಂಥಾ ಮೌರ್ಯರಿಗೆ ಮಾವಂದರು ಕೊಟ್ಟಿರ್ದ ಸೇನಾಧಿಪತ್ಯವನ್ನೂ ಅವರ ಸಹಾಯಾರ್ಥವಾಗಿ ಬಂದಿರ್ಪ ಪರರಾಜರ ದಂಡಿನ ಖರ್ಚನ್ನೂ ಕೊಡುವುದಲ್ಲದೆ ಉಡುಗೆರೆ ಭೂಷಣಾದಿಗಳಿಂದ ತೃಪ್ತಿಪಡಿಸಿ ಚಾಣಕ್ಯರಂ ಕಂಡು ಸಾಷ್ಟಾಂಗ ಪ್ರಣಾಮವಂ ಮಾಡಿ ಅಪರಾಧಕ್ಷಮಾಪಣೆಯಂ ಕೇಳಿಕೊಳ್ಳುವುದು ಯುಕ್ತವಾಗಿ ತೋರುತ್ತದೆ ಎಂದು ಹೇಳಲು ; ಆಕೆ ಹೇಳಿದ ಮಾತಂ ಗ್ರಹಿಸದೆ ನವನಂ

ದರು ಕಾಲಾಧೀನರಾದುದರಿಂದ ಮದಾಂಧರಾಗಿ ಪ್ರಕೃತಾನುಸಾರ ಆ ಸ್ತ್ರೀಯರುಗಳೆಲ್ಲರನ್ನೂ ಸಮಾಧಾನೋಕ್ತಿಗಳಿಂದೊಡಂಬಡಿಸುತ್ತ ಆ ರಾತ್ರಿಯಂ ಕಳೆಯುತ್ತಿದ್ದರು.

ರಾಕ್ಷಸನು ಕ್ಷಪಣಕನಂ ಕಂಡು—ಅಯ್ಯಾ, ನಾಳೆ ತುಲಾಲಗ್ನದಲ್ಲಿ ನಂದರಿಗೆ ವಿಜಯಪ್ರಯಾಣಂ ನಿಶ್ಚಿತವಾಗಿದೆ. ಲಗ್ನಬಲವೆಂತಿರುವುದು ? ಎಂದು ಕೇಳಲು—

ಅಯ್ಯಾ ಅಮಾತ್ಯರೇ, ಅದಕ್ಕಿಂತಲೂ ವೃಶ್ಚಿಕಲಗ್ನವು ಉತ್ತಮವು. ಲಗ್ನಾಧಿಪತಿಯು ಶತ್ರುಸ್ಥಾನವಂ ನೋಡುತ್ತಿರುವುದರಿಂದ ಶತ್ರುಕ್ಷಯವಾಗುತ್ತಿದೆ ಎನಲು ; ಸಮೀಪದಲ್ಲಿದ್ದ ಸಿದ್ಧಾರ್ಥಕನು ಶತ್ರುಪದಕ್ಕೆ ಪಂಚಮೀತತ್ಪುರುಷ ಸಮಾಸವನ್ನು ಮಾಡಬೇಕೆಂದು ತನ್ನ ಮನಸ್ಸಿನಲ್ಲಿ ಅಂದುಕೊಂಡನು. ಆಗ ರಾಕ್ಷಸನು ಪುರೋಹಿತನ ಮುಖವಂ ನೋಡಿ—ಇವರು ಹೇಳಿದ ಲಗ್ನವು ನಿಮಗೆ ಸಮ್ಮತವಾದರೆ ಅರಸುಗಳಿಗೆ ವಿಜಯಯಾತ್ರಾದಾನವಂ ಮಾಡಿಸಿರಿ ಎಂದು ಹೇಳಿ ಶಯನಗೃಹದಲ್ಲಿ ನಿದ್ರಾಸಕ್ತನಾಗಿ ಆ ರಾತ್ರಿಯಂ ಕಳೆಯುತ್ತಿರಲು ; ಪರ್ವತರಾಜನ ಸೇನೆಗೂ ನಂದಸೇನೆಗೂ ಮಾರ್ಗಮಧ್ಯದಲ್ಲಿ ಕೈಗೂಡಿ ಮಹಾಯುದ್ಧ ನಡೆದು ಗಿರಿವ್ರಜದ ಬಳಿಯ ಸುಂದರಗಡವೆಂಬ ದುರ್ಗವಂ ಶತ್ರುಸೇನೆಯು ಆಕ್ರಮಿಸುವುದಕ್ಕೆ ಬರುತ್ತಿರಲು ; ಆ ಅರುಣೋದಯಸಮಯದಲ್ಲಿ ಆ ದುರ್ಗದ ಮೇಲಣ ಫಿರಂಗಿಯ ಶಬ್ದಗಳು ಭೂಮಿ ಇಬ್ಭಾಗವಾಗುವಂತೆ ಬಹಳವಾಗಿ ಕೇಳುತ್ತಿರಲು ; ಅದಂ ಕೇಳಿ ರಾಕ್ಷಸನು ನಿದ್ರೆಯಂ ತಿಳಿದೆದ್ದು ನಮ್ಮ ಸುಂದನಗಡವೆಂಬ ದುರ್ಗದ ಫಿರಂಗಿಯ ಶಬ್ದವು ಬಹಳವಾಗಿ ಕೇಳಿಸುತ್ತಿದೆ. ಆ ಶತ್ರುಸೇನೆಯು ದುರ್ಗವನ್ನಾಕ್ರಮಿಸುವುದಕ್ಕೆ ಬಂದಹಾಗೆ ಕಾಣುತ್ತದೆ ಎಂದು ಹೇಳುತ್ತ ತ್ವರಿತದಿಂ ಸ್ನಾನಾದಿಗಳಂ ಮಾಡಿ ಭೂಸುರರ್ಗೆ ನಿತ್ಯದಾನಂಗೊಟ್ಟು ನಂದರ ಸಮೀಪಕ್ಕೆ ಬಂದನು. ಆಗ ಒಂಟೆಯಂ ಹತ್ತಿಕೊಂಡು ವೇಗದಿಂ ಬಂದ ದೂತರು ಕಾಗದವಂ ರಾಕ್ಷಸನಿಗೆ ಕೊಡಲು ; ಆತನು ಅದಂ ಓದಿ ತಿಳಿದುಹೋಗಿ ನಂದರಿಗೆ—

ಅಯ್ಯಾ ಅರಸುಗಳಿರಾ, ನಿನ್ನೆಯ ಪ್ರಾತಃಕಾಲದಲ್ಲಿ ಶತ್ರುಗಳ ಸೇನೆಗೂ ನಮ್ಮ ಡಿಂಗಿರಾತನ ಸೇನೆಗೂ ಕೈಗೂಡಿ ಯುದ್ಧವಾಗಿ ಶಕಸೇನೆಯಲ್ಲಿ ಇಪ್ಪತ್ತು ಸಾವಿರ ಮಂದಿ ಹತರಾಗಿ ಹತ್ತು ಸಹಸ್ರ ಗಜಂಗಳು ಗಾಯವಡೆದು ನಮ್ಮ ಫಿರಂಗಿಗಳರವತ್ತು ಅವರಿಗೆ ಸಿಕ್ಕಲು ; ಅಷ್ಟರಲ್ಲಿಯೇ ನಮ್ಮ ಭದ್ರಭಟನ ಸೇನೆ ಹೋಗಿ

ಡಿಂಗಿರಾತನಿಗೆ ಸಹಾಯವಾಗಲು ; ಬಾಣಸಮೇತರಾದ ಎಂಟು ಸಾವಿರ ಧನ್ವಿಗಳಂ ಹಿಡಿದು ಅದೇ ಶರಗಳನ್ನವರ ದಂಡಿನ ಮೇಲೆ ಬಿಡಲು ; ಅದರಿಂದವರ ಸೇನೆಯು ಛಿದ್ರವಾಗಿ ಹೋಯಿತು. ಆಗ ಅವರಿಗೆ ಸಿಕ್ಕಿದ್ದ ಫಿರಂಗಿಗಳಂ ನಮ್ಮವರು ಹಿಂದಕ್ಕೆ ತರುವುದಂ ನೋಡಿ ಚೀನರ ಸೇನೆಯು ಅಡ್ಡಲಾಗಿ ಬಂದು ನಮ್ಮ ಚತುರಂಗವಂ ಪ್ರಹರಿಸಿ ಪುನಃ ಫಿರಂಗಿಗಳನ್ನಾಕ್ರಮಿಸಲು ; ಮತ್ತೆ ಹಿಂದಣಿಂದ ನಮ್ಮ ಡಿಂಗಿರಾತನ ಸೈನ್ಯವು ಹೋಗಿ ಆ ಚೀನರಂ ಪ್ರಹರಿಸುತ್ತ ಫಿರಂಗಿಯ ಗುಂಡುಗಳಿಂದ ಉಭಯಸೇನೆಗೂ ಯುದ್ಧವಾಗುತ್ತಿರುವಲ್ಲಿ ಅರಿಬಲವು ಸುಂದರ ಗಡಕ್ಕೆ ಅಭಿಮುಖವಾಗಿ ಬರುತ್ತಿದೆಯಂತೆ. ಇದುವರೆಗೆ ಸಮಯುದ್ಧದಲ್ಲಿದೆ. ದುರ್ಗವಂ ಶತ್ರುಗಳು ಆಕ್ರಮಿಸುವರಾಗಿದ್ದಾರೆಂದು ಡಿಂಗಿರಾತಂ ಬರೆದು ಕಳುಹಿಸಿದ್ದಾನೆ. ಹಾಗೆಯೇ ದುರ್ಗದ ಫಿರಂಗಿಯ ಶಬ್ದಗಳೂ ಕೇಳಿಸುವುದ ರಿಂದ ಶತ್ರುಗಳು ದುರ್ಗಸಮೀಪಕ್ಕೆ ಬಂದಂತೆ ತೋರುತ್ತಿದೆ. ಅಲ್ಲಿಯ ದುರ್ಗ ಪಾಲಕನಾದ ಶಿವವರ್ಮನು ಸಾಹಸಿಯಾದುದರಿಂದ ಶತ್ರುಗಳು ದುರ್ಗವನ್ನಾಕ್ರ ಮಿಸುವುದು ಅಶಕ್ಯವಾಗಿದ್ದೀತು ಎಂದು ಹೇಳುತ್ತಿರುವ ಸಮಯದಲ್ಲಿ ಮತ್ತೊಬ್ಬ ದೂತನು ತುರಗಾರೂಢನಾಗಿ ಅತಿವೇಗದಿಂ ಬಂದು ಕಾಗದವಂ ಕೊಡಲು ; ರಾಕ್ಷಸನು ಅದಂ ಓದಿಕೊಂಡು ಸಂದರಂ ಕುರಿತು—

ಅಯ್ಯಾ ಅರಸುಗಳಿರಾ, ಇದು ಭದ್ರಭಟನಿಂದ ಬಂದ ಕಾಗದವು. ದುರ್ಗವಂ ಹಿಡಿಯಬೇಕೆಂದು ಬರುವ ಶಕಸೇನೆಗೂ ನಮ್ಮ ಭದ್ರಭಟಾನೀಕಕ್ಕೂ ಮಹಾ ಯುದ್ಧವಾಗಲು ; ಡಿಂಗಿರಾತನ ಬಲವು ಶಕಸೇನೆಯ ಮೇಲೆ ಕಾಣಿಸಿಕೊಂಡು ಯುದ್ಧವಂ ಮಾಡಿ ಶ್ರಾಂತವಾಗಿ ನಿಂತಿರುವಲ್ಲಿ ಶತ್ರುವಾಹಿನಿಯು ಗುಂಪು ಕೂಡಲು ; ಅದಂ ನೋಡಿ ನಮ್ಮವರು ಓಡುವವರಂತೆ ಹಿಮ್ಮೆಟ್ಟಿ ಕೆಲನಾಗಿ ನೆಲ ಸುರಂಗಕ್ಕೆ ಅಗ್ನಿಯಂ ಮುಟ್ಟಿಸಲು ; ಆಗ ಮುನವಳ್ಳೀಕಣಿವೆಯ ಹಳ್ಳದಲ್ಲಿ ಗುಂಪುಗೂಡಿ ನಿಂತಿದ್ದ ಶಕಸೇನೆಯಲ್ಲಿ ಆ ಭೂಮಿಯು ಹಾರಿ ಅದರ ಘಾತದಿಂದ ಎಂಟು ಸಹಸ್ರಜನರು ಹತರಾಗಿ ಉಳಿದವರು ಹಿಂದಕ್ಕೆ ಓಡಲು ; ಅವರಂ ನಮ್ಮವರು ಅಟ್ಟಿಕೊಂಡು ಹೋಗಲು ; ಓಡಿದ ಶ್ರಮದಿಂದ ಆ ಶಕಸೇನಾಜನ ಗಳು ದಾರಿಯಲ್ಲಿ ವಿಷಸಂಪರ್ಕವಾದ ಮಡುಹುಗಳ ಜಲವಂ ಕುಡಿದು ಮೂರ್ಛಿ ತರಾಗಿರುವಲ್ಲಿ ನಮ್ಮವರು ಹೋಗಿ ಅವರಂ ಸಂಹರಿಸಿದರು. ಅಷ್ಟರಲ್ಲಿಯೇ ಚೀನರ ಮಾರ್ಬಲವು ಎದುರಾಗಿ ನಮ್ಮ ಸೇನೆಯಂ ಬಿಟ್ಟು ದುರ್ಗವಂ ಹಿಡಿಯ ಲೋಸುಗ ಅದರ ಸಮೀಪದಲ್ಲಿದ್ದ ಉಕ್ಕಡದವರಂ ಪ್ರಹರಿಸಿ ಅಲ್ಲಿಯೇ ಇಳಿದು

ಇದೆ ಸಾಯಂಕಾಲದಲ್ಲಿ ಅವರ ಆಹಾರದ ವೇಳೆಯಂ ನೋಡಿ ಬಳಸಿಬಂದು ಕವಿದು ಅವರ ಮೇಲೆ ಯುದ್ಧವಂ ಮಾಡುತ್ತೇನೆಂದು ಬರೆದಿದ್ದಾನೆ ಎಂಬುದಾಗಿ ಭದ್ರಭಟನ ಆ ಕಾಗದದಭಿಪ್ರಾಯವಂ ತಿಳುಹಿಸಿ ಇನ್ನು ಮೇಲೆ ಜಾಗ್ರತೆಯಿಂದ ನಾವು ಮೂಲಬಲಸಮೇತರಾಗಿ ದಂಡಿನ ಪಾಳಯಕ್ಕೆ ತೆರಳಬೇಕೆಂದು ಹೇಳಿದನು.

ಅದಂ ಕೇಳಿ ನಂದರು ಸ್ನಾನಾದಿಗಳಂ ಮಾಡಿ ಬಹು ಧನಕನಕರತ್ನಗಳಿಂದ ದ್ವಿಜವರ್ಗಕ್ಕೆ ವಿಜಯಯಾತ್ರಾದಾನವಂ ಮಾಡಿ ಬಂಧುಮಿತ್ರರಾದ ರಾಜಕುಮಾರವರ್ಗಸಮೇತರಾಗಿ ಭೋಜನವಂ ಮಾಡಿದ ಬಳಿಕ ದಿವ್ಯಮಾಲ್ಯಾನುಲೇಪನಾಭರಣಂಗಳಂ ಧರಿಸಿ ವಿಪ್ರರ ಮಂಗಳಾಶೀರ್ವಾದಂಗಳಂ ಪರಿಗ್ರಹಿಸಿ ಬಂದು ಮಾತಾಪಿತೃಗಳಿಗಭಿವಂದಿಸಲು ; ಅವರು ತನಯರಂ ಪರಸಿದರು. ಆಗ ಜನನಿಯಾದ ಸುನಂದಾದೇವಿಯು ನಂದರಿಗೆ—

ಅಯ್ಯಾ ಆಯುಷ್ಮಂತರಾದ ಕುಮಾರರುಗಳಿರಾ, ಈಗ ಬಂದಿರುವ ಅಸಂಗತವು ಪ್ರಬಲವಾಗಿ ತೋರುತ್ತಿದೆ. ನೀವೆಲ್ಲರೂ ನಗರವಂ ಬಿಟ್ಟು ತೆರಳದೆ ಪುರರಕ್ಷಣೆಗೆ ನಾಲ್ವರು ಇರುತ್ತ ಮಿಕ್ಕವರು ದಂಡಿನ ಪಾಳಯದಲ್ಲಿ ಇಳಿದುಕೊಂಡು ಸೇನೆಗಳಂ ಯುದ್ಧಕ್ಕೆ ಕಳುಹಿಸಿ ಸಮಯಾನುಗುಣವಾಗಿ ನಡೆಯುವುದು ಯುಕ್ತವಾಗಿ ತೋರುತ್ತಿದೆ. ನೀವು ಆಚರಿಸುವ ಧರ್ಮವೇ ನಿಮ್ಮಂ ಕಡೆಹಾಯಿಸಲಿ ಎಂದು ಕಂಬನಿಗಳಂ ತುಂಬುತ್ತ ಪುತ್ರರಂ ತಲೆದಡಹುತ್ತಿರಲು ; ನಂದರು—

ತಾಯಿ, ತಾವು ಅಷ್ಟುಪರಿಯಂತರವೂ ಯೋಚಿಸುವುದಕ್ಕೆ ನಿಮಿತ್ತವು ಕಾಣಿಸುವುದಿಲ್ಲ. ಈಗ ಬಂದಿರುವ ಶತ್ರುಗಳು ಮಹಾ ಪ್ರಯತ್ನಕ್ಕೆ ವಿಷಯರಲ್ಲ; ನಮ್ಮ ಸೇನಾನಾಯಕರಿಂದಲೇ ಆ ಪರ್ವತರಾಜನೆಂಬವನು ನಿಗೃಹೀತನಾದಾನು. ಯುದ್ಧವು ನಮ್ಮ ಮಟ್ಟಿಗೂ ಬರತಕ್ಕುದಾಗಿ ತೋರುವುದಿಲ್ಲ. ಆಪ್ತನಾದ ಬಾಗುರಾಯಣನು ಶೂರಪರಿವಾರಸಮೇತನಾಗಿ ಪುರರಕ್ಷಣೆಯಲ್ಲಿ ಜಾಗರೂಕನಾಗಿದ್ದಾನೆ. ನಾವು ಸಮೀಪದಲ್ಲಿಯೇ ಇದ್ದು ಬರುತ್ತ ಹೋಗುತ್ತ ಇದ್ದೇವೆ ಎಂದು ತಾಯಿಗೆ ಸಮಾಧಾನವಂ ಹೇಳಿ ಆಗ ಅಸ್ತಾಚಲವಂ ಹೊಂದುವ ಚಂದ್ರನ ದರ್ಶನದಿಂದ ನಿಮೀಲಿತಗಳಾಗುವ ರಕ್ತೋತ್ಪಲಗಳಂತೆ ಪತಿಪ್ರಯಾಣ ದುಃಖದಿಂ ಕೆಂಪಡರಿದ ನೇತ್ರಗಳ ದೆಸೆಯಿಂದ ಬಾಷ್ಪಂಗಳಂ ಧಾರಾಳವಾಗಿ ಬಿಡುತ್ತಿರುವ ಪತ್ನೀಸಮೂಹವನ್ನೊಡಂಬಡಿಸಿ ಅಂತಃಪುರದಿಂದ ಹೊರಡುತ್ತಿದ್ದರು.

ಆ ಸಮಯದಲ್ಲಿ ಅಶ್ವಾರೂಢರಾದ ರಾಜಕುಮಾರವರ್ಗಗಳ ಮಣಿಭೂಷಣ ಪ್ರಭಾನಿಕರಗಳಿಂ ರಾಜದ್ವಾರಪುರೋಭಾಗವು ಮಯೂರಪಿಂಛದಿಂದಲಂಕೃತ ವಾದಂತೆ ತೋರುತ್ತಿರಲು; ಕರಿಣೀಸಮೇತಗಳಾದ ದಿಗ್ಗಜಾವಳಿಗಳಂತೆ ದ್ವಿರದ ಶ್ರೇಷ್ಠಗಳು ಶೃಂಗರಿಸಲ್ಪಟ್ಟು ಬಂದು ನಿಂತಿರಲು; ಭಲ್ಲಧಾರಿಗಳ ತಂಡಗಳು ಮುಂದೆ ನಡೆಯುತ್ತಿರಲು; ಸಾಮಂತನರಪತಿಛತ್ರಪಙ್ಕ್ತಿಗಳಿಂದ ರಾಜಮಾರ್ಗವು ಸೂರ್ಯಾತಪರಹಿತವಾಗಿರಲು; ಪ್ರಳಯಕಾಲಮೇಘಗಳಂ ಶಿಕ್ಷಿಸುವ ಹಾಗೆ ಪ್ರಯಾಣಪಟಹಧ್ವನಿಯು ಶತ್ರುರಾಜರೆದೆ ಬಿರಿಯುವಂತೆಯೂ ಹರವೃಷಭ ರವದೊಡನೆ ಕಲಹಿಸುವಂತೆಯೂ ಕುಲಾಚಲದಲ್ಲಿರ್ಪ ಸಿಂಹಗರ್ಭಗಳಂ ಕರಗಿಸುವಂತೆಯೂ ಭೈರವನ ಡಮರುಗಧ್ವನಿಯನ್ನನುಕರಿಸುವಂತೆಯೂ ವಿಜೃಂಭಿಸುತ್ತಿರಲು; ಆ ಸಮಯದಲ್ಲಿ ನಂದರು ಅಮಾತ್ಯಸಮೇತರಾಗಿ ಗಜಾ ರೋಹಣವಂ ಮಾಡುತ್ತಿರಲು; ವಂದಿಮಾಗಧ ಬಿರುದ ಶಬ್ದಗಳು ಪುರವನ್ನೆಲ್ಲಾ ಮುಚ್ಚುತ್ತಿರಲು; ಸೌಧವಾತಾಯನಸ್ಥಾನಸ್ಥಿತ ಸ್ತ್ರೀಜನನಯನಾಪಾಂಗ ತರಂಗ ಗಳಂ ಶ್ವೇತಾತಪತ್ರನಿಕರಂಗಳು ನೀಲೋತ್ಪಲಮಯವಾದಂತೆ ಕಾಣಿಸುತ್ತಿರಲು; ವಾಯುಚಲಿತಲತಾವಿಕೀರ್ಣಕುಸುಮನಿಕರಗಳಿಂ ಶೋಭಿಸುವ ವನವೀಥಿಯಂತೆ ಪೌರಕುಮಾರಿಕಾ ನಿಕರಗಳಿಂ ಎರಚಲ್ಪಟ್ಟ ಲಾಜಾಕುಸುಮ ವರ್ಷಗಳಿಂ ರಾಜಮಾರ್ಗಂ ನಕ್ಷತ್ರಯುತವಾದ ನಭೋಮಾರ್ಗವೋ ಎಂಬ ಹಾಗೆ ರಂಜಿಸು ತ್ತಿರಲು; ಆಗ ರಾಜಮಾರ್ಗದ ಬಳಿವಿಡಿದು ನಂದರು ಪುರದ್ವಾರ ದೇಶವಂ ದಾಂಟಿ ಬರುತ್ತಿದ್ದರು. ತತ್ಕಾಲದಲ್ಲಿ ನಂದರಿಗೆ ಅಶುಭಸೂಚಕವಾಗಿ ವಾಮನೇತ್ರಗಳು ಅದುರಿದವು. ಹಂಗ ಹದ್ದುಗಳು ನಂದರ ರಥಧ್ವಜಪತಾಕಾಗ್ರವನ್ನಡರಿದುವು. ಅದಂ ನೋಡಿ ಜನರು ಇದೇನೋ ದುರ್ನಿಮಿತ್ತಗಳಾಗುತ್ತಿವೆ! ಎಂದು ಚಿಂತಿಸುತ್ತ ಅರಸುಗಳಿಗೆ ತಿಳುಹಿಸಲಂಜಿ ಸುಮ್ಮನಿದ್ದರು. ಆ ಸಮಯದಲ್ಲಿ ಪುನಃ ಭದ್ರಭಟನೆಂಬ ಸೇನಾಪತಿಯಿಂ ಕಳುಹಿಸಲ್ಪಟ್ಟ ತುರಗಾರೂಢರಾದ ಚಾರ ರಿಬ್ಬರು ತ್ವರಿತದಿಂ ಬಂದು ಬಿಸಗೆ! ಎಂದು ಕೂಗುತ್ತ ಕೈಮುಗಿದು ನಂದರಿಗೆ—

ಬುದ್ಧೀ, ಈ ದಿವಸ ಸೂರ್ಯೋದಯದ ಸಮಯದಲ್ಲಿ ಶತ್ರುಗಳ ಚೀನ ಸೇನೆಯು ನಮ್ಮ ಸುಂದರಗಡವನ್ನಾಕ್ರಮಿಸಬೇಕೆಂದು ನಾಲ್ಕು ದಿಕ್ಕಿನಲ್ಲಿಯೂ ಚೋರಮಾರ್ಗವಂ ಹುಡುಕುತ್ತ ಅಲ್ಲಿಯ ಗುಹೆಗಳಲ್ಲಿ ಅಡಗುತ್ತ ಉಡುಗಳಿಗೆ ಹಗ್ಗವಂ ಕಟ್ಟಿ ಮೇಲಕ್ಕೇರುತ್ತ ನೂಲೇಣಿಗಳಂ ಜೋಡಿಸಿ ಮೇಲಣ ಮಾರ್ಗವಂ

ಹಿಡಿಯುತ್ತ ದುರ್ಗವಂ ಮುತ್ತುತ್ತ ಬರುತ್ತಿದ್ದರು. ಆಗ ದುರ್ಗಪಾಲಕನಾದ ನಮ್ಮ ಶಿವವರ್ಮನು ಮೇಲಿರುವ ತನ್ನ ಸೇನೆಯಂ ಜೊತೆಗೊಳಿಸಿಕೊಂಡು ಹೆಚ್ಚು ಸೈನ್ಯವಿಲ್ಲದಂತೆ ತೋರ್ಪಡಿಸಿ ಶತ್ರುಗಳು ಸಮೀಪಕ್ಕೆ ಬರುವುದನ್ನೇ ನೋಡುತ್ತ ಬಂದ ವೇಳೆಯಲ್ಲಿ ಲಕ್ಷೋಪಲಕ್ಷ ಗುಂಡುಗಳನ್ನುರುಳಿಸಿ ಅನೇಕ ಫಿರಂಗಿಗಳಿಗೆ ರಂಜಕವಂ ತೋರಿಸಲು; ಆ ಘಾತದಿಂದ ಮೇಲಿರುವ ಶತ್ರುಗಳ ಸೇನಾಸಂಘಗಳು ತುಂಡುತುಂಡುಗಳಾಗಿ ಅವರ ಶರೀರರಕ್ತಗಳಿಂದ ದುರ್ಗವು ರಕ್ತಚಂದನಲೇಪಿತವಾದಂತೆಯೂ ಕಾವಿಯಕಲ್ಲಿನ ಬೆಟ್ಟವೋ ಎಂಬಂತೆಯೂ ತೋರುತ್ತಿದೆ. ಈ ರೀತಿಯಲ್ಲಿ ದುರ್ಗವನ್ನಡರಿದ ಅರಿಬಲವು ನಿಶ್ಶೇಷವಾಗಿ ಹತವಾಗಲು; ಪುನಃ ಪರಸೈನ್ಯವು ಕೋಪದಿಂ ಬಂದು ದುರ್ಗವನ್ನಡರುತ್ತಿರ್ದಿತು. ನಮ್ಮವರು ಮೊದಲಿನಂತೆಯೇ ಅವರಂ ಶಿಲಾವರ್ಷಗಳಿಂದ ಘಾತಿಸುತ್ತಿದ್ದರು. ಅಷ್ಟರಲ್ಲಿಯೇ ನಮ್ಮ ಭದ್ರಭಟಸೇನೆಯು ಕೆಳಗಿದ್ದ ಚೀನರ ಮೇಲೆ ಹೊಕ್ಕು ಯುದ್ಧವಂ ಮಾಡಲು; ಶತ್ರುಗಳಿಗೆ ಇತ್ತಂಡಂ ಗಾಯವಡೆದುದರಿಂದ ದುರ್ಗವಂ ಬಿಟ್ಟು ಈಚೆಗೆ ಮೂರು ಹರಿದಾರಿ ಬಂದು ಇಳಿದು ಇದಾರೆ. ಬುದ್ಧೀ, ಇಂದಿನ ಯುದ್ಧದಿಂದ ಪಾದಕ್ಕೆ ಜಯವುಂಟಾಯಿತು ಎಂದು ಚಾರರು ಬಿನ್ನೈಸಲು; ಆ ಮಾತಿಗೆ ನಂದರು ಸಂತೋಷಪಡುತ್ತ ಆ ದೂತರಿಗೆ ಉಡುಗೆರೆಗಳಂ ಕೊಡಿಸಿ ಭದ್ರಭಟಶಿವವರ್ಮರಿಗೆ ವಸ್ತ್ರಭೂಷಣಗಳಂ ಕಳುಹಿಸಿ ಮುಂದೆ ತೆರಳುತ್ತಿರಲು; ಆಗ ಅಮಾತ್ಯರಾಕ್ಷಸನು ನಂದರಿಗೆ—

ರಾಜಪುತ್ರರುಗಳಿರಾ, ಶಿವವರ್ಮನೆಂಬವನು ದುರ್ಗರಕ್ಷಕನಾದುದರಿಂದ ಇಂದು ಜಯವಾಯಿತು ಎಂಬ ಶಬ್ದವೇ ನಮಗೆ ಶುಭನಿಮಿತ್ತವು. ಮತ್ತೆ ಬಾಗುರಾಯಣನು ಪುರರಕ್ಷಕನಾಗಿ ಯುದ್ಧಸನ್ನಾಹವಂ ಮಾಡಿರುವುದನ್ನು ನಾನೇ ನೋಡಿ ಬರುವೆನು. ತಾವೆಲ್ಲರೂ ದಂಡಿನ ಪಾಳಯದ ಗುಡಾರಕ್ಕೆ ದಯಮಾಡಬಹುದು. ಶೀಘ್ರದಲ್ಲಿ ಬರುತ್ತಿದ್ದೇನೆ ಎಂದು ನಂದರಿಗೆ ಹೇಳಿ ಮತ್ತೆ ಕೆಲವು ದೂರ ಸಂಗಡಲೇ ಹೋಗಿ ತುರಗವನ್ನೇರಿ ಪರಿವಾರಸಮೇತನಾಗಿ ಬಾಗುರಾಯಣನಿಂ ರಚಿಸಲ್ಪಟ್ಟ ಸಮರಸನ್ನಾಹವಂ ನೋಡಲೋಸುಗ ಪುರದ ಹೊರವಳಯದಲ್ಲಿ ಬರುತ್ತಿದ್ದನು. ಆಗ ಸೇನಾಪಾದಘಾತದಿಂದೆದ್ದ ಧೂಳೀನಿಕುರುಂಬವು ಉತ್ಪಾತಸೂಚಕವಾಗಿ ಉದ್ಭವಿಸಿ ಸೂರ್ಯಕಿರಣವಂ ಮುಚ್ಚುವ ಚಿಟ್ಟೆಗಳ ಹಿಂಡಿನಂತೆಯೂ ವೀರಲಕ್ಷ್ಮೀವಿನೋದಕೇಳೀಪಟವಾಸವೋ ಎಂಬಂ

ತೆಯೂ ನಂದಸೇನಾಭಾರಖಿನ್ನಳಾಗಿ ಬ್ರಹ್ಮಸಿಗೆ ಮೊರೆಯಿಡುವುದಕ್ಕೆ ರೇಣು ರೂಪಿನಿಂದೆದ್ದು ಸ್ವರ್ಗವನ್ನೈದುವ ಭೂಮಿಯೋ ಎಂಬಂತೆಯೂ ದೆಸೆಗಳನ್ನಾ ವರಿಸಿ ನಭಃಪಥವಂ ನಿಶಾಸಮಯಂಗೆಯ್ಯುತ್ತಿರಲು ; ಆಗ ಬಹುದೂರಧಾವನ ದಿಂದ ಉದ್ಭವಿಸಿದ ತುರಗಶ್ರಮಜಲಶೀಕರನಿಕರಗಳಿಂದಲೂ ಮದಧಾರಾವರ್ಷವಂ ವರ್ಷಿಸುವ ಗಜನಿಕರಫೂತ್ಕಾರಜಲಬಿಂದುಗಳಿಂದಲೂ ಸೇನಾಧೂಳಿಗಳಡಗಿ ಭೂ ಭಾಗವು ಪಂಕಪ್ರಾಯವಾಗಿ ದಿಕ್ಕುಗಳು ಪ್ರಸನ್ನವಾಗಲು ನಂದರು ಸೇನಾ ಪರಿವೃತರಾಗಿ ಗಂಗಾಸರಯೂಸಮೀಪಕ್ಕೆ ಬರುತ್ತ ದಕ್ಷಿಣದಿಕ್ಕಿನೊಳ್ ದೂರ ದಲ್ಲಿ ಉನ್ನತವಾದ ಜಪಶಾಲೆಯಂ ನೋಡಿ ಇದೇನು ? ಎಂದು ಕೇಳಲು ; ಅವರ ಬಳಿಯ ದೂತರು ಕೈಮುಗಿದು ಇಂತೆಂದರು—

ಜೀಯಾ, ಇದು ಅಮಾತ್ಯರಾಕ್ಷಸರ ಅಪ್ಪಣೆಯಿಂದ ಮಾಡಿರುವ ಶತ್ರು ಪಲಾಯನ ಜಪಶಾಲೆಯು. ಅಲ್ಲಿ ಜಪವಂ ಮಾಡುವ ವಿಪ್ರರು ಫಲಮಂತ್ರಾಕ್ಷ ತೆಯಂ ಕೊಂಡು ಸನ್ನಿಧಿಯಂ ಕಾಣಬೇಕೆಂದು ಬಂದು ನಿಂತಿದ್ದಾರೆ ಎನಲಾಗಿ ನಂದರು ಆ ಭೂಸುರಸ್ತೋಮವಂ ನೋಡಿ—

"ಅಯ್ಯಾ ಮಂತ್ರಕೋವಿದರಾದ ವಿಪ್ರೋತ್ತಮರೇ, ಸಾಂಗೋಪಾಂಗವಾಗಿ ಜಪಹೋಮಗಳಂ ಮಾಡಿರಿ. ಈಗ ಬಂದಿರುವ ಶತ್ರುಸಂಘವು ಪಲಾಯನಂಗೆ ಯ್ದರೆ ನಿಮಗೆ ಶಾಶ್ವತವಾದ ಸ್ಥಿತಿಯನ್ನುಂಟುಮಾಡಿಸುತ್ತೇವೆಂದು ಹೇಳಿದರು. ಅಷ್ಟರಲ್ಲಿಯೇ ನೆಲದಲ್ಲಿ ಜೋಲುವ ಜಟಾಭಾರದಿಂದ ನ್ಯಗ್ರೋಧವೃಕ್ಷದಂತೆ ತೋರುತ್ತ ಕೋಮಲದರ್ಭೆಗಳಿಂದ ರಚಿಸಿದ ಪವಿತ್ರಪಂಚಕದಿಂ ಯುಕ್ತವಾದ ಅಂಗುಳೀನಖಾಗ್ರಗಳಿಂ ಸುತ್ತಿಸುತ್ತಿರುವ ಹವಳದ ಜಪಮಾಲೆಯಿಂದಲೂ ಭ್ರೂಮಧ್ಯದಲ್ಲಿ ವಕ್ರಾಚಾರವೇ ಮೂರ್ತೀಭವಿಸಿ ಬಂದಂತೆ ತ್ರಿಪುಂಡ್ರ ಭಸ್ಮಾಂಕಿತವಾದ ಫಾಲದೇಶದಿಂದಲೂ ಕಕ್ಷಗತಯೋಗದಂಡಂಗಳಿಂದಲೂ ಚರಣಾ ಸಕ್ತಪಾದುಕಾಗ್ರವಂ ಸೋಂಕುವ ಕೃಷ್ಣಾಜಿನೋತ್ತರೀಯದಿಂದಲೂ ಮಾನುಷ ಯೋಗಿವೇಷವಂ ಧರಿಸಿ ಮಂತ್ರವಂ ಜಪಿಸುವ ಮಾರೀಚನೋ ಎಂಬಂತೆ ಮುನಿ ರೂಪನ್ನಳವಡಿಸಿ ಜನಗಳಿಗೆ ಮಹಾಯೋಗೀಶ್ವರನೇ ಇವನು ಎಂಬ ಹಾಗೆ ತೋರುತ್ತ ಶಿಷ್ಯರ ಕರಕಲಶಗೋಮಯೋದಕಗಳಿಂ ಶುದ್ಧಿಮಾಗುವ ಮಾರ್ಗ ದಲ್ಲಿ ಬರುತ್ತಿರುವ ಮಾಸೋಪವಾಸಿಯಂ ನೋಡಿಕೊಂಡು ನಂದರು ತಮ್ಮ ಗೂಡಾರದ ಬಳಿಯನ್ನು ಸೇರಿ ಅಲ್ಲಿ ಗಜಗಳಿಂದಿಳಿಯುವಷ್ಟರಲ್ಲಿ ಸಮೀಪಕ್ಕೈತಂದ

ಆ ಯೋಗೀಶ್ವರನಂ ನಿರೀಕ್ಷಿಸಿ ಇವರ್ಯಾರು ? ಎಂದು ಕೇಳಲು; ಆತನ ಶಿಷ್ಯರು ನಂದರಿಗಿಂತೆಂದರು—

ಅಯ್ಯಾ ಭೂಪತಿಗಳಿರಾ, ಪ್ರಯಾಗಕ್ಕೆ ದತ್ತಾತ್ರೇಯ ಮುನಿಗಳು ಬರುವುದಂ ತಿಳಿದು ಗಂಗೋತ್ತರೆಯಿಂದ ಹೊರಟು ಬಂದು ಮನುಷ್ಯರಿಗೆ ಅಲಭ್ಯವಾದ ಆ ದತ್ತಾತ್ರೇಯ ಮಹಾಮುನಿಗಳ ದರ್ಶನವಂ ಮಾಡಿ ಅವರ ಅನುಗ್ರಹವಂ ಪಡೆದು ಈ ಮಾರ್ಗವಾಗಿ ತಮ್ಮಾಶ್ರಮಕ್ಕೆ ಹೋಗುತ್ತಿರುವಲ್ಲಿ ಧರ್ಮನಿರತರಾದ ನಂದರಿಗೆ ಶತ್ರುಪಕ್ಷದ ಪರ್ವತದೇಶೀಯರಾದ ಮ್ಲೇಚ್ಛ ಕಿರಾತಾದಿಗಳ ಆತಂಕವು ಸಂಭವಿಸಿದೆ ಎಂಬ ಇಲ್ಲಿಯ ಭೂಸುರಸ್ತೋಮದ ಭಯನಿವೃತ್ತಿಗೋಸ್ಕರ ಅವರಿಂ ಪ್ರಾರ್ಥಿತರಾಗಿ ತಾವು ಮಾಡುವ ಮಂತ್ರಜಪಾನುಷ್ಠಾನವು ಪ್ರಜಾಪಾಲಕರಾದ ನಿಮ್ಮ ಅಭ್ಯುದಯಾರ್ಥವಾದುದರಿಂದ ಅದು ಸ್ವಾರ್ಥವಾಗಲಾರದೆಂದು ಆರ್ತ್ವಿಜ್ಯವಂ ಕೈಕೊಂಡು ಅನುಷ್ಠಾನವಂ ಮಾಡುತ್ತಿರುವ ಇವರನ್ನು ಮಾಸೋಪವಾಸಿಮುನಿಗಳೆಂದು ಸಜ್ಜನರು ಹೇಳುವರು ಎನಲು; ಅದಂ ಕೇಳಿ ನಂದನು—

ಪೂರ್ವದಲ್ಲಿ ಪುತ್ರಾಪೇಕ್ಷಿಗಳಾದ ನಮ್ಮ ತಂದೆಗಳು ಮಹಾಮುನಿಯ ವಾಕ್ಯಗಳಿಂದ ಪುತ್ರವಂತರಾದರಂತೆ. ಮುನಿಗಳ ವಚನವು ಅನ್ಯಥಾ ಆಗಲಾರದು. ಇವರು ನಮ್ಮಲ್ಲಿ ಅನುಗ್ರಹವಿಟ್ಟು ಆರ್ತ್ವಿಜ್ಯವಂ ಪರಿಗ್ರಹಿಸಿದ ಬಳಿಕ ನಮ್ಮ ಶತ್ರುಗಳು ನಷ್ಟಪ್ರಾಯರೇ ಸರಿ. ಹಾಗಾದರೂ ಎಂದಿಗೆ ಪಲಾಯನಂಗೆಯ್ವಾರು? ತಿಳಿದು ಹೇಳಬೇಕು. ಮುನಿಗಳಿಗೆ ಮೌನವ್ರತವೇನೋ ? ಎನಲು; ಆ ಮಾತಿಗೆ ಮಾಸೋಪವಾಸಿಯು—

ಅಯ್ಯಾ ಅರಸುಗಳಿರಾ, ಸಾಧಾರಣಜನದ ವಾಕ್ಕಲಹಶಾಂತ್ಯರ್ಥವಾಗಿ ಮೌನವು. ಮಹಾತ್ಮರಲ್ಲಿಯೂ ಮರ್ಯಾದಾಪಾಲಕರಲ್ಲಿಯೂ ಮೌನ ಉಂಟೇ ? ಶತ್ರುನಿಗ್ರಹಾರ್ಥವಾಗಿ ಮಾಡುವ ಶೂಲಿನೀಜಪಹೋಮಗಳು ಶುಕ್ರವಾರ ಪ್ರದೋಷಕಾಲಕ್ಕೆ ಸಮಾಪ್ತವಾಗುವುದರಿಂದ ಹೋಮಪೂರ್ಣಾಹುತಿಯ ಸಮಯದಲ್ಲಿ ಶತ್ರುನಿಗ್ರಹಸೂಚಕವಾದ ನಿದರ್ಶನವುಂಟಾಗುವುದು ಎನಲು; ಆ ಮಾತಿಗೆ ನಂದರು—

ಅಯ್ಯಾ ಜಪಕೋವಿದರಾದ ತಪೋಧನರೇ, ಆಗ ಆಗುವ ನಿದರ್ಶನವು ಹೇಗಿರುವುದು ? ಹೇಳಬೇಕು ಎನಲಾಗಿ; ಮಾಸೋಪವಾಸಿಯು—

ಭೂಪತಿಗಳಿರಾ, ಹೋಮಾಂತದಲ್ಲಿ ಪ್ರಧಾನಹೋಮದ್ರವ್ಯಯುಕ್ತವಾದ ಸೃಕ್ಸ್ರವಗಳಂ ಪಿಡಿದು ದೇವಿಯಂ ಧ್ಯಾನಂಗೆಯ್ಯುತ್ತ ಪೂರ್ಣಾಹುತಿಯಂ ಕೊಡುವ ಸಮಯದಲ್ಲಿ ದಿವ್ಯಗಂಧಯುಕ್ತವಾದ ತಂಗಾಳಿಯುಂಟಾಗಿ ಜನರೆಲ್ಲರೂ ನೋಡುವಂತೆ ಮಹಾಪ್ರಭಾಮಂಡಲ ಉದಯಿಸುವುದು. ಬಳಿಕ ಅಗ್ನಿಕುಂಡದಿಂ ದೇವತಾಹಸ್ತವಾವಿರ್ಭವಿಸಿ ಆ ಪೂರ್ಣಾಹುತಿಯಂ ತಾನೇ ಸ್ವೀಕರಿಸುವುದು. ಆ ದರ್ಶನವಿಶೇಷವು ಸುಕೃತಿಗಳಿಗಲ್ಲದೆ ಅನ್ಯರಿಗೆ ಘಟಿಸಲಾರದು ಎಂದನು. ಅದಕ್ಕೆ—

ಅಯ್ಯಾ ಮುನಿವರ್ಯರೇ, ಆ ದೇವತಾಹಸ್ತದರ್ಶನಕ್ಕೆ ನಾವು ಬರಬಹುದೋ? ಎಂದು ಕೇಳಲು—

ಅಯ್ಯಾ ಭೂಪತಿಗಳಿರಾ, ಕುತೂಹಲವಿದ್ದರೆ ಪೂಜ್ಯತಮವಾದ ದೇವತಾದರ್ಶನಕ್ಕೆ ಮಿತ್ರಬಂಧುಜನಪರಿವೃತರಾಗಿ ತಾವೆಲ್ಲರೂ ಬಂದು ದರ್ಶನವಂ ಮಾಡಿ ಪ್ರಸಾದವಂ ಸ್ವೀಕರಿಸಿ ಎಂದಿನಂತೆ ತೆರಳಬಹುದು. ದೇವತಾಹಸ್ತವದೃಶ್ಯವಾಗಲು ಆಗ ಶತ್ರುಗಳು ಅಶಕ್ಯವಾದ ಕುಕ್ಷಿಶೂಲೋಪದ್ರವದಿಂದ ಒಂದು ಯಾಮದೊಳಗೆ ಹತರಾಗುವುದು ಸಿದ್ಧವು. ದಿನ ನಾಲ್ಕರಲ್ಲಿ ದೇವತಾಹುತಿರೂಪವಾಗಿ ಉದ್ದೇಶವಂ ಮಾಡಿರುವ ಶತ್ರುಸೇನೆಯು ಹಾಗೇ ಹತವಾಗುವುದು. ಇದಂ ಸತ್ಯವೆಂದು ಭಾವಿಸಬೇಕು. ಮನೋಭೀಷ್ಟಲಾಭವುಂಟಾದಬಳಿಕ ಬ್ರಾಹ್ಮಣ್ಯದಲ್ಲಿ ನಿಮಗೆ ಗೌರವವು ಚಲಿಸದೇ ಇದ್ದರೆ ಅದೇ ನೀವು ನಮಗೆ ಕೊಡುವ ಜಪದಕ್ಷಿಣೆಯು ಎಂದನು. ಆ ಮಾತಿಗೆ ನಂದರು ಮಹಾ ಸಂತೋಷಪಟ್ಟು ತಮ್ಮೊಳಗೆ ತಾವೇ ಆ ದಿವಸ ದೇವತಾಹಸ್ತದರ್ಶನಕ್ಕೆ ನಾವೂ ಹೋಗಿ ಬರಬೇಕೆಂದು ಹೇಳಿಕೊಳ್ಳುತ ಈ ಮುನಿಗಳು ಮಹಾ ವಿರಕ್ತರೆಂದು ಸ್ತುತಿಸುತ್ತ ಅವರ ಶಿಷ್ಯರಂ ನೋಡಿ—

ಅಯ್ಯಾ ಮುನಿಶಿಷ್ಯರೇ, ಪೂರ್ಣಾಹುತಿಯ ಸಮಯವಂ ತಿಳಿದು ನಮಗೆ ಜ್ಞಾಪಕವಂ ಮಾಡಿದರೆ ನಾವೆಲ್ಲರೂ ಬರುತ್ತೇವೆ ಎನಲು ; ಶಿಷ್ಯರು—

ಹಾಗೇ ಆಗಲಿ. ಜಪಶಾಲೆಯ ಸುತ್ತಲೂ ಶೂದ್ರಾದಿಗಳ ದರ್ಶನವಾಗದಂತೆ ಆಜ್ಞಾಪಿಸಬೇಕು ಎಂದರು. ಆ ಮಾತಿಗೆ ನಂದರು ಹಾಗೇ ಆದೀತೆಂದು ದೂತರ ಮುಖವಂ ನೋಡಿ—

ಎಲೈ, ಜಪಶಾಲೆಯ ಸುತ್ತಲೂ ಒಂದು ಹರಿದಾರಿಯ ವರೆಗೂ ಶೂದ್ರಾದಿಗಳು ಕಾಣಿಸದಂತೆ ಮಾಡಿ ಬ್ರಾಹ್ಮಣ ಪರಿಕಾರರು ಕಾವಲಿರುವ ಹಾಗೆ ನೇಮಿ

ಸತಕ್ಕುದು ಎಂದು ಹೇಳಿ ಆ ಮುನಿಗೆ ಅಭಿವಂದಿಸಿ ಕಳುಹಿಸಿ ಸುವರ್ಣಕಲಶ ಸಹಸ್ರಗಳಿಂ ಶೋಭಿಸುವ ಹಿಮಾಚಲದಂತೆ ಅತ್ಯುನ್ನತವಾಗಿ ಮುಕ್ತಾಮಯ ವಾದ ಮೇಲುಕಟ್ಟುಗಳಿಂದ ದೇವೇಂದ್ರಭವನದಂತೆ ಹೊಳೆಯುತ್ತಿರುವ ತಮ್ಮ ಗೂಡಾರವಂ ಪ್ರವೇಶಿಸಿ ಪುಷ್ಪಮಾಲಾಲಂಕಾರದಿಂ ಮನೋಹರಮಾದ ಮೃದು ಶಯನದಲ್ಲಿ ಕುಳಿತು ಆಪ್ತಮಿತ್ರರಾದ ರಾಜಕುಮಾರರಿಂಯುತರಾಗಿ ರಾಜಭೋ ಗಂಗಳಂ ಪರಿಗ್ರಹಿಸುತ್ತಿದ್ದರು. ಹಾಗೇ ನಂದರ ಸಂಗಡ ಬಂದ ಸೇನಾಜನರು ತಮ್ಮ ತಮ್ಮ ಗೂಡಾರಗಳಲ್ಲಿ ವಿಶ್ರಮಿಸಿಕೊಂಡು ತಮ್ಮ ತಮ್ಮ ಅಧಿಕಾರಂಗಳಂ ನೋಡುತ್ತಿದ್ದರೆಂಬಲ್ಲಿಗೆ ಮುದ್ರಾಮಂಜೂಷವೆಂಬ ಗ್ರಂಥದಲ್ಲಿ ನಂದಪ್ರಯಾಣ ಕಥನವೆಂಬ ಷಷ್ಠಾಶಯವು ಸಮಾಪ್ತಮಾದುದು.

---

## ಸಪ್ತಮಾಶಯದ ಪ್ರಾರಂಭವು.

---

### ನಂದರ ಯುದ್ಧವು

ಹೀಗಿರುವಲ್ಲಿ ಪಾಟಲೀಪುರವಾಸಿಗಳಾದ ಜನರು ಶತ್ರುಸೇನೆ ಬರುವ ಮೂಲವಂ ನಿಶ್ಚಯವಾಗಿ ತಿಳಿಯದೆ ತಮ್ಮ ತಮ್ಮ ಮನ ಬಂದಂತೆ ಮಾತನಾಡಿ ಕೊಳ್ಳುತ್ತಿದ್ದರು. ಏನಂದರೆ, ವೈದಿಕಸಂಘದಲ್ಲಿ—ಪರ್ವತರಾಜನೆಂಬವನು ಗಯಾ ಶ್ರಾದ್ಧವಂ ಮಾಡಿ ಕಾಶೀಯಾತ್ರಾರ್ಥವಾಗಿ ಈ ಮಾರ್ಗದಲ್ಲಿ ಬರುತ್ತಿದ್ದಾ ನಂತೆ. ಆತನು ಬಹಳ ವಿತರಣಶಾಲಿಯಂತೆ. ನಾವೆಲ್ಲರೂ ಆತನ ಸಂಗಡ ಹೋದರೆ ಘೃತ ಸೂಪ ಭಕ್ಷ್ಯ ದಧಿ ಮಧು ಕ್ಷೀರ ಶಾಕ ಪಾಕ ವ್ಯಂಜನಾದಿ ಗಳಿಂ ಯುಕ್ತವಾದ ಮೃಷ್ಟಾನ್ನಭೋಜನವೂ ಬಹು ದಕ್ಷಿಣೆಗಳೂ ದೊರಕು ವುವು. ಏನೈ ಮಲ್ಲಿಭಟ್ಟರೇ, ಎಲೈ ಬಂದಿಭಟ್ಟರೇ, ನಾವು ಹೊರಡೋಣವೇ? ಎಂದೂ ಓಯಿ ಕಿಚ್ಚಂಭಟ್ಟಲೂ ಪಾಪಾಶಾಸ್ತ್ರಲೂ ಮನಚಿಟ್ಟಗಾಸಿಕಿ ವಿವಾ ಹಶ್ರಾದ್ಧಂ ಕಾವಲಸಿಯುನ್ನದಿ ಇದೇ ಸಮಯಮು. ನಡವಂಡೋಯಿ ಎಂದೂ ಹವೇ ಕುಪ್ಪುಶಾಸ್ತ್ರಿಗಳೇ ಇವನಾದರೋ ಓರ್ವಂ ರಾಜಾವರಾನಾಂ. ಬಹು ವಾಯ್ ಕುಡುಕರಾನಾಂ. ಅಣ್ಣಾ ವಾಧ್ಯಾರಯುಂ ಕೂಟ್ಟಿಕೊಂಡ್ ನೀಂಗಳ್ ವಂದೀರಾನಾಲ್ ಉಂಗಳುಕ್ಕುಂ ಕುಡುಪ್ಪಿಚ್ ಕುಡುಕ್ಕರೇನ್. ವರ್‌ದಾನಾಲ್

ವರ್ಲಾಂ ಎಂದೂ ಕರ್ನಾಟಕಾಂಧ್ರದ್ರಾವಿಡವೈದಿಕರು ಮಾತನಾಡಿಕೊಳ್ಳು ತ್ತಿದ್ದರು.

ನಂದರ ಮೇಲೆ ಕೋಪವಂ ಮಾಡಿದ ಬ್ರಾಹ್ಮಣನಿಂ ಸಮೇತನಾದ ಚಂದ್ರ ಗುಪ್ತನು ಯಾವನೋ ಒಬ್ಬ ಅರಸನನ್ನು ಸಹಾಯವಾಗಿ ಮಾಡಿಕೊಂಡು ದಂಡೆತ್ತಿಬರುತ್ತಿದ್ದಾನಂತೆ ಎಂದು ಕ್ಷತ್ರಿಯರ ಗೃಹಗಳಲ್ಲೆಲ್ಲಾ ಹೇಳುತ್ತಿದ್ದರು. ಭದ್ರಭಟಡಿಂಗಿರಾತರು ಶತ್ರುಗಳ ಮೇಲೆ ಯುದ್ಧವಂ ಮಾಡಿ ಅವರ ಹೆಂಡಿರಂ ಹಿಡಿದುಕೊಂಡು ಸುಂದರದುರ್ಗಕ್ಕೆ ಸಾಗಿಸಿದರಂತೆ ಎಂದು ವೀರಪತ್ನಿಯರು ಆಡಿಕೊಳ್ಳುತ್ತಿದ್ದರು.

ಈ ಪುರದಿಂದ ನಂದರು ಹೊರಟುಹೋದಬಳಿಕ ಶತ್ರುಗಳು ಅಮಾತ್ಯ ರಾಕ್ಷಸನಂ ಹಿಡಿದುಕೊಂಡುದರಿಂದ ನಂದರು ಮತ್ತೊಬ್ಬ ಪುರುಷನಿಗೆ ರಾಕ್ಷಸನ ವೇಷವಂ ಹಾಕಿ ತಮ್ಮ ಸಮೀಪದಲ್ಲಿ ಇಟ್ಟುಕೊಂಡಿದ್ದಾರಂತೆ ಎಂದು ಮುಗ್ಧ ಜನರು ಹೇಳಿಕೊಳ್ಳುತ್ತಿದ್ದರು.

ಮತ್ತು ಒಬ್ಬಳು—ಪರ್ವತರಾಜನೆಂಬವನು ಮಹಾ ದುಷ್ಟರಾಜನಂತೆ. ಅವನಿಗೆ ಸಹಾಯವಾಗಿ ಬಂದಿರುವಂಥವರು ಅವನಿಗಿಂತ ದುರ್ಮಾರ್ಗರಂತೆ. ಅವರು ಯಾರ್ಯಾರು ಅಂದರೆ—ಶಕ ಯವನ ಕಿರಾತ ಹೂಣ ಬರ್ಬರಾಧಿಪತಿಗಳೇ ಹೊರತು ಕ್ಷತ್ರಿಯಕುಲೋತ್ಪನ್ನರಾಗಿ ಸತ್ಕುಲಪ್ರಸೂತರಾಗಿ ಸನ್ಮಾರ್ಗಿಗ ಳಾಗಿ ಧರ್ಮನಿರತರಾಗಿ ಇರುವಂಥಾ ರಾಜಾಧಿರಾಜರು ಅವನ ದಂಡಿನಲ್ಲಿ ಒಬ್ಬರೂ ಇಲ್ಲವಂತೆ. ಅವನ ಸೇನಾಜನರು ಸುಂದರಿಯರಾದ ಸ್ತ್ರೀಯರಂ ಹಿಡಿದು ಪೀಡಿಸಿ ಕೆಡಿಸುತ್ತಾರಂತೆ. ಎಳೆಯ ಮಕ್ಕಳನ್ನು ಬೇಸರಗೊಳ್ಳದೆ ತಿನ್ನುತ್ತಾರಂತೆ. ಇಂಥಾ ಶಿಶುಹತ್ಯಸ್ತ್ರೀಹತ್ಯಗೋಹತ್ಯಗಳಿಗೆ ಸಹ ಹೇಸದೆ ಇರುವಂಥವರಿಗೇ ಈ ಕಲಿಯುಗದಲ್ಲಿ ಜಯವಾಗುವುದು ನಿಶ್ಚಯ. ಹಾಗೇನಾದರೂ ಅವರಿಗೆ ಜಯವಾ ದಲ್ಲಿ ನಮ್ಮ ಪಟ್ಟಣವನ್ನು ಸೂರೆಮಾಡದೇ ಬಿಡುವುದಿಲ್ಲ. ನಾವು ಅವರ ಕೈಗೆ ಸಿಕ್ಕಿದರೆ ನಮಗೆ ಏನು ಗತಿ? ನನ್ನ ಗಂಡನು ಅಧಮನು. ನಾನು ಪ್ರಾಣವನ್ನು ಬಿಟ್ಟೇನಂದರೆ ಆತನ ಶುಶ್ರೂಷೆಯಂ ಮಾಡುವುದಕ್ಕೆ ಮತ್ತೊಬ್ಬರು ಗತಿ ಇಲ್ಲ ವಾದಕಾರಣ ನಾನು ಸಾಯಲು ಆತನು ಪ್ರಾಣವಂ ಬಿಡುತ್ತಾನೆ. ಆ ಮೇಲೆ ಆತ್ಮ ಹತ್ಯಾದೋಷ ಒಂದು, ಪತಿಹತ್ಯಾದೋಷ ಒಂದು ಈ ಎರಡು ದೋಷಗಳೂ ಸಂಭ ವಿಸುವುವು. ಇದಕ್ಕೇನುಮಾಡಲಿ? ಸಾಯದೇ ಇದ್ದರೆ ಆ ದುಷ್ಟರು ಬಂದು ಕೆಡಿ ಸುವರು. ನನಗೊಂದು ಉಪಾಯವಂ ನೀವು ಹೇಳಿಕೊಡಬಾರದೇ? ಎಂದೂ—

ಮತ್ತೊಬ್ಬಳು—ನಾನೇನು ಹೇಳಲಿ? ನನ್ನ ತಾಯಿತಂದೆಗಳಿಗೆ ನಾನೊಬ್ಬಳೇ ಮಗಳು. ನನ್ನ ಅತ್ತೆಮಾವಂದರಿಗೆ ನನ್ನ ಗಂಡನೊಬ್ಬನೇ ಮಗನು. ಈ ದುಃಖವಂ ನೆನಸಿಕೊಂಡು ತಂದೆತಾಯಿಗಳು ಅತ್ತೆಮಾವಂದಿರು ಸಹ ನಿನ್ನೇ ದಿವಸದಿಂದ ಅನ್ನಾಹಾರವಂ ಬಿಟ್ಟು ಮಹಾ ಚಿಂತಾಕ್ರಾಂತರಾಗಿ ಬಿದ್ದಿದ್ದಾರೆ. ಇದಕ್ಕೆ ನನಗೇನು ಗತಿ? ನೀನು ಹೇಳು ಎಂದೂ—

ಮತ್ತೊಬ್ಬಳು—ನಾನು ಬಹು ಸುಂದರಿಯೂ ಗುಣವಂತೆಯೂ ಪತಿಭಕ್ತಿಯುಳ್ಳವಳೂ ಆಗಿರುವುದರಿಂದ ನನ್ನ ಗಂಡನು ಒಂದು ನಿಮಿಷವಾದರೂ ನನ್ನಂ ಅಗಲಿರಲಾರನು. ಈಗ ಬಂದಿರುವ ವಿಪತ್ತಂ ನನ್ನ ಗಂಡನು ಯೋಚಿಸಿಕೊಂಡು ವ್ಯಸನದಲ್ಲಿಯೇ ಮುಳುಗಿ ಇದ್ದಾನೆಂದೂ—

ಇನ್ನೊಬ್ಬಳು—ಎಲೆ ಅಕ್ಕಾ, ನನಗೆ ಮಕ್ಕಳಿಲ್ಲದಕಾರಣ ಬಹುತರವಾಗಿ ದೇವತಾಪ್ರಾರ್ಥನೆಯಂ ಮಾಡಿ ಗರ್ಭಿಣಿಯಾಗಿ ಗಂಡು ಕೂಸನ್ನು ಹೆತ್ತು ಏಳು ತಿಂಗಳಾಯಿತು. ನನಗೆ ನನ್ನ ಗಂಡನೊಬ್ಬನೇ ಹೊರತು ಹೊಕ್ಕ ಮನೆಯಲ್ಲಿಯೂ ತವರುಮನೆಯಲ್ಲಿಯೂ ಮತ್ತೊಬ್ಬರು ಪಾಲಕರಿಲ್ಲ. ಮಗುವೋ! ಪೂರ್ಣಚಂದ್ರನ ಹಾಗೆ ಇದೆ. ಮುಂದೆ ಏನು ಅವಸ್ಥೆಗೆ ಗುರಿಯಾಗುತ್ತೇನೋ? ಕಾಣೆನಲ್ಲಾ! ಎಂದೂ—

ಮತ್ತೊಬ್ಬಳು—ಯಾಕೆ ಇಷ್ಟು ಸಂಕಟಪಡುತ್ತೀರಿ? ನಾವೆಲ್ಲರೂ ನಮ್ಮ ನಮ್ಮ ಗಂಡಂದಿರುಮಕ್ಕಳು ಸಹಿತವಾಗಿ ಗಂಗಾಪ್ರವೇಶವಂ ಮಾಡಿದರೆ ಆ ದುಷ್ಟರ ಕೈಗೆ ಸಿಕ್ಕುವುದೂ ಇಲ್ಲ. ನಮಗೆ ದೋಷಗಳೂ ಇಲ್ಲ. ಪರಲೋಕದಲ್ಲಿ ಸದ್ಗತಿಯೂ ಉಂಟಾಗುವುದು. ಇದಕ್ಕೇನು ಚಿಂತೆಪಡುತ್ತೀರಿ? ಎಂದೂ—

ಇನ್ನೊಬ್ಬ ಕನ್ಯಕೆಯು—ಇದೆಂತಾ ಆಲೋಚನೆ? ಯಾರ ಯಾರ ಹಣೆಯಲ್ಲಿ ಹೇಗೆ ಹೇಗೆ ವಿಧಿ ಬರೆದಿದ್ದಾನೋ ಆ ಮೇರೆ ಆಗುತ್ತದೆ. ನಾವು ಒಂದನ್ನೂ ತಿಳಿಯದೆ ಪ್ರಾಣವಂ ಬಿಡುವುದು ಯುಕ್ತವಲ್ಲ. ದೇವರು ಮಾಡಿಸಿದುದಾಗುತ್ತದೆ ಎಂದೂ—

ಮತ್ತೊಬ್ಬಳು—ಯಾಕೆ ಎಲ್ಲರೂ ಇಷ್ಟು ಚಿಂತೆಪಡುತ್ತೀರಿ? ಆ ದಂಡಿನಲ್ಲಿ ಚಾಣಕ್ಯನೆಂಬ ಒಬ್ಬ ಬ್ರಾಹ್ಮಣನಿದ್ದಾನಂತೆ. ಅವನು ಸಕಲ ಶಾಸ್ತ್ರವನ್ನೂ ಓದಿರುವನಂತೆ. ಆ ಪರ್ವತರಾಜನು ಆ ಚಂದ್ರಗುಪ್ತನು ಮೊದಲಾದ ಎಲ್ಲಾ ದೊರೆಗಳೂ ಆ ಬ್ರಾಹ್ಮಣನ ಆಜ್ಞೆಯ ಪ್ರಕಾರವೇ ನಡೆಯುತ್ತಾರಂತೆ. ಹೀಗಿ

ರುವಲ್ಲಿ ಈ ಸೇನಾಜನರು ದುಷ್ಟ ಕಾರ್ಯವನ್ನು ಹೇಗೆ ಮಾಡಿಯಾರು ? ಒಂದು ವೇಳೆ ಮಾಡಿದಾಗ್ಯೂ ಆ ಬ್ರಾಹ್ಮಣನಲ್ಲಿ ಹೋಗಿ ನಾವು ಮೊರೆಯಿಟ್ಟರೆ ಬಿಡಿಸುವನು. ನೀವು ಚಿಂತೆಪಡಲೇಕೆ? ಎಂದೂ—

ಮತ್ತೊಬ್ಬಳು—ಅಯ್ಯೋ! ಆ ಬ್ರಾಹ್ಮಣ ಮುಂಡೇಗಂಡನು ಅಂಥ ಒಳ್ಳೆಯವನಾದರೆ ತನ್ನ ಬ್ರಾಹ್ಮಣಕರ್ಮವಂ ಬಿಟ್ಟು ಧರ್ಮಿಷ್ಠರಾದ ನವನಂದರನ್ನು ಸಂಹರಿಸಿ ಜುಟ್ಟಂ ಕಟ್ಟುವೆನೆಂದು ಪ್ರತಿಜ್ಞೆಯಂ ಮಾಡಿ ಶಿಖೆಯಂ ಬಿಚ್ಚಿಕೊಂಡು ಈ ಕೆಟ್ಟ ದೊರೆಗಳಂ ಕಟ್ಟಿಕೊಂಡು ಬ್ರಾಹ್ಮಣನಿಗೆ ಯೋಗ್ಯವಾಗದ ಕೆಲಸದಲ್ಲಿ ಅಹೋರಾತ್ರಿಯಲ್ಲಿಯೂ ಆಸಕ್ತನಾಗಿರುವನೇ? ಅಂಥವನಿಗೆ ಕರುಣವೆಂದರೆ ಏನು ? ತನ್ನ ಜಾತಿಧರ್ಮವಂ ತ್ಯಜಿಸಿ ನಡೆಯುವವನು ಯಾವ ಕಾರ್ಯಕ್ಕೆ ತಾನೇ ಸಮ್ಮತಿಸನು ? ಎಂದೂ—

ಮತ್ತೊಬ್ಬಳು—ಇದೆಂಥ ಮಾತರೇ! "ರಾಜಾರಾಷ್ಟ್ರಕೃತಂಪಾಪಂ ರಾಜಪಾಪಂ ಪುರೋಹಿತಃ" ಎಂಬಂತೆ ಪ್ರಜೆಗಳಾಗಿರುವ ನಾವು ಅನ್ಯಾಯದಲ್ಲಿ ಪ್ರವರ್ತಿಸಿದ ಕಾರಣ ನಮ್ಮ ದೊರೆಗಳಿಗೆ ಇಂಥ ವಿಪತ್ತು ಬಂದಿದೆ. ಆದ ನಿಮಿತ್ತದಿಂದ ನಾವು ಮಾಡಿದ ಪಾಪವನ್ನು ನಾವೇ ಅನುಭವಿಸಬೇಕಲ್ಲದೆ ಮತ್ತೊಬ್ಬರನ್ನು ಯಾಕೆ ಬಯ್ಯಬೇಕು ? ಎಂದೂ—

ಇನ್ನೊಬ್ಬಳು—ಇದು ಯಾರ ದೋಷವೂ ಅಲ್ಲ. "ಯೌವನಂ ಧನಸಂಪತ್ತಿಃ ಪ್ರಭುತ್ವಮವಿವೇಕತಾ। ಏಕೈಕಮಪ್ಯನರ್ಥಾಯ ಕಿಮುತತ್ರಚತುಷ್ಟಯಂ" ಎಂಬಂತೆ ನಂದವಂಶದಲ್ಲಿ ಒಬ್ಬರೂ ಆಚರಿಸದಂಥ ಅನ್ಯಾಯಕೃತ್ಯವನ್ನು ನವನಂದರು ಮಾಡಿದರು. ಅವರು ಮಾಡಿದುದೇ ಅವರಿಗೆ ಬಂದಿತು ಎಂದೆನಲು—.

ಅದೇನಿರಮ್ಮ, ನವನಂದರು ಮಾಡಿದುದು? ಎಂದು ಮತ್ತೊಬ್ಬಳು ಕೇಳಲು ; ಅಯ್ಯೋ! ಈ ವರೆಗೂ ನೀನು ಕೇಳಲಿಲ್ಲವೇ? ಅವರು ಮಾಡಿದ ದುಷ್ಟಕಾರ್ಯವು ಜನಜನಿತವಾಗಿದೆ. ಪರಮಧರ್ಮಿಷ್ಠನಾದ ಮೌರ್ಯನನ್ನೂ ಅವನ ತೊಂಭತ್ತೊಂಭತ್ತು ಮಂದಿ ಮಕ್ಕಳನ್ನೂ ಮೋಸದಿಂದ ಸೆರೆಮನೆಯೊಳಗೆ ಹಾಕಿ ಅವರಿಗೆ ಅನ್ನಾಹಾರಗಳಂ ಕೊಡದೆ ಅನ್ಯಾಯವಾಗಿ ಕೊಂದುಹಾಕಿದರು. ದೈವವು ಅವರು ಮಾಡಿದ ಅಕೃತ್ಯಕ್ಕೆ ಪ್ರಾಯಶ್ಚಿತ್ತವಂ ಮಾಡಲೋಸುಗ ಚಂದ್ರಗುಪ್ತನೊಬ್ಬನಂ ಉಳಿಸಿರಲು; ಅವನನ್ನೂ ಉಪಾಯದಲ್ಲಿ ಕೊಲ್ಲಬೇಕೆಂದು ಅನ್ನಸತ್ರದ ಅಧಿಕಾರದೊಳಗೆ ಇಟ್ಟು ಇದ್ದರಂತೆ. ಅವನು ಈ ಚಾಣಕ್ಯ

ನೆಂಬ ಬ್ರಾಹ್ಮಣನನ್ನು ಮಹಾತೇಜಸ್ವಿಯೂ ಸಕಲನೀತಿಶಾಸ್ತ್ರಪ್ರವೀಣನೂ
ಎಂದು ತಿಳಿದು ಆತನಿಗೆ ಶರಣಾಗತನಾಗಲು; ಆತನು—ನನ್ನನ್ನು ನವನಂದರು
ಅವಮಾನಪಡಿಸಿದರೆ ಅವರಂ ಸಂಹರಿಸಿ ನಿನಗೆ ನಂದರಾಜ್ಯಮಂ ಕೊಡಿಸುವೆನೆಂದು
ಅಭಯಮಂ ಕೊಟ್ಟು ಸತ್ರದಲ್ಲಿ ನಂದರ ಸಿಂಹಾಸನದ ಮೇಲೆ ಬಂದು ಕುಳಿತು
ಕೊಂಡು ಇದ್ದನಂತೆ. ಈ ನಂದರು ಪಾಪಿಷ್ಠರಾದ ಕಾರಣದಿಂದ ತಮ್ಮ ಐಶ್ವರ್ಯ
ಹಾನಿಗೋಸುಗ ಬ್ರಾಹ್ಮಣನು ಪೂಜ್ಯನೆಂದು ತಿಳಿಯದೆ ತಮ್ಮಾಸನದ ಮೇಲೆ
ಕುಳಿತಿದ್ದಾನಲ್ಲಾ ! ಎಂಬ ಕೋಪದಿಂದ ಆತನಿಗೆ ಅವಮಾನಂಗೆಯ್ದರಂತೆ. ಅದ
ಕ್ಕಾಗಿ ಆ ಬ್ರಾಹ್ಮಣನು ನಂದರಂ ಸಂಹರಿಸುವೆನೆಂದು ಪ್ರತಿಜ್ಞೆಯಂ ಮಾಡಿ
ಶರಣಾಗತನಾದ ಚಂದ್ರಗುಪ್ತನಿಗೆ ಅಭಯಮಂ ಕೊಟ್ಟು ಇಷ್ಟು ಯತ್ನಮಂ
ಮಾಡಿದ್ದಾನೆ. ಅವನ ಮೇಲೆ ಏನಿರೇ ತಪ್ಪು ? ಹಿಂದೆ ಭಾರತ ಯುದ್ಧದಲ್ಲಿ
ದ್ರೋಣಾಚಾರ್ಯಾದಿಬ್ರಾಹ್ಮಣರು ದುಷ್ಟರಾದ ಕೌರವರಲ್ಲಿ ಸಂಬಳಕ್ಕೆ ನಿಂತು
ಧರ್ಮಿಷ್ಠರಾದ ಪಾಂಡವರ ಮೇಲೆ ಯುದ್ಧಮಂ ಮಾಡಿದರಷ್ಟೆ. ಈ ಚಾಣಕ್ಯರು
ಅವರಂತೆ ಬೇರೇ ಅಲ್ಲ. ತಾವು ಯುಕ್ತಿಯಂ ಹೇಳುತ್ತ ದೊರೆಗಳಿಂದ ನಂದರಂ
ಸಂಹರಿಸಿ ಶರಣಾಗತಪರಿಪಾಲನೆಯಂ ಮಾಡುತ್ತಾರೆಂದೂ—

ಮತ್ತೊಬ್ಬ ಪ್ರೌಢೆಯು—ಹೋ ! ಹೋ ! ಒಬ್ಬರೂ ವ್ಯಸನಪಡಬೇಡಿರಿ.
ನಾನು ಈ ವರೆಗೂ ಹೇಗೋ ? ಎಂದು ಇದ್ದೆನು. ಈಗ ನಮಗೆ ಯಾವ ವಿಧ
ವಾದ ಭಯವಾದರೂ ಇಲ್ಲ. ನಂದರು ಜಯಿಸಿದರಂತೂ ಸರಿಯೇ ಸರಿ ! ಒಂದು
ವೇಳೆ ಅವರು ಅಪಜಯವನ್ನು ಹೊಂದಿದರೂ ನಮ್ಮ ದೊರೆಗಳ ವಂಶದಲ್ಲಿ
ಹುಟ್ಟಿದ ಚಂದ್ರಗುಪ್ತನೇ ನಮಗೆ ದೊರೆಯಾಗುವುದರಿಂದ ಆತನಿಗೆ ಸಹಾಯವಾಗಿ
ಬಂದವರು ಆತನ ಪಟ್ಟಣದಲ್ಲಿರುವ ನಮ್ಮನ್ನು ಏನೂ ಮಾಡಲಾರರು ಇದಕ್ಕೆ
ಚಿಂತೆಪಡಬೇಡಿರಿ ಎಂದೂ, ಹೀಗೆ ನಾನಾವಿಧವಾಗಿ ಹೆಂಗಸರು ಮಾತಾಡಿಕೊಳ್ಳು
ತ್ತ ಇದ್ದರು.

ವರ್ತಕರ ಬೀದಿಯಲ್ಲಿ ಜನರು ಗುಂಪುಗುಂಪಾಗಿ ಕೂಡಿಕೊಂಡು ಮಾತಾ
ಡುತ್ತಿದ್ದರು. ಅವರಲ್ಲಿ ಒಬ್ಬನು—ಈ ಹಾಳಾದ ರಾಜಕಾರ್ಯವು ಬಂದುದರಿಂದ
ದೇಶಾಂತರಗಳಿಗೆ ಹೋಗಿ ಏನಾದರೂ ಒಂದು ವ್ಯಾಪಾರವಂ ತರುವುದಕ್ಕೂ
ಮತ್ತೊಂದು ಕಡೆಗೆ ಹೋಗಿ ಅದನ್ನು ಮಾರಿಕೊಳ್ಳುವುದಕ್ಕೂ ಮಾರ್ಗವಿಲ್ಲ.
ಸಾಹುಕಾರನ ಹೇಕ್ಕೆಲ್ಲಾ ಸರಕುಗಳಂ ತಂದು ಮನೆಯಲ್ಲಿ ತುಂಬಿಕೊಂಡು
ಬಹಳ ದಿವಸಗಳಾದುವು. ಜಿನಸುಗಳೆಲ್ಲಾ ಹುಳಿತು ಕೊಳತು ಹಾಳಾಗಿ ಹೋಗು

ತ್ತಿವೆ. ಸಾಹುಕಾರನಿಗೆ ಕೊಡಬೇಕಾದ ಚುಂಗಡಿಯು ವಿಷವೇರುವಂತೆ ಹಾಗೆ ಏರುತ್ತಿದೆ. ಮನೆಯಲ್ಲಿ ದರಿದ್ರಕ್ಕೆ ಕೂರೆ ಹೆಚ್ಚಿದ ಹಾಗೆ ಹಾಳು ಮಕ್ಕಳು ಮರಿಗಳು ಸೊಸೆಯರು ಮುಂತಾದವರು ಜಿನಸುಗಳನ್ನೆಲ್ಲಾ ತಿಂದು ಹಾಳುಮಾ ಡುತ್ತಾರೆ. ಹಾಳು ಹೆಗ್ಗಣದ ಉಪದ್ರವವಂತು ಹೇಳುವುದಕ್ಕೇ ತೀರದು. ಅದೊಂದುಕಡೆಯಲ್ಲಿ ನನ್ನ ತಲೆಯ ಮೇಲೆ ಕಲ್ಲುಹಾಕುತ್ತದೆ. ಎಷ್ಟು ಜೋನುಗಳನ್ನು ಮಾಡಿಕೊಂಡಾಗ್ಗೂ ಸಿಡಿ ಬಡ್ಡಿಕೊಂಡಾಗ್ಗೂ ಇದ್ದೇ ಇದೆ. ಇದರಿಂದ ನಾನು ಮುಳುಗಿಹೋಗುವ ಸಂಗತಿ ಬಂದಿತು. ಈ ಹಾಳಾದ ಚಾಣ ಕ್ಯನು ನನ್ನ ಭಾಗಕ್ಕೆ ಶನೀಶ್ವರನಾಗಿ ಈ ಊರಿಗೆ ಬಂದನು ಎಂದು ಹೇಳಲು—

ಮತ್ತೊಬ್ಬನು—ನಿನಗೇನು ? ಕೊಟ್ಟವನು ಕೆಟ್ಟನು. ಈ ಕಷ್ಟಕಾಲದಲ್ಲಿ ತಿಂದುದೇ ಬಂದಿತು. ನೀನೂ ನಿನ್ನ ಮನಸ್ಸಿಗೆ ಬಂದಂತೆ ಪದಾರ್ಥಗಳಂ ಖರ್ಚು ಮಾಡಿ ಉಣ್ಣುತ್ತ ನಮ್ಮಂಥ ಮಕ್ಕಳಂದಿಗರಾದ ಬಡವರಿಗೂ ಕೊಡುತ್ತ ಇನ್ನೂ ನಿನ್ನ ಸ್ನೇಹಿತರಿಗೂ ಕೊಟ್ಟಲ್ಲಿ ಈ ಪುಣ್ಯವು ಹೆಚ್ಚಾದೀತೆ ಹೊರತು ಕೊಟ್ಟವನಿಗೆ ಮೋಸವನ್ನು ಮಾಡಿದ ಪಾಪ ಬೇರೆ ಹೆಚ್ಚಾಗುವುದಿಲ್ಲ ಎನಲು—

ಮತ್ತೊಬ್ಬನು—ನೀನು ಒಳ್ಳೆಯ ಆಪ್ತನಯ್ಯಾ ! ನಿನ್ನ ಸಂಗಡ ಆ ಸೆಟ್ಟಿ ಹೇಳಿದುದಕ್ಕೆ ಎಲ್ಲವನ್ನೂ ನನಗೆ ಕೊಟ್ಟು ನಿನ್ನ ಬಾಯಲ್ಲಿ ಮಣ್ಣು ಹಾಕಿಕೋ ಎಂದು ಬುದ್ಧಿಯಂ ಹೇಳಿಕೊಡುತ್ತೀಯೇ. ಹೀಗೆ ದುರ್ಬುದ್ಧಿಯಂ ಹೇಳಿಕೊಟ್ಟು ಹಿಂದೆ ಎಷ್ಟು ಜನರ ಮನೆಯನ್ನು ಹಾಳುಮಾಡಿರುವೆಯೋ ? ಅದರಿಂದಲೇ ನಿನಗೆ ಬಹು ಜನ ಮಕ್ಕಳಾಗಿ ಕುಡಿಯುವುದಕ್ಕೆ ಗಂಜಿಯೂ ಗತಿ ಇಲ್ಲದೆ ದರಿದ್ರನಾಗಿ ಯಾರಿಗೋ ಮೋಸವನ್ನು ಮಾಡಿ ಒಂದು ಅಂಗಿ ಬಂದು ರುಮಾಲು ಇಟ್ಟು ಕೊಂಡು ಹಡಗಿಗೆ ಸಂಚಕಾರವನ್ನು ಕೊಟ್ಟಂತೆ ನಾನೂ ಒಬ್ಬ ಸೆಟ್ಟಿ ಎಂದು ತಿರುಗುತ್ತೀಯೇ. ಇಂಥ ಮಾತು ಹೇಳಿದರೆ ಯಾವ ಗೃಹಸ್ಥರು ಒಪ್ಪುವರು ? ಛೀ ! ಛೀ ! ಹೋಗೆನಲು—

ಮತ್ತೋರ್ವವರ್ತಕನು—ಅಯ್ಯಾ ಸೆಟ್ಟಿಗಳೇ, ಆ ಸೆಟ್ಟಿಯು ಹೇಳಿದ ಮಾತಿನಲ್ಲಿ ಏನು ತಪ್ಪು ? ಜನರು ತಿಂದು ಹೆಗ್ಗಣ ತಿಂದು ಹುಳಿತುಹೋಗಿ ಅನ್ಯಾ ಯವಾಗಿ ನಾಶವಾಗುವುದಕ್ಕಿಂತಲೂ ತ್ಯಾಗಭೋಗಗಳಿಂದ ವ್ಯಯವಾದರೆ ಪುಣ್ಯ ವಾದರೂ ಉಂಟು ಎಂದು ಹೇಳಿದ ಮಾತು ನಿಮ್ಮೊಬ್ಬರಿಗೆ ಅಯುಕ್ತವಾಗಿ ತೋರಿತು. ನೀವು ಚುಂಗಡಿಗೆ ಚುಂಗಡಿಯನ್ನು ಕಟ್ಟಿ ಎಲ್ಲರ ಮನೆಯನ್ನೂ ಹಾಳುಮಾಡಿ ನಿಮ್ಮ ಮನೆಯನ್ನು ತುಂಬಿಕೊಂಡು ನೀವೂ ಹೊಟ್ಟೆತುಂಬಾ ತಿನ್ನದೆ

ಒಬ್ಬರಿಗೆ ಒಂದು ದಿವಸವಾದರೂ ಒಂದು ಕಾಸುಕೊಡದೆ ಈ ಹರಕಂಗಿಯನ್ನೂ ಜೂಲು ರುಮಾಲನ್ನೂ ಹಾಕಿಕೊಂಡು ಗತಿ ಇಲ್ಲದವನಂತೆ ತಿರುಗುತ್ತಿದ್ದೀರಿ. ನೀವು ಗಳಿಸಿದ ದ್ರವ್ಯಕ್ಕೆ ಈಗ ಮಿಂಡಗಾರರು ಬರುತ್ತಾರೆ. ನಿಮಗೆ ತಕ್ಕ ಪ್ರಾಯಶ್ಚಿತ್ತಮಂ ಮಾಡಿ ತೆಗೆದುಕೊಂಡು ಹೋದರೆ, ಆಗ ನೀವೂ ನಮ್ಮ ಹಾಗೆ ಆಗಿ ಅಯ್ಯೋ! ಹೊಟ್ಟೆತುಂಬವಾದರೂ ತಿನ್ನಲಿಲ್ಲವಲ್ಲಾ! ಎಂದು ವ್ಯಸನ ಪಟ್ಟೀರಿ ಎನಲು—

ಮತ್ತೊರ್ವವರ್ತಕನು—ಅರಮನೆಯ ಛತ್ತಕ್ಕೆ ಹೆಗ್ಗಣಗಳು ಜಗಳವಾಡಿದಂತೆ ನಾವು ನಾವು ಏಕೆ ಜಗಳವಾಡಬೇಕು? ಆ ಸ್ವತ್ತಿನ ಕರ್ತನು ತನ್ನ ಮನಸ್ಸು ಬಂದಂತೆ ಮಾಡಲಿ. ಇದೆಲ್ಲಿಯ ಹಾಳು ಜಗಳ! ಇಂಥ ವಿಪತ್ಕಾಲದಲ್ಲಿ ಅವರವರಿಗೆ ದೇವರು ಕೊಟ್ಟಂಥದನ್ನು ಯಾವ ಯಾವ ರೀತಿಯಲ್ಲಿಯೋ ಜೋಪಾನಮಂ ಮಾಡಿಕೊಂಡು ಬದುಕುವ ಆಲೋಚನೆಯಂ ಬಿಟ್ಟು ಈ ಅಪ್ರಸ್ತುತಕಲಹದಿಂದ ಪ್ರಯೋಜನವಿಲ್ಲವು ಎಂದು ಹೇಳಲು—

ಮತ್ತೊಬ್ಬನು—ಇದ್ದ ಮುಂಡೆಯಗಂಡನಿಗಹುದಲ್ಲವೋ ಜೋಪಾನಮಾಡಿಕೊಳ್ಳಬೇಕು ಎಂಬ ದುಃಖ? ಈಗ ಬಂದಿರುವವರು ಈ ಪಟ್ಟಣವನ್ನು ಸೂರೆ ಮಾಡಿದರೆ ನಾನೂ ಅವರ ಜೊತೆಯಲ್ಲಿ ಸೇರಿಕೊಂಡು ಕೈಗೆ ಸಿಕ್ಕಿದುದನ್ನು ಬಾಚಿಕೊಂಡು ಎಲ್ಲಿಯಾದರೂ ಹೋಗಬಹುದು. ನಾನು ಈ ಹಾಳಾದ ದಾರಿದ್ರ್ಯವನ್ನು ಅನುಭವಿಸಲಾರದೆ ಇದೇ ಆಲೋಚನೆಯಲ್ಲಿ ಇದ್ದೆನು. ದೇವರು ನನ್ನ ಆಲೋಚನೆಯಂತೆ ಮಾಡಿ ಇದ್ದಾನೆ. ಕಡೆಗೂ ಏನಾಗುವುದೋ ಕಾಣೆನು ಎಂದು ಹೇಳಲು—

ಮತ್ತೊಬ್ಬನು—ಇಂದೆಂಥ ಹುಚ್ಚು ಮಾತು? ಯಾರಾದರೂ ಸರಕಾರದವರು ಇದನ್ನು ಕೇಳಿದರೆ ನಿನ್ನನ್ನು ಹಿಡಿದುಕೊಂಡು ಹೋಗಿ ಶಿಕ್ಷೆಮಾಡುತ್ತಾರೆ. ನಿನ್ನ ಈ ಹುಚ್ಚುಮಾತನ್ನು ಕೇಳುತ್ತ ಇದ್ದ ನಮಗೂ ನಿನ್ನ ಸಹವಾಸದಿಂದ ಪ್ರಾಣಕ್ಕೆ ಬಂದೀತು. ಆಚೆಗೆ ಎದ್ದು ಹೋಗು ಎಂದು ಹೇಳಲು—

ಮತ್ತೊಬ್ಬನು—ಸರಕಾರದವರಿಗೆ ಮಿಂಡಗಾರರು ಬಂದು ಒದಗಿರುವುದರಿಂದ ಈಗ ಅವರಿಗೆ ಮೈತುರಿಸಿಕೊಳ್ಳುವುದಕ್ಕೂ ಅವಕಾಶವೇ ಇಲ್ಲ. ಈ ಸಮಯದಲ್ಲಿ ನಮ್ಮ ಗೋಜಿಗೆ ಅವರು ಬಂದರೆ ನಾವೆಲ್ಲಾ ಅವರ ಶತ್ರುಗಳಿಗೆ ಸಹಾಯವಾಗುವೆವು ಎಂದು ಅವರಿಗೆ ಭಯವಿಲ್ಲವೋ? ಎನಲು—

ಮತ್ತೊಬ್ಬ ವರ್ತಕನು—ಎಲೈ ಚೆನ್ನಸೆಟ್ಟರೇ, ಗೋಪಾಲಸೆಟ್ಟರೇ, ನಾರಣಪ್ಪಸೆಟ್ಟರೇ, ಈ ಪುಂಡುಹರಟೆಗಳನ್ನು ಹರಟುವವರ ಜೊತೆಯಲ್ಲಿ ನಾವು

ಇದ್ದರೆ ನಮಗೆ ಮಾನ ನಿಲ್ಲುವುದಿಲ್ಲ. ಹೋಗೋಣ ಏಳಿ! ಎಂದು ಎದ್ದು ಎಲ್ಲರನ್ನೂ ಕರೆಯಲು—

ಅದಕ್ಕೆ ಇನ್ನೊಬ್ಬನು—ಈ ಹಾಳುಮಾತನ್ನು ಬಿಡಿರಿ! ಈಗ ನಾವು ಏನನ್ನು ಮಾಡಬೇಕು? ಈ ಪಟ್ಟಣವನ್ನು ಶತ್ರುಗಳು ಸೂರೆಮಾಡಿದರೆ ನಾವೆಲ್ಲರೂ ಮುಳುಗಿ ಹೋಗುತ್ತೇವೆ. ಜಯಾಪಜಯಗಳು ಹೇಗಿರುವುದೋ ತಿಳಿಯದು. ನಮ್ಮ ಬೀಗರಾದ ಮುನಿರಾಮುಸೆಟ್ಟರು ನಿನ್ನೆ—ರಾಜಕಾರ್ಯವು ಬಹಳವಾಗಿದೆ. ಈಗಲೇ ನಾವು ಗುಪ್ತವಾಗಿ ಹೋಗಿ ಪರ್ವತರಾಜನಲ್ಲಿ ಸೂರೆಯನ್ನು ಮಾಡದಂತೆ ಮುಗುವಳೀ ಹೊತ್ತುಕೊಂಡು ಅವರವರ ಶಕ್ತ್ಯನುಸಾರವಾಗಿ ಹಂಚಿಕೊಂಡು ತುಂಟರಿಗೆ ಆಸ್ಪದವಾಗದಂತೆ ಮಾಡಬೇಕು ಎಂದು ಹೇಳಿದರು. ಈ ಮಾತು ನಿಮ್ಮ ಹತ್ತು ಮಂದಿಯ ಬುದ್ಧಿಗೆ ಹೇಗೆ ತೋರುತ್ತದೆ? ಎಂದು ಕೇಳಲು—

ಮುದುಕನಾದ ಮುನಿಸಾಮಿ ಎಂಬ ಪ್ರೌಢನಾದ ಒಬ್ಬ ಸೆಟ್ಟಿಯು— ನೀವೆಲ್ಲರೂ ಯಾಕೆ ಇಷ್ಟು ಭಯಪಡುತ್ತೀರಿ? ನಮ್ಮ ಪಟ್ಟಣದ ಮೇಲೆ ಅನ್ಯ ಶತ್ರುಗಳು ಬರುವುದಿಲ್ಲ. ನಮ್ಮ ದೊರೆಯ ಮೊಮ್ಮಗನಾದ ಚಂದ್ರಗುಪ್ತನೇ ಬರುತ್ತಾನೆ. ಅದುದರಿಂದ ನಮಗೇನೂ ಭಯವಿಲ್ಲ. ತನ್ನ ಮನೆಗೆ ತಾನೇ ಬೆಂಕಿ ಹಾಕಿಕೊಳ್ಳುವುದುಂಟೇ? ಚಂದ್ರಗುಪ್ತನು ತಾನು ಬದುಕುವ ಪಟ್ಟಣದವರನ್ನು ತಾನೇ ಹಾಳುಮಾಡಿಸುವನೇ? ಈ ಚಿಂತೆಯನ್ನು ಬಿಟ್ಟು ಧೈರ್ಯವಾಗಿ ಇರಿ. ಇಷ್ಟರ ಮೇಲೆ ದೇವರ ಯತ್ನವಿದ್ದಂತೆ ಆಗುತ್ತದೆ ಎಂದು ಹೇಳಲು—

ಇನ್ನೋರ್ವನು—ಇಷ್ಟು ಯೋಚನೆ ಯಾಕೆ? ನಮ್ಮ ಅಮಾತ್ಯರಾಕ್ಷಸನು ಬೃಹಸ್ಪತಿಗೆ ಸಮಾನನಾದ ಬುದ್ಧಿಶಾಲಿಯು. ಅವನು ತಾನು ಜೀವಂತನಾಗಿರುವವರೆಗೂ ಈ ಪಟ್ಟಣಕ್ಕೆ ಯಾರನ್ನೂ ಬರಗೊಡಿಸನು. ಇದರಲ್ಲಿ ತಾಕತ್ತೇನಿದೆ? ಆ ಮಂತ್ರಿ ಇರುವ ಪರ್ಯಂತರವೂ ನಮಗೆ ಭಯವಿಲ್ಲವೆನಲು—

ಮತ್ತೊಬ್ಬನು—ಹಾಗೇ ಸರಿ. ಒಂದುವೇಳೆ ದೈವಗತಿಯಿಂದ ಶತ್ರುಗಳಿಗೆ ಜಯವಾದಾಗ್ಯೂ ನಮ್ಮ ಚಂದ್ರಗುಪ್ತನು ಇದ್ದಾನೆ. ಇದರ ಮೇಲೂ ದೇವರು ಮಾಡಿದುದಾಗಲಿ ಎಂದನು. ಈ ರೀತಿಯಲ್ಲಿ ನಾನಾವಿಧವಾರ್ತೆಗಳು ಹುಟ್ಟಿ ಜನರು ಭೀತರಾಗುತ್ತಿದ್ದರು.

ಆಗ ಕ್ಷಪಣಕನು ನಂದರು ಜಪಶಾಲೆಗೆ ಬರುವಂತೆ ಮಾಸೋಪವಾಸಿಯು ಹೇಳಿ ಗೊತ್ತುಮಾಡಿದರ್ಥಮಂ ವೇಗಶರ್ಮನ ಮುಖದಿಂ ತಿಳಿದು ಆದೇ ಅರ್ಥಮಂ

ಚಾಣಕ್ಯರಿಗೆ ಹೇಳುವಂತೆ ಮೊದಲಿನ ಹಾಗೆ ವೇಗಶರ್ಮನಂ ಕಳುಹಿಸಿದನು. ಈ ವರ್ತಮಾನವಂ ತಿಳಿದ ಸಿದ್ಧಾರ್ಥಕನು ನಂದರಿಗೂ ಪರ್ವತರಾಜನಿಗೂ ನಾಳೆ ಯುದ್ಧವಾದೀತೆಂದು ತಿಳಿದು ಭಾಗುರಾಯಣಾದಿಗಳಿಗೆ ನಂದರಲ್ಲಿ ಉಪೇಕ್ಷೆ ಯುಂಟಾಗುವಂತೆ ಮಾಡುವೆನೆಂದು ನಿಶ್ಚಯಿಸಿ ರಾಕ್ಷಸನ ಮನೆಯ ರಾಯಸದವ ನಾದ ಕಾಯಸ್ಥ ಜಾತಿಯ ಶಕಟದಾಸನ ಬಳಿಗೆ ಬಂದು ಅಲ್ಲಿ ಕೆಲವು ಹೊತ್ತು ಇದ್ದು ಹಾಗೇ ರಾಕ್ಷಸನ ಮೈಗಾವಲಿನ ಜನಕ್ಕೆ ಗೊತ್ತುಗಾರನಾದ ವಿನತನಂ ಕಂಡು ಅವನಿಗೆ ರಾಜಕಾರ್ಯರಹಸ್ಯವಂ ಹೇಳಿ ಅವನು ಹೇಳಿದ ತತ್ಸಂಬಂಧ ವಾರ್ತೆಯಂ ತಿಳಿದು ಆ ಬಳಿಕ ಭಾಗುರಾಯಣನ ಸಮೀಪಕ್ಕೆ ಬಂದು ಕುಳಿತು ಮತ್ತೆ ಗುಪ್ತದಲ್ಲಿ ಇಂತೆಂದನು—

ಅಯ್ಯಾ ಭಾಗುರಾಯಣನೇ, ಕೇಳಿದ ವರ್ತಮಾನವಂ ನಿನ್ನಲ್ಲಿ ಅಧಿಕ ಸ್ನೇಹದಿಂದ ರಹಸ್ಯವಾಗಿ ತಿಳುಹಿಸುವೆನು. ಏನಂದರೆ ಚಂದ್ರಗುಪ್ತನಿಗೆ ನಿನ್ನಲ್ಲಿ ಪ್ರೀತಿಯುಂಟಾಗಿರುವಂತೆ ಅವನಲ್ಲಿ ನಿನಗೂ ವಿಶ್ವಾಸವಿದ್ದರೆ ಹೇಳಬಹುದು. ನಿಮ್ಮೆಲ್ಲರ ಭರವಸದಿಂದ ಚಂದ್ರಗುಪ್ತನು ಪರ್ವತರಾಜನಲ್ಲಿ ಹೋಗಿ ಏನೋ ಒಂದು ಲೇಖನವಂ ತೋರಿಸಿ ಅದರ ನಂಬುಗೆಯಿಂದಲೂ ಚಾಣಕ್ಯನ ವಾಕ್ಚಾ ತುರ್ಯದಿಂದಲೂ ಆ ದೊರೆಯನ್ನು ಕರೆದುಕೊಂಡು ಬಂದು ಇದ್ದಾನೆ. ನಂದರಿಗೆ ರಾಕ್ಷಸನು ಆಪ್ತನಾಗಿರುವಂತೆ ಮುಂದೆ ನನಗೆ ಭಾಗುರಾಯಣನೇ ಆಪ್ತನೆಂದು ಪರೋಕ್ಷದಲ್ಲಿ ಹೇಳಿಕೊಳ್ಳುತ್ತಿದ್ದಾನೆ. ಸರ್ವಪ್ರಕಾರದಿಂದಲೂ ಈ ರಾಜ್ಯಾಧಿ ಪತ್ಯವಂ ಚಾಣಕ್ಯನು ಚಂದ್ರಗುಪ್ತನಿಗೆ ಉಂಟುಮಾಡುವುದೇ ಸಿದ್ಧ. ನಂದವಾಹಿ ನಿಗಿಂತಲೂ ಶತ್ರುಸೇನೆಯು ಅಧಿಕವೆಂದು ತಿಳಿ! ಚಾಣಕ್ಯನ ಕಪಟೋಪಾಯಕ್ಕೆ ನಂದರು ರಾಕ್ಷಸನು ಸಹ ನಿರ್ವಹಿಸಲಾರರು. ರಾಕ್ಷಸನ ಭೇದೋಪಾಯವೂ ಭಗ್ನವಾಯಿತು. ನಾಳೆ ಯುದ್ಧವಾಗುತ್ತಿದೆ. ಜಯಾಪಜಯುಗಳೆಂತಿರುವುವೋ! ಶತ್ರುಗಳ ಯತ್ನವಂ ನೋಡಿದರೆ ನಂದರಿಗೆ ಅಪಜಯವೆಂದು ತಿಳಿಯುತ್ತಿದೆ. ಅಥವಾ ಸಮಯುದ್ಧವಾದರೂ ಅಲ್ಲಿಂದ ಮುಂದೆ ನಂದರಿಗೆ ಅಪಜಯವೇ ಸಿದ್ಧವು. ಅದು ಹೇಗಂದರೆ—ಜ್ವರ ಬಂದವನಿಗೆ ದೋಷಸಾಂಕರ್ಯವೂ ಸನ್ನಿಪಾತವೂ ಅಪಥ್ಯಸೇವನೆಯೂ ಉಂಟಾದರೆ ಮಹೌಷಧಿಗಳಿಂದಾದರೂ ಆ ವ್ಯಾಧಿಯು ಹೇಗೆ ಅಸಾಧ್ಯವಾಗುವುದೋ ಹಾಗೆ ನಂದರಿಗೆ ಒದಗಿರುವ ಚಾಣಕ್ಯನ ಕಪಟೋಪಾ ಯವು ಚಂದ್ರಗುಪ್ತನ ಸದ್ಗುಣವು ಪರ್ವತರಾಜನ ಶೌರ್ಯವು ಅರಸುಗಳ ಸಹಾಯವು ಎಂಬ ಇವೆಲ್ಲವೂ ನಂದನಾಶಸೂಚಕಗಳು. ಚಾಣಕ್ಯನು ಚಂದ್ರ

ಗುಪ್ತನಿಗೆ ರಾಜ್ಯಾಧಿಪತ್ಯವನ್ನುಂಟುಮಾಡಿ ಅತನಿಗೆ ಇಷ್ಟನಾದವನಿಗೆ ಅಮಾತ್ಯ ಪದಮಂ ಕೊಟ್ಟು ತಾನು ತಪೋವನಕ್ಕೆ ತೆರಳುವನು. ಆದುದರಿಂದ ಈ ವೇಳೆ ಯಲ್ಲಿ ಚಂದ್ರಗುಪ್ತನಿಗೆ ನಿನ್ನಲ್ಲಿ ಇರುವ ವಿಶ್ವಾಸಮಂ ದೃಢಪಡಿಸಿಕೋ. ನಾನು ಹೇಳಿದ ವಾಕ್ಯವೇ ಚಂದ್ರಗುಪ್ತನು ಹೇಳಿದುದೆಂದು ತಿಳಿದು ನಿನ್ನ ಶಕ್ತ್ಯನುಸಾರ ಸಹಾಯಮಂ ಮಾಡಿ ಇನ್ನು ಯಶೋವಂತನಾಗು. ಚಾಣಕ್ಯನ ಉಪಾಯ ಕೌಶಲ್ಯಗಳಂ ನೋಡಿದರೆ ಕ್ಷೀರಜಲಗಳಿಗೆ ವೈರವನ್ನೂ ಗಜಸಿಂಹಗಳಿಗೆ ಸ್ನೇಹ ವನ್ನೂ ಉಂಟುಮಾಡುವುವೆಂದು ತೋರುವಲ್ಲಿ ಪರ್ವತರಾಜನಂ ಕರತರುವುದು ಆಶ್ಚರ್ಯವೇನು ? ಈ ನಂದಸೇನೆಯ ಭುಜಯುಗ್ಮದಲ್ಲಿ ಒಂದು ಭುಜವು ಚಾಣ ಕ್ಯನದು ಎಂದು ತಿಳಿಯುವವನಾಗು. ನಾನು ನಿನಗೆ ಆಪ್ತನಾದುದರಿಂದ ಈ ವೇಳೆ ಯಲ್ಲಿ ಸುಮ್ಮನಿರಬಾರದೆಂದು ತಿಳುಹಿಸಿದೆನು. ಈ ಮಾತಿಗೆ ಈ ರಾತ್ರಿ ಇಲ್ಲಿಗೆ ಸಮೀಪದಲ್ಲಿ ಯುದ್ಧವಾಗುವುದೇ ನಿದರ್ಶನವು. ನಿನ್ನ ಮನೋಗತವೇನು ? ಎನಲು ; ಆ ಮಾತಿಗೆ ಬಾಗುರಾಯಣನು—ಈ ಸಿದ್ಧಾರ್ಥಕನು ವೈದ್ಯನಂತೆ ತೋರುತ್ತಿರುವನಾದರೂ ಚಂದ್ರಗುಪ್ತನಿಗೆ ಆಪ್ತನಾಗಿರಬೇಕು ಎಂದು ತನ್ನ ಮನಸ್ಸಿನಲ್ಲಿ ನಿಶ್ಚಯಿಸಿ—

ಎಲೈ ಸಿದ್ಧಾರ್ಥಕನೇ, ಚಂದ್ರಗುಪ್ತನಿಗೆ ರಾಕ್ಷಸನ ಹಾಗೆ ನಾವೆಲ್ಲರೂ ದ್ರೋಹಿಗಳಲ್ಲ. ಅತನಿಗೆ ನಾವು ಪ್ರಕಟವಾಗಿ ಸಹಾಯಮಂ ಮಾಡಿದರೆ ಲೋಕಾಪವಾದಕ್ಕೆ ಪಾತ್ರರಾಗುವುದರಿಂದ ಇನ್ನು ಮೇಲೆ ನಾವು ಮಾಡುವ ಗೂಢಸಹಾಯವು ಅತನಿಗೆ ಮುಂದೆ ತಿಳಿಯಬಂದೀತು. ಪ್ರಕೃತೋಚಿತವಾಗಿ ಸಹಾಯಮಂ ಮಾಡುತ್ತಿದ್ದೇವೆ. ಚಂದ್ರಗುಪ್ತನು ಈ ಪುರಮಂ ಬಿಟ್ಟು ಹೋಗುವಲ್ಲಿ ತಾನು ವಿರಕ್ತನಾಗಿ ಈಶ್ವರಾರಾಧನೆಯಂ ಮಾಡುತ್ತ ಸದ್ಗತಿಯಂ ಸಂಪಾದಿಸಿಕೊಂಡೇನೆಂದು ಬರೆದುಕೊಟ್ಟ ಕಾಗದಮಂ ನೋಡಿ ಅತನ ತಂದೆಯು ನಮಗೆ ಮಾಡಿದ್ದ ಉಪಕಾರಸ್ಮರಣೆಯಿಂದಲೂ ಅತನಿಗೆ ಉಂಟಾಗಿದ್ದ ದುರ್ದಶೆ ಯನ್ನವಲೋಕಿಸಿದುದರಿಂದಲೂ ಅತನ ಅಭಿಮತಾನುಸಾರವಾಗಿ ನಮ್ಮ ಅಕ್ಷರ ದಿಂದ ಸಮ್ಮತಿಯಂ ಬರೆದುಕೊಟ್ಟಿದ್ದೆವು. ಆ ಕಾಗದವು ಅತನಿಗೆ ಉಪಯುಕ್ತ ವಾಗಿ ಇದ್ದರೂ ಇದ್ದೀತು. ಹೋಗಿಬಾರೆಂದು ಸಿದ್ಧಾರ್ಥಕನಂ ಕಳುಹಿಸಿ, ಆಪ್ತನಾದ ತನ್ನ ದೂತನಂ ಕರೆದು—

ಎಲೈ ದೂತನೇ, ನೀನು ಹೋಗಿ ನಮಗೆ ಮಿತ್ರರಾದ ಭದ್ರಭಟಾದಿ ಸೇನಾ ಪತಿಗಳಂ ರಹಸ್ಯದಲ್ಲಿ ಕಂಡು ಅವರಿಗೆ—ಇಲ್ಲಿಂದ ಮುಂದೆ ಮಾಡತಕ್ಕ ಯುದ್ಧಮಂ

ನಮ್ಮ ಸಾಮಂತರಾಜರುಗಳೇ ಮುಂದೆ ನಿಂತು ಮಾಡುವಂತೆ ನೀವು ಅವರಿಗೆ ನೇಮಿಸಿ ನೀವೆಲ್ಲರೂ ಅಜಾಯುದ್ಧದಂತೆ ಸಮರಕ್ರಮವಂ ತೋರಿಸುತ್ತ ಕಾಲಹರಣಮಂ ಮಾಡುತ್ತ ಶತ್ರುಗಳಂ ತಡೆಯದೆ ಬಿಡತಕ್ಕುದು. ಇದರ ವಿವರಮಂ ಮುಂದೆ ಹೇಳಿ ಕಳುಹಿಸುವೆನು ಎಂಬುದಾಗಿ ನಾವು ಹೇಳಿದೆವೆಂದು ಕಿವಿಯಲ್ಲಿ ಹೇಳಿ ಬಾರೆಂಬುದಾಗಿ ದೂತನಂ ಕಳುಹಿಸಲು; ಅವನು ಹೋಗಿ ಹಾಗೆಯೇ ಹೇಳಿದನು. ಭಾಗುರಾಯಣನ ವಾಕ್ಯಮಂ ಆಪ್ತವಚನವೆಂದು ತಿಳಿದು ಭದ್ರಭಟಾದಿಗಳು ಅದೇ ರೀತಿಯಲ್ಲಿಯೇ ಆಚರಿಸುತ್ತಿದ್ದರು. ಹೀಗೆ ಪರಪಕ್ಷದವರಾದ ಆ ಸೇನಾಪತಿಗಳು ಯುದ್ಧಮಂ ಮಾಡದೆ ತಟಸ್ಥರಾಗಿರುವುದಂ ತಿಳಿದು ಚಾರರು ಹೋಗಿ ಪರ್ವತರಾಜನಿಗಿಂತೆಂದರು—

ಜೀಯಾ, ಶತ್ರುಸೇನಾಪತಿಗಳಾದ ಭದ್ರಭಟಾದಿಗಳು ತಾವು ಸಂಗ್ರಾಮಂಗೆಯ್ವುದಂ ನಿಲ್ಲಿಸಿ ತಟಸ್ಥರಾಗಿದ್ದಾರೆ. ಅವರ ಸಾಮಂತರಾಜರ ಪಡೆ ಮಾತ್ರ ಯುದ್ಧಮಂ ಮಾಡುವಂತೆ ಕಾಣಿಸುವುದರಿಂದಲೂ ಆದೇರೀತಿಯಾಗಿ ವರ್ತಮಾನಮಂ ಕೇಳಿದುದರಿಂದಲೂ ಮಾರ್ಗನಿರೋಧವಿಲ್ಲದೆ ಗಂಗಾಸಂಗಮಕ್ಕೆ ನಮ್ಮ ದಳ ಹೋಗಿ ನಿಲ್ಲಬಹುದು ಎಂದು ತೋರುತ್ತದೆ ಎನ್ನಲು; ಅದಂ ಕೇಳಿ ಪರ್ವತೇಶ್ವರನು ಹೂಣ ಚೀಣ ಕಿರಾತಾಧಿಪತಿಗಳಂ ನೋಡಿ—

ಅಯ್ಯಾ ಅರಸುಗಳಿರಾ, ನೀವೆಲ್ಲರೂ ಬಲಸಮೇತರಾಗಿ ನಾವೆಗಳಂ ಹತ್ತಿ ಸರಯೂಸಂಗಮದಿಂದ ಹೋಗಿ ಈ ರಾತ್ರಿಯಲ್ಲೇ ಪಾಟಲೀಪುರಕ್ಕೆ ಮುತ್ತಿಗೆಯಂ ಹಾಕುವುದೆಂದು ನೇಮಿಸಲು; ಅದೇ ರೀತಿಯಾಗಿ ಅವರೆಲ್ಲರೂ ಬರುತ್ತಿದ್ದರು.

ಅಷ್ಟರಲ್ಲಿ ರಾಕ್ಷಸನು ಪುರದ ಹೊರವಳಯದಲ್ಲಿ ಭಾಗುರಾಯಣನು ಮಾಡಿರುವ ಯುದ್ಧಸನ್ನಾಹಮಂ ನೋಡಿ ಈಗ ಒದಗಿರುವ ಶತ್ರುಗಳ ಸನ್ನಾಹಕ್ಕೆ ಇಷ್ಟು ಸಾಲದೆಂದು ತಿಳಿದು ಸೇನಾಸಮೇತನಾದ ಭೋಜಪತಿಯನ್ನು ಪೂರ್ವದಿಕ್ಕಿನಲ್ಲಿ ಕಾದುಕೊಂಡಿರುವಂತೆ ವಿಧಿಸಿ ಹಾಗೇ ಅವಂತೀದೇಶಾಧಿಪತಿಯಂ ಪುರದ ಉತ್ತರದಿಕ್ಕಿನ ಕಾವಲಲ್ಲಿರಿಸಿ ಕಳಿಂಗಪತಿಯನ್ನು ದಕ್ಷಿಣದಿಕ್ಕಿನ ರಕ್ಷಣೆಗೆ ಕಳುಹಿಸಿ ಸೌರಾಷ್ಟ್ರಾಧಿಪತಿಯನ್ನು ಪಶ್ಚಿಮದಿಕ್ಕಿನಲ್ಲಿ ನಿಂತು ಯುದ್ಧಮಂ ಮಾಡುವಂತೆ ನೇಮಿಸಿ ಅವರಂ ಬಹಳವಾಗಿ ಪ್ರೋತ್ಸಾಹಿಸಿ ತನ್ನ ಬಳಿಗೆ ಬಂದ ಭಾಗುರಾಯಣನಿಗೆ ಈಯರ್ಥವೆಲ್ಲಮಂ ಹೇಳಿ—ಅವರೆಲ್ಲರಂ ಕೂಡಿಸಿಕೊಂಡು ನಗರಮಂ ಜಾಗರೂಕನಾಗಿ ರಕ್ಷಿಸುವನಾಗು. ಈ ದಿವಸವೇ ಅಹಿತರು ಪೊಳಲಂ ಮುತ್ತುವಂತೆ ಕೃತಸಂಕೇತರಾಗಿರುವ ವರ್ತಮಾನವು ಗೂಢಚಾರರ ಮುಖ

ವಚನದಿಂ ತಿಳಿದಿರುವುದರಿಂದ ಅಪ್ರಮತ್ತನಾಗಿರುವವನಾಗು ಎಂದು ನಿರೂಪಿಸಿ ಅಲ್ಲಿಂದ ನಂದರ ಸಮೀಪಕ್ಕೆ ಬಂದು ತಾನು ಮಾಡಿಸಿರುವ ಪುರಪ್ರಾಕಾರದ ಅಂತರ್ಬಹಿರ್ಭಾಗಗಳ ಸಮರಸನ್ನಾಹವಮಂ ತಿಳುಹಿಸಿದನು. ಅದಂ ಕೇಳಿ ನಂದರು ಸಂತೋಷಪಟ್ಟು—

ಅಯ್ಯಾ ಅಮಾತ್ಯರೇ, ನಮಗೆ ಮಿತ್ರನಾದ ಕಾಶೀರಾಜನಿಗೆ ಮೊದಲು ಕಾರ್ಯಾರ್ಥವಾಗಿ ಲೇಖನಮಂ ಬರೆದು ಕಳುಹಿಸಿ ಇದ್ದೀರಷ್ಟೆ? ನೀವು ಬರೆದು ಇದ್ದ ಮೇರೆಗೆ ಆ ಕಾರ್ಯಮಂ ನಿರ್ವಹಿಸುವನೋ ನಿರ್ವಹಿಸಲಾರನೋ? ಎನಲು—

ಅಯ್ಯಾ ರಾಜಪುತ್ರರುಗಳಿರಾ, ಕಾಶೀರಾಜನು ನಮಗೆ ಪರಮಮಿತ್ರನಾಗಿಯೂ ಕಾರ್ಯದಕ್ಷಕನಾಗಿಯೂ ಇರುವನು. ದೈವಸಹಾಯಮಾತ್ರವಿದ್ದರೆ ಕೆಲಸಮಂ ನಿರ್ವಹಿಸಿ ಯಶೋವಂತನಾಗುವನು. ಅದು ಘಟಿಸಿದರೆ ರಾಜಕಾರ್ಯವು ಸುಲಭವಾಗಿರುವುದು. ಶತ್ರುವಂ ಜಯಿಸುವವಂ ಹೀಗೆ ಬಹು ಯತ್ನಮಂ ಮಾಡಿದರೆ ದೈವಯೋಗದಿಂದ ಯಾವ ಯತ್ನದಲ್ಲಿಯಾದರೂ ಜಯಮುಂಟಾದೀತು ಎಂದು ಹೇಳುವಷ್ಟರಲ್ಲಿಯೇ ಸಾಯಂಕಾಲವಾಗಲು; ನಂದರು ಒಡ್ಡೋಲಗಂ ಗೊಡುತ್ತಿದ್ದರು.

ಆ ವೇಳೆಯಲ್ಲಿ ರಕ್ತಸಿಕ್ತವಾದ ವಸ್ತ್ರಮಂ ಧರಿಸಿ ರೌದ್ರವಾಗಿ ತೋರುವ ಚಾರರಿಬ್ಬರು ಬಂದು ಕೋ! ಎಂದು ಕೂಗಿ—ಸ್ವಾಮೀ, ಸಾವಕಾಶಮಂ ಮಾಡಿದರೆ ರಾಜಕಾರ್ಯಂ ಕೆಡುವುದೆಂದು ಹೇಳಲು; ಆ ಧ್ವನಿಯಂ ಕೇಳಿ ನಂದರು ತಮ್ಮ ದೂತರ ಮುಖದಿಂ ಆ ಚಾರರಂ ಒಳಗೆ ಕರೆದು—ಅದೇನು? ಎಂದು ಕೇಳಲಾಗಿ; ಸ್ವಾಮೀ, ಸುಂದರಗಡ ಮೊದಲುಗೊಂಡು ಸೂರ್ಯೋದಯದಾರಭ್ಯ ಈವರೆಗೂ ಡಿಂಗಿರಾತ ಭದ್ರಭಟ ನಮ್ಮ ಸಾಮಂತರಾಜರು ಇವರ ಸೇನೆಗೂ ಶತ್ರುಗಳ ಶಕ ಚೀನರ ಧ್ವಜಿನಿಗೂ ಎಂಟುವೇಳೆ ಕೈಗೂಡಿ ಯುದ್ಧವಾಗಿ ಗಂಡಕೀಸಂಗಮಪರಿಯಂತರವೂ ರಕ್ತವು ಪ್ರವಾಹವಾಗಿ ಹರಿಯಿತು. ಇನ್ನೂ ಪರ್ಯವಸಾನವಿಲ್ಲ. ಅವರ ಫಿರಂಗಿಗಳು ನಮ್ಮವರಿಗೆ ಇನ್ನೂರೈವತ್ತು ಸಿಕ್ಕಿದುವು. ನಮ್ಮ ಕಡೆಯ ತುರಗಂಗಳು ಐವತ್ತು ಸಹಸ್ರಮಂ ಶತ್ರುಗಳು ಹಿಡಿದರು. ಅಷ್ಟರಲ್ಲಿ ಶಕನಾಯಕನಿಗೂ ನಮ್ಮ ಬಲಾಧಿಪತಿ ವೀರವರ್ಮನಿಗೂ ದ್ವಂದ್ವಯುದ್ಧವಾಗಲು; ಗಜಾರೂಢನಾದ ವೀರವರ್ಮನ ಬಾಣ ಪರಂಪರೆಯಿಂದ ಶಕನಾಯಕನಂ ಸುತ್ತಿಬರುವ ತುರಗಾರೂಢರೆಲ್ಲರೂ ಹತರಾಗಲು; ಕ್ರುದ್ಧನಾದ ಶಕನಾ

ಯಕನು ತಾನು ಕುಳಿತಿದ್ದ ಹಯಮಂ ಹಾರಿಸಿ ಹಸ್ತಭಲ್ಲೆಯದಿಂದ ವೀರವರ್ಮನಂ ಪ್ರಹರಿಸಲು ; ಅತನು ಗತಪ್ರಾಣನಾದನು. ಹಾಗೇ ನಮ್ಮ ಮೈಥಿಲನಿಗೂ ಚೀನ ದೇಶಾಧಿಪತಿಯ ತಮ್ಮನಾದ ಜೀಮೂತನಿಗೂ ಪರಸ್ಪರ ಕಲಹ ನಡೆದು ಮೈಥಿಲನು ಜೀಮೂತ ಹಾಕಿದ ಭಲ್ಲೆಯಗಳಂ ಖಡ್ಗದಿಂ ಛಿನ್ನಾಭಿನ್ನವಾಗಿ ಛೇದಿಸಿ ಮೇಲೆ ಬಿದ್ದು ಜೀಮೂತನ ಶಿರಸ್ಸಂ ನೆಲಕ್ಕೆ ಇಳುಹಿದನು. ಇಂದು ವಿಶೇಷವಾಗಿ ಮಗಧಪತಿಗೆ ಜ್ಞಾತಿಯಾದ ರುದ್ರವರ್ಮನು ಪ್ರಭುಕಟಾಕ್ಷಕ್ಕೆ ಪಾತ್ರನಾಗ ಬೇಕು ಎಂದು ದಸ್ಯುಗಳ ಬಹು ತುರಗಾರೂಢರಂ ಸಂಹರಿಸುತ್ತ ನಿಂತಕಡೆಯಲ್ಲಿ ನಿಲ್ಲದೆ ಚಿತ್ರಯುದ್ಧಮಂ ಮಾಡಿದನಲ್ಲದೆ ಅರ್ಧಕ್ಷಣವೂ ವಿಶ್ರಮಿಸಿಕೊಂಡವನಲ್ಲ. ಈ ಅಪರಾಣ್ಣದಲ್ಲಿ ನಮ್ಮ ಸಾಮಂತರಾಜಸೇನೆಯು ಶತ್ರುಗಳ ಮೇಲೆ ಸಮರಂಗೆಯ್ದು ಶೋಣಾಸಂಗಮಕ್ಕೆ ಅರಿಗಳಂ ಬರಲೀಸದೆ ಗಂಡಕೀ ಪ್ರಾಂತದಲ್ಲಿಯೇ ಕಾದುಕೊಂಡಿದೆ. ಭದ್ರಭಟಾದಿಗಳ ಚತುರಂಗವು ಹಿಂದೆ ದೂರದಲ್ಲಿಯೇ ಇದೆ. ವೈರಿಗಳು ಶೋಣಾನದೀತೀರಕ್ಕೆ ಬರುವವರಾಗಿದ್ದಾರೆ. ಇಲ್ಲಿಂದ ಹೆಚ್ಚು ಫೌಜು ಹೋಗದಿದ್ದರೆ ಅವರು ಆ ನದಿಯಂ ದಾಟ ಬಂದಾರು ಎಂದರು. ಅದಂ ಕೇಳಿ ನಂದರು ರಾಕ್ಷಸನಂ ನೋಡಿ—

ಅಯ್ಯಾ ಅಮಾತ್ಯರೇ, ಈ ದಿವಸ ನಮ್ಮ ಬಳಿಯ ಅರಸುಗಳೇ ವಿಶೇಷವಾಗಿ ಯುದ್ಧಮಂ ಮಾಡಿದರಂತೆ. ಸೇನಾಪತಿಗಳಾದ ಭದ್ರಭಟಾದಿಗಳು ಮನ ಮುಟ್ಟಿ ಕಾಳಗಮಂ ಮಾಡಿದಂತೆ ಕಾಣುವುದಿಲ್ಲ. ಶತ್ರುಗಳು ಇವರಂ ಒಡಂಬಡಿಸಿದಂತೆ ತೋರುವುದು ಎನಲು—

ಅಯ್ಯಾ ಅರಸುಗಳಿರಾ, ಬಲಗುಪ್ತಾದಿಗಳಾದ ನಮ್ಮ ದಳಪತಿಗಳು ಭದ್ರಭಟಡಿಂಗಿರಾತರಿಗೆ ಹಿಂಬಲವಾಗಿ ಯುದ್ಧಮಂ ಮಾಡಿದರು. ಮುಂದಣ ಕಾರ್ಯಮಂ ಯೋಚಿಸಿ ನಮ್ಮ ಅರಸುಗಳ ಸೇನೆಯಂ ಅಮಿತ್ರರ ಮೇಲೆ ಕಳುಹಿಸಿ ವಿಂಗಡವಾಗಿ ಇದ್ದಾರು. ಇವರು ಬಹು ದಿನದಾರಭ್ಯ ಅಪ್ತರು. ವಾಹಿನಿಯಂ ಪ್ರೋತ್ಸಾಹಗೊಳಿಸುವುದಕ್ಕೆ ಹಗೆಗಳು ತುಚ್ಛರೆಂದು ಹೇಳುವುದು ಮಾತು ಮಾತ್ರವಲ್ಲದೆ ವಸ್ತುತಃ ಈಗಿನ ರಾಜಕಾರ್ಯವು ಬಹುಪ್ರಯತ್ನಸಾಧ್ಯವು. ರಾಜತಂತ್ರವು ಒಮ್ಮಿಂದೊಮ್ಮೆ ಪರ್ಯವಸಾನವಾಗತಕ್ಕುದಲ್ಲವೆಂದು ರಾಕ್ಷಸನು ಹೇಳುತ್ತಿರುವ ಸಮಯದಲ್ಲಿ ತುರಗಾರೂಢರಾದ ಇಬ್ಬರು ಚಾರರು ಬಂದು ನಂದರಿಗೆ ಕೈಮುಗಿದು—

ಬುದ್ಧೀ, ಖಡ್ಗಪಾಣಿಗಳಾದ ಪದಾತಿವರ್ಗದಿಂ ಯುಕ್ತವಾದ ಶತ್ರುಗಳ ನಾವೆಗಳು ಐದು ಸಹಸ್ರವು ಶೋಣಭದ್ರಾನದಿಯೊಳಗೆ ಬಂದು ನಮ್ಮ ಒಡೆಗಳಂ

ಹಿಡಿದು ನಾವಿಕರಂ ಪ್ರಹರಿಸಿ ನದಿಯಂ ದಾಟಿಬಂದು ಧ್ವಜಮಂ ನೆಟ್ಟು ವ್ಯೂಹಮಂ ರಚಿಸಿಕೊಂಡಿದ್ದಾರೆ. ಅವರ ನಾವೆಗಳ ರಕ್ಷಣೆಗೆ ಕಾಂಭೋಜಪತಿಯ ದಳವು ಬರುವುದಾಗಿದೆ. ಅದರ ಹಿಂದೆ ಪಾರಶೀಕಬಲ ಒದಗಿಬರುವಂತೆ ತೋರುತ್ತದೆ. ಆದುದರಿಂದ ಗಂಡಕೀಪ್ರಾಂತ್ಯದಲ್ಲಿ ಇರುವ ನಮ್ಮ ಅನೀಕವು ರಾಜಮಾರ್ಗಮಂ ಬಿಟ್ಟು ಮಾರ್ಗಾಂತರದಿಂದ ಬಂದು ನಿಂತಲ್ಲದೆ ಪಟ್ಟಣಕ್ಕೆ ಆತಂಕ ತಪ್ಪದು ಎಂದರು. ಅದಂ ಕೇಳಿ ನಂದರು ರಾಕ್ಷಸನಂ ನೋಡಿ—

ಅಯ್ಯಾ ಅಮಾತ್ಯರೇ, ನಮ್ಮ ವಾಹಿನೀನಾಯಕರು ಶತ್ರುಗಳಂ ತಡೆಯದೆ ಅವರು ಶೋಣಭದ್ರಾನದಿಯಂ ದಾಟುವುದು ನೋಡಿ ಸುಮ್ಮನೆ ಇದ್ದಂತೆ ತೋರುತ್ತಿದೆ. ಮೊದಲು ನೀವು ಹೇಳಿದ ಮೇರೆಗೆ ನಡೆಯಲಿಲ್ಲ. ನಮ್ಮ ಮೂಲಬಲಕ್ಕೂ ಶತ್ರುಸೇನೆಗೂ ಸಮೀಪವಾಯಿತು. ಇದೇನೋ ಒಂದು ಪ್ರಕಾರವಾದ ಛದ್ಮನೆ ಎಂದು ತೋರುತ್ತಿದೆ. ಈಗ ಕೋಪಕ್ಕೆ ಸಮಯವಲ್ಲ. ಆದರೂ ಹೋಗಿರುವ ನಮ್ಮ ಸೇನೆಗಳು ಗಂಡಕೀಪ್ರಾಂತ್ಯವಂ ಬಿಟ್ಟು ಮಾರ್ಗಾಂತರದಿಂದ ಶೋಣಭದ್ರಾನದಿಯಂ ದಾಟಿಬಂದು ಅರಾತಿಗಳಂ ಮುಂದೆ ದಾಟಲೀಸದಂತೆ ನಿಲ್ಲುವ ಮೇರೆಗೆ ಹೇಳಿಕಳುಹಿಸಿರಿ. ಅದಂ ಮೀರಿ ಬಂದರೆ ನಮ್ಮ ಪಟ್ಟಣಕ್ಕೆ ವೇದೆತಟ್ಟುವುದು. ನಾಳೆ ಶತ್ರುಗಳ ಮೇಲೆ ಯುದ್ಧವಾಗಲಿ. ಪ್ರತ್ಯರ್ಥಿಗಳ ಕಡೆ ಚಿತ್ರವರ್ಮನ ಸೈನ್ಯಕ್ಕೆ ನಮ್ಮ ಡಿಂಗಿರಾತನೆದುರಾಗಲಿ. ಮಲಯಪತಿಯ ವಾಹಿನಿಗೆ ನಮ್ಮ ಭದ್ರಭಟನು ಕಾಣಿಸಿಕೊಳ್ಳಲಿ. ಪುಷ್ಕರಾಕ್ಷನ ಬಲದೊಡನೆ ನಮ್ಮ ಬಲಗುಪ್ತನು ಯುದ್ಧಮಂ ಮಾಡಲಿ. ಸಿಂಧುಷೇಣನ ಚಮೂವಿನ ಮೇಲೆ ನಮ್ಮ ರಾಜಸೇನನು ಹೋಗಲಿ. ಮೇಘನಾದನ ಸಂಗಡ ನಮ್ಮ ಪುರುಷದತ್ತನು ನಿಲ್ಲಲಿ. ಶೇಖರನ ಮೇಲೆ ನಮ್ಮ ಲೋಹಿತಾಕ್ಷಂ ಮುತ್ತಲಿ. ಮಗಧ ಗಾಂಧಾರ ಶಕ ಚೀನ ಹೂಣಾಧಿಪರೊಡನೆ ನಮಗೆ ಸಾಮಂತರಾದ ಬಂಗಾಳಪತಿ ಮೈಥಿಲ ಓಢ್ರ ಘೂರ್ಜರ ವಿಧರ್ಭನಾಯಕರು ವ್ಯೂಹಮಂ ರಚಿಸಿಕೊಂಡು ಕಲೆಯಲಿ. ಅವರ ಕಿರಾತ ಪರಿವಾರದ ಮೇಲೆ ನಮ್ಮ ವಿಂಧ್ಯವನವಾಸಿಯಾದ ಭದ್ರಕನು ಭಿಲ್ಲಸೇನಾಪರಿವೃತನಾಗಿ ಕೈಮಾಡಲಿ. ಪಾರ್ವತೇಯರ ದಂಡಿನ ಮೇಲೆ ನಮ್ಮ ಮೂಲಬಲ ಸಮೇತರಾಗಿ ನಾವೇ ಯುದ್ಧಕ್ಕೆ ನಡೆಯುತ್ತಿದ್ದೇವೆ ಎಂದು ನಂದರು ಆಜ್ಞಾಪಿಸುತ್ತಿದ್ದರು.

ಆ ಸಮಯದಲ್ಲಿ ಹೋ! ಹೋ! ಎಂದು ಕೂಗುತ್ತ ತುರಗವನ್ನೇರಿ ಅತಿ ತ್ವರಿತದಿಂ ಬಂದ ದೂತರಿಬ್ಬರು—ಅರಸುಗಳು ಎಲ್ಲಿ ಇದ್ದಾರೆ? ಪಟ್ಟಣಕ್ಕೆ

ಬಾಧೆ ಬಂದಂತೆ ತೋರುತ್ತಿದೆ. ಬೇಗ ತಿಳುಹಿಸಿರಿ ಎಂದು ದ್ವಾರಪಾಲಕರಿಗೆ ಹೇಳಲು ; ಅವರು ಅದೇರೀತಿ ಹೋಗಿ ನಂದರಿಗೆ ವಿಜ್ಞಾಪಿಸಲಾಗಿ ; ಅವರಂ ಕರೆಯ ಕಳುಹಿಸಿ ಪಟ್ಟಣದ ವರ್ತಮಾನವೇನು ? ಎನಲು—

ಬುದ್ಧೀ, ಸರಯೂನದಿಯ ಮಾರ್ಗವಾಗಿ ಹತ್ತು ಸಾವಿರ ಶತ್ರುಗಳ ನಾವೆಗಳು ಸೇನಾಸಮೇತವಾಗಿ ಗಂಗಾಸಂಗಮಕ್ಕೆ ಬಂದು ಗಂಗಾನದಿಯಂ ದಾಟಿ ಪಟ್ಟಣಮಂ ಮುತ್ತುವಂತೆ ಉಭಯತೀರದಲ್ಲೂ ಸೈನ್ಯವೇ ಏಕಾಕಾರವಾಗಿ ಕಾಣಿಸುವುದಲ್ಲದೆ ನದೀತರಂಗಗಳು ಕಾಣಿಸುವುದಿಲ್ಲ. ಹೀಗೆ ಇನ್ನೂ ಎಷ್ಟು ಬರುವುದೋ ಹೇಳಲಳವಲ್ಲ. ಪ್ರತ್ಯಕ್ಷವಾಗಿ ಕಂಡುದನ್ನೇ ಬಿನ್ನವಿಸಿದೆವು. ಇನ್ನೂ ಹೆಚ್ಚಿ ಬಂದರೆ ರಿಪುಗಳು ನಮ್ಮ ಸರಪಣಿಯ ಸೇತುವೆಯಂ ಹಿಡಿಯುವರು ಎಂದು ದೂತರು ಹೇಳಿದರು. ಆಗ ರಾಕ್ಷಸನು ನಂದರಂ ಕುರಿತು—

ಅಯ್ಯಾ ಅರಸುಗಳಿರಾ, ವೈರಿಗಳು ಯುದ್ಧಮಂ ಮಾಡುವವರಂತೆ ಸೇನಾಭಾರಮಂ ಮುಂದುಗಡೆಯಲ್ಲಿ ತೋರಿ ಹಿಂದಣಿಂದ ಪುರದ ಪ್ರಾಕಾರವನ್ನಾಕ್ರಮಿಸಬೇಕೆಂದು ಬಂದಿದ್ದಾರು. ಚಿಂತೆ ಏನು ? ನೀವು ಎಂದಿನಂತೆ ಮೂಲ ಬಲ ಸಮೇತರಾಗಿ ನಾನು ಮಾಡುವ ಯುದ್ಧಸಾಹಸಮಂ ನೋಡುವವರಾಗಿರಿ. ನಾನು ಸ್ವಾಮಿಭಕ್ತನಾದುದು ಸತ್ಯವಾದರೆ ಶತ್ರುಗಳಂ ನಿಗ್ರಹಿಸಿ ಜಯವನ್ನುಂಟುಮಾಡಿ ನಿಮ್ಮ ಸೇವಕನಹುದೆಂದು ಜನರು ಹೇಳಿಕೊಂಬಂತೆ ಮಾಡುವೆನೆಂದು ಹೇಳಿ ಕವಚಮಂ ಧರಿಸಿ ಹಯವನ್ನೇರಿ ಕಾಪ್ಪಪ್ರಹಾರದಿಂ ಕೆರಳಿದ ಕಾಡಾನೆಯು ನಡೆಯುವಂತೆ ಭಲ್ಲೆಯಮಂ ಪಿಡಿದು ತನ್ನ ಮೈಗಾವಲಿನ ಲಕ್ಷ ತುರಗಾರೂಢರಿಂ ಸಮೇತನಾಗಿ ಶಕ್ತ್ಯಾಯುಧಮಂ ಧರಿಸಿ ದೇವಸೇನಾಪರಿವೃತನಾಗಿ ಅಸುರರ ಮೇಲೆ ಸಮರಕ್ಕೆ ನಡೆಯುವ ಕುಮಾರಸ್ವಾಮಿಯಂತೆ ತೆರಳುತ್ತಿದ್ದನು. ಆಗ ರಣಭೇರೀಧ್ವನಿಯು ಪ್ರಳಯಕಾಲದ ಸಿಡಿಲ ರವದಂತೆ ಶತ್ರುಗಳ ಹೃದಯಮಂ ತಲ್ಲಣಗೊಳಿಸುತ್ತಿದ್ದಿತು. ಅರಿಗಳ ಶಕ ಹೂಣ ಕಿರಾತ ಸೇನೆಗಳು ಗಂಗಾನದಿಯಂ ದಾಟಿ ಪಾಟಲೀಪುರದ ಪಶ್ಚಿಮದಿಕ್ಕಿನಲ್ಲಿಯೂ ದಕ್ಷಿಣೋತ್ತರ ಭಾಗಗಳಲ್ಲಿಯೂ ವರ್ಷಾಕಾಲದ ಮೇಘಪಂಙ್ತಿಗಳಂತೆ ವ್ಯಾಪಿಸಿ ನಗರದ ಸಮೀಪದಲ್ಲಿ ಬರುತ್ತಿದ್ದುವು. ಇದಂ ತಿಳಿದು ಪುರಮಂ ರಕ್ಷಿಸುವ ಸೇನೆಗಳು ಯುದ್ಧಸನ್ನದ್ಧವಾಗಿದ್ದುವು. ಕೋಟೆಕೊತ್ತಲುಗಳ ಮೇಲೆ ಬೆಳಗುವ ಜಗಜ್ಯೋತಿಗಳಿಂದ ಆ ಪೊಳಲು ಸಹಸ್ರಚಂದ್ರರುದಯಿಸಿದಂತೆಯೂ ತೇಜೋಲೋಕದಂ

ತೆಯೂ ಕಾಣುತ್ತ ಪಟ್ಟಣಮಂ ಮುತ್ತುವ ಶತ್ರುಗಳ ತಂಡಗಳು ಪತಂಗಸಂಘ
ದಂತೆ ತೋರುತ್ತಿದ್ದುವು. ಆಗ ರಾಕ್ಷಸನು ಪ್ರಾಣಿಗಳಂ ಸಂಹರಿಸುವ ಮೃತ್ಯು
ವಿನ ಹಾಗೆ ಪರಸೈನ್ಯದ ಮೇಲೆ ನಡೆದು ಯುದ್ಧಮಂ ಮಾಡುತ್ತ ಮೇಲೆ ಕವಿದು
ಬರುವ ಅರಿಬಲಮಂ ಕೊಲ್ಲುತ್ತ ಇದ್ದನು. ಅತನ ರಭಸಕ್ಕೆ ಅಹಿತಬಲವು
ಇಬ್ಭಾಗವಾಗಿ ಹಿಮ್ಮೆಟ್ಟುತ್ತಿದ್ದಿತು. ಉತ್ತರದಿಗ್ಭಾಗರಕ್ಷಕನಾದ ಅವಂತೀದೇಶಾ
ಧಿಪನು ಹಗೆಯವರ ಮೇಲೆ ಹೋಗುವಲ್ಲಿ ಪ್ರಾಕಾರದ ಮೇಲಣ ಘಾತಮಂ
ತಪ್ಪಿಸಿಕೊಂಡು ತೆರಳುವಂತೆ ನಿರೂಪಿಸಿ ತನ್ನ ಬಳಿಯ ಲಕ್ಷತೇಜಿಗಳಂ ಮೂರು
ತಂಡಗಳಂ ಮಾಡಿ ಮೂರುದಿಕ್ಕಿನಲ್ಲಿ ಯುದ್ಧಮಂ ಮಾಡುವಂತೆ ನೇಮಿಸಿ ಕಳು
ಹಿಸಿ ಉತ್ತರ ದ್ವಾರದಿಂದ ಪ್ರಾಕಾರವನ್ನೇರಿ ಸುತ್ತುತ್ತ ಬರುತ್ತಿರುವ ಅಮಿ
ತ್ರರ ಮೇಲೆ ಫಿರಂಗಿಯ ಗುಂಡುಗಳ ತಂಡಗಳಂ ಕರೆಯುತ್ತ ಲಕ್ಷೋಪಲಕ್ಷ
ಬಾಣದ ಕೊಳವಿಗಳಂ ಕ್ಷಣಮಾತ್ರದಿಂ ಬಿಡುತ್ತ ಕೋಟೆಯ ಸಮೀಪವಂ
ಶತ್ರುಗಳು ಸೇರದಂತೆ ಮೇಲೆ ಸಂಗ್ರಾಮವಂ ರಚಿಸುತ್ತ ನಿಂತಲ್ಲಿ ನಿಲ್ಲದೆ ಪಶ್ಚಿಮ
ದ್ವಾರದಿಂ ಹೊರಗೆ ಹೊರಟು ಸೌರಾಷ್ಟ್ರಾಧಿಪತಿಗೆ ನೇಮಿಸಿ ಕವಿದುಬರುವ
ಶತ್ರುಸೇನೆಯಂ ಹೊಕ್ಕು ಬಂದೊಂದು ಖಡ್ಗಪ್ರಹಾರಕ್ಕೆ ನಾಲ್ಕಾರು ಪರಿಪಂಥಿ
ಗಳ ಶಿರಸ್ಸುಗಳನ್ನಿಳುಹುತ್ತ ತುರಗಂಗಳಂ ಛೇದಿಸುತ್ತ ಆನೆಗಳ ಸೊಂಡಲು
ಗಳಂ ಹರಿಯುತ್ತ ಅರಿಗಳು ಪ್ರಾಕಾರಮಂ ಹಿಡಿಯದಂತೆ ಮೇಲಣವರಿಗೆ
ನೇಮಿಸಿ ಮೇಘಮಧ್ಯದಲ್ಲಿ ಹೊಳೆ ಹೊಳೆಯುವ ಸೂರ್ಯನಂತೆ ರಾಕ್ಷಸನು
ದಕ್ಷಿಣ ದಿಕ್ಕಿನ ಶತ್ರುಗಳ ಮೇಲೆ ನಡೆಯುತ್ತಿರಲು; ಪಶ್ಚಿಮದಿಕ್ಕಿನ ಗುಂಡುಗಳ
ಸಂಗಡಲೇ ಹಗೆಗಳ ತಲೆಗಳು ಚಂಡಿನಂತೆ ಉರುಳುತ್ತಿದ್ದುವು. ಅಗ ದಕ್ಷಿಣ
ದಿಕ್ಕಿನ ರಿಪುಗಳ ಮೇಲೆ ಕವಿದು ಶೂಲಗಳಿಂ ಪ್ರಹರಿಸುತ್ತ ಭಲ್ಲೆಯಗಳಿಂದಿರಿದು
ಕೆಡಹುತ್ತ ಆ ದಿಕ್ಕಿನ ಕಳಿಂಗರಾಯನಿಗೆ ನೇಮಿಸಿ ತನ್ನ ಹಸ್ತಭಲ್ಲೆಯದಿಂದಲೇ
ವೈರಿಕಮೂಪತಿಗಳಂ ಕೆಡಹುತ್ತ ಓಡುವವರನ್ನಟ್ಟುತ್ತ ಅಟ್ಟಿಬರುವವರಂ ನಿಗ್ರ
ಹಿಸುತ್ತ ದಕ್ಷಿಣದ್ವಾರದಿಂ ಪುರದ ಪ್ರಾಕಾರದ ಮೇಲೆ ನಿಂತು ರಾಜದ್ವಾರದ ಬಳಿ
ಯಣ ಸೇನೆಗಳಿಗೆ ಎಚ್ಚರಮಂ ಹೇಳುತ್ತ ಪೌರಜನಕ್ಕೆ ಅಭಯಮಂ ಕೊಡುತ್ತ
ಅರಿಗಳ ಆಯುಧಮಂ ತಂದವನಿಗೆ ನಾಲ್ಕಾರು ಮೊಹರಿಗಳಂ ಶಿರಸ್ಸಂ ತಂದವ
ನಿಗೆ ನೂರಾರು ಮೊಹರಿಗಳಂ ಗಜಾರೂಢರಂ ಸಂಹರಿಸಿದವರ್ಗೆ ಸಾವಿರಾರು
ಮೊಹರಿಗಳಂ ಸೇನಾಧಿಪರ ಶಿರಸ್ಸಂ ತಂದವನಿಗೆ ಲಕ್ಷೋಪಲಕ್ಷ ಮೊಹರಿಗಳಂ

ಕೊಡುತ್ತ ಪ್ರಾಕಾರದ ಮೇಲೆ ಬರುತ್ತಿರಲು; ನಿರರ್ಥಕವಾಗಿ ಅನೃತಮಂ ಹೇಳುವವನ ಪಾತಕದಂತೆಯೂ ಸ್ವಸ್ಥಾನಮಂ ಪುನಃ ಪುನಃ ಕವಿಯುತ್ತಿರುವ ಜೇನುಹುಳಗಳ ತಂಡಗಳಂತೆಯೂ ಶತ್ರುಸೇನೆಯು ಮರಳಿ ಮರಳಿ ಪ್ರಾಕಾರದ ಮೂಲಮಂ ಹಿಡಿದು ಏಣಿಗಳನ್ನೇರಿಸಿ ಲಗ್ಗೆಯಂ ಹತ್ತುವುದಕ್ಕೆ ಯತ್ನಮಂ ಮಾಡುತ್ತಿರಲು; ಆಗ ಒಂದೇ ವೇಳೆಯಲ್ಲಿ ಮೇಲಿನಿಂದ ಎರಚುವ ಕಾಯ್ದ ಸೀಸದ ಮಳೆಯಿಂದಲೂ ಫಿರಂಗಿಯ ಗುಂಡುಗಳ ತಂಡಗಳಿಂದಲೂ ಶತಘ್ನೀಘಾತಗಳಿಂದಲೂ ಬಾಣವೃಷ್ಟಿಗಳಿಂದಲೂ ಶೂಲ ಪ್ರಾಸಾದ್ಯಾಯುಧಗಳ ಪೆಟ್ಟುಗಳಿಂದಲೂ ಅಶನಿಘಾತದಿಂದುರುಳುವ ವೃಕ್ಷಗಳ ಪಙ್ತಿಗಳಂತೆ ಅಹಿತಬಲವು ಛಿನ್ನಾಭಿನ್ನಗಳಾಗಿ ಗಾಯವಡೆದು ರಕ್ತದ ಹಳ್ಳಗಳಂ ದಾಟಿ ಹಿಮ್ಮೆಟ್ಟಿ ನಿಂತಿರಲು; ಆಗ ರಾಕ್ಷಸನು ಕ್ರುದ್ಧನಾಗಿ ದುಷ್ಟ ಕ್ಷತ್ರಿಯರ ಮೇಲೆ ನಡೆಯುವ ಭಾರ್ಗವರಾಮನಂತೆ ರಥವನ್ನೇರಿ ಆಪ್ತಸೇನಾಸಮೇತನಾಗಿ ಮೇಘಪಙ್ತಿಯಂ ಕಲಕುವ ಝಂಝಾಮಾರುತನಂತೆ ಅತಿರಭಸದಿಂದ ರಥವನ್ನೋಡಿಸುತ್ತ ಒಂದೊಂದು ಬಾಣಪ್ರಹಾರಕ್ಕೆ ನಾಲ್ಕಾರು ಶತ್ರುಶಿರಂಗಳನ್ನಿಳುಹುತ್ತ ಹೊಡೆ ಹೊಡೆ ಎಂದು ಬೊಬ್ಬಿರಿದು ಮೇಲ್ಗವಿಯುತ್ತ ಪ್ರತ್ಯರ್ಥಿವ್ಯೂಹಮಂ ಭೇದಿಸುತ್ತ ಕುಲಾಲಚಕ್ರದಂತೆ ನಿಂತಲ್ಲಿ ನಿಲ್ಲದೆ ಅರಿಸೈನ್ಯಮಂ ಸುತ್ತುತ್ತ ಶುಷ್ಕಪರ್ಣವನ್ನೀಡಾಡುವ ಸುಂಟರಗಾಳಿಯಂತೆ ಧನುರ್ಮುಕ್ತವಾದ ವಿಶಿಖ ಪರಂಪರೆಯಿಂದ ವಿಪಕ್ಷರ ತಲೆಗಳಂ ಆಕಾಶಕ್ಕೆ ಹಾರಿಸುತ್ತಿದ್ದನು. ಈಗ ಕಂಡ ಶತ್ರುಗಳ ತಂಡಗಳು ನಿಮೇಷಮಾತ್ರದಲ್ಲೇ ಬಯಲಾಗುತ್ತಿದ್ದುವು. ಇಲ್ಲಿ ಕಂಡ ರಾಕ್ಷಸನ ರಥವು ಕ್ಷಣಮಾತ್ರದಲ್ಲಿ ಹರಿದಾರಿಯಲ್ಲಿ ಕಾಣಿಸುತ್ತ ಮತ್ತೆ ನೋಡಿದರೆ ಇದ್ದ ಬಳಿಯಲ್ಲೇ ಗೋಚರಿಸುತ್ತ ಇದ್ದಿತು. ಜಲತರಂಗಗಳಲ್ಲಿ ಪ್ರತಿಫಲಿಸುವ ಸೂರ್ಯಬಿಂಬದಂತೆ ಶತ್ರುತಂಡಗಳಲ್ಲಿ ಎಲ್ಲಿ ನೋಡಿದರೂ ಧನುರ್ಧಾರಿಯಾದ ರಾಕ್ಷಸನು ಕಾಣಬರುತ್ತಿರಲು; ಅಹುದಹುದೋ! ಲೋಕೈಕ ವೀರನಹುದೋ! ಕಲಿಪಾರ್ಥನಹುದೋ! ಜಗದೊಳ್ ನಿನ್ನಂ ಪೋಲಿಸುವ ವೀರರುಂಟೇ? ಎನ್ನುತ್ತ ಚಕ್ರರಕ್ಷಕರಾದ ವೀರಭಟರು ಪೊಗಳುತ್ತಿರಲು; ಶತ್ರುಗಳ ಚತುರಂಗಬಲವು ಭೂಮಿಯಲ್ಲಿ ಉರುಳಿ ವಸಂತಕಾಲದ ಗಿರಿನದಿಗಳಲ್ಲಿ ಕಾಣಿಸುತ್ತಿರುವ ಶಿಲಾಸಮೂಹಗಳಂತೆ ರಕ್ತಮಂ ಸ್ರವಿಸುತ್ತ ಪ್ರಾಕಾರದ ಸುತ್ತಲೂ ಅತಿ ರೌದ್ರವಾಗಿ ತೋರುತ್ತಿರಲು; ರಾಕ್ಷಸನ ಶರಹತಿಗೆ ತರಹರಿಸಲಾರದೆ ಪರಸೈನ್ಯವು ಪಲಾಯನಂಗೆಯ್ಯಲು; ರಾಕ್ಷಸನು ಅರಿಗಳನ್ನೋಡಿಸಿ ರಥದಿಂದಿಳಿದು ತುರಗವ

ನ್ನೇರಿ ಪುರಮಂ ಪೊಕ್ಕು ಯುದ್ಧದಲ್ಲಿ ಹತವಾದ ತನ್ನ ಸೇನೆಯಂ ನೋಡುತ್ತ ಬರುತ್ತಿರಲು ; ಅಷ್ಟರಲ್ಲಿಯೇ ಪಲಾಯನಂಗೆಯ್ದ ಶತ್ರುಗಳು ಗುಂಪುಕೂಡಿ ಕೃತ ಸಂಕೇತರಾಗಿ ಮದದಾನೆಯ ಹಿಂಡುಗಳಿಗೆ ಕಣ್ಣುಗಳಂ ಕಟ್ಟಿ ಹಿಂಭಾಗದಲ್ಲಿ ನಿಂತು ಒಂದೇ ವೇಳೆ ಆ ಗಜಗಳಂ ಓಡಿಸುತ್ತ ತಂದು ಆ ಪಟ್ಟಣದ ಅಗಳಿನಲ್ಲಿ ಅವುಗಳಂ ಕೆಡಹಿ ಅದರಿಂದಲೇ ಅಗಾಧವಾದ ಅಗಳಂ ಹೂಳಿ ರೋಷಾವೇಶದಿಂದ ಅದನ್ನೇ ತುಳಿಯುತ್ತ ಬಂದು ಪ್ರಾಕಾರಮಂ ಹಿಡಿದು ಏಣಿಗಳನ್ನೇರಿಸಿ ಲಗ್ಗೆಯಂ ಹತ್ತಿ ಧ್ವಜಮಂ ನೆಟ್ಟು ತಮ್ಮ ಜಯಭೇರೀಧ್ವನಿಯಂ ಮಾಡುತ್ತಿರಲು ; ಅದಂ ಕೇಳಿ ರಾಕ್ಷಸನು ಆಜ್ಯಾಹುತಿಯಿಂ ಪ್ರಜ್ವಲಿಸುವ ಅಗ್ನಿಯಂತೆ ಕೋಪಾವಿಷ್ಟನಾಗಿ ರಾಜದ್ವಾರದಲ್ಲಿರುವ ಸೇನೆಯಂ ತನ್ನ ಸಂಗಡಬರುವಂತೆ ನೇಮಿಸಿ ತನ್ನ ಮೈಗಾವಲಿನ ತುರಗಾರೂಢರಿಂ ಸಮೇತನಾಗಿ ಅತಿತ್ವರೆಯಿಂ ತನ್ನ ಅಶ್ವವನ್ನೋಡಿಸುತ್ತ ಪ್ರಾಕಾರದ ಮೇಲೆ ಹತ್ತಿ ಬಂದಿರುವ ಶತ್ರುಗಳ ಮೇಲೆ ಕವಿದು ತನ್ನ ಕೈಗತ್ತಿಯಿಂದ ಅವರ ಶಿರಗಳಂ ತರಿದು ಧ್ವಜಮಂ ಮುರಿದು ಜಯಭೇರಿಗಳಂ ಹರಿದು ಅವರು ಬಂದ ಮಾರ್ಗವಿಡಿದು ಪ್ರಾಕಾರದಿಂ ತುರಗಮಂ ಹಾರಿಸಿ ಕೆಳಗೆ ಕವಿಯುತ್ತಿರುವ ದ್ವೇಷಿಗಳ ಮೇಲೆ ನಡೆದು ಮೊದಲಿನಂತೆ ಒಂದೊಂದು ಖಡ್ಗಪ್ರಹಾರಕ್ಕೆ ಹಗೆಗಳ ನಾಲ್ಕಾರು ಶಿರಗಳನ್ನಿಳುಹುತ್ತ ಸೈನ್ಯವನ್ನಟ್ಟುತ್ತಿರಲು ; ಅಷ್ಟರಲ್ಲಿಯೇ ಪೂರ್ವದಿಕ್ಕಿನ ಭೋಜಪತಿಯ ಸೇನೆಯು ಬಂದೊದಗಲು ; ರಾಜದ್ವಾರದ ಬಳಿಯ ವಾಹಿನಿಯು ತನಗೆ ಬೆಂಬಲವಾಗಿ ಬರುತ್ತಿರಲು ; ಇದೆಲ್ಲಮಂ ನೋಡಿ ಶತ್ರುಗಳು ನಿರ್ವಹಿಸಲಾರದೆ ಈತನು ಅಮಾತ್ಯರಾಕ್ಷಸನಲ್ಲಾ ! ಪ್ರತ್ಯಕ್ಷವಾಗಿ ಸಂಹರಿಸಲು ಬಂದ ರಾಕ್ಷಸನೇ ಅಹುದೆಂದು ಪಲಾಯನಂಗೆಯ್ಯಲು ಆಗ ರಾಕ್ಷಸನ ಪಡೆಯು ಅವರಂ ಅಟ್ಟಿ ಓಡಿಸುತ್ತಿರಲು ; ಆ ಸಮಯದಲ್ಲಿ ಜಯಭೇರೀನಿನಾದವು ಅರಿಗಳಿಗೆ ಭಯಂಕರವಾಗಿ ಪೌರಜನಕ್ಕೆ ಹರ್ಷಕರವಾಗಿ ಭೂಮ್ಯಂತರಿಕ್ಷಗಳಂ ತುಂಬುತ್ತಿದ್ದಿತು. ಆ ವೇಳೆಯೊಳ್ ರಾಕ್ಷಸನು ಅರಾತಿಗಳು ಬಹು ದೂರ ಓಡಿಹೋದರೆಂಬ ವರ್ತಮಾನಮಂ ತಿಳಿದು ರಾಜದ್ವಾರದ ಸೇನೆಗೆ ಎಂದಿನಂತೆ ಪುರಮಂ ಕಾದುಕೊಂಡಿರತಕ್ಕುದೆಂದು ನೇಮಿಸಿ ಅರುಣೋದಯ ಸಮಯವಾಗಲು ; ತನ್ನ ದೇಹಶ್ರಮಮಂ ನೋಡದೆ ನಿವಾತಕವಚರೆಂಬ ಅಸುರಸಮೂಹಮಂ ವಧಿಸಿ ತಂದೆಯಾದ ಸುರಪತಿಯಂ ಕಾಣಬೇಕೆಂಬ ಇಚ್ಛೆಯಿಂ ಬರುತ್ತಿರುವ ಪಾರ್ಥನಂತೆ ನಂದರ ಬಳಿಗೆ ಬರುತ್ತಿದ್ದನು. ಆಗ ರಾಕ್ಷಸನು ಮಾಡಿದ ಯುದ್ಧಮಂ ಗಜಾರೂಢರಾಗಿ ನೋಡುತ್ತಿದ್ದ ನಂದರು ತಮಗೆ

ಜಯವನ್ನುಂಟುಮಾಡಿಕೊಂಡು ಬರುತ್ತಿರುವ ರಾಕ್ಷಸನಂ ದೂರದಲ್ಲಿಯೇ ಕಂಡು ತಾವು ಹಸ್ತಿಯಿಂದಿಳಿದು ಸಮೀಪಕ್ಕೆ ಬಂದು ಕೈಮುಗಿಯುತ್ತಿರುವ ರಾಕ್ಷಸನನ್ನಾಲಂಗಿಸಿಕೊಂಡು—

ಅಯ್ಯಾ ಅಮಾತ್ಯರೇ, ಇಂದು ಬಹುಕಾರ್ಯನಿರ್ವಾಹಮಂ ಮಾಡಿದಿರಿ. ನಮ್ಮ ಪುಣ್ಯದಿಂದಲೇ ನೀವು ನಮಗೆ ಅಮಾತ್ಯಶ್ರೇಷ್ಠರಾದಿರಿ. ನೀವು ಒಬ್ಬರು ಇರುವಲ್ಲಿ ನಮಗೆ ಶತ್ರುಗಳೆಂದರೇನು? ಈ ಪರ್ವತರಾಜನೆಷ್ಟುಮಾತ್ರದವನು! ಮುಂದೆ ನೀವು ಹೇಳಿದಂತೆ ನಾವೆಲ್ಲರೂ ಕೇಳತಕ್ಕವರು ಎಂದು ಹೇಳುತ್ತ ರಕ್ತಸಿಕ್ತವಾದ ಆತನ ಕವಚಮಂ ತಾವೇ ಬಿಚ್ಚುತ್ತ ಆತನ ದೇಹದಲ್ಲಿದ್ದ ಶಸ್ತ್ರದ ಗಾಯಗಳಿಗೆ ಔಷಧಗಳಂ ಲೇಪಿಸುತ್ತ ನೀವು ವಿಶ್ರಮಿಸಿಕೊಳ್ಳುತ್ತಿರುವವರಾಗಿರಿ. ರಿಪುಗಳು ಎದುರಾದರೆ ನಾವೇ ಯುದ್ಧಮಂ ಮಾಡಿ ಬರುವೆವೆಂದು ಹೇಳುತ್ತಿರಲು; ಆ ಮಾತಿಗೆ ರಾಕ್ಷಸನು—

ಅಯ್ಯಾ ಅರಸುಗಳಿರಾ, ಈ ರಾತ್ರಿಯುದ್ಧದಲ್ಲಿ ನಿರ್ವಹಿಸಲಾರದೆ ಪಲಾಯನಂಗೆಯ್ದ ಶತ್ರುಗಳಂತೆ ಉಳಿದ ಅರಿಸೇನೆಯ ಮೇಲೆ ನಾನೇ ಕಾಣಿಸಿಕೊಂಡು ಸಮರಮಂ ಮಾಡಿ ಅವರನ್ನು ಈಗ ಇಳಿದಿರುವ ಪಾಳಯದಿಂದ ಪಲಾಯನಂಗೈಯ್ಯುವಂತೆ ಮಾಡದೆ ಉಪೇಕ್ಷಿಸಿದರೆ ಮುಂದಣ ಕಾರ್ಯವು ಹೇಗಿರುವುದೋ? ಅದರಿಂದ ಈಗಿನ ದೇಹಶ್ರಮಮಂ ನೋಡದೆ ಸೇನಾಸಮೇತನಾಗಿ ವಿರೋಧಿಗಳ ಮೇಲೆ ನಾನೇ ನಡೆವೆನು. ನೀವು ಹಿಂಬಲವಾಗಿ ಬರಬಹುದು ಎನಲು; ಅದಕ್ಕೆ ನಂದರು—

ಅಯ್ಯಾ, ನೀವಲ್ಲದೆ ಯುದ್ಧವೆಂದರೇನು? ಬಹು ಶತ್ರುಗಳಂ ಈಗ ನಿಗ್ರಹಿಸಿ ಬಂದುದರಿಂದ ಪುನಃ ನಿಮ್ಮನ್ನೇ ಆಯಾಸಪಡಿಸಬಾರದೆಂದು ಹೇಳಿದೆವು. ವೈರಿಗಳು ಯುದ್ಧಸನ್ನದ್ಧರಾಗಿ ಬರುವುದಾದರೆ ಸಕಲಮಂ ನೀವೇ ನಿರ್ವಹಿಸಬೇಕು. ನಮ್ಮ ಭರವಸವು ನಿಮ್ಮಲ್ಲಿರುವಂತೆ ಸೇನಾಪತಿಗಳಲ್ಲಿ ನಮಗಿಲ್ಲ. ಆದುದರಿಂದ ಯಾವರೀತಿಯಲ್ಲಿ ಯುದ್ಧಕ್ಕೆ ದಳಮಂ ನಿಲ್ಲಿಸಬೇಕೋ ಅದೆಲ್ಲವೂ ನಿಮ್ಮ ವಶವೇ ಸರಿ. ಗಜಾಧ್ಯಕ್ಷರಂ ಸನ್ಮಾನಗೊಳಿಸಿ ಶತ್ರುಗಳ ಮೇಲೆ ನಡೆಯುವವರಾಗಿರಿ. ಅಶ್ವಲಕ್ಷಾಧಿಪತಿಗಳಂ ಪ್ರೋತ್ಸಾಹಪಡಿಸುತ್ತ ಅರಿಗಳಂ ನಿಗ್ರಹಿಸುವವರಾಗಿರಿ. ಪದಾತಿವರ್ಗಮಂ ರಕ್ಷಿಸುತ್ತ ಅಮಿತ್ರರ ಮೇಲೆ ಕಾಣಿಸುವವರಾಗಿರಿ. ಯುದ್ಧದಲ್ಲಿ ಹಿಮ್ಮೆಟ್ಟಿದವರಂ ಸದೆಯುವವರಾಗಿರಿ. ಭದ್ರಭಟನಿಗೆ ಸಹಾಯಮಂ ಮಾಡುವವರಾಗಿರಿ. ಡಿಂಗಿರಾತನಿಗೆ ಧೈರ್ಯಮಂ ಹೇಳಿರಿ. ನಮ್ಮ

ಸಾಮಂತರಾಜರಂ ಪ್ರೇರಿಸಿರಿ. ಬಲಗುಪ್ತವಿಜಯವರ್ಮಾದಿಗಳ ಮನೋಭಾವಮಂ ತಿಳಿದು ಯುದ್ಧಕ್ಕೆ ನೇಮಿಸಿರಿ ಎಂದು ರಾಕ್ಷಸನಿಗೆ ಹೇಳಿದರು.

ಆ ಮಾತಿಗೆ ರಾಕ್ಷಸನು ಸಮ್ಮತನಾಗಿ ತನ್ನ ಸೇನಾನಾಯಕರಿಗೆ ವ್ಯೂಹಮಂ ರಚಿಸಿಕೊಂಡು ಮುಂದೆ ತೆರಳುವಂತೆ ವಿಧಿಸಿ ತನ್ನ ಪಾರ್ಶ್ವದಲ್ಲಿದ್ದ ದೂತರ ಮುಖಮಂ ನೋಡಿ—

ಎಲೈ, ಈ ದಿನ ರಾತ್ರಿಯಲ್ಲಿ ಸಮರದೊಳ್ ನಿಂತು ಯುದ್ಧಮಂ ಮಾಡದೆ ಶಕಸೇನೆಯಂ ಕಂಡು ಪಲಾಯನಂಗೆಯ್ದ ನಮ್ಮ ಮಾರ್ವಾಡ ದೇಶಾಧಿಪತಿಯ ಚತುರಂಗಮಂ ಕರತಂದು, ನಮ್ಮ ವಿಂಧ್ಯವನಸ್ಥರಾದ ಭಿಲ್ಲರ ಫೌಜು ತಮ್ಮ ಬಾಯ ತಂಬುಲಮಂ ಅವರ ಮುಖದ ಮೇಲೆ ಉಗುಳುವಂತೆ ನೇಮಿಸು. ಮತ್ತು ಶತ್ರುಗಳ ಮೇಲೆ ಯುದ್ಧಕ್ಕೆ ಹೋದ ಕೊಂಕಣಪತಿಯ ಸೇನಾಜನವು ಅವರ ಸಂಗಡ ಜಗಳಮಂ ಮಾಡದೆ ತಮ್ಮ ಬಂಧುಜನಗಳ ಯೋಗಕ್ಷೇಮಮಂ ವಿಚಾರಿಸುತ್ತ ಅವರಿಗೆ ಮಿತ್ರರಂತೆ ಇದ್ದುದರಿಂದ ಅವರಂ ಫಿರಂಗೀ ಬಾಯಿಗೆ ಕಟ್ಟಿ ಸಂಹರಿಸುವಂತೆ ಹೇಳು. ಆ ಕೊಂಕಣರಾಜ್ಯಮಂ ನಮ್ಮ ಭೋಜಪತಿಯ ವಶಮಂ ಮಾಡಲಿ. ಆಂಧ್ರದೇಶಮಂ ನಮ್ಮ ಕಳಿಂಗರಾಯನಿಗೆ ಕೊಡಲಿ ಎಂದು ದೂತರಿಗೆ ನೇಮಿಸುತ್ತಿರಲು ; ಆಗ ಕಮಲಬಾಂಧವನು ಉದಯಶಿಖರದೇಶವನ್ನಲಂಕರಿಸಿದನು.

ಆಗ ನಂದರೆದ್ದು ಸ್ನಾನಾದಿ ನಿತ್ಯಕೃತ್ಯಮಂ ಮಾಡಿ ದಿವ್ಯಭೂಷಣಭೂಷಿತರಾಗಿ ಶೃಂಗರಿಸಿ ಕಾದಿರುವ ತಮ್ಮ ಗಜಶ್ರೇಷ್ಠಗಳಂ ಹತ್ತುತ್ತಿರಲು ; ಹಾಗೆಯೇ ರಾಕ್ಷಸನು ಸನ್ನದ್ಧವಾದ ಆನೆಯಂ ಹತ್ತಿ ಮುಂದೆ ನಡೆದನು. ಆ ಸಮಯದಲ್ಲಿ ಶತ್ರುಸೇನೆಗಳು ಎದುರಾಗಿ ಕಾಣಿಸಿಕೊಂಡುವು. ಆಗ ಪರಸ್ಪರವಾಗಿ ರೋಷಾವೇಶದಿಂದ ಚಿಮ್ಮುವ ಆಯುಧ ಪ್ರಭೆಗಳು ಸಮುದ್ರತರಂಗಗಳಲ್ಲಿ ತೋರುವ ಸೂರ್ಯಪ್ರಭೆಯಂತೆ ದೃಷ್ಟಿಮಾರ್ಗಮಂ ನಿರೋಧಿಸುತ್ತಿದ್ದುವು. ಆ ವೇಳೆಯಲ್ಲಿ ಅಹಂಪೂರ್ವಮಹಂಪೂರ್ವಮೆಂದು ಕಲಹಮಂ ಮಾಡುವ ಧನುರ್ಧಾರಿಗಳ ಕೋದಂಡದಿಂ ಹೊರಡುವ ಬಾಣಪಙ್ಕ್ತಿಗಳು ಮೇಘಗಳ ನೆಸೆಯಿಂದ ಸುರಿಯುವ ಉದಕವೃಷ್ಟಿಯಂತೆ ಭೂವ್ಯಾಕಾಶಗಳಲ್ಲಿ ವ್ಯಾಪಿಸಿ ಉಭಯಬಲಮಂ ಮುಚ್ಚಿ ಎಲ್ಲಿನೋಡಿದರೂ ಶರವನದಂತೆ ಕಾಣಿಸುತ್ತಿದ್ದುವು. ಹೀಗೆ ಬರುವ ಬಾಣಪರಂಪರೆಯನ್ನು ರೋಷಾವೇಶದಿಂದ ಮೈಮರೆತಿರುವ ತುರಗಾರೂಢರು ತಮ್ಮ ಕೈಕತ್ತಿಗಳಿಂದ ತಡೆಯುತ್ತ ಧನುರ್ಧಾರಿಗಳಾದ ಶೂರರಂ ಭೇದಿಸುತ್ತ

ಹಾರುತ್ತ ಬರುವ ವೀರರನ್ನು ತಮ್ಮ ಭಲ್ಲೆಯಗಳಿಂದ ತಿವಿದು ಸಂಹರಿಸುತ್ತ ಬಳಿ ಹೊಕ್ಕು ಇರಿಯುವ ಈಟಿಯವರನ್ನು ಎದುರಿಸಿ ಗುಂಪಾಗಿ ಬಂದು ತಮ್ಮ ಕೈಪಟ್ಟಸಗಳಿಂದ ಸಂಹರಿಸುತ್ತಿರಲು ; ಅದನ್ನು ನೋಡಿ ಗಜಾರೋಹಕರಾದ ಶೂರರು ಗುಂಪಾಗಿ ಕಾಣಿಸಿಕೊಂಡು ತಮ್ಮ ಬಾಣಪರಂಪರೆಯಿಂದ ಆ ಶತ್ರು ತುರಗಾರೂಢರಂ ಸಂಹರಿಸುತ್ತಿದ್ದರು. ಅದಂ ತಿಳಿದು ಕ್ರುದ್ಧರಾದ ಫಿರಂಗಿಯವರು ಹತ್ತಿಸಿದ ಗುಂಡುಗಳ ತಂಡಗಳಿಂದ ಆ ವೇತಂಡಗಳ ಗಂಡಮಂಡಲಂಗಳು ತುಂಡುತುಂಡಾಗುವಂತೆ ಹೊಡೆದರು. ಅದೆಲ್ಲಮಂ ನೋಡಿದ ರಥಸ್ಥರಾದ ವೀರರು ತಮ್ಮ ಸಾರಥಿಯಂ ಪ್ರೇರಿಸಿ ವರೂಥಾಶ್ವಂಗಳಂ ಚಬುಕಿಸಿಂದ ಹೊಡೆದು ತೀವ್ರವೇಗದಿಂದ ಹೊರಡುವ ತಮ್ಮ ತೀಕ್ಷ್ಣವಾದ ಬಾಣಪರಂಪರೆಯಿಂದ ಆ ಫಿರಂಗಿಯವರಂ ಸಂಹರಿಸಿ ಶತ್ರುಗಳ ರಥಗಳು ಎದುರಾಗಲು ತಮ್ಮ ಕರಲಾಘವಮಂ ತೋರಿಸಿ ಮೇಲೆ ಬರುವ ಬಾಣಪಙ್ಕ್ತಿಗಳಂ ಕತ್ತರಿಸಿ ಶತ್ರುರಥಿಕರ ಧನಸ್ಸುಗಳಂ ಭೇದಿಸಿ ಧ್ವಜಗಳಂ ಖಂಡಿಸಿ ಸೂತರುಗಳ ಶಿರವನ್ನರಿದು ತುರಗಗಳಂ ಘಾತಿಸಿ ಓಡುವ ತೇರಾಳ್ಗಳಂ ಸಂಹರಿಸುತ್ತಿದ್ದರು. ಆಗ ನುಗ್ಗುನುಗ್ಗಾದ ಶತಾಂಗಗಳಿಂದಲೂ ತುಮುರುತುಮುರಾದ ಪತಾಕೆಗಳಿಂದಲೂ ನುಚ್ಚುನುಚ್ಚಾದ ಛತ್ರಗಳಿಂದಲೂ ತುಂಡುತುಂಡಾದ ಆಯುಧಗಳಿಂದಲೂ ಖಂಡಖಂಡಗಳಾದ ಅಶ್ವಸಾರಥಿಗಳಿಂದಲೂ ಛಿನ್ನಭಿನ್ನವಾದ ರಥಿಕರ ಶರೀರಗಳಿಂದಲೂ ಸಾಂದ್ರವಾದ ಆ ರಣಭೂಮಿಯು ಚಿತ್ರಾಸ್ತರಣದಂತೆ ತೋರುತ್ತಿದ್ದಿತು. ತಮ್ಮ ಬಲವು ನಷ್ಟವಾದುದಂ ನೋಡಿ ರೋಷಾವೇಶದಿಂ ಪರವಶರಾಗಿರುವ ಉಭಯಬಲದ ಸೇನಾನಾಯಕರ ಹೂಂಕಾರದಿಂದ ಪೂರ್ವಪಶ್ಚಿಮ ಸಮುದ್ರಗಳು ಮೇರೆ ತಪ್ಪಿ ಒಂದಾಗುವಂತೆಯೂ ಉಭಯ ದಿಕ್ಕಿನ ಜಂಝಾಪವನವೇಗದಿಂದುಂಟಾಗುವ ಮೇಘಪಙ್ಕ್ತಿಗಳಂತೆಯೂ ಮಂದರಕ್ಷೋಭೆಯಿಂ ಘೋಷಿಸುವ ಮಹಾಂಬುಧಿಯಂತೆಯೂ ವಾಙ್ಮನಸ್ಸುಗಳಿಗೆ ಗೋಚರವಾಗದೆ ಮಾಡುವ ದೇವಾಸುರಯುದ್ಧದಂತೆಯೂ ಎರಡು ಪಡೆಗಳಲ್ಲಿಯೂ ಪ್ರಾಸ ಪಟ್ಟಸ ಶೂಲ ಖಡ್ಗ ತೋಮರ ಬಾಣ ಚಕ್ರ ಗದಾ ಪರಿಘಳಿಂದ ರಥಸ್ಥರು ರಥಿಕರನ್ನೂ ಗಜಾರೂಢರು ವಾರಣಾರೋಹಕರನ್ನೂ ತುರುಗಾರೂಢರು ಅಶ್ವಸಾದಿಗಳನ್ನೂ ಪದಾತಿವರ್ಗವು ಕಾಲಾಳುಗಳನ್ನೂ ಪ್ರಹರಿಸುತ್ತ ಯುದ್ಧವಂ ಮಾಡುತ್ತಿರಲು ; ರಣಭೂಮಿಯಲ್ಲಿ ಭೇರೀ ಶಬ್ದವನ್ನು ಅಡಗಿಸಿ ಶಸ್ತ್ರಪ್ರಹಾರ ನಿನದಗಳೇ ಬಹಳವಾಗಿ ಕೇಳಿಸುತ್ತಿರಲು ; ಆ ಶರಹತಿಯಿಂದ

ಗಾಯವಡೆದ ವೇತಂಡಗಳ ಸೊಂಡಿಲುಗಳಿಂದಲೂ ಭಗ್ನವಾದ ಸೂತಬೃಂದಗಳಿಂದಲೂ ಛೇದಿಸಲ್ಪಟ್ಟ ಪದಾತಿವರ್ಗಾವಯವಗಳಿಂದಲೂ ಸಂಹೃತರಾದ ವರೂಥಿಗಳ ಕಂಠದೇಶಗಳಿಂದಲೂ ಭಿನ್ನರಾದ ಗಜಾರೂಢರ ಮಸ್ತಕಗಳ ದೆಸೆಯಿಂದಲೂ ಗತಪ್ರಾಣರಾದ ತುರಗಸಾರಥಿಗಳ ಮುಖಕುಹರಗಳಿಂದಲೂ ಹೊರಟು ಒಟ್ಟಾಗಿ ಬರುವ ರಕ್ತನದಿಗಳ ಪ್ರವಾಹಗಳು ಮೇಲೆ ಹೆಚ್ಚಿ ಬರುತ್ತಿರಲು; ಭಯಭ್ರಾಂತರಾಗಿ ಓಡಿ ಹೋಗುವ ಜನರು ಆ ರಕ್ತತರಂಗಿಣಿಗಳಂ ದಾಟಲಾರದೆ ಮುಳುಗಿ ತೇಲಿ ಕಬಂಧಗಳನ್ನವಲಂಬಿಸಿ ದಾಟುತ್ತಿರಲು ; ರಣಭೂಮಿಯು ಸಂಧ್ಯಾರಾಗಮುಸುಕಿದಂತೆಯೂ ವೀರಲಕ್ಷ್ಮಿಯರ ವಿಲಾಸೋತ್ಸವದ ಓಕುಳಿಯ ಮಡುಗಳೋ ಎಂಬಂತೆಯೂ ಅತಿಭಯಂಕರವಾಗಿ ತೋರುತ್ತಿರಲು ; ಉಭಯ ಸೇನೆಗಳಲ್ಲಿಯೂ ಅರ್ಧಹತವಾಗಿ ಉಳಿದ ವಾಹಿನೀಜನರು ಶಾಂತರಾಗಿ ವಿಶ್ರಮಿಸಿಕೊಂಡು ಪುನಃ ಯುದ್ಧಸನ್ನದ್ಧರಾಗುತ್ತಿರುವಲ್ಲಿ ಆದಿತ್ಯನು ಅಸ್ತಾಚಲಶಿಖರವನ್ನೈಯ್ದಿದನು. ಆಗ ಉಭಯಬಲದ ಅರಸುಗಳೂ ತಮ್ಮ ದಳಪತಿಗಳಂ ಕರೆದು—

ಅಯ್ಯಾ ಶೂರರಾದ ಸೇನಾಪತಿಗಳಿರಾ, ಈಗ ಆಹವಮಂ ನಿಲ್ಲಿಸುವವರಾಗಿರಿ. ಫೌಜುಗಳು ವಿಶ್ರಮಿಸಿಕೊಳ್ಳಲಿ. ನಾಳೆ ಆದೀತೆಂದು ನೇಮಿಸಿದರು. ರಾಜಾಜ್ಞೆಯ ಮೇರೆಗೆ ಆ ಚಕ್ರರಕ್ಷಕರು ಯುದ್ಧಮಂ ನಿಲ್ಲಿಸಿ ಸೈನ್ಯಮಂ ಕರತಂದು ದಂಡಿನ ಪಾಳೆಯದಲ್ಲಿ ಇಳಿಸಿ ಕವಚಗಳಂ ಬಿಚ್ಚಿ ವಾಹನಗಳಂ ಸಂತವಿಟ್ಟು ಎಂದಿನಂತೆ ತಮ್ಮ ತಮ್ಮ ಬಿಡಾರಕ್ಕೆ ಹೋಗುತ್ತಿದ್ದರು. ಅರಸುಗಳಾದ ನಂದರು ಸ್ನಾನಾದಿಗಳಂ ಮಾಡಿ ಆಪ್ತಮಿತ್ರರಾದ ರಾಜಪುತ್ರರೊಡನೆ ಯುದ್ಧವಾರ್ತೆಯನ್ನಾಡುತ್ತ ವಿಶ್ರಮಿಸಿಕೊಂಡರು. ಹಾಗೆಯೇ ರಾಕ್ಷಸನು ತನುತ್ರಮಂ ಸಡಲಿಸಿ ಸ್ನಾನಸಂಧ್ಯಾದಿಗಳಂ ಮಾಡಿ ಮುಂದಣ ಕಾರ್ಯಮಂ ನೆನೆಯುತ್ತಿರುವ ಸಮಯದಲ್ಲಿ ಚಾರರಿಬ್ಬರು ಬಂದು ಕೈಮುಗಿದು—

ಸ್ವಾಮಿ ಅಮಾತ್ಯರೇ, ತಮ್ಮ ಅಪ್ಪಣೆಯ ಮೇರೆಗೆ ದಕ್ಷಿಣದಿಕ್ಕಿನಲ್ಲಿ ಇಳಿದಿದ್ದ ಸೇನೆಗಳು ನಾಲ್ಕು ಯೋಜನದಲ್ಲಿ ಬಂದು ಇಳಿದುವು. ಇನ್ನು ಎರಡು ಮೂರು ದಿವಸಗಳಲ್ಲಿ ಬಂದು ಒದಗುತ್ತಿವೆ ಎಂದು ವಿಜ್ಞಾಪಿಸಲಾಗಿ ; ಆ ಮಾತಿಗೆ ರಾಕ್ಷಸನು ಸಂತೋಷಪಡುತ್ತ—

ಎಲೈ, ಆ ವಾಹಿನಿಗಳಂ ತ್ವರಿತದಿಂದ ಕರತಂದು ಪುರದ ಸಮೀಪದಲ್ಲಿ ಇಳಿಸಿರಿ ಎಂದು ಹೇಳಿ ಕಳುಹಿಸಿ ನಂದರ ಸಮೀಪಕ್ಕೆ ಬರುತ್ತಿದ್ದನು. ಅಷ್ಟರಲ್ಲಿಯೇ

ದಶಾರ್ಣ ಶೂರಸೇನ ದೇಶಗಳಿಗೆ ಹೋಗಿದ್ದ ತುರಗಾರೂಢರೊಬ್ಬರು ಬಂದು ರಾಕ್ಷಸನಂ ಕಂಡು ಕೈಮುಗಿದು ಕಾಗದಗಳಂ ಕೊಟ್ಟು—

ಬುದ್ಧಿ, ದಶಾರ್ಣಾಧಿಪತಿಶೂರಸೇನಾಧಿಪತಿಗಳು ತಮ್ಮ ಅಪ್ಪಣೆಯ ಮೇರೆಗೆ ಬಲಸಮೇತರಾಗಿ ಹೊರಟು ಪರ್ವತರಾಜ್ಯಕ್ಕೆ ತೆರಳುತ್ತ ಎರಡು ಪ್ರಯಾಣದ ಮೇಲೆ ಬರೆದು ಕೊಟ್ಟ ಕಾಗದವಿದು. ಅವರ ಉತ್ಸಾಹಮಂ ನೋಡಿದರೆ ಇಷ್ಟು ದಿವಸಗಳಿಗೆ ಪರ್ವತರಾಜ್ಯಮಂ ಸೂರೆಗೆಯ್ದು ಆ ಪುರಮಂ ಮುತ್ತಿರಬೇಕು ಎಂದು ವಿಜ್ಞಾಪಿಸಲಾಗಿ; ಆ ಲೇಖನಗಳಂ ನೋಡಿಕೊಂಡು ಸಂತೋಷದಿಂದ ನಂದರ ಸಮೀಪಕ್ಕೆ ಹೋಗಿ ಏಕಾಂತದಲ್ಲಿ—

ಅಯ್ಯಾ ಅರಸುಗಳಿರಾ, ಈ ದಿನ ಸಂಗ್ರಾಮದಲ್ಲಿ ಉಭಯಸೇನೆಗಳೊಳಗೂ ಅರ್ಧ ಹತವಾಗಿ ಸಮಯುದ್ಧವಾಯಿತು. ಎಷ್ಟು ಸಾಹಸಮಂ ಮಾಡಿದರೂ ಶತ್ರುಗಳು ಇಳಿದಿದ್ದ ಪಾಳೆಯದಿಂದ ಹಿಂದಕ್ಕೆ ಹೋಗಲಿಲ್ಲ. ಪುನಃ ಸಮರಕ್ಕೆ ಯತ್ನೀಕರಿಸುವಂತೆ ತೋರುತ್ತಿದೆ. ಹಾಗೆ ನಡೆದರೆ ಜಯಾಪಜಯವೆಂತಿರುವುದೋ ತಿಳಿಯದು. ಆದುದರಿಂದ ಒಮ್ಮಿಂದೊಮ್ಮೆ ಪುನಃ ರಣಕ್ಕೆ ಯತ್ನಮಂ ಮಾಡದೆ ವೈರಿಗಳು ಯುದ್ಧಕ್ಕೆ ಯತ್ನಂಗೆಯ್ಯದಂತೆ ಕಪಟಸಂಧಿಯಂ ಕಲ್ಪಿಸಿ ಕಾಲಹರಣಮಂ ಮಾಡುತ್ತ ಈಗ ನಷ್ಟವಾದ ನಮ್ಮ ಸೇನೆಗೆ ಪೂರ್ತಿಯಾಗುವಂತೆ ದಕ್ಷಿಣದಿಕ್ಕಿನಿಂದ ನಮ್ಮ ದಳಂ ಬಂದೊದಗಿದ ಬಳಿಕ ನಾವು ಪುನರ್ಯುದ್ಧಾರಂಭಮಂ ಮಾಡಿದರೆ ನಮ್ಮಿಂದ ಪ್ರೇಷಿತರಾದ ದಶಾರ್ಣಪತಿ ಶೂರಸೇನಪತಿಗಳು ಬಲಸಮೇತರಾಗಿ ಇದೇ ಸಮಯದಲ್ಲಿ ಪರ್ವತರಾಜ್ಯಮಂ ಕೊಳ್ಳೆ ಮಾಡುತ್ತ ಅಲ್ಲಿನ ಅನೀಕಗಳು ಪರ್ವತರಾಜನಿಗೆ ಮೇಲು ಬಲವಾಗದಂತೆ ಯುದ್ಧೋಪಕ್ರಮಮಂ ಮಾಡಿರುವುದರಿಂದಲೂ ನಷ್ಟವಾದುದಕ್ಕೆ ಬದಲಾಗಿ ಸೈನ್ಯಮಂ ಜೊತೆಗೊಳಿಸುವುದಕ್ಕೆ ಪರ್ವತರಾಜನಿಗೆ ಅನುಕೂಲವಾಗದುದರಿಂದಲೂ ಅಧಿಕ ವಾಹಿನೀಸಮೇತರಾದ ನಮ್ಮಿಂದ ಶತ್ರುಗಳೆಲ್ಲರೂ ಹತರಾಗುವುದರಲ್ಲಿ ಸಂಶಯವಿಲ್ಲ. ಇದರಿಂದ ಅರಿಗಳೊಡನೆ ಸಾಮವೆಂದು ಮಾತನಾಡುತ್ತ ಅವರು ಹೇಳಿದ ಮಾತಿಗೆ ಒಪ್ಪಿಯೂ ಒಪ್ಪದಂತೆಯೂ ಇರುತ್ತ ಕಾಲಹರಣಮಂ ಮಾಡುತ್ತಿದ್ದರೆ ಇಷ್ಟರಲ್ಲಿಯೇ ಕಾಶೀರಾಜನ ಮುಖದಿಂ ಯತ್ನಮಂ ಒದಗಿಸಿಕೊಂಡಾದರೂ ಕಾರ್ಯಮಂ ಗೆಲ್ಲಬೇಕಲ್ಲದೆ ದುಡುಕಬಾರದು ಎಂದು ನುಡಿದು ನಂದರಂ ಸಮ್ಮತಿಗೊಳಿಸಿ ವಿಷ್ಣುದಾಸನೆಂಬ ನಿಯೋಗಿಯಂ ಕರೆದು ಅವನ ಕಿವಿಯಲ್ಲಿ ರಾಜತಂತ್ರಮಂ ಸೂಚಿಸಿ ಈಗಲೇ ಪರ್ವತರಾಜನ ಸಮೀ

ಪಕ್ಕ ಹೋಗೆಂದು ಹೇಳಿ ಕಳುಹಿಸಿ ಆ ಬಳಿಕ ರಾಕ್ಷಸನು ಆ ರಾತ್ರಿಯಲ್ಲಿ ನೀಲವಸ್ತ್ರಾವಕುಂಠಿತನಾಗಿ ಸ್ವಬಲದಲ್ಲಿ ಶತ್ರುಸೇನಾವಾರ್ತೆಯು ಯಾರಲ್ಲಿ ಎಂತಿರುವುದೋ ತಿಳಿಯಬೇಕೆಂದು ಗೂಢವಾಗಿ ತಿರುಗುತ್ತ ಅಲ್ಲಿ ಜಾಗರೂಕರಾಗಿದ್ದ ಕಾವಲುಗಾರರಂ ಸ್ವಸಂಕೇತವಾಕ್ಯಮಂ ಕೇಳುತ್ತ ಉತ್ತರವಿಲ್ಲದಿದ್ದರೆ ಅವರಂ ನಿಗ್ರಹಿಸುತ್ತ ಸಂಚರಿಸುತ್ತಿದ್ದನು. ಆ ವೇಳೆಯಲ್ಲಿ ಕ್ಷಪಣಕನ ಶಿಷ್ಯನಾದ ವೇಗಶರ್ಮನು ಬಂದು ಚಾಣಕ್ಯರಂ ಕಂಡು ಅಭಿವಂದಿಸಿ ನಂದರು ನಾಳೆ ಸಾಯಾಹ್ನದಲ್ಲಿ ಜಪಶಾಲೆಗೆ ಬರುವಂತೆ ಗೊತ್ತುಮಾಡಿರುವ ಮಾಸೋಪವಾಸಿಯ ವಾಕ್ಯಮಂ ತಿಳಿಸಲು ; ಆಗ ಚಾಣಕ್ಯನು ಶೇಖರನೆಂಬ ಸೇನಾಪತಿಯಂ ಕರೆಯಕಳುಹಿಸಿ—

ಅಯ್ಯಾ ಚಮೂಪತಿಯೇ, ಈ ಉಭಯಸೈನ್ಯದಲ್ಲಿಯೂ ಯುದ್ಧದಿಂದರ್ಧಮಟ್ಟಿಗೆ ಹತವಾಯಿತು. ಇನ್ನೂ ನಂದರಲ್ಲಿ ಒಬ್ಬನಾದರೂ ಸಂಹೃತನಾಗಲಿಲ್ಲ. ಪುನರ್ಯುದ್ಧವಾದರೆ ಜಯಲಾಭವೆಂತಿರುವುದೋ? ಆದರಿಂದ ನೀನು ನಿನ್ನ ಬಳಿಯ ಫೌಜುಗಳಲ್ಲಿ ಮನಸ್ವಿಗಳೂ ಶೂರರೂ ಆದ ಮೂವತ್ತು ಸಹಸ್ರ ತುರಗಾರೂಢರಿಗೆ ಕಾಶೀರಾಜನ ಸೇನಾಜನಗಳ ವೇಷಮಂ ಹಾಕಿಸಿ ಯುದ್ಧಸನ್ನದ್ಧರಾಗಿ ಪಾಟಲೀಪುರದಿಂದ ಹೋಗುವ ಕಾಶೀಮಾರ್ಗದಲ್ಲಿ ಈ ರಾತ್ರಿಯೇ ಹೋಗಿ ಇಳಿದುಕೊಂಡು ನಾಳೆ ನಮ್ಮ ಅಪ್ಪಣೆಯಾದ ಮೇರೆಗೆ ನಡೆದುಕೊಳ್ಳತಕ್ಕುದೆಂದು ನೇಮಿಸಿ ಅದರಲ್ಲಿ ಆರು ಜನ ಬುದ್ಧಿವಂತರಾದ ಹಯಾರೋಹಕರಂ ನಮ್ಮ ಬಳಿಯಲ್ಲಿ ಇರುವಂತೆ ನೇಮಿಸಿ ಒಂಟಿಯಾದ ಶೂರನಿಗೆ ನೂರು ಮೊಹರಮಂ ಅದರ ಗೊತ್ತುಗಾರನಿಗೆ ಐನೂರಂ ಅವರ ಅಧಿಪತಿಗೆ ಸಾವಿರಮಂ ಕೊಟ್ಟು ಚಂದ್ರಗುಪ್ತನು ತನ್ನ ಕಾರ್ಯಕ್ಕೋಸುಗ ನಿಮಗೆ ಉಚಿತವಾಗಿ ಇತ್ತನೆಂದು ಹೇಳಿ ಪ್ರೋತ್ಸಾಹಪಡಿಸಿ ಈಗಲೇ ಕಳುಹಿಸುವವನಾಗು. ಇಂದು ಮೊದಲು ನಿನಗೆ ವಿಶೇಷವಾದ ಅಭ್ಯುದಯಮುಂಟಾಗುವುದು ಎಂದು ಹೇಳಲು ; ಆ ಮಾತಿಗೆ ಶೇಖರನು ಸಮ್ಮತನಾಗಿ ಚಾಣಕ್ಯರು ಏನೋ ಮಹತ್ಕಾರ್ಯಮಂ ಆಲೋಚಿಸಿದ್ದಾರೆ. ಇದರ ಫಲಮಂ ಪರ್ಯವಸಾನದಲ್ಲಿಯೇ ತಿಳಿಯಬೇಕು ಎಂದು ಯೋಚಿಸುತ್ತ ಹೋಗಿ ಅದೇ ಮೇರೆಗೆ ತನ್ನ ಕಡೆಯಲ್ಲಿರುವ ಮೂವತ್ತು ಸಾವಿರ ಶೂರರಾದ ತುರಗಾರೂಢರಂ ತೆಗೆದುಕೊಂಡು ಕಾಶೀರಾಜನ ಸೇನಾಜನದಂತೆ ಅವರಿಗೆ ವಿಭೂತಿರುದ್ರಾಕ್ಷಗಳನ್ನಲಂಕರಿಸಿ ಅದೇ ರೀತಿಯಲ್ಲಿ ಪಾಗುಗಳನ್ನಳವಡಿಸಿ ತದ್ವತ್ತಾಗಿ ವಸ್ತ್ರಾದಿಗಳಿಂದಲಂಕೃತರಂ ಮಾಡಿಸಿ ರುದ್ರ

ಪರಿವಾರದ ಚಂದದಿಂದೊಪ್ಪುವ ಆ ಜನಗಳಿಗೆ ಧನಗಳಂ ಕೊಟ್ಟು ಈಗಲೇ ಪಾಟಲೀಪುರದಿಂ ಕಾಶಿಗೆ ಹೋಗುವ ಮಾರ್ಗದಲ್ಲಿ ನಾತಿದೂರಸ್ಥರಾಗಿ ಇಳಿದುಕೊಂಡು ನಾಳೆ ನನ್ನ ಅಪ್ಪಣೆಬಂದ ಮೇರೆಗೆ ನಡೆದುಕೊಳ್ಳಿರಿ ಎಂದು ನೇಮಿಸಿ ಕಳುಹಿಸಿದನು. ಅವರು ಶೇಖರನ ಅಪ್ಪಣೆಯ ಪ್ರಕಾರ ನಡೆದುಕೊಂಡರು.

ಅಷ್ಟರಲ್ಲಿ ಹಯವನ್ನೇರಿ ಪರ್ವತರಾಜ್ಯದಿಂದ ಅತಿತ್ವರೆಯಾಗಿ ದೂತರಿಬ್ಬರು ಬಂದು ತಮ್ಮ ಬಳಿಯ ಕಾಗದಮಂ ಪರ್ವತೇಶ್ವರನಿಗೆ ಕೊಟ್ಟು ಕೈಮುಗಿದು—

ಬುದ್ಧೀ, ಪರರಾಜರಿಂದ ನಮ್ಮ ಪರ್ವತರಾಜ್ಯವೆಲ್ಲವೂ ಸೂರೆಯಾಗಿ ಯುದ್ಧ ನಡೆಯುತ್ತ ಇನ್ನು ಮೇಲೆ ನಮ್ಮ ಪಟ್ಟಣಕ್ಕೆ ವೇದೆಯು ತಟ್ಟುವಂತೆ ತೋರುತ್ತದೆ ಎಂದು ಬಿನ್ನೈಸಲು ; ಅದಂ ಕೇಳಿ ಆ ಪತ್ರಿಕೆಯಂ ಓದಿಕೊಳ್ಳುತ್ತಿದ್ದನು. ಅದರಲ್ಲಿ—ದಶಾರ್ಣಶೂರಸೇನಾಧಿಪತಿಗಳಿಂದ ಪರ್ವತರಾಜ್ಯವು ಕೊಳ್ಳೆಹೋಗಿ ವಾಹಿನಿಗಳ ಸಂಗಡ ಸಂಗರವಾಗುತ್ತ ಪುರವು ಅನ್ಯಾಕ್ರಾಂತವಾಗುವಂತೆ ತೋರುತ್ತಿದೆ. ಗಡಿ ದುರ್ಗಗಳು ಪರಾಧೀನವಾದುವು. ನೀವು ಜಾಗ್ರತೆಯಾಗಿ ನಂದರೊಡನೆ ಸಂಧಿಗಾದರೂ ಮಾತನಾಡಿಕೊಂಡು ಬಂದು ತಲಪದಿದ್ದರೆ ಮುಂದೆ ನನ್ನಿಂದ ಈ ಪುಟಭೇದನವು ರಕ್ಷಿಸಲಶಕ್ಯವು ಎಂದು ಪುರರಕ್ಷಕನಾದ ಅಂಗಾರವರ್ಮನು ಬರೆದು ಕಳುಹಿಸಿದ್ದ ಅಭಿಪ್ರಾಯವಂ ತಿಳಿದು ಯೋಚಿಸುತ್ತಿರುವ ಸಮಯದಲ್ಲಿ ಚಾರರಿಬ್ಬರು ಬಂದು ಪರ್ವತಕ್ಷ್ಮಾಪತಿಗೆ ಕೈಮುಗಿದು—

ಬುದ್ಧೀ, ದಕ್ಷಿಣದಿಕ್ಕಿನಿಂದ ನಂದಸೈನ್ಯಕ್ಕೆ ಮೇಲುಬಲವಾಗಿ ಬಂದ ಫೌಜು ಮೂರು ಯೋಜನವಿಸ್ತಾರಭೂಮಿಯಲ್ಲಿ ನಿಬಿಡವಾಗಿ ಇಳಿದಿದೆ. ಅದು ನಾಳೆ ನಾಡಿದ್ದರಲ್ಲಿ ನಂದಸೇನೆಯೊಡನೆ ಕೂಡುವುದು ಎಂದು ವಿಜ್ಞಾಪಿಸಿದರು. ಅದಂ ಕೇಳಿ ಪರ್ವತಭೂಧವನು ಪಂಕದಲ್ಲಿ ಬಿದ್ದ ಮಹಾಗಜದಂತೆ ಬುದ್ಧಿಗೆ ಏನೂ ತೋರದೆ ನಿದ್ರಾರಹಿತನಾಗಿ ಆತಂಕಪಡುತ್ತ ತನ್ನ ಮಂತ್ರಿಯಾದ ಶಬರವರ್ಮನಂ ಕರೆಯಕಳುಹಿಸಿ—

ಎಲೈ ಶಬರವರ್ಮನೇ, ವೃದ್ಧನಾಗಿಯೂ ನಮಗೆ ಮಿತ್ರನಾಗಿಯೂ ಧರ್ಮಮಂತ್ರಿಯಾಗಿಯೂ ಇದ್ದ ನಮ್ಮ ಉಲೂಕನ ಮಾತಂ ಕೇಳದೆ ಈ ಚಾಣಕ್ಯನ ಕುಮಂತ್ರದ ಮಾತಿಗೆ ಮರುಳಾಗಿ ನಾವು ಪಟ್ಟಣಮಂ ಬಿಟ್ಟು ಇಲ್ಲಿಗೆ ಬಂದುದು ನಮಗೇನೋ ಮಹಾವಿಪತ್ತಿಗೆ ಕಾರಣವಾದಂತೆ ತೋರುತ್ತಿದೆ. ಇದೋ ನೋಡು ನಮ್ಮ ಪುರರಕ್ಷಕನಾದ ಅಂಗಾರವರ್ಮನು ಬರದಿರುವ ಕಾಗದವಿದು. ಇದಲ್ಲದೆ ಈಗತಾನೇ ಇಬ್ಬರು ದೂತರು ಬಂದು ದಕ್ಷಿಣದಿಕ್ಕಿನಲ್ಲಿ ಈ ನಂದರಿಗೆ

ಮೇಲುಬಲವಾಗಿ ಸೇನೆಯು ಬಂದು ಮೂರು ಯೋಜನ ವಿಸ್ತಾರದಲ್ಲಿ ಇಳಿದು ಇದೆ ಎಂದು ಹೇಳಿದರು. ಮೊನ್ನೆಯ ಯುದ್ಧದಲ್ಲಿ ಪಾಟಲೀಪುರಮಂ ಲಗ್ಗೆಹತ್ತ ಬೇಕೆಂದು ಮುತ್ತಿಕೊಳ್ಳುವ ನಮ್ಮ ಪತಾಕಿನಿಗಳಂ ಅಮಾತ್ಯರಾಕ್ಷಸನು ತಾನೇ ಪೃತನಾಸಮೇತನಾಗಿ ಹೋಗಿ ಉತ್ತರಗೋಗ್ರಹದಲ್ಲಿ ಪಾರ್ಥನು ಸರ್ವ ಕೌರವಬಲಮಂ ಉರುಳ್ಚಿದಂತೆ ಸಂಹರಿಸಿ ಲಗ್ಗೆಯಂ ಹತ್ತದಂತೆ ಮಾಡಿದನು. ನೆನ್ನೆಯ ಕಾಳಗದೊಳಗೆ ಉಭಯಬಲದಲ್ಲಿಯೂ ಅರ್ಧಾಂಶವು ಹತವಾಯಿತು. ಪುನಃ ನಂದರಿಗೆ ಬೆಂಬಲವಾಗಿ ಸೇನೆ ಒದಗಿಬರುತ್ತಿದೆ. ನಮಗೆ ಸಹಾಯವಾಗಿ ಚತುರಂಗವು ಬರುವುದಕ್ಕೂ ಮಾರ್ಗವಿಲ್ಲ. ಇದಲ್ಲದೆ ನಮ್ಮ ದೇಶಕ್ಕೂ ಬಾಧೆಯು ತಪ್ಪಿ ನಮ್ಮ ಪಟ್ಟಣಕ್ಕೂ ವ್ಯಥೆಯುಂಟಾಗುವುದಾಗಿದೆ. ಇದೇ ದಶಾರ್ಣ ಶೂರಸೇನಾಧಿಪತಿಗಳು ನಮಗೆ ಪೂರ್ವವೈರಿಗಳಾಗಿ ನಮ್ಮ ಮೇಲೆ ಕಾರ್ಯಭಾಗಮಂ ಮಾಡುವುದಕ್ಕೋಸ್ಕರ ಈ ಅಮಾತ್ಯರಾಕ್ಷಸನನ್ನು ಸಹಾಯಕ್ಕೆ ಕರೆಯಲು; ಈತನು ನಮ್ಮ ಮೇಲಣ ಅಂತಃಕರಣದಿಂದ ಅವರಿಗೆ ನಯಭಯಗಳಿಂದ ಹೇಳಿ ನಮ್ಮ ಬಾಧೆಯನ್ನು ತಪ್ಪಿಸಿ ಉಪಕಾರವಂ ಮಾಡಿದನು. ನಾವು ಆ ಉಪಕಾರ ಸ್ಮೃತಿಯಂ ಮರೆತು ಈ ಚಾಣಕ್ಯನು ಅರ್ಧರಾಜ್ಯಮಂ ಕೊಡುತ್ತಾನೆಂಬ ಆಶೆಗೆ "ಪುತ್ರಾರ್ಥಂಯಾಚಿತಾನಾರೀ ಮೈಲಾರಮಭಿಗಚ್ಛತಿ ॥ ತತ್ರದೇವಪ್ರಸಾದೇನ ಪೂರ್ವದ್ವಾರಂವಿನಶ್ಯತಿ" ಎಂಬಂತೆ ನಮ್ಮ ಪೂರ್ವಸ್ಥಿತಿಯೇ ಹೋಗುವ ಘಟ್ಟವಾಯಿತು. ಇದಕ್ಕೆ ಮುಂದೆ ನಾವು ಏನು ಯೋಚನೆಯಂ ಮಾಡಬೇಕು ಎಂದು ಹೇಳುತ್ತಿರುವ ಸಮಯದಲ್ಲಿಯೇ ಸೂರ್ಯನುದಯಾಚಲಸ್ಥನಾದನು.

ಆಗ ರಾಕ್ಷಸನಿಂದ ನೇಮಿಸಲ್ಪಟ್ಟ ವಿಷ್ಣುದಾಸನೆಂಬ ನಿಯೋಗಿಯು ಪರಿವಾರಸಮೇತನಾಗಿ ಹೊರಟು ಪರ್ವತರಾಜನ ದಂಡಿನ ಪಾಳೆಯಕ್ಕೆ ಬಂದು ತಾನು ಬಂದಿರುವ ಸಂಗತಿಯನ್ನು ಆ ರಾಯನಿಗೆ ಹೇಳಿ ಕಳುಹಿಸಿ ಅತನ ಅಪ್ಪಣೆಯಿಂದ ಹೋಗಿ ಆ ರಾಯನಂ ಉಚಿತಪ್ರಕಾರದಿಂ ಕಂಡು ಇಂತೆಂದನು—

ಸ್ವಾಮಿಾ ಭೂಪತಿಗಳಾದ ಪರ್ವತೇಶ್ವರರೇ, ಸಾರ್ವಭೌಮರಾದ ನಂದರು ನಿಮ್ಮ ಕುಶಲಮಂ ಕೇಳಿದರು. ಶೂದ್ರಸ್ತ್ರೀಪೌತ್ರನಾದ ಚಂದ್ರಗುಪ್ತನು ಜ್ಞಾತಿಮತ್ಸರದಿಂದ ನಿಮ್ಮನ್ನೊಡಂಬಡಿಸಿ ಇಲ್ಲಿಗೆ ಕರತಂದುದು ಹೇಗಾಯಿತೆಂದರೆ—ನರಿಯು ತಾನಿದ್ದೆಡೆಯಲ್ಲಿ ಬಹಳ ಸಲ್ಲಕೀವನವಿರುವುದು. ಸ್ವೇಚ್ಛೆಯಿಂ ಭಕ್ಷಿಸ ಬನ್ನಿರಿ ಎಂದು ಮದಗಜಗಳಂ ಕರತಂದು ಮಹಾಪಂಕದೇಶದಲ್ಲಿ ತಗುಲಿಸಿದಂತಾಯಿತು. ನಮಗೂ ಪಾರ್ವತೇಯರಿಗೂ ಎಂದೂ ಇಲ್ಲದ ದ್ವೇಷವು

ಈ ಚಂದ್ರಗುಪ್ತನ ದೆಸೆಯಿಂದ ಉಂಟಾಯಿತು. ಅಲ್ಪಮನುಷ್ಯನ ನಿಮಿತ್ತವಾಗಿ ಮಹಾಕಾರ್ಯಾರಂಭಮಂ ಮಾಡಿದುದರಿಂದ ಬಹುನಷ್ಟವಾದುದಂ ತಿಳಿದು ಮುಂದೆ ಕರ್ತವ್ಯಮಂ ಯೋಚಿಸಿ ಆ ಚಂದ್ರಗುಪ್ತನಂ ನಮ್ಮ ವಶಕ್ಕೆ ಒಪ್ಪಿಸಿಕೊಟ್ಟರೆ ಅವನು ನಿಮಗೆ ಹೇಳಿದರ್ಥಕ್ಕೆ ನಾವೇ ಇದ್ದೇವೆ. ವ್ಯಥಾಯಾಸದಿಂ ಫಲವೇನು ? ಎಂದು ನಂದರು ನಿಮಗೀ ಯರ್ಥಮಂ ತಿಳಿಸಿ ನಿಮ್ಮ ವಚನಮಂ ಕೇಳಿ ಬಾರೆಂದು ಆಜ್ಞಾಪಿಸಿದುದರಿಂದ ತಮ್ಮ ಸನ್ನಿಧಿಯಂ ಕಂಡೆನು. ಈ ಪ್ರಕಾರವಾಗಿ ಹೇಳಿದ ನಿಯೋಗಿಯ ವಾಕ್ಯಮಂ ಕೇಳಿ ಪರ್ವತರಾಜನು ತನ್ನ ಮನಸ್ಸಿಗೆ ತಗುಲಿರುವ ಆತಂಕಮಂ ಆಚ್ಛಾದನಂಗೆಯ್ಯುತ್ತ ಅವನಂ ಕುರಿತು—

ಅಯ್ಯಾ ನಿಯೋಗಿಯೇ, ಚಂದ್ರಗುಪ್ತನಂ ನಿಮಿತ್ತಮಂ ಮಾಡಿ ನಂದರಲ್ಲಿ ಇದ್ದ ವಸ್ತುಗಳಂ ನಾವು ಅಪಹರಿಸಬೇಕೆಂದು ಬಂದವರಲ್ಲ. ಶತ್ರುಗಳ ದೆಸೆ ಯಿಂದ ಭೀತನಾಗಿ ಬಂದು ಮರೆಹೊಕ್ಕಿರುವ ಚಂದ್ರಗುಪ್ತನಿಗೆ ಅಭಯಮಂ ಕೊಟ್ಟ ಮೇರೆಗೆ ಯುದ್ಧಮುಖದಿಂದ ಈತನ ಪ್ರಪಿತಾಮಹಾರ್ಜಿತವಾದ ರಾಜ್ಯಮಂ ಕೊಡಿಸಬೇಕೆಂದು ಬಂದಿದ್ದೇವೆ. ಪುನಃ ನಿಮಗೆ ರಣಾಪೇಕ್ಷೆ ಇಲ್ಲದೆ ನಿಮ್ಮ ರಾಜ್ಯಕೋಶಗಳಲ್ಲಿ ಅರ್ಧಮಂ ಚಂದ್ರಗುಪ್ತನಿಗೆ ಕೊಡುವುದು ಸತ್ಯವಾ ದರೆ ಸಮರೋಪಕ್ರಮಮಂ ನಿಲ್ಲಿಸುವೆವು. ಈ ಯರ್ಥಮಂ ನಿಮ್ಮ ಅರಸು ಗಳಿಗೆ ತಿಳುಹಿಸಿ ಅಮಾತ್ಯರಾಕ್ಷಸಸಮೇತರಾದ ನಂದರಿಗೆ ನಾವು ಕುಶಲಮಂ ಕೇಳಿದೆವೆಂದು ಹೇಳತಕ್ಕುದು ಎಂಬುದಾಗಿ ನುಡಿದು ವೀಳೆಯಮಂ ಕೊಡಿಸಿ ಆ ನಿಯೋಗಿಯಂ ಕಳುಹಿಸಿ ಶಬರವರ್ಮನಂ ಕುರಿತು—

ಅಯ್ಯಾ ಮಂತ್ರಿಯೇ, ನಂದರು ನಯಭಯಪೂರ್ವಕವಾಗಿ ನಿಯೋಗಿಯ ಮುಖದಿಂದ ನಮಗೆ ಹೇಳಿಕಳುಹಿಸಿದ ಅರ್ಥಮಂ ತಿಳಿದಿರುವೆಯಷ್ಟೆ. ಈಗ ಪ್ರಕೃತಾನುಸಾರವಾಗಿ ರಾಕ್ಷಸನು ಮಾಡಿರುವ ಯತ್ನಮಂ ನೋಡಿದರೆ ನಾವೇ ಸಂಧಿಗೆ ಹೇಳಿಕಳುಹಿಸಬೇಕಾಗಿದೆ. ಅದೇನೆಂದರೆ ದಶಾರ್ಣಪತಿ ಶೂರಸೇನಾಧಿಪತಿ ಗಳ ಮುಖದಿಂದ ನಮ್ಮ ಪರ್ವತರಾಜ್ಯಮಂ ಸೂರೆಗೆಯ್ಸಿ ಅಲ್ಲಿನ ಪಡೆಯಂ ಇಲ್ಲಿಗೆ ಬರಲೀಸದಂತೆ ಯುದ್ಧಮಂ ಮಾಡುವ ಹಾಗೆ ಅವರಿಗೆ ನೇಮಿಸಿ ನಮ್ಮ ಪಟ್ಟಣವು ಅನ್ಯಾಕ್ರಾಂತವಾಗುವಂತೆ ಮಾಡಿದುದಲ್ಲದೆ ಈಗ ನಷ್ಟವಾದ ವಾಹಿನಿಗೆ ಇಮ್ಮಡಿಯಾಗಿ ದಕ್ಷಿಣದೇಶದಿಂ ಕರೆಯಕಳುಹಿಸಿಕೊಂಡಿರುವ ಸೇನೆಯು ಸಮೀಪದಲ್ಲಿ ಬಂದು ಇಳಿದಿರಲು; ಈ ಎರಡು ವರ್ತಮಾನವೂ ರಾಕ್ಷಸನಿಗೆ ತಿಳಿದರೆ ನಾವು ಸಂಧಿಗೆ ಪ್ರಾರ್ಥಿಸಿದರೂ ಸಮ್ಮತಿಪಡುವವನಲ್ಲ. ಯುದ್ಧವನ್ನೇ

ಮಾಡೋಣವೆಂದರೆ ಮೂರು ತೆರದಿಂದೊದಗಿರುವ ಕಾರ್ಯದ ನಿರ್ವಾಹಕ್ಕೆ ನಮ್ಮ ಬಲವು ಒದಗಲಾರದು. ಆದರಿಂ ಪೂರ್ವದಲ್ಲಿ ಜನಮೇಜಯನು ಸರ್ಪಯಾಗವನ್ನುಪಕ್ರಮಿಸಲು; ಶರಣಾಗತನಾದ ತಕ್ಷಕನಂ ಪರಿತ್ಯಜಿಸಿ ಸುರಪತಿಯು ಕ್ಷೇಮವಂತನಾದಂತೆ ಇದೇ ಸಮಯದಲ್ಲಿ ನಂದರ ನಿಯೋಗಿಯು ಹೇಳಿದ ಮಾತಿಗೆ ನಾವು ಒಪ್ಪಿಕೊಂಡು ಕ್ಷೇಮಿಗಳಾಗಬೇಕು. ಇದು ಹೊರತು ಬೇರೆ ಯತ್ನಂ ತೋರುವುದಿಲ್ಲ. ನಮ್ಮ ವೃದ್ಧಮಂತ್ರಿಯಾದ ಉಲೂಕನು ಮೊದಲು ನಮಗೆ ಹೇಳಿದ ಮಾತು ನಿದರ್ಶನಕ್ಕೆ ಬರುವಂತೆ ತೋರುತ್ತಿದೆ ಎಂದು ಹೇಳುತ್ತಿರಲು; ಅದಂ ಕೇಳಿ ಶಬರವರ್ಮನು ತನ್ನ ಮನಸ್ಸಿನಲ್ಲಿ—ಈಗ ರಾಕ್ಷಸನು ಮಾಡಿರುವ ಪ್ರಯತ್ನಕ್ಕೆ ಈ ನಮ್ಮ ರಾಯನು ಭೀತನಾಗಿ ಲೋಕಾಪವಾದಮಂ ಗಣನೆಗೆ ತಾರದೆ ತನ್ನ ಕ್ಷೇಮಕ್ಕೋಸುಗ ಈ ಶರಣಾಗತನಾದ ಚಂದ್ರಗುಪ್ತನಂ ಶತ್ರುಗಳ ವಶಮಂ ಮಾಡಬೇಕೆಂದು ಎಣಿಸಿದ ಬಳಿಕ ಚಂದ್ರಗುಪ್ತನಂ ವಹಿಸಿರುವ ಚಾಣಕ್ಯರಿಗೆ ಕೋಪಮುಂಟಾಗಿ ಅನರ್ಥವು ನಡೆದು ಪಾರ್ವತೇಯರ ಐಶ್ವರ್ಯಕ್ಕೆ ಹಾನಿಯು ಸಂಭವಿಸುವುದು. ಇದೊಂದು ದುಃಖವನ್ನು ನೋಡದಂತೆ ಯುದ್ಧಮುಖದಿಂದ ನಾನು ಸದ್ಗತಿಯಂ ಸಂಪಾದಿಸಿಕೊಳ್ಳಬೇಕು ಎಂದು ನಿಶ್ಚಯಿಸಿ ಆ ರಾಯನಂ ಕುರಿತು—

ಜೀಯಾ, ಅಪ್ಪಣೆಯಾದರ್ಥವು ಪ್ರಕೃತೋಚಿತವಾಗಿದ್ದರೂ ಈ ಸಂಗತಿಯಂ ಚಾಣಕ್ಯರಿಗೆ ತಿಳಿಸಿದಲ್ಲಿ ತಮ್ಮ ಚಿತ್ತಕ್ಕೆ ಸರಿಬರುವಂತೆ ಉತ್ತರಮಂ ಹೇಳಿದರೆ ಆ ಯರ್ಥಮಂ ನಡಸಬಹುದು. ಅಲ್ಲದಿದ್ದರೆ ತಮ್ಮ ಮನಬಂದಂತೆ ಮಾಡಬಹುದು ಎಂದನು. ಅದಂ ಕೇಳಿ ರಾಯನು ಚಾಣಕ್ಯರಂ ಕರತರುವಂತೆ ದೂತರಿಗೆ ನೇಮಿಸಿ ಕಳಿಸಿ ತಾನು ಸ್ನಾನಾರ್ಥನಾಗಿ ತೆರಳಿದನು. ಶಬರವರ್ಮನು ಆಸ್ಥಾನದಿಂ ಹೊರಟು ತಾನಿದ್ದೆಡೆಗೆ ಬರುತ್ತಿರುವ ಸಮಯದಲ್ಲಿ ದೂತಸಮೇತರಾಗಿ ರಾಜಸಭೆಗೆ ಬರುವ ಚಾಣಕ್ಯರಂ ನೋಡಿ ದೂರದಲ್ಲೇ ತನ್ನ ಮನಸ್ಸಿನಲ್ಲಿ—ಇವರು ನನಗೆ ಸಮೀಪಸ್ಥರಾಗಿ—ಅರಸು ನಮ್ಮಂ ಕರೆಯ ಕಳುಹಿಸಿದ ನಿಮಿತ್ತವೇನು ಎಂದು ಕೇಳಿದರೆ ಏನು ಹೇಳಲಿ? ಆಸ್ಥಾನದಲ್ಲಿ ನಡೆದರ್ಥಮಂ ಅನ್ಯರಿಗೆ ಹೇಳುವುದು ಮಂತ್ರಿಧರ್ಮವಲ್ಲ. ಮಹಾತ್ಮರಲ್ಲಿ ಅನ್ಯಥಾ ಆಡಕೂಡದಾದುದರಿಂದ ಈಗ ಕಣ್ಣುಮರೆಯಾಗುವುದು ಉತ್ತಮವೆಂದು ನಿಶ್ಚಯಿಸಿ ಪಾರ್ಶ್ವದಲ್ಲಿರುವ ಗೂಡಾರದ ಮರೆಗೆ ಹೋಗುತ್ತಿದ್ದನು. ಚಾಣಕ್ಯನು ದೂರದಲ್ಲೇ ಅದಂ ಕಂಡು ಇದೇನು ನಿಮಿತ್ತವೋ! ಶಬರವರ್ಮನು ಮಾರ್ಗದಲ್ಲಿ ಬರುತ್ತ ನನ್ನಂ

ಕಂಡು ಲಜ್ಜಿತನಾಗಿ ಕಣ್ಣುಮರೆಯಾದನು. ಇದರಿಂದ ಅರಸು ಆಸ್ಥಾನದಲ್ಲಿ ನಮಗೆ ಅನಭಿಮತವಾದ ವಾಕ್ಯಮಂ ಹೇಳಿರಬೇಕು. ಶತ್ರುಗಳ ಅಭಿಮತಂ ನಮಗೆ ಅನಭಿಮತವು. ಪ್ರಕೃತದಲ್ಲಿ ಅರಿಗಳಿಗೆ ತಮ್ಮ ವೈರಿಯು ನಾಶವಾಗು ವುದೇ ಅವಶ್ಯವಾದುದರಿಂದ ಪರಪಕ್ಷದವನಾದ ಅಮಾತ್ಯರಾಕ್ಷಸನ ನಯ ಭಯ ಪೂರ್ವಕವಾದ ಕಪಟಸಂಧಿಗೆ ಪರ್ವತರಾಜನು ವಿಹ್ವಲನಾಗಿ ನಮಗೆ ಅನಿಷ್ಟ ವಾಕ್ಯಮಂ ಹೇಳಿದ್ದಾನು. ಸಂದೆಸಿಯೋಗಿಯು ಬಂದಿದ್ದಂತೆ ತೋರುತ್ತಿದೆ. ಆ ಯರ್ಥವು ಈ ಶಬರವರ್ಮನಿಗೆ ಸಮ್ಮತವಿಲ್ಲದುದರಿಂದ ಅಲ್ಲಿ ಈತನ ಯತ್ನಂ ಸಾಗದೆ ಖಿನ್ನನಾಗಿ ಬರುತ್ತ ನಮ್ಮಂ ಕಾಣುವುದಕ್ಕೆ ಲಜ್ಜಿತನಾಗಿ ಕಣ್ಣುಮರೆಯಾದಂತೆ ತೋರುತ್ತಿದೆ. ಈತನಂ ಕಂಡು ರಾಯನ ಮನೋಗತಮಂ ತಿಳಿದು ರಾಜಸಮ್ಮುಖಕ್ಕೆ ಹೋಗಬೇಕು ಎಂದು ನಿಶ್ಚಯಿಸಿ ಸಂಗಡ ಬರು ತ್ತಿರುವ ದೂತನಂ ನೋಡಿ—ಎಲೈ, ಈ ಗೂಡಾರದ ಮರೆಯಲ್ಲಿ ಶಬರವರ್ಮ ನಿರುವನು. ನಾವು ಬರಹೇಳಿದರು ಎಂದು ಕರೆದುಕೊಂಡು ಬಾ ಎನಲು; ಹಾಗೆ ಬಂದು ಅಭಿವಂದಿಸಿ ಖಿನ್ನನಾಗಿ ನಿಂತಿರುವ ಶಬರವರ್ಮನಂ ನೋಡಿ—

ಏನೈ ಮಂತ್ರಿಶ್ರೇಷ್ಠನೇ? ಏನೋ ಆಸ್ಥಾನದಲ್ಲಿ ಪರ್ವತರಾಜನು ನಮಗೆ ಅನಭಿಮತವಾದ ಅನಿಷ್ಟವಾಕ್ಯಮಂ ಹೇಳಿದುದಂ ನೀನು ಕೇಳಿ ಆ ರಹಸ್ಯಮಂ ಅನ್ಯತ್ರ ಹೇಳುವುದು ಮಂತ್ರಿಧರ್ಮವಲ್ಲವಾದುದರಿಂದ ಲಜ್ಜಿತನಾಗಿ ಮರೆಯಾ ದವನಂತೆ ತೋರುತ್ತಿದೆ. ಶತ್ರುಗಳ ನಯ ಭಯ ಕಪಟಗಳಿಗೆ ಮರುಳಾಗಿ ಅವರ ಅಭಿಮತವಂ ನಡಿಸಿಕೊಡುವುದಕ್ಕೆ ಈ ರಾಯನು ಸಮ್ಮತನಾಗಿದ್ದಾನೋ? ಅರಸುಗಳು ತಮ್ಮ ಕ್ಷೇಮಕ್ಕೋಸುಗ ಸಮಯೋಚಿತವಾಗಿ ನಡೆಯುವುದುಂಟು ಎನಲು; ಆ ಮಾತಿಗೆ ಶಬರವರ್ಮನು—

ಸ್ವಾಮೀ ಆಚಾರ್ಯರೇ, ತಾವು ಪರೋಕ್ಷದಲ್ಲಿ ನಿಶ್ಚಯಿಸಿದರ್ಥಕ್ಕೆ ಅನ್ಯರು ಪ್ರತ್ಯಕ್ಷವಾಗಿ ನಿಶ್ಚಯಿಸಿದುದು ಸಮವಾಗಲಾರದು. ಇನ್ನು ನಾನು ವಿಜ್ಞಾಪಿಸುವುದೇನಿದೆ? ಭಯಗ್ರಸ್ತನಾದವನಿಗೆ ಕಾರ್ಯಾಕಾರ್ಯ ವಿವೇಕ ವಿಲ್ಲದುದರಿಂದ ಅಕಾರ್ಯಕ್ಕೆ ಸಮ್ಮತನಾಗದೆಯೂ ದಕ್ಷನಾಗಿಯೂ ಇರುವ ಸೇನಾಪತಿಯಾದ ಶೇಖರನ ಕೈಯ್ಯಲ್ಲಿ ಚಂದ್ರಗುಪ್ತನಂ ಕೊಟ್ಟು ಪ್ರಕೃತ ವಿದ್ದಂತೆ ಆಚರಿಸಬಹುದು ಎಂದು ಹೇಳಿ ಹೊರಟುಹೋದನು. ಬಳಿಕ ಚಾಣಕ್ಯನು ತನ್ನ ಮನಸ್ಸಿನಲ್ಲಿ—ಈ ಶಬರವರ್ಮಂ ಹೇಳಿದಭಿಪ್ರಾಯವೇನೆಂ ದರೆ ಚಂದ್ರಗುಪ್ತನಂ ಶತ್ರುಗಳ ವಶಮಂ ಮಾಡುವುದಕ್ಕೆ ಪರ್ವತರಾಜನು

ಉದ್ಯುಕ್ತನಾದರೆ ಶೇಖರನು ಆ ರಾಯನ ಯತ್ನಮಂ ಸಾಗಲೀಸನು. ಇದರಿಂದ ಪರಸ್ಪರ ಮನಸ್ತಾಪವುಂಟಾಗಿ ಪಾಳೆಯದಲ್ಲಿ ತುಳಿದಾಟಹೆಚ್ಚಿ ಪಾರ್ವತೀಯರು ನಷ್ಟರಾದಾಗ್ಯೂ ಶರಣಾಗತರಂ ಪರಾಧೀನರಂ ಮಾಡಿದರೆಂಬ ಲೋಕಾಪವಾದವು ಅವರ ಕುಲಕ್ಕೆ ಸಂಭವಿಸಬಾರದೆಂದು ನಿಶ್ಚಯಿಸಿ ಈ ಯರ್ಥಮಂ ಶಬರವರ್ಮಂ ಹೇಳಿದ್ದಾನು. ಈ ವಿಷಯವು ನಮಗೆ ಅವಶ್ಯಕವಿಲ್ಲ. ಪರ್ವತರಾಜನ ಮನೋಗತಮಂ ಆತನ ಮುಖವಚನದಿಂದಲೂ ತಿಳಿದು ಆ ಬಳಿಕ ನಾವು ಮಾಡುವ ಯತ್ನಮಂ ಜಾಗ್ರತೆಯಿಂದ ನಡಸಬೇಕು ಎಂದು ನಿಶ್ಚಯಿಸಿ ಚಾಣಕ್ಯನು ಆಸ್ಥಾನಕ್ಕೆ ಹೋಗುತ್ತಿರಲು; ಅಷ್ಟರಲ್ಲಿಯೇ ಆ ಪರ್ವತರಾಜನು ಸ್ನಾನಾದಿಗಳಂ ಮಾಡಿ ಓಲಗಕ್ಕೆ ಬಂದು ಎಲ್ಲರೂ ಕುಳಿತಿರಲು; ಚಾಣಕ್ಯನಂ ನೋಡಿ—

ಅಯ್ಯಾ ವಿಪ್ರೋತ್ತಮರೇ, ಈಗ ನಂದರ ಕಡೆಯ ನಿಯೋಗಿಯು ಬಂದು ಹೇಳಿದ ವಾಕ್ಯವೇನಂದರೆ—ಪಾರ್ವತೀಯರಿಗೂ ಪಾಟಲೀಪುರದ ಅರಸುಗಳಿಗೂ ಎಂದಿಗೂ ಇಲ್ಲದ ವೈರವು ಈಗ ಚಂದ್ರಗುಪ್ತನ ದೆಸೆಯಿಂದ ಸಂಭವಿಸಿತು. ವೃಥಾಯಾಸದಿಂದ ಫಲವೇನು ? ನಮ್ಮ ಜ್ಞಾತಿಯಂ ನಮ್ಮ ವಶಮಂ ಮಾಡಿದರೆ ಆತನು ನಿಮಗೆ ಹೇಳಿರುವ ಮಾತಿಗೆ ನಾವೇ ಇದ್ದೇವೆ ಎಂದು ಸಂಧಿಗೆ ಮಾತನಾಡಿ ಹೋದನು. ಇದಕ್ಕೆ ನಾನು ಪ್ರಕೃತೋಚಿತಮಂ ಹೇಳಿ ಕಳುಹಿಸಿದೆನು. ಅದಂತಿರಲಿ. ಮೊನ್ನೆಯ ರಾತ್ರಿಯ ಕಲಹದಲ್ಲಿ ನಮಗೆ ಅಪಜಯವುಂಟಾಗಿ ಅವರಿಗೇ ಜಯವಾಯಿತು. ನಿನ್ನೆ ಸಮಯುದ್ಧವಾಯಿತು. ಪುನರ್ಯುದ್ಧಾರಂಭವಾದರೆ ಜಯಾಪಜಯವೆಂತಿರುವುದೋ! ಈಗ ಸಂಧಿ ಎಂಬ ಅರ್ಥವು ಮೊದಲು ಅವರಿಂದಲೇ ಉಂಟಾದುದರಿಂದ ಈ ಯರ್ಥಕ್ಕೆ ನಾವು ಒಪ್ಪಿದರೆ ಅವರಿಂದ ಕೆಲವು ದೇಶಕೋಶಗಳು ನಮ್ಮ ವಶವಾದಾವು. ಇದಕ್ಕೆ ಈ ಚಂದ್ರಗುಪ್ತನನ್ನೇ ಅಧಿಪತಿಯಂ ಮಾಡಿ ಇವರುಗಳಿಗಿರುವ ವೈರಮಂ ಶಾಂತಿಗೊಳಿಸಿ ಆ ಯಶಸ್ಸಿಗೆ ನಾವು ಪಾತ್ರರಾಗಿ ನಮ್ಮ ದೇಶಕ್ಕೆ ಹೋಗೋಣವೋ ? ಮತ್ತೇನಾದರೂ ಆಲೋಚನೆಯುಂಟೋ ? ಎನಲು; ಆ ಮಾತಿಗೆ ಚಾಣಕ್ಯನು ಮುಗುಳುನಗೆಯಂ ತೋರಿಸುತ್ತ--ಶಾಬಾಸು ! ಕಪಟರಾಕ್ಷಸನೇ ! ನಿನ್ನಂ ಪೋಲುವ ಮಂತ್ರಿಯು ಯಾರಿಗೆ ಇರುತ್ತಾನೋ ಅವನಿಗೆ ಯಾವ ಐಶ್ವರ್ಯಕ್ಕೂ ಶೂರತ್ವಕ್ಕೂ ಕಡಮೆ? ಆದುದರಿಂದಲೇ ಈ ವರೆಗೂ ನಂದರು ಸಮಸ್ತ ಪೃಥ್ವೀಪತಿಗಳಿಂದ ಪ್ರಣಾಮಿಸಲ್ಪಟ್ಟ ಪಾದಗಳುಳ್ಳವರಾಗಿ ಇದ್ದರು. ಈಗ ಅವರಿಗೆ ದೈವಸಹಾಯಂ ತಪ್ಪಿ ಅನ್ಯಾಯಪ್ರವರ್ತಕರಾಗಿ ನನ್ನಿಂದ ಪ್ರತಿಜ್ಞೆಯಂ ಮಾಡಿಸಿಕೊಂಡು ಕಾಲನ

ವಶರಾಗಿದ್ದಾರೆ. ನಿನ್ನ ಕಪಟಯತ್ನಗಳು ಸರ್ವರ ಮೇಲೂ ನಡೆಯುವಂತೆ ನನ್ನ ಮೇಲೆ ನಡೆಯಲಾರವು. ಸಕಲ ಪುಷ್ಪಗಳೂ ಷಟ್ಪದಗಳಿಗೆ ಸುಲಭವಾಗಿರಲು ಚಂಪಕಪುಷ್ಪವೆಂತೂ ಸುಲಭವಲ್ಲವಷ್ಟೆ! ನಾನು ಜಾಗರೂಕನಾಗಿದ್ದೇನೆ ಎಂದು ಈರ್ಷ್ಯೆಯಿಂ ಶ್ಲಾಘಿಸುತ್ತ ಪರ್ವತರಾಜನಿಗಿಂತೆಂದನು—

ಅಯ್ಯಾ ಅರಸೇ, ಲೋಕದಲ್ಲಿ ಅಬಲಿಷ್ಠರು ಬಲಿಷ್ಠರಂ ಪ್ರಾರ್ಥಿಸುವರೆಂಬುವುದು ಸುಪ್ರಸಿದ್ಧವು. ಮಾರ್ಗಮಧ್ಯದ ದುರ್ಗಯುದ್ಧದಲ್ಲಿ ಅವರಿಗೇ ಪ್ರಥಮ ಜಯವು. ಮೊನ್ನೆಯ ರಾತ್ರಿಯ ಸಮರದಲ್ಲಿ ಸಹ ಅವರಿಗೇ ಜಯವುಂಟಾದುದರಿಂದ ಅವರಂ ಬಲಿಷ್ಠರೆಂದೆನಬೇಕು. ಹೀಗೆ ಬಲಿಷ್ಠನಾದವಂ ಮೊದಲು ತಾನೇ ಅಬಲಿಷ್ಠರಾದ ನಮ್ಮೊಡನೆ ಸಾಂತ್ವಕ್ಕೆ ಹೇಳಿ ಕಳುಹಿಸಿದುದರಿಂದ ಇದು ಕಪಟವೋ ಸಹಜವೋ? ನೀನೇ ತಿಳಿಯುವವನಾಗು. ಹೀಗೆ ಸಾಮವೆಂದು ಮಾತನಾಡುತ್ತ ಯುದ್ಧಯತ್ನಮಂ ಮಾಡಲೀಸದೆ ನಷ್ಟವಾದ ತಮ್ಮ ಸೇನೆಗೆ ಪೂರ್ತಿಯಂ ಮಾಡುವುದಕ್ಕೆ ಕಾಲಹರಣಮಂ ಮಾಡಿ ಆ ಬಳಿಕ ಸಂಗರಮಂ ಜಯಿಸಬೇಕೆಂಬ ರಾಕ್ಷಸನ ಸಂಧಿ ಇದು ಇಂತಿರಲಿ. ಪೂರ್ಣಚಂದ್ರನ ಚಂದದಿಂ ಪ್ರಸನ್ನವಾಗಿದ್ದ ನಿನ್ನ ಮುಖವು ರಾಹುಗ್ರಸ್ತವಾದಂತೆ ನೇತ್ರದಲ್ಲಿ ಕೆಂಪಡರಿ ಮ್ಲಾನವಾಗಿರುವುದಂ ನೋಡಿದರೆ ಮಹಾತಂಕದಿಂದ ನಿದ್ರಾರಹಿತನಾಗಿ ಇದ್ದಂತೆ ತೋರುತ್ತಿದೆ. ನಿಮಿತ್ತವೇನು? ಎನಲು;

ಅಯ್ಯಾ ವಿಪ್ರೋತ್ತಮರೇ, ಈಗ ರಾಕ್ಷಸನು ಮಾಡಿರುವ ಯತ್ನದಿಂದ ನಮಗೆ ಪೂರ್ವಶತ್ರುಗಳಾದ ದಶಾರ್ಣಶೂರಸೇನಾಪತಿಗಳಿಂದ ನಮ್ಮ ರಾಜ್ಯವು ಸೂರೆಯಾಗಿ ನಗರವು ಅನ್ಯಾಕ್ರಾಂತವಾಗುವುದಾಗಿ ಅಲ್ಲಿನ ಸೈನ್ಯವು ಇಲ್ಲಿಗೆ ಬಾರದಂತೆ ಯುದ್ಧ ನಡೆಯುತ್ತಿದೆ ಎಂದು ನಮ್ಮ ಪುರರಕ್ಷಕನು ಬರೆಸಿ ಕಳುಹಿಸಿರುವುದರಿಂದಲೂ ಇದಲ್ಲದೆ ನಂದಪತಾಕಿನಿಗೆ ಮೇಲು ಬಲವಾಗಿ ದಕ್ಷಿಣ ದೇಶದಿಂದ ಅಪರಿಮಿತ ಚತುರಂಗಸೇನೆಯು ಬಂದು ಇಳಿದಿರುವ ವರ್ತಮಾನ ತಿಳಿದುದರಿಂದಲೂ ಇಲ್ಲಿನ ನಮ್ಮ ಪರಿವಾರಮಂ ನಮ್ಮ ದೇಶಕ್ಕೆ ಕಳುಹಿಸುವುದು ಅತ್ಯವಶ್ಯಕವು. ಈಗ ನಂದರಿಗೆ ಬರುವ ಬಲಮಂ ಬರಲೀಸದಂತೆ ಮಾಡುವುದು ಅತ್ಯಂತ ಆವಶ್ಯಕವು. ಇಲ್ಲಿ ಶತ್ರುಸೇನೆಯೊಡನೆ ಯುದ್ಧಮಂ ಮಾಡುವುದು ಮತ್ತೂ ಆವಶ್ಯಕವು. ಹೀಗೆ ಮೂರು ತೆರದಿಂದ ಒದಗಿರುವ ಅವಶ್ಯಕಾರ್ಯಗಳಿಗೆ ನಮ್ಮ ಬಳಿಯಣ ಅನೀಕವು ಒಂದೇ ವೇಳೆ ಒದಗಲಾರದಾದುದರಿಂದ ನಮಗೆ ಕ್ಷೇಮವೆಂತಾಗುವುದೆಂಬ ಆತಂಕದಿಂದ ನಿದ್ರಾರಹಿತನಾಗಿ ಇದ್ದೆನೆಂದನು. ಅದಕ್ಕೆ ಚಾಣಕ್ಯನು—

ಅಯ್ಯಾ ಪ್ರಭುವೇ, ಗುಮ್ಮನೆಂದು ಬಾಲಕನಂ ಬೆದರಿಸುವಂತೆ ರಾಕ್ಷಸನು ತೋರಿಸಿರುವ ಬಿಭೀಷಿಕೆಗೆ ಪರ್ವತರಾಜನೆಂದೆನಿಸಿಕೊಂಬ ನೀನು ಹೀಗೆ ಧೈರ್ಯ ಹೀನನಾದರೆ ಮಂಜುಮುಸುಕುವುದರಿಂದ ಬೆಟ್ಟವು ಕರಗಬೇಕಾಯಿತು. ಶತ್ರು ಜಯಕ್ಕೆ ನಾನು ಇಷ್ಟು ಪೌಜನ್ನಪೇಕ್ಷಿಸಿದೆನೇ? ನೀನು ಯುದ್ಧಕುತೂಹಲನಾಗಿ ಬಹು ಬಲಮಂ ನಷ್ಟಗೊಳಿಸಿದೆಯಲ್ಲದೆ ಇದರಿಂ ನನಗೆ ಪ್ರಯೋಜನ ಕಾಣಿಸ ಲಿಲ್ಲ. ಸೇನೆಯ ಜಂಗುಳಿಯು ಮೇಘೋದಯದಂತೆ ಜಯಾಪೇಕ್ಷೆಯಿಂದ ಗುಂಪು ಕೂಡುವುದು. ಸ್ವಲ್ಪ ಹಾನಿಯುಂಟಾದರೆ ಜಂಝಾಮಾರುತನು ಬೀಸಲು ದಿಕ್ತ ಟಗಳಂ ಸೇರುವ ಮೇಘಪಟಲದಂತೆ ಪಲಾಯನಂಗೆಯ್ಯುವುದು. ಪ್ರಕೃತದಲ್ಲಿ ನಿನ್ನ ನಗರದೇಶಗಳಿಗೆ ಆತಂಕ ತಪ್ಪುವಂತೆ ನಿನ್ನ ಪುರರಕ್ಷಕನಿಗೆ ಬರೆಸಿ ಕಳು ಹಿಸುವುದೇನೆಂದರೆ—ನಮ್ಮ ರಾಜ್ಯಪಟ್ಟಣಗಳಿಗೆ ಶತ್ರುಗಳ ದೆಸೆಯಿಂದ ಆತಂಕವು ಸಂಭವಿಸಿ ಇದೆ ಎಂದು ನೀನು ಬರೆಸಿ ಕಳುಹಿಸಿದರ್ಥವು ತಿಳಿಯಲಾಯಿತು. ಇಲ್ಲಿ ನಿನ್ನಿನ ಯುದ್ಧ ಮುಖದಿಂದ ನಂದರು ಸಂಹೃತರಾಗಿ ಪಾಟಲೀಪುರವು ನಮ್ಮ ಕೈವಶವಾಯಿತು. ಅಮಾತ್ಯರಾಕ್ಷಸನು ಪಲಾಯನಂಗೆಯ್ದನು. ಬಹುವಾಗಿ ಹುಡುಕಿದಾಗ್ಯೂ ಆತನು ಇನ್ನೂ ದೊರಕಲಿಲ್ಲ. ನಮ್ಮ ಪ್ರಾಂತದಲ್ಲಿ ಎಲ್ಲಿಯಾ ದರೂ ಬಂದು ಪ್ರಚ್ಛನ್ನನಾಗಿ ಇರುವ ವರ್ತಮಾನಮಂ ತಿಳಿದು ಹೇಳಿದವರಿಗೆ ಲಕ್ಷೋಪಲಕ್ಷ ಧನಂಗಳನ್ನೂ ಗ್ರಾಮಂಗಳನ್ನೂ ಕೊಟ್ಟು ಆ ರಾಕ್ಷಸನಂ ಸೆರೆಯಲ್ಲಿ ಇರಿಸುವುದು. ನಮ್ಮ ದೇಶಪಟ್ಟಣಗಳಲ್ಲಿ ಜಯಭೇರಿಯಂ ಹಾಕಿಸಿ ಉತ್ಸವಗಳಂ ಮಾಡಿಸಿ ಸಕ್ಕರೆಗಳಂ ಬೀರಿಸಿ ದೇವತಾರಾಧನೆಗಳಂ ಗೆಯಿಸುವುದು ಎಂದು ಬರೆಸಿ ಮೊಹರಗಳಂ ಮಾಡಿ ಕಳುಹಿಸು. ಅಯ್ಯಾ ರಾಜನೇ, ಈಗ ಬರೆದಿರುವ ರೀತಿಗೆ ನಿನ್ನ ಪುರದೇಶಗಳಲ್ಲಿ ಉತ್ಸವಾರಂಭವಾದರೆ ಆನಕಧ್ವನಿಗೆ ಭೀತಿಪಟ್ಟು ಓಡುತ್ತಿರುವ ಕ್ಷುದ್ರಮೃಗಗಳಂತೆ ಅಲ್ಲಿನ ವೈರಿಗಳು ಪಲಾಯನಂ ಗೆಯ್ಯುವುದೇ ಸಿದ್ಧವು ಎಂದನು. ಆ ಮಾತಿಗೆ ರಾಯನು—

ಅಯ್ಯಾ ವಿಪ್ರೋತ್ತಮರೇ, ಈಗ ಬರೆಸಿ ಕಳುಹಿಸಿದ ರೀತಿಗೆ ಅಲ್ಲಿ ಉತ್ಸವ ನಡೆದು ಶತ್ರುಗಳು ಪಲಾಯಿತರಾದರೂ ಆಗಬಹುದು. ಈಗ ಸನ್ನಿಹಿತ ರಾಗಿರುವ ದಕ್ಷಿಣದೇಶದ ನಂದಸೇನಾತಂಕಕ್ಕೆ ಪರಿಹಾರವೇನು? ಎನಲು;

ಅಯ್ಯಾ ಅರಸೇ, ಪಂಚಾಕ್ಷರಿಯ ಜಪದಿಂ ಪಲಾಯನಂಗೆಯ್ವ ಪಾಪನಿಕರ ದಂತೆ ಇಂದು ನಾಳೆಯಲ್ಲಿಯೇ ಆ ದಕ್ಷಿಣದೇಶದ ದಳವು ಸಹ ಪಲಾಯನಂಗೆಯ್ದ ವೃತ್ತಾಂತವು ತಿಳಿಯುತ್ತಿದೆ ಎಂದನು. ಆ ಮಾತಿಗೆ—

ಅಯ್ಯಾ ಭೂಸುರೋತ್ತಮರೇ, ನೀವು ಹೇಳಿದ ಮಾತು ಆಶ್ಚರ್ಯವಾಗಿ ತೋರುತ್ತಿದೆ. ಆ ದಕ್ಷಿಣದಿಕ್ಕಿನ ಪಡೆಯು ನೀವು ಹೇಳಿದಂತೆ ಪಲಾಯನಮಂ ಗೆಯ್ಯದೆ ನಂದರ ಮೂಲಬಲಕ್ಕೆ ಬಂದು ಸೇರಿದರೆ ನಮ್ಮ ಕ್ಷೇಮಕ್ಕೋಸುಗ ಆಗಲಾದರೂ ಸಂಧಿಗೆ ಸಮ್ಮತಿಸಿ ನಂದರ ಅಭಿಮತಮಂ ನಡಿಸಿಕೊಡಬೇಕಾಗುತ್ತಷ್ಟೆ? ಎಂದು ಅರಸು ಕೇಳಲು:

ಅಯ್ಯಾ ಭೂಪತಿಯೇ, ವ್ಯಕ್ತವಾಗಿ ಹೇಳುವುದಕ್ಕೆ ಲಜ್ಜಿತನಾಗಿ ಗೂಢಾರ್ಥದಿಂ ಹೇಳುತ್ತೀಯೆ. ಚಂದ್ರಗುಪ್ತನಂ ತಮ್ಮ ವಶಕ್ಕೆ ಒಪ್ಪಿಸಿಕೊಡುವುದಕ್ಕಿಂತಲೂ ನಂದರಿಗೆ ಬೇರೆ ಅಭಿಮತವೆಂದರೇನು? ಎಂದು ಚಾಣಕ್ಯಂ ಹೇಳಲು; ಆ ಯರ್ಥವು ನಿಮಗೆ ತಿಳಿದಿದ್ದ ಬಳಿಕ ನಾನು ವ್ಯಕ್ತವಾಗಿ ಹೇಳಿದುದರಿಂದ ಫಲವೇನು? ಎಂದು ಪರ್ವತರಾಜನು ಹೇಳಲಾಗಿ ಚಾಣಕ್ಯನು ಕೈಹೊಯ್ದು ನಗುತ್ತ—

ಎನ್ನೈ ಅರಸೇ, ಮಹತ್ತರವಾದ ಅಕಾರ್ಯಮಂ ಯೋಚಿಸಿರುವೆ? ಈ ಯರ್ಥವು ಈ ಕಲ್ಪದಲ್ಲಿ ಬೇರೆ ನಡೆಯಲಾರದು. ನಾವು ಮೃತಿ ಹೊಂದಿ ನಮ್ಮ ಪೌರುಷವು ನಷ್ಟವಾಗಿ ನಮ್ಮ ತಪಃಶಸ್ತ್ರದ ಮೊನೆಯು ಮಸಣಿಸಿದರೆ ಆಗಲ್ಲವೇ ಇಂಥ ಅಕಾರ್ಯಪ್ರಯತ್ನದ ಆಲೋಚನೆಯು? ನಾನು ಜೀವವಂತನಾಗಿರುವಲ್ಲಿ ಅಂಥ ಅಯೋಗ್ಯಕರ್ಮವೇನಾದರೂ ನಡೆಯುವ ಸಂಗತಿಯಾದರೆ— "ಅನ್ಯಮಿಂದ್ರಂಕರಿಷ್ಯಾಮಿ ಲೋಕಂವಾಸ್ಯಾದನಿಂದ್ರಕಂ" ಎಂದು ಹೇಳುತ್ತ ಮಹಾಕ್ರೋಧಾವಿಷ್ಟರಾದ ವಿಶ್ವಾಮಿತ್ರರೋಪಾದಿಯಲ್ಲಿಯೂ ಅನುಚಿತ ಪ್ರವೃತ್ತರಾದ ಕಾರ್ತವೀರ್ಯಾರ್ಜುನಾದಿ ದುಷ್ಟಕ್ಷತ್ರಿಯರನ್ನು ಇಪ್ಪತ್ತೊಂದಾವೃತ್ತಿ ತನ್ನ ಕಠೋರಕುಠಾರಧಾರೆಗಳಿಂದ ಕಡಿದು ಅವರ ರಕ್ತಗಳೆಂಬ ಉದಕಗಳೊಡನೆ ಕೂದಲುಗಳೆಂಬ ದರ್ಭೆಗಳಿಂದ ಪಿತೃಗಳಿಗೆ ತರ್ಪಣಂಗೆಯ್ದ ಪರಶುರಾಮನಂತೆಯೂ ನವನಂದರನ್ನೂ ಆ ದುಷ್ಟರಿಗೆ ಸಹಾಯವಾದವರನ್ನೂ ಹೂಂಕಾರಮಾತ್ರದಿಂದಲೇ ಭಸ್ಮೀಭೂತರನ್ನಾಗ ಮಾಡುವೆವು ಎಂದು ಹೇಳುತ್ತಿರುವ ಸಮಯದಲ್ಲಿ ಚಾರರಿಬ್ಬರು ಬಂದು ಅರಸಿಗೆ ಕೈಮುಗಿದು—

ಬುದ್ಧೀ, ಕಾಮರೂಪಾಧಿಪತಿ ಲಂಪಾಕಪತಿ ಇವರಿಬ್ಬರ ಸೇನೆಗಳಿಗೂ ಮಹಾಯುದ್ಧ ನಡೆದು ಶ್ಯೇನಪಕ್ಷಿಯ ರಭಸಕ್ಕೆ ಅದೃಶ್ಯವಾಗುವ ಶುಕಶಾಬಕಗಳಂತೆ ಲಂಪಾಕಪತಿಯ ಸೈನಿಕರು ಕಾಮರೂಪಾಧಿಪತಿಯ ಸೇನಾರಭಸಕ್ಕೆ ತರ

ಹರಿಸಲಾರದೆ ಪಲಾಯನಂಗೆಯ್ಯಲು; ಆ ಅರಸು ಖಿನ್ನನಾಗಿ ಕಾಮರೂಪಾಧಿಪ
ತಿಯೊಡನೆ ಸಂಧಿಯನ್ನಪೇಕ್ಷಿಸುತ್ತಿದ್ದಾನೆ. ದಿವ್ಯಚಿತ್ತಕ್ಕೆ ವೇದ್ಯವಿರಬೇಕೆಂದು
ವಿಜ್ಞಾಪಿಸಲು; ಅದಂ ಕೇಳಿ ಪರ್ವತರಾಜನು ಸಂತೋಷಂಬಡುತ್ತ ಅಲ್ಲಿನ ಅನಿಷ್ಟ
ನಿವೃತ್ತಿಯು ಚಾಣಕ್ಯರ ದೆಸೆಯಿಂದ ಉಂಟಾಯಿತೆಂದು ಭಾವಿಸುತ್ತ ಅವರ
ಮುಖಮಂ ನೋಡಲು; ಚಾಣಕ್ಯನು—

ಅಯ್ಯಾ ಜಯಾಭಿಮುಖನಾದ ರಾಯನೇ, ಇದು ಯಾವ ಮಹಾ ಸಂತೋ
ಷವಾರ್ತೆಯು? ಈ ದಿವಸ ಉಂಟಾಗುವ ಹರ್ಷಲಾಭವಂ ನೋಡಬೇಕಾದರೆ
ಶೇಖರನೆಂಬ ಸೇನಾಧಿಪತಿಗೆ ನಿನ್ನ ಸರ್ವವಾಹಿನೀಪತಿತ್ವಮಂ ಕೊಟ್ಟು ನಾನಿ
ದ್ದೆಡೆಗೆ ಕಳುಹಿಸುವವನಾಗು ಎಂದು ರಾಯನಿಗೆ ಹೇಳಿ ಆಸ್ಥಾನದಿಂದ ಹೊರಟು
ಬರುತ್ತ ತನ್ನ ಮನಸ್ಸಿನಲ್ಲಿ ರಾಕ್ಷಸನ ಕಪಟಕ್ಕೆ ವಿಹ್ವಲನಾಗಿ ಪರ್ವತರಾಜನು
ಚಂದ್ರಗುಪ್ತನಂ ಶತ್ರುಗಳ ವಶಮಂ ಮಾಡಬೇಕೆಂಬ ಅರ್ಥವು ಅವನ ಮುಖ
ವಚನದಿಂದಲೂ ತಿಳಿಯಬಂದಿತು. ಅರಸುಗಳ ಚಿತ್ತವು ಯಾವ ವೇಳೆಯಲ್ಲಿ
ಎಂತಿರುವುದೋ? ಎಂದು ಆಲೋಚಿಸುತ್ತ ತಾನಿದ್ದೆಡೆಗೆ ಹೋದನೆಂಬಲ್ಲಿಗೆ
ಮುದ್ರಾಮಂಜೂಷದಲ್ಲಿ ನಂದಯುದ್ಧಕಥನವೆಂಬ ಸಪ್ತಮಾಶಯವು ಸಮಾಪ್ತ
ಮಾದುದು.

---

## ಅಷ್ಟಮಾಶಯ ಪ್ರಾರಂಭವು.

---

### ನಂದನಿರ್ಯಾಣವು.

ಅನಂತರದಲ್ಲಿ ಚಾಣಕ್ಯನು ಸ್ನಾನ ಸಂಧ್ಯಾದಿಕರ್ಮಗಳನ್ನಾಚರಿಸಿ ಶೇಖ
ರನ ಆಗಮನವಂ ನಿರೀಕ್ಷಿಸಿಕೊಂಡಿರಲು; ಪರ್ವತರಾಜನು ತನ್ನ ಮನಸ್ಸಿನಲ್ಲಿ
ಆಲೋಚಿಸುತ್ತ ಇದ್ದನು. ಅದೆಂತೆನೆ—ನಿನ್ನೆ ನಂದರು ಹೇಳಿಕಳುಹಿಸಿದ ಪ್ರಕಾರ
ಚಂದ್ರಗುಪ್ತನಂ ಶತ್ರುಗಳಿಗೆ ಒಪ್ಪಿಸುವುದೋ ಏನು? ಎಂದು ಭಾವವಾಗಿ
ಹೇಳಿದುದಕ್ಕೆ ಚಾಣಕ್ಯರು ಹಸಿದ ಹೆಬ್ಬುಲಿಯಂತೆಯೂ ಹೆರೆವೃಕ್ಷ್ಟದ ಉರಗ
ನಂತೆಯೂ ಅತಿಕೋಪಾತುರರಾಗಿರುವಾಗ ಅವರ ಮುಖದಲ್ಲಿ ಪ್ರಳಯಕಾಲದ
ಅಗ್ನಿಯುಮ ರುದ್ರರ ಮೂರು ತೇಜಸ್ಸೂ ಏಕೀಭವಿಸಿದಂತೆ ಪ್ರಕಾಶಿಸುತ್ತಿದ್ದಿತು.
ನನ್ನ ಮಹಾಪ್ರಯತ್ನದೊಡನೆ ಸಾಧಿಸತಕ್ಕುದಾಗಿದ್ದ ಲಂಪಾಕಪತಿಯ ಅಹಂ
ಕಾರನಾಶವು ಅವರ ಒಂದು ನೀತಿಯಿಂದ ಸಾಧಿತವಾಯಿತು. ಇಂಥವನ ಆಶ್ರಯದ

ಲ್ಲಿರುವ ಚಂದ್ರಗುಪ್ತನಿಗೆ ಯಾವ ಕಾರ್ಯವು ತಾನೇ ಅಸಾಧ್ಯವು ? ಚಾಣಕ್ಯರಂ ನೋಡಿದರೆ ನಮ್ಮ ಸಹಾಯವು ನಿಮಿತ್ತಮಾತ್ರವೇ ಹೊರತು ಅನ್ಯಥಾ ಇಲ್ಲ ವೆಂದು ತಿಳಿಯುತ್ತದೆ. ಅತ್ತಲಾಗಿ ಅಮಾತ್ಯರಾಕ್ಷಸನ ಭಿನ್ನತಂತ್ರಗಳನ್ನೂ ಯುದ್ಧದಲ್ಲಿ ಆತನ ಸಾಮರ್ಥ್ಯವನ್ನೂ ಧೈರ್ಯವನ್ನೂ ನೋಡುವಲ್ಲಿ ನವನಂದರ ಐಶ್ವರ್ಯಕ್ಕೆ ಚ್ಯುತಿಯೇ ಇಲ್ಲವೆಂಬುದಾಗಿಯೂ ತೋರುತ್ತಿದೆ. ಇದಕ್ಕೇನು ಮಾಡಬೇಕು ? ಎಂದು ಯೋಚಿಸಿ ಸೇನಾಧಿಪತಿಗಳೊಳು ಮುಖ್ಯನೂ ತನ್ನಾ ಪ್ತನೂ ಆದ ಶೇಖರನಂ ಕರೆಯಕಳುಹಿಸಿ ಏಕಾಂತದಲ್ಲಿ ಅಮಾತ್ಯರಾಕ್ಷಸನು ಮಾಡಿರುವ ಭಿನ್ನತಂತ್ರವನ್ನೂ ತನಗೆ ಬಂದಿರುವ ಆತಂಕವನ್ನೂ ಚಾಣಕ್ಯರು ಉಸುರಿದ ತತ್ಪರಿಹಾರವನ್ನೂ ನಂದರು ಹೇಳಿಕಳುಹಿಸಿದ ಸಂಧಿವಿಷಯವನ್ನೂ ಸೂಚಿಸಿ—

ಎಲೈ ಶೇಖರನೇ, ಪ್ರಕೃತದಲ್ಲಿ ಚಂದ್ರಗುಪ್ತನಂ ನಂದರ ವಶಮಂ ಮಾಡಿ ನಮ್ಮ ಆತಂಕಮಂ ಪರಿಹರಿಸಿಕೊಂಡು ಅವರಿಂದ ಬರುವ ಅರ್ಧರಾಜ್ಯಮಂ ನಿನಗೆ ಕೊಟ್ಟು ಪಟ್ಟಾಭಿಷೇಕಂಗೆಯ್ದು ನಾನು ಸಂತೋಷದಿಂದ ಅಮಾತ್ಯ ರಾಕ್ಷಸನ ಸ್ನೇಹಮಂ ಮಾಡಿಕೊಂಡು ಊರಿಗೆ ಹೋಗಬೇಕೆಂದು ಯೋಚಿಸಿ ಇದ್ದೇನೆ. ನಿನಗೆ ಹೇಗೆ ಸಮರ್ಪಕವು ? ಎಂದು ಕೇಳಲು;

ಅದಕ್ಕಾ ಬುದ್ಧಿಸಂಪನ್ನನಾಗಿಯೂ ಇಂಗಿತಜ್ಞನಾಗಿಯೂ ಇರುವ ಶೇಖ ರನು ತನ್ನ ಮನಸ್ಸಿನಲ್ಲಿ—ಇದೇನು ನಮ್ಮ ರಾಯನಿಗೆ ಇಂಥ ದುರ್ಬುದ್ಧಿ ಪುಟ್ಟಿತು ! ಏನೋ ಈತನಿಗೆ ವಿನಾಶಕಾಲ ಪ್ರಾಪ್ತವಾಗಿರುವಂತೆ ತೋರುತ್ತದೆ. ಅನಾಥನಾಗಿ ಶರಣಾಗತನಾಗಿ ಬಂದಿರುವ ಚಂದ್ರಗುಪ್ತನಿಗೆ ತಾನು ಪ್ರಥಮ ದಲ್ಲಿ ಅಭಯಮಂ ಕೊಟ್ಟು ಈಗ ಆ ಶರಣಾಗತನನ್ನು ತಾನು ಜೀವವಂತನಾಗಿ ರುವಲ್ಲಿ ತಾನೇ ಒಪ್ಪಿಸಿಕೊಡಬೇಕೆಂದು ಯೋಚಿಸುತ್ತಾನೆ. ಈ ಪಾಪಕ್ಕೆ ಪ್ರಾಯಶ್ಚಿತ್ತವೇ ಇಲ್ಲ. ಪಾರ್ವತೇಯವಂಶಕ್ಕೆ ಮಹದಪಕೀರ್ತಿ ಬರುವ ಸಂಗತಿಯಂ ಮಾಡುತ್ತಾನೆ. ಒಳ್ಳೆಯದು ! ಈತನಿಗೆ ಈ ಕುಬುದ್ಧಿ ತಪ್ಪುವಂತೆ ಗಯನೆಂಬ ಗಂಧರ್ವನ ಕಥೆಯನ್ನು ಹೇಳಿ ನಯಭಯಗಳಿಂದ ಬೋಧಿಸೋಣ. ಆ ಮೇಲೂ ಈ ದುರ್ಮತಿಯಂ ಬಿಡದೆ ಇದ್ದಲ್ಲಿ ನಾವೆಲ್ಲರೂ ಚಾಣಕ್ಯರು ಹೇಳಿದಂತೆ ಕೇಳಿ ಚಂದ್ರಗುಪ್ತನು ನಂದರ ವಶವಾಗದ ಹಾಗೆ ಸಹಾಯಮಂ ಮಾಡಬೇಕೆಂದು ನಿಶ್ಚಯಿಸಿ ಆ ಪರ್ವತರಾಜನಿಗೆ ಆ ಕಥೆಯಂ ಆದ್ಯಂತವಾಗಿ ತಿಳಿಸಲು; ಆ ಮಾತಿಗೆ ಆ ದೊರೆಯು ಸಂತೋಷಪಟ್ಟು—

ಎಲೈ ಶೇಖರನೇ, ನೀನು ಯಥಾರ್ಥವಾಗಿ ನಮ್ಮ ಶ್ರೇಯಸ್ಸನ್ನಪೇಕ್ಷಿಸಿ ಹೇಳಿದಂಥವನಾದೆ. ನಿನಗೆ ಸರ್ವಸೇನಾಧಿಪತ್ಯಮಂ ಕೊಟ್ಟು ತಮ್ಮ ಬಳಿಗೆ ಕಳುಹಿಸುವಂತೆ ಚಾಣಕ್ಯರು ಹೇಳಿರುವರು ಎಂದು ತಿಳಿಸಿ ತನ್ನ ಬಳಿಯಣ ಅರಸುಗಳಂ ಕರೆಯಕಳುಹಿಸಿ—

ಅಯ್ಯಾ ಸಾಮಂತರಾಜರುಗಳಿರಾ, ರಾಜಕಾರ್ಯಗೌರವಕ್ಕೋಸುಗ ಸಮಸ್ತಬಲನಾಯಕತ್ವಮಂ ಶೇಖರನಿಗೆ ನೇಮಿಸುತ್ತಿದ್ದೇವೆ. ನೀವೆಲ್ಲರೂ ಆತನು ಹೇಳಿದಂತೆ ನಡೆಯಿರಿ ಎಂದು ನಿರೂಪಿಸಿ ವಸ್ತ್ರಭೂಷಣ ತಾಂಬೂಲಂಗಳಂ ಶೇಖರನಿಗೆ ಕೊಡಿಸಿ—ಅಯ್ಯಾ ಶೇಖರನೇ, ಚಾಣಕ್ಯರಿದ್ದೆಡೆಗೆ ಹೋಗಿ ಅವರು ಉಸುರಿದಂತೆ ನಡೆದುಕೊಳ್ಳುವವನಾಗು ಎಂಬುದಾಗಿ ಹೇಳಿ ಕಳುಹಿಸಿದನು. ಸಕಲಸೇನಾಧಿಪತ್ಯಮಂ ಪಡೆದ ಶೇಖರನು ಜಯಜಯವೆಂದು ಅರಸುಗಳು ಮಾಡುವ ವಂದನೆಗಳು ಕೈಕೊಂಡು ಚಾಣಕ್ಯರಿದ್ದೆಡೆಗೆ ಹೋಗಿ ಅವರಿಗೆ ಕೈಮುಗಿದು ಕುಳಿತುಕೊಂಡನು. ಆಗ ಚಾಣಕ್ಯರು ಶೇಖರನಂ ಕುರಿತು—

ಅಯ್ಯಾ ಸರ್ವಚಮೂಪತಿಯೇ, ರೂಪದಲ್ಲಿ ಸ್ಫುರತ್ತಾದ ಮಲಯಕೇತುವಿನಂತೆ ಇರುವ ಬುದ್ಧಿವಂತನಾದ ಒಬ್ಬ ಪುರುಷನಿಗೆ ರಾಜಾರ್ಹವಾದ ವಸ್ತ್ರಭೂಷಣಗಳಿಂದಲಂಕರಿಸಿ ಆತನಂ ಗಜಾರೂಢನಂ ಮಾಡಿ ಪರಿವಾರಸಮೇತವಾಗಿ ಕಾಶೀಮಾರ್ಗದಲ್ಲಿ ಇಳಿದಿರುವ ನಿನ್ನ ಸೇನೆಗೆ ಈ ರಾತ್ರಿಯಲ್ಲಿ ಕಳುಹಿಸಿ ಬಂದು ಹೇಳುವವನಾಗು ಎಂದು ನೇಮಿಸಲು ; ಅದೇರೀತಿಯಾಗಿ ಶೇಖರನು ಒಬ್ಬ ಪುರುಷನನ್ನು ಅಲಂಕರಿಸಿ ಗಜದ ಮೇಲೆ ಕುಳ್ಳಿರಿಸಿ ಪರಿವಾರಸಮೇತವಾಗಿ ಕಾಶೀಮಾರ್ಗಕ್ಕೆ ಕಳುಹಿಸಿ ಬಂದು ತಮ್ಮ ಅಪ್ಪಣೆಯ ಮೇರೆಗೆ ಕಳುಹಿಸಿದೆನು ಎಂದು ಚಾಣಕ್ಯರಿಗೆ ತಿಳುಹಿಸಿದನು. ಆಗ ಚಾಣಕ್ಯನು—ತನ್ನ ಬಳಿಯಲ್ಲಿದ್ದ ಆರುಮಂದಿ ತುರಗಾರೂಢರಲ್ಲಿ ಇಬ್ಬರಂ ಕರೆದು—ಎಲೈ, ಈ ದಿವಸ ನಂದರು ಜಪಶಾಲೆಗೆ ಬಂದ ಬಳಿಕ ನೀವು ಅವರ ಬಳಿಗೆ ಹೋಗಿ ಈ ವಾಕ್ಯಮಂ ಹೇಳಿರಿ ಎಂದು ಅವರ ಕಿವಿಯಲ್ಲಿ ಸೂಚಿಸಿದರ್ಥಮಂ ಉಸುರಿ ಅಲ್ಲೇ ಕಾದುಕೊಂಡು ಇರಿ ಎಂಬುದಾಗಿ ಅಪ್ಪಣೆ ಕೊಟ್ಟು ಕಳುಹಿಸಿ ಮತ್ತಿಬ್ಬರಂ ಕರೆದು—ನೀವು ಕಾಶೀಮಾರ್ಗಮಧ್ಯದಲ್ಲಿ ನಿಂತು ಜಪಶಾಲೆಗೆ ಪಡೆಯು ಬರುವುದಂ ಕಂಡು ಅಲ್ಲಿರುವ ನಂದರಿಗೆ ಈ ವಾಕ್ಯಮಂ ಹೇಳಿರಿ ಎನ್ನುತ್ತ ರಹಸ್ಯದಲ್ಲಿ ನುಡಿದು ಅವರಂ ಸಾಗಿಸಿ ಇನ್ನಿಬ್ಬರಂ ಬರಿಸಿ—ನೀವು ಕಾಶೀಮಾರ್ಗದ ಸೇನೆಯಲ್ಲಿ ನಿಂತು ನಂದರು ಜಪಶಾಲೆಗೆ ಬಂದರೆಂಬ ವರ್ತಮಾನವನ್ನು ಶೇಖರನ ಸಂಕೇತವನ್ನೂ ಸಹ ತಿಳಿದ ಬಳಿಕ ಹೀಗೆ

ಮಾಡಿರಿ ಎಂದು ಅದರ ರಹಸ್ಯವನ್ನು ಬೋಧಿಸಿ ಅವರಂ ಕಳುಹಿಸಿ ಆ ಬಳಿಕ ಶೇಖರನಂ ಕುರಿತು—

ಅಯ್ಯಾ ದಳಪತಿಯೇ, ನಂದರು ಜಪಶಾಲೆಗೆ ಹೊರಟ ವರ್ತಮಾನವನ್ನು ಕಾಶೀಮಾರ್ಗದ ನಮ್ಮ ವಾಹಿನಿಯು ತಿಳಿಯುವಂತೆ ಪತಾಕಾಹಸ್ತರಾದ ತುರಗಾರೂಢರಂ ನಿಲ್ಲಿಸುವವನಾಗು. ನಂದರೊಡನೆ ಯುದ್ಧಾರಂಭದಲ್ಲಿಯೇ ಜಯಾನಂತರ ಆಗುವ ಭೇರೀಧ್ವನಿಯಂ ಮಾಡಿಸುವವನಾಗು. ಜಪಶಾಲೆಯಲ್ಲಿ ಅಗ್ನಿಪ್ರವೇಶವು ಹೆಚ್ಚುವುದಂ ಕಂಡು ಉಳಿದ ನಮ್ಮ ದಂಡೆಲ್ಲವೂ ನಂದವಾಹಿನಿಯ ಮೇಲೆ ಕಾಣಿಸಿಕೊಂಡು ಬೆನ್ನಟ್ಟಿ ಹೋಗುವಂತೆ ನೇಮಿಸುವವನಾಗು. ಸೇನಾಪತಿಗಳೆಲ್ಲರೂ ಸನ್ನದ್ಧರಾಗಿ ಕಾದಿರಲಿ. ಅಲ್ಲಲ್ಲಿ ಗೂಢಚಾರರಂ ನೇಮಿಸಿ ಆಗಿನಾಗಿನ ವರ್ತಮಾನಮಂ ನಮಗೆ ತಿಳುಹಿಸುವಂತೆ ಕಟ್ಟುಮಾಡುವವನಾಗು ಎಂದು ಅವನಿಗೆ ಹೇಳಿ ಕಳುಹಿಸಿ ತಾನು ಈ ವೇಳೆಯಲ್ಲಿ ನಂದರಿಗೂ ರಾಕ್ಷಸನಿಗೂ ವಿಯೋಗಮುಂಟಾಗಲಿ ಎಂಬುದಾಗಿ ತನ್ನ ಇಷ್ಟದೇವತಾ ಪ್ರಾರ್ಥನೆಯಂ ಮಾಡುತ್ತ ಸಮಯಮಂ ನಿರೀಕ್ಷಿಸುತ್ತಿದ್ದನು. ಶೇಖರನು ಚಾಣಕ್ಯರು ನಿರೂಪಿಸಿದ ಮೇರೆಗೆ ಅಲ್ಲಲ್ಲಿಗೆ ಜನರಂ ನಿಲ್ಲಿಸಿ ಅವರು ಹೇಳಿದ ಸಂಕೇತಪ್ರಕಾರವೇ ಅಪ್ಪಣೆ ಕೊಟ್ಟು ಕಳುಹಿಸಲು;

ಅತ್ತಲಾ ನಂದರು ತಮ್ಮ ಗೂಡಾರದಲ್ಲಿ ಮಜ್ಜನಾದಿಗಳನ್ನಾಚರಿಸಿ ಪರ್ವತರಾಜನ ಬಳಿಗೆ ಅಟ್ಟಿದ್ದ ನಿಯೋಗಿಯ ವಾಕ್ಯಮಂ ಕೇಳಿ ರಾಕ್ಷಸನಂ ಸ್ನಾನಕ್ಕೆ ಕಳುಹಿಸಿ ರಾಜಪುತ್ರರೊಡಗೂಡಿ ದಿವ್ಯಮೃಷ್ಟಾನ್ನಮಂ ಭುಂಜಿಸಿ ಗಂಧಮಾಲ್ಯಾದಿಗಳಿಂದಲಂಕೃತರಾಗಿ ಯುದ್ಧಪ್ರಸಕ್ತಿಯು ಪ್ರಕೃತದಲ್ಲಿ ಇಲ್ಲವೆಂದು ಭಾವಿಸಿ ನಿರಾತಂಕದಿಂದ ಸುಖಶಯನದಲ್ಲಿ ಪವಡಿಸಿ ನಿದ್ರೆಗೆಯ್ಯುತ್ತಿದ್ದರು.

ಆಗ ರಾಕ್ಷಸನು ತಾನು ಕಳುಹಿಸಿದ್ದ ನಿಯೋಗಿಯ ಸಂಗಡ ಪರ್ವತರಾಜನು ಹೇಳಿ ಕಳುಹಿಸಿದ ವಾಕ್ಯಮಂ ಕೇಳಿ ಸ್ವಲ್ಪ ಕಾಲಹರಣಕ್ಕೆ ಅವಕಾಶಮುಂಟಾಯಿತೆಂದು ಸಂತೋಷಪಡುತ್ತ ಪರ್ಯಂಕದಲ್ಲಿ ಕುಳಿತು ತನ್ನ ಬಳಿಯ ದೂತನಂ ನೋಡಿ—ಎಲೈ, ಅರಸುಗಳ ಸಮಯಮಂ ತಿಳಿದು ಹೇಳುವವನಾಗು ಎನಲು; ಹಾಗೇ ಆ ದೂತನು ಹೋಗಿ ತಿಳಿದುಬಂದು—ಬುದ್ಧೀ, ಅರಸುಗಳು ಸುಖಶಯನದಲ್ಲಿ ನಿದ್ರಾಭೋಗವನ್ನು ಅನುಭವಿಸುತ್ತಿದ್ದಾರೆ ಎಂದನು. ಅದಂ ಕೇಳಿ ರಾಕ್ಷಸನಿಗೆ ಪ್ರಕೃತದಲ್ಲಿ ಶತ್ರುಗಳ ಆತಂಕವಿಲ್ಲದುದರಿಂದಲೂ ನಂದರಿಗೆ ದೈವಬಲ ತಪ್ಪಿದುದರಿಂದಲೂ ಎರಡು ರಾತ್ರಿಗಳಲ್ಲಿಯೂ ರಾಜಕಾರ್ಯಗೌರವ

ದಿಂದ ಸುಪ್ತಿ ಶೂನ್ಯವಾಗಿದ್ದುದರಿಂದಲೂ ನೇತ್ರದಲ್ಲಿ ಮಹಾ ನಿದ್ರಾಭಾರಮುದ್ಭವಿಸಿ ರಾಕ್ಷಸನು ಮಲಗಿಕೊಂಡನು.

ನಂದರು ನಿದ್ರೆಯಿಂದೆಚ್ಚರಗೊಂಡು ರಾಜಕಾರ್ಯಗೌರವಮಿಲ್ಲದುದರಿಂ ಪಗೆಯನ್ನಾಡುವುದಕ್ಕೆ ಯತ್ನಂಗೆಯ್ಯುತ್ತಿದ್ದರು. ಆಗ ಜಪಶಾಲೆಯಲ್ಲಿರುವ ಮಾಸೋಪವಾಸಿಯ ಶಿಷ್ಯರಿಬ್ಬರೂ ಕೂರ್ಚಸಮೇತವಾದ ಉದಕಪಾತ್ರೆಗಳಂ ಪಿಡಿದು ಕುಶಾಸ್ತರಣಪವಿತ್ರಗಳಿಂದಲಂಕೃತನಾಗಿ ದೂರ್ವಾಸ್ತಂಭದಲ್ಲಿ ಉದ್ಭವಿಸಿ ಚಲಿಸುತ್ತಿರುವ ವಲ್ಮೀಕಗಳೋ ಎಂಬಂತೆ ಭೂಮಿಯಲ್ಲಿ ಕುಶಶಕಲಗಳನ್ನೆರಚಿ ಕೂರ್ಚೆಯಿಂ ಪ್ರೋಕ್ಷಿಸಿ ಪಾದಗಳನ್ನಿಡುತ್ತ ವೈಖಾನಸವೇಷದಿಂ ವಾತಾಶನರಂ ವಂಚನೆಗೊಳಿಸುವ ವಾತಾಪಿ ಇಲ್ವಲರುಗಳೋ ಎಂಬಂತೆ ಕಾಪಟ್ಯಮಂ ಅಭಿನಯಿಸಿ ನಂದರಂ ಕರೆಯಬರುವ ಕಾಲಮೃತ್ಯುಕಿಂಕರರೋ ಎಂಬ ಹಾಗೆ ಬಂದು ಅವರ ಗೂಡಾರದ ಬಳಿಯಲ್ಲಿ ನಿಂತು ಆ ದ್ವಾರಪಾಲಕರಂ ಕುರಿತು—ಅಯ್ಯಾ ದೂತರುಗಳಿರಾ, ಜಪಶಾಲೆಯಿಂದ ಬ್ರಾಹ್ಮಣರು ಬಂದು ಅರಸುಗಳ ಸನ್ನಿಧಿಯಂ ಕಾಣಬೇಕೆಂದು ನಿಂತಿದ್ದಾರೆಂಬುದಾಗಿ ವಿಜ್ಞಾಪಿಸಿರಿ ಎಂದು ಕಳುಹಿಸಲು; ಅವರು ಹೋಗಿ ಅದೇ ಮೇರೆಗೆ ರಾಜಪುತ್ರರಿಗೆ ತಿಳುಹಿಸಿ ಅವರ ಅಪ್ಪಣೆಯ ಪ್ರಕಾರ ಅವರನ್ನು ಒಳಯಿಂಕೆ ಬಿಡಲು ; ಅವರು ಭೂಪತಿಗಳಿಗೆ ಮಂಗಳವಾಗಲಿ ಎಂದು ಹರಸಿ ನಂದರಂ ಕುರಿತು—

ಅಯ್ಯಾ, ಅವನೀಧವರುಗಳಿರಾ, ಜಪಶಾಲೆಯಲ್ಲಿ ಅನುಷ್ಠಾನಮಂ ಮಾಡುತ್ತಿರುವ ಮಾಸೋಪವಾಸಿ ಮಹಾ ಮುನಿಗಳ ಶಿಷ್ಯರು ನಾವು. ಇಂದು ಶುಕ್ರವಾರವಾದುದರಿಂದ ಹೋಮವು ಸಮಾಪ್ತವಾಗುತ್ತಿದೆ. ಪೂರ್ಣಾಹುತಿಯ ಸಮಯದಲ್ಲಿ ಉಂಟಾಗುವ ದೇವತಾದರ್ಶನವಿಶೇಷಕ್ಕೆ ತಾವೆಲ್ಲರೂ ಬರಬೇಕೆಂದು ಮೊದಲು ಹೇಳಿದ್ದ ಮಾತಿಗೆ ಇದೇ ಸಮಯವು. ದೇವತಾದರ್ಶನನಿಮಿತ್ತದಿಂದ ಶುಭಸೂಚನೆಗಳುಂಟಾಗುತ್ತಿವೆ. ನಮ್ಮ ಗುರುಗಳು ಸ್ರುಕ್ಸ್ರುವಂಗಳಂಪಿಡಿದು ಧ್ಯಾನಾಸಕ್ತರಾಗಿದ್ದಾರೆ. ಜಾಗ್ರತೆಯಿಂದ ಬಿಜಮಾಡಬೇಕು ಎಂದರು. ಆ ವಾಕ್ಯಮಂ ಕೇಳಿ ನಂದರು ದೈವಬಲಹೀನರಾದುದರಿಂದ ತಮ್ಮೊಳಗೆ ತಾವು ಹೋಮದರ್ಶನಕ್ಕೆ ಹೋಗಬೇಕೆಂದು ಹೇಳಿಕೊಳ್ಳುತ್ತ ದೂತನ ಮುಖಮಂ ನೋಡಿ—ಅಮಾತ್ಯ ರಾಕ್ಷಸರು ಏನುಮಾಡುತ್ತಾರೆ? ತಿಳಿದು ಬಾರೆನಲು ; ಆ ದೂತನು ಹೋಗಿ ವಿಚಾರಿಸಿ ಬಂದು—ಜೀಯಾ, ಅಮಾತ್ಯರಿಗೆ ಬಹು ನಿದ್ರಾಭಾರವೆಂದು ಹೇಳಲು ; ಆ ಮಾತಿಗೆ—ಎರಡು ರಾತ್ರಿಗಳಲ್ಲಿಯೂ ನಿದ್ರೆಯಿಲ್ಲದೆ ಆಯಾಸದಿಂದ ಸುಪ್ತ

ರಾಗಿರುವ ನಮ್ಮ ಅಮಾತ್ಯರಾಕ್ಷಸರಂ ಯಾವ ಕಾರ್ಯಗೌರವಕ್ಕೆ ಎಚ್ಚರಗೊ
ಳಿಸಬೇಕು ? ಸುಖವಾಗಿ ನಿದ್ರಿಸಲಿ. ನಾವೇ ಜಪಶಾಲೆಗೆ ಹೋಗೋಣವೆಂದು
ಹೇಳಿಕೊಳ್ಳುತ್ತ ನಂದರೆಲ್ಲರೂ ಭೂಷಣಭೂಷಿತರಾಗಿ ತಮ್ಮ ತುರಗಂಗಳನ್ನೇ
ರುತ್ತಿರಲು ; ಅಷ್ಟರಲ್ಲಿಯೇ ಮೈಗಾವಲಿನ ಶೂರಿಪರವಾರಂ ಬಂದು ನಿಲ್ಲಲು ;
ಮಾಸೋಪವಾಸಿಯ ಶಿಷ್ಯರು ಶೂದ್ರಸ್ಪರ್ಶಕ್ಕೆ ಭೀತರಾದವರಂತೆ ದೂರದಲ್ಲಿ
ನಿಂತು ಕೂರ್ಚೋದಕಗಳಿಂದ ಒಬ್ಬರಿಗೊಬ್ಬರು ಪ್ರೋಕ್ಷಣೆಯಂ ಗೆಯ್ಯುತ್ತ
ಸ್ಪರ್ಶಿಸಿದರೆ ಹಿಮ್ಮೆಟ್ಟುವ ಕುಳೀರಕನಂತೆ ಹಿಂದಕ್ಕೆ ಸಾರುತ್ತಿರಲು ; ಅವರಂ
ನೋಡಿ ಮೊದಲು ಅವರು ಹೇಳಿಕೊಂಡ ವಾಕ್ಯಮಂ ನೆನೆದು ಸಂಗಡ ಬೆಂಬಲ
ವಾಗಿ ಬರುವ ಭಾಗ್ಯಲಕ್ಷ್ಮಿಯಂ ನಿರಾಕರಿಸುವ ನಿರ್ಭಾಗ್ಯನಂತೆ ಮುಟ್ಟು ಮೈಲಿ
ಗೆಯು ಜಪಶಾಲೆಗೆ ಸಂಭವಿಸೀತೆಂಬ ಶಂಕೆಯಿಂದ ಆ ಮೈಗಾವಲಿನ ಬಲಮಂ
ಇಲ್ಲಿಯೇ ಇರುವವರಾಗಿರಿ ಎಂದು ನೇಮಿಸಿ ಮಿತರಾಜಪುತ್ರಪರಿವೃತರಾಗಿ ನಂದರು
ಪರಿವೃತನಕ್ಷತ್ರಸಮೂಹದಿಂದೊಪ್ಪುವ ಚಂದ್ರನುದಯಿಸಿ ಬಂದಂತೆ ಇತ್ತಂಡದ
ಮುತ್ತಿನ ಸತ್ತಿಗೆಯ ನೆಳಲಿಂ ಶತ್ರುಸಲಾಯನೋಚಿತ ಜಪಶಾಲೆಯ ಸಮೀಪಕ್ಕೆ
ಬಂದು ಅಲ್ಲಿ ಕುದುರೆಗಳನ್ನಿಳಿದು ಜಪಶಾಲೆಗೆ ಪ್ರವೇಶಿಸಲು ; ಅಷ್ಟರಲ್ಲಿಯೇ
ಪಶ್ಚಿಮದಿಕ್ಕಿನ ಕಾಶೀಮಾರ್ಗದಲ್ಲಿ ಭೂಮ್ಯಂತರಿಕ್ಷಗಳೊಡೆಯುವಂತೆ ಫಿರಂಗಿಯ
ಶಬ್ದಗಳು ಶ್ರುತವಾಗಲು ; ಅದನ್ನಾಲಿಸಿ ನಂದರು—ಕಾಶೀಮಾರ್ಗದಲ್ಲಿ ಫಿರಂಗೀ
ಶಬ್ದಗಳು ಕೇಳಿಸುತ್ತಿವೆ. ಕಾಶೀರಾಜನಿಗೂ ಪರ್ವತರಾಜನ ಕಡೆಯವರಿಗೂ
ಕಾಳಗವುಂಟಾಗಿರಬೇಕೆಂದು ಹೇಳಿಕೊಳ್ಳುತ್ತ ಹೋಮಕುಂಡಮಂ ಬಳಸಿ
ಬರುತ್ತಿರಲು ; ಅಷ್ಟರಲ್ಲಿಯೇ ತುರಗಾರೂಢರಾಗಿ ಕಾಶೀರಾಜನ ದೂತವೇಷಮಂ
ಧರಿಸಿದ ಚಾರರಿಬ್ಬರು ಹಯಗಳನ್ನೋಡಿಸುತ್ತ ಬಸಗೆ ! ಬಸಗೆ ? ಎಂದು
ಕೂಗುತ್ತ ನಂದ ಭೂಪತಿಗಳು ಎಲ್ಲಿ ನೆಲಸಿದ್ದಾರೆ ? ಎಂದು ಕೇಳುತ್ತ ಬರು
ವುದಂ ನಂದಸೇನೆಯ ಉಕ್ಕಡದವರು ಕಂಡು ಆಯುಧರಹಿತರಾಗಿ ಕಾರ್ಯ
ಗೌರವದಿಂ ಬರುವವರಂ ತಡೆದರೆ ನಾವು ಅರಸುಗಳ ಕೋಪಕ್ಕೆ ಪಾತ್ರರಾದೇ
ವೆಂಬ ಭೀತಿಯಿಂದ ಅವರಂ ನಿರೋಧಿಸದೆ ಬಿಡಲು ; ಹಾಗೇ ಆ ಅಶ್ವಾರೋಹಕರು
ಜಪಶಾಲೆಯ ಸಮೀಪಕ್ಕೆ ಬಂದು ನಿಂತು ಬಸಗೆ ! ಬಸಗೆ ! ಪರಾಕು ! ಎಂದು
ಗಟ್ಟಿಯಾಗಿ ಕೂಗಲು ; ಆ ಶಬ್ದಮಂ ಕೇಳಿದ ನಂದರು ಜಪಶಾಲೆಯಿಂದ
ಹೊರಟು ಬಂದು ಕೂಗಿದ ದೂತರ ಮುಖಮಂ ನೋಡಿ—ಇದೇನೈ, ನೀವಾರು ?
ಎಂದೆನಲು ; ಆ ಕಪಟದೂತರು—

ಬುದ್ಧೀ, ನಾವು ಕಾಶೀರಾಜನ ಸಮೀಪದ ದೂತರು. ಈ ದಿವಸ ನಮ್ಮ ಕಾಶೀರಾಜರು ಪರ್ವತರಾಜರಿಗೆ ಮಾತು ಕೊಟ್ಟ ಪ್ರಕಾರಕ್ಕೆ ಸೇನಾಸಮೇತ ರಾಗಿ ಹೊರಟು ಅವರ ದಂಡಿದ್ದ ಬಳಿಗೆ ಬರುತ್ತಿರಲು; ಅದಂ ತಿಳಿದು ಅವರನ್ನಿ ದಿರುಗೊಂಡು ಕರತರುವುದಕ್ಕೆ ಪರ್ವತರಾಜನು ತನ್ನ ಪುತ್ರನಾದ ಮಲಯ ಕೇತುವಂ ಪರಿವಾರಸಮೇತನನ್ನಾಗಿ ಕಳುಹಿಸಿದನು. ಮಲಯಕೇತುವು ಬಂದು ನಮ್ಮ ಕಾಶೀರಾಜರಂ ಉಚಿತಪ್ರಕಾರದಿಂದ ಕಂಡು ಪರಸ್ಪರಸನ್ಮಾನವಾಗಲು; ಈರ್ವರೂ ಬಂದೇ ಗಜವನ್ನೇರಿ ಅಂಬಾರಿಯಲ್ಲಿ ಕುಳಿತು ಅನ್ಯೋನ್ಯಕುಶಲ ಪ್ರಶ್ನೆಗಳಂ ಮಾಡುತ್ತ ತೆರಳುತ್ತಿರುವಲ್ಲಿ ಕಾಶೀರಾಜನ ಮಾವಟಿಗನು ಗಜಮಂ ಪಾಟಲೀಪುರದ ಮಾರ್ಗವಾಗಿ ತಿರುಗಿಸಲು; ಅದಂ ನೋಡಿ ಮಲಯಕೇತುವು ಭೀತನಾಗಿ ಗಜವು ನಮ್ಮ ಸೇನಾಮಾರ್ಗಮಂ ಬಿಟ್ಟು ಮಾರ್ಗಾಂತರಮಂ ಹಿಡಿ ಯುವುದಕ್ಕೆ ನಿಮಿತ್ತವೇನು ? ಎಂದು ಕೇಳಲು; ಈ ಮಾರ್ಗವು ಪತಾಕಿನಿಗೆ ಸುಪಥವಲ್ಲದುದರಿಂದಲೂ ಪಾಟಲೀಪುರದ ಪ್ರಾಕಾರದ ಸಮೀಪದಲ್ಲಿ ಹೋಗುವ ದಾರಿಯು ಸೈನ್ಯಕ್ಕೆ ಸತ್ಪಥವಾದುದರಿಂದಲೂ ಅನಾಯಾಸದಿಂ ಹೋಗಬಹುದು ಎಂದು ಹೇಳಿ ಕಾಶೀರಾಜರು ಹುಸಿನಗೆಯಂ ನಗಲು; ಅದಂ ನೋಡಿ ಮಲಯ ಕೇತುವು ತನ್ನಂ ಈ ಕಾಶೀರಾಜನು ಮೋಸದಿಂ ಸೆರೆ ಹಿಡಿದುಕೊಂಡು ಹೋಗು ತ್ತಾನೆಂದು ನಿಶ್ಚಯಿಸಿ ಒಮ್ಮಿಂದೊಮ್ಮೆ ಗಜದಿಂ ಧುಮುಕಿ ತನ್ನ ಪರಿವಾರ ಮಧ್ಯ ದಲ್ಲಿ ನಿಲ್ಲಲು; ಅದಂ ಕಂಡು ಕಾಶೀರಾಜರು ಮಲಯಕೇತುವಂ ಹಿಡಿಯಿರಿ ಎಂದು ತಮ್ಮ ಅನೀಕಿನಿಗೆ ನೇಮಿಸಲು; ಆ ದಳವು ಮಲಯಕೇತುವಿನ ಪರಿವಾರಮಂ ಮುತ್ತಿ ಇದಿರಾದವರಂ ಪ್ರಹರಿಸಿ ಮಲಯಕೇತುವಂ ಕೈಸೆರೆ ಹಿಡಿಯಲು; ಉಳಿದ ಪರಿವಾರವು ಓಡಿ ಹೋಯಿತು. ಅದಂ ನೋಡಿ ಕಾಶೀರಾಜರು ನಮ್ಮಂ ಕರೆದು— ಎಲೈ ದೂತರುಗಳಿರಾ, ಪರ್ವತರಾಜಂ ಈ ವರ್ತಮಾನಮಂ ತಿಳಿದು ತನ್ನ ಪುತ್ರನಂ ಬಿಡಿಸಿಕೊಂಡು ಹೋಗುವುದಕ್ಕೆ ಸೇನಾಸಮೇತನಾಗಿ ತ್ವರಿತದಿಂ ಬರುವನು. ನಮ್ಮ ಮೇಲೆ ಆತನ ದಂಡು ಬಂದು ಕವಿಯದಂತೆ ಆ ಪರ್ವತ ರಾಜನ ಪಡೆಗೆ ಅಡ್ಡಲಾಗಿ ಪಡೆ ಬಂದು ನಿಲ್ಲುವಂತೆ ನಂದಭೂಪತಿಗಳಿಗೆ ತ್ವರಿತದಿಂ ಹೋಗಿ ವಿಜ್ಞಾಪಿಸಿರೆಂದು ನಮ್ಮಂ ಸ್ವಾಮಿಯವರ ಸನ್ನಿಧಾನಕ್ಕೆ ಅಟ್ಟಿದರೆಂದು ಗಾಬರಿಯಿಂದ ಹೇಳಲಾಗಿ; ಅದಂ ಕೇಳಿ ನಂದರು—ಕಾಶೀರಾಜನು ನಮಗೆ ಪರಮಮಿತ್ರನಾದುದರಿಂದ ಈ ಸಮಯದಲ್ಲಿ ಮಲಯಕೇತುವಂ ಹಿಡಿದು ರಾಜ ಕಾರ್ಯಮಂ ನಿರ್ವಹಿಸಿದನು. ನಮಗೆ ಚಂದ್ರಗುಪ್ತನೇ ಸಿಕ್ಕಿದಂತಾಯಿತು.

ಈ ಶತ್ರುಪಲಾಯನ ಜಪಮಂ ಮಾಡಿದ ಮಾಸೋಪವಾಸಿ ಮುನಿಗಳು ಮಹಾ ಮಹಿಮಶಾಲಿಗಳಾದುದರಿಂದ ನಮ್ಮ ಇಷ್ಟಾರ್ಥಸಿದ್ಧಿಯಾಯಿತು ಎಂದು ಸಂತೋಷ ದಿಂದ ತಮ್ಮ ಭದ್ರಭಟಾದಿ ವಾಹಿನೀನಾಯಕರ ಸೇನೆಯನ್ನೂ ಸಾಮಂತ ರಾಜ ಪುತ್ರರನ್ನೂ ಉಳಿದ ಎಲ್ಲ ದಳವನ್ನೂ ಪರ್ವತರಾಜನು ಕಾಶೀರಾಜನ ಚತು ರಂಗದ ಮೇಲೆ ಬೀಳದಂತೆ ಮಾರ್ಗದಲ್ಲಿ ಅಡ್ಡಲಾಗಿ ನಿಲ್ಲುವ ಹಾಗೆ ಜಾಗ್ರತೆ ಯಿಂದ ಕಳುಹಿಸಿ ಬಂದು ಹೇಳುವವರಾಗಿರಿ ಎನ್ನುತ್ತ ತಮ್ಮ ಬಳಿಯಲ್ಲಿದ್ದ ದೂತರನ್ನಟ್ಟಿದರು. ಅವರು ಅದೇ ಪ್ರಕಾರ ಕಳುಹಿಸುವುದಕ್ಕೆ ಹೋದರು.

ನಂದರು ಆ ಕಪಟದೂತರಂ ನೋಡಿ—ಕಾಶೀಮಾರ್ಗದಲ್ಲಿ ಆದ ಫಿರಂಗೀ ಶಬ್ದಗಳು ಏನ್ನೈ? ಎನಲು; ಬುದ್ಧೀ, ನಾವು ಹೊರಟ ಬಳಿಕ ಮಲಯಕೇತು ಸಿಕ್ಕಿದ ಸಂತೋಷಕ್ಕಾಗಿ ಫಿರಂಗಿಗಳನ್ನು ಹಾರಿಸಿದರೆನಲು; ನಂದರ ಕಡೆಯ ತುರಗಾರೂಢರು ಅತಿ ತ್ವರೆಯಿಂದ ಹೋಗಿ ಭದ್ರಭಟನೇ ಮೊದಲಾದವರ ಸಕಲ ಸೇನೆಯಂ ಕಾಶೀಮಾರ್ಗದಲ್ಲಿ ಪರ್ವತರಾಜನ ಚಮೂವಿಗೆ ಅಡ್ಡಲಾಗಿ ನಿಲ್ಲುವು ದಕ್ಕೆ ಹೊರಡಿಸಲು; ನಂದರ ಅಪ್ಪಣೆಯ ಮೇರೆಗೆ ಭದ್ರಭಟಾದಿಗಳು ತಮ್ಮ ತಮ್ಮ ಬಲಸಮೇತರಾಗಿ ಎಲ್ಲರೂ ಪಾಟಲೀಪುರದ ದಕ್ಷಿಣದಿಕ್ಕಿಗೆ ಹೋಗು ತ್ತಿದ್ದರು. ಅಷ್ಟರಲ್ಲಿ ಕಪಟಮಲಯಕೇತುವಂ ಅಂದೋಳಿಕೆಯಲ್ಲಿ ಕುಳ್ಳಿರಿಸಿ ಮುಸುಗಿಕ್ಕಿ ಸುತ್ತಲೂ ಬಹು ದಳದ ಕಾಪಿನಿಂದ ತರುತ್ತಿರುವುದಂ ಕಂಡು ಮಾರ್ಗಮಧ್ಯದಲ್ಲಿ ನಿಲ್ಲಿಸಿದ್ದ ಚಾಣಕ್ಯನ ದೂತರಿಬ್ಬರು ಘೋಟಕಂಗಳಂ ಓಡಿಸುತ್ತ ಉಕ್ಕಡದವರಿಗೆ ಮಲಯಕೇತುವಂ ಕಾಶೀರಾಜರು ಛದ್ಮನೆಯಿಂದ ಕೈಸೆರೆಯಾಗಿ ಹಿಡಿದು ತರುತ್ತಿದ್ದಾರೆ. ನಂದಭೂಪತಿಗಳೆಲ್ಲಿರುವರು? ಹೇಳಬೇ ಕೆಂದು ತ್ವರಿತದಿಂದ ಬರುತ್ತ ನಂದರ ಗೂಢಾರದ ಬಳಿಯಲ್ಲಿ ನಿಂತು ಅಲ್ಲಿ ಕಾವ ಲಿರುವ ಸೇನೆಯವರಿಗೆ ಈ ಸಮಾಚಾರಮಂ ಹೇಳುತ್ತ ಜಪಶಾಲೆಯ ಸಮೀಪಕ್ಕೆ ಬಂದು ಜಯವಾಯಿತು! ಬಸಗೆ! ಬಸಗೆ! ಎಂದು ಕೂಗಲು; ಆ ಧ್ವನಿಯಂ ಕೇಳಿ ನಂದರು ಕೂಗುವ ದೂತರ ಮುಖಮಂ ನೋಡಿ—ಅದೇನ್ನೈ? ಎನಲು; ಜೀಯಾ, ಕಾಶೀರಾಜರು ಮಲಯಕೇತುವಂ ಹಿಡಿದು ಬಂಧಿಸಿ ಅಂದೋಳಿಕೆಯಲ್ಲಿ ಕುಳ್ಳಿರಿಸಿ ಶತ್ರುಗಳು ಬಂದು ಮೇಲೆ ಕವಿದಾರು ಎಂದು ಪೃತನಾಸಮೇತರಾಗಿ ಅತಿ ಜಾಗ್ರತೆಯಿಂದ ಕರತರುತ್ತಿದ್ದಾರೆ. ಸ್ವಾಮಿಯವರ ಕಾರ್ಯವು ಜಯವಾ ಯಿತು ಎನಲು; ಆ ಮಾತಿಗೆ ನಂದರು ಸಂತೋಷಪಡುತ್ತ ದೂತರಿಗೆ ಉಡುಗೊ ರೆಯಂ ಕೊಡಿ ಎಂದು ನೇಮಿಸಿ ಜಪಶಾಲೆಗೆ ಹೋಗಲು; ಅಷ್ಟರಲ್ಲಿಯೇ

ಮುಸುಕು ಹಾಕಿದ ಆಂದೋಳಿಕೆಯನ್ನು ಸುತ್ತಲೂ ಬಹುಜನ ತುರುಗಾರೂ
ಢರು ಖಡ್ಗ ಸಮೇತರಾಗಿ ಕಾವಲಿಂದ ತರುತ್ತ ನಂದರ ಗೂಡಾರದ ಬಳಿಯಲ್ಲಿ
ನಿಂತು ಮಲಯಕೇತವು ನಮ್ಮ ಕಾಶೀರಾಜರಿಗೆ ಕೈಸೆರೆಯಾಗಿ ಸಿಕ್ಕಿದನು. ನಂದ
ಭೂಪತಿಗಳಿಗೆ ಒಪ್ಪಿಸಬೇಕು, ತಿಳುಹಿಸಿರಿ ಎನಲು; ಆ ಗೂಡಾರವಂ ಕಾದಿದ್ದ
ದಳಪತಿಯು ಶತ್ರುವಾಗಿ, ಕೈಸೆರೆಯಾಗಿ ಸಿಕ್ಕಿದ ಮಲಯಕೇತುವಂ ನೋಡುವ
ಕುತೂಹಲದಿಂದ ಯಾರು ಮಲಯಕೇತು ? ಎಲ್ಲಿದ್ದಾನೆ? ನಾವು ನೋಡಬ
ಹುದೋ ? ಎಂದು ಆಂದೋಳಿಕೆಯ ಸಮೀಪಕ್ಕೆ ಹೋಗಿ ನಿಲ್ಲಲು; ಸೇನಾಪ
ತಿಯು ಮಲಯಕೇತುವಂ ನೋಡುವುದಕ್ಕೆ ಹೋಗುವುದಂ ಕಂಡು ನಾವೂ
ನೋಡುವುದಕ್ಕೆ ಹೋಗೋಣ ಎಂದು ಮಾತನಾಡಿಕೊಳ್ಳುತ್ತ ಗೂಡಾರದ ಕಾವ
ಲಿನ ಸೇನಾಜನರೆಲ್ಲರೂ ಆಯುಧಗಳಂ ಗೂಡಾರದ ಸುತ್ತಲೂ ನಿಲ್ಲಿಸಿ ಆಂದೋ
ಳಿಕೆಯ ಬಳಿಗೆ ಬರುತ್ತಿದ್ದರು, ಆಗ ಆಂದೋಳಿಕೆಯವರು ಗೂಡಾರದ ಕಾವ
ಲಿನ ಚಕ್ರರಕ್ಷಕನಂ ಕಂಡು ಹಿಂದೆ ಕಾವಲಿನ ಜನರು ನಿರಾಯುಧರಾಗಿ ಗುಂಪು
ಗುಂಪಾಗಿ ಬರುವುದಂ ನೋಡಿ ಜನವೆಲ್ಲ ಒಟ್ಟಿಗೆ ಬಂದು ಸೇರಲಿ. ಮಲಯಕೇ
ತುವಂ ನೋಡಬೇಕಾದರೆ ತೋರಿಸುತ್ತೇವೆ ಎಂದು ಜಾಲವಂ ಮಾಡುತ್ತ ಸ್ವಲ್ಪ
ಸ್ವಲ್ಪವಾಗಿ ಆಂದೋಳಿಕೆಯ ಮುಸುಕನ್ನೋಸರಿಸುತ್ತ ಒಳಗೆ ಭೂಷಣಭೂಷಿತ
ನಾಗಿರುವ ಪುರುಷನಂ ತೋರಿಸುತ್ತ ಈತನೇ ಮಲಯಕೇತು ! ನೋಡಬಹುದು
ಎನುತ್ತ ಆಂದೋಳಿಕೆಯಂ ಮೆಲ್ಲಮೆಲ್ಲನೆ ಮುಂದಕ್ಕೆ ಸಾಗಿಸುತ್ತಿರಲು; ನಂದರ
ಫೌಜು ಚಮೂಪತಿಸಹಿತವಾಗಿ ಗೂಡಾರದ ಮೇಲಣ ಚಿಂತೆಯಂ ಬಿಟ್ಟು ಆ ಕಪಟ
ಮಲಯಕೇತುವಂ ನೋಡುತ್ತ ವಿಸ್ಮಿತರಾಗಿ ಮನಸ್ಸಿಗೆ ಬಂದಂತೆ ಮಾತನಾಡಿಕೊ
ಳ್ಳುತ್ತಿರಲು; ಇದೆಲ್ಲವಂ ನೋಡಿ ಆಂದೋಳಿಕೆಯ ಹಿಂಗಡೆಯಲ್ಲಿ ಬರುತ್ತಿದ್ದ
ಸೇನೆಯು ಗೂಡಾರಕ್ಕೆ ನುಗ್ಗಿ ಅಲ್ಲಿ ನಿಲ್ಲಿಸಿದ್ದ ಆಯುಧಗಳಲ್ಲಿ ಬೇಕಾದವು
ಗಳಂ ತೆಗೆದುಕೊಂಡು ಉಳಿದವುಗಳಂ ಅಲ್ಲಿ ತೋಡಿದ್ದ ಅಗಳಿನಲ್ಲಿ ಬಿಸುಟು
ಗೂಡಾರವಂ ಕೊಳ್ಳೆ ಮಾಡುತ್ತಿರಲು; ಆಂದೋಳಿಕೆಯು ಮುಂದಕ್ಕೆ ಸಾಗಿ
ದುದು. ಆಗ ಗೂಡಾರವಂ ಸೂರೆ ಮಾಡುತ್ತಿರುವ ಸೈನ್ಯವು ನೋಡುವುದಕ್ಕೆ
ಹೋಗಿದ್ದ ನಂದವರೂಥಿನೀಪತಿಯು ತನ್ನ ಪರಿವಾರ ಸಮೇತನಾಗಿ ನಿರಾಯುಧ
ನಾಗಿ ತಿರುಗಿ ಗೂಡಾರದ ಬಳಿಗೆ ಬರುವುದಂ ಕಂಡು ಇದಿರಾಗಿ ಬಂದು ಸೇನಾನಾ
ಯಕಸಮೇತನಾಗಿ ಎಲ್ಲರಂ ಛೇದಿಸಿ ಸಂಹರಿಸಿ ಜಪಶಾಲೆಗೆ ಬರುತ್ತಿರಲು; ಅಷ್ಟ
ರಲ್ಲಿಯೇ ಮುಸುಕಿನ ಆಂದೋಳಿಕೆಯಂ ತಂದು ಜಪಶಾಲೆಯ ಮುಂದೆ

ಇಳುಹಿಸಿ ಮಲಯಕೇತುವು ಸಿಕ್ಕಿದನು. ಬುದ್ಧೀ, ಕರತಂದು ಇದ್ದೇವೆ ಎಂದು ಕೂಗಲು; ಆ ವಾಕ್ಯಮಂ ಕೇಳಿಸಂದರು ತ್ವರಿತದಿಂ ಬಂದು ಅಂದೋಳಿಕೆಯಮುಂದೆ ನಿಂತು ಒಳಗಿದ್ದ ಪುರುಷನಂ ಮಲಯಕೇತುವೆಂದು ತಿಳಿದು ಅವನಂ ಕುರಿತು—

ಎಲೈ ಮಯಕೇತುವೇ, ಬುದ್ಧಿಹೀನನಾಗಿ ಇಂಥ ಅಕಾರ್ಯವಮಂ ಮಾಡಿ ಯಾಕೆ ಕೈಸೆರೆಗೆ ತಗುಲಿದೆ? ಎನಲು; ಆ ಮಾತಿಗೆ ಆ ಕಪಟಮಲಯ ಕೇತುವು ನಂದರಂ ಕುರಿತು—

ಅಯ್ಯಾ ಅರಸುಗಳಿರಾ, ನಮ್ಮ ತಂದೆಯು ಭಾಗ್ಯಹೀನನಾದ ಚಂದ್ರ ಗುಪ್ತನಂ ಪಕ್ಷೀಕರಿಸಿದುದರಿಂದ ನನಗೆ ಈ ದುರ್ದಶೆಯು ಸಂಭವಿಸಿತು. ನಿಮ್ಮ ವಶವಾದ ಬಳಿಕ ನಮ್ಮ ಯತ್ನವೇನಿದೆ? ಎನಲು; ಎಲೈ ಮಲಯಕೇತುವೇ, ಅರಸುಗಳಿಗೆ ಪರಸ್ಪರ ವಿರೋಧವಮುಂಟಾದರೆ ಹಾನಿ ವೃದ್ಧಿಗಳು ಸಂಭವಿಸುವುದು ನಿಹಿತವೇ ಸರಿ. ಅದಕ್ಕೆ ದುಃಖಪಟ್ಟು ಫಲವೇನು? ಈಗಲೂ ನಮಗೆ ಜ್ಞಾತಿ ಯಾದ ಚಂದ್ರಗುಪ್ತನಂ ನಮ್ಮ ವಶಕ್ಕೆ ಒಪ್ಪಿಸುವಂತೆ ನಿಮ್ಮ ತಂದೆಗೆ ಹೇಳಿ ಕಳುಹಿಸಿ ಆ ಪ್ರಕಾರವೇ ನಡಸುವವನಾಗು. ನಿನ್ನಂ ಬಿಟ್ಟುಬಿಡುವೆವು. ನಿನ್ನ ರಾಜ್ಯ ಎಂದಿನಂತೆ ನಿನಗೇ ಇರುವುದು ಎನಲು;

ಅಯ್ಯಾ ನಂದಭೂಪತಿಗಳಿರಾ, ಹಿಡಿದ ಕಾರ್ಯವಮಂ ನಿರ್ವಹಿಸುವುದ ಕ್ಕಾಗಿ ನಮ್ಮ ತಂದೆಯು ನನ್ನ ಮೇಲೀ ಆಶೆಯನ್ನಾದರೂ ತ್ಯಜಿಸತಕ್ಕವನೇ ಹೊರತು ಶರಣಾಗತನಾದ ಚಂದ್ರಗುಪ್ತನಂ ಬಿಡುವವನಲ್ಲ ಎನಲು;

ಎಲೈ ಮರುಳೇ, ಪುತ್ರಕ್ಷೇಮಕ್ಕಿಂತಲೂ ತುಚ್ಛನಾದ ಚಂದ್ರಗುಪ್ತನೆಂದ ರೇನು? ಹಿಡಿದ ಕಾರ್ಯವಂದರೇನು? ಈಚೆಗೆ ಬಂದು ಮಾತನಾಡು ಎನಲು;

ಅಯ್ಯಾ ನಂದಭೂಪತಿಗಳಿರಾ, ಯಾವ ಕಾರ್ಯವಮಂ ನಿರ್ವಹಿಸುವುದಕ್ಕೆ ಲಜ್ಜಾರಹಿತನಾಗಿ ಹೊರಗೆ ಬಂದು ಏನೆಂದು ಜನಗಳಿಗೆ ಮುಖವಮಂ ತೋರಿಸಲಿ? ಎಂದು ಹೇಳುವಷ್ಟರಲ್ಲಿಯೇ ತಮ್ಮ ಸೇನೆಗಳು ಬಂದು ಒದಗಿದುದಂ ತಿಳಿದು ಆ ಕಪಟಮಲಯಕೇತುವು ಖಡ್ಗವಮಂ ಪಿಡಿದು ಅಂದೋಳಿಕೆಯ ಮುಸುಕಂ ತೆಗೆದುಕೊಂಡು ಹೊರಗೆ ಬಂದು ನಿಂತು ಸುತ್ತಣ ಜನವಮಂ ನೋಡಿ ನಗುತ್ತಿರಲು; ಕೂಡಲೇ ಪಡೆಯು ನಂದರಂ ಸುತ್ತಿಕೊಂಡು ಪರಿವೇಷವಮಂ ಕಟ್ಟಿದಂತೆ ನಿಲ್ಲಲು; ಇದೆಲ್ಲಮಂ ನೋಡಿ ಜ್ಯೇಷ್ಠನಂದನು ಮಹಾಭಯಗ್ರಸ್ತನಾಗಿ ತನ್ನ ತಮ್ಮಂದಿರ ಸಂಗಡ—

ಅಯ್ಯಾ ತಮ್ಮಂದಿರಾ, ಸೆರೆಸಿಕ್ಕಿದವನ ಕೈಗೆ ಖಡ್ಗವೆಂತು ಬಂದಿತು? ಇವನು ಒಬ್ಬರನ್ನೂ ಲಕ್ಷೀಕರಿಸದೆ ಮುಖವೈವರ್ಣ್ಯವಿಲ್ಲದೆ ಸುತ್ತಣ

ಜನಮಂ ನೋಡಿ ನಗುತ್ತಿದ್ದಾನೆ. ಇದೇನಾಶ್ಚರ್ಯವೋ ? ಎಂದು ಹೇಳಲು ; ಅವರಲ್ಲೊಬ್ಬನು—

ಅಯ್ಯಾ, ಅಣ್ಣಾಜಿಗಳಿರಾ, ಈ ಸುತ್ತಣ ಜನವೂ ತಾನು ಧರಿಸಿದ್ದ ರುದ್ರಾಕ್ಷಗಳನ್ನೀಡಾಡುತ್ತ ಹಸ್ತಗಳಿಂದ ಭಸ್ಮಗಳನ್ನಳಿಸಿಕೊಳ್ಳುತ್ತ ಪಾಗುಗಳನ್ನೋಸರಿಸುತ್ತ ಕೋಶಗಳಿಂ ಖಡ್ಗಂಗಳಂ ಹಿರಿಯುತ್ತ ಸನ್ನದ್ಧರಾಗುತ್ತಿರುವುದರಿಂದ ಇವರು ಕಾಶೀರಾಜನ ಪತಾಕಿನೀಜನರಲ್ಲ. ಕಪಟದಿಂ ಬಂದಿರುವ ಶತ್ರುಸೇನಾಜನರೇ ಇರಬಹುದು. ಹೋ ! ಹೋ ! ಹೋ ! ಕಾರ್ಯಘಾತವಾಯಿತು. ವೃದ್ಧರ ವಚನಗಳನ್ನತಿಕ್ರಮಿಸಿ ನಾವು ನಡೆದುದಕ್ಕೆ ತದನುಸಾರ ಫಲಸಂಭವಿಸಿತು. ನಮ್ಮ ಸಂಗಡ ಇಲ್ಲಿಗೆ ಬಂದ ಸ್ವಲ್ಪ ಪರಿವಾರದಿಂದ ನಿರ್ವಾಹ ತೋರುವುದಿಲ್ಲ. ಆಗ ದುರ್ಯೋಧನನು ತನ್ನ ಬುದ್ಧಿಯಿಂದ ಮಹಾಸಂಪದಮಂ ನಷ್ಟಗೊಳಿಸಿಕೊಂಡು ಸೋದರರು ಸಹಿತವಾಗಿ ತಾನೂ ನಷ್ಟವಾದನು. ಅಂಥ ದುರ್ದಶೆ ಈಗ ನಮಗೂ ಸಂಭವಿಸಿತು. ನಮ್ಮ ಸಮಯಬಂಧದೋಷವೇ ನಮ್ಮನ್ನಿಲ್ಲಿಗೆ ತಂದು ತಗುಲಿಸಿತು. ನಮ್ಮ ಬುದ್ಧಿಯಿಂದಲೇ ಮೈಗಾವಲಿನ ಫೌಜು ಗೂಡಾರದ ಬಳಿಯಲ್ಲೇ ನಿಂತಿತು. ನಮ್ಮ ವಚನದಿಂದಲೇ ಮಹಾಶೂರರಾದ ಭದ್ರಭಟಾದಿಗಳ ವಾಹಿನಿಗಳು ನಮ್ಮನ್ನಗಲಿ ಹೋದುವು. ಅಸಹಾಯಶೂರನೂ ತಂದೆಯೂ ಆದ ಅರ್ಜುನನನ್ನು ಸಂಸಪ್ತಕರ ನಿಮಿತ್ತದಿಂ ದೂರವಾಗಿ ತೆಗೆದುಕೊಂಡು ಹೋಗಿ ಶತ್ರುಸೇನಾಧಿಪನಾದ ದ್ರೋಣಾಚಾರ್ಯನಿಂ ರಚಿಸಲ್ಪಟ್ಟ ಪದ್ಮವ್ಯೂಹದಲ್ಲಿ ಅಭಿಮನ್ಯುವಂ ತಗುಲಿಸಿ ಸಂಹರಿಸಿದಂತೆ ವಿಪಕ್ಷಲಕ್ಷವನ್ನಾದರೂ ಲಕ್ಷ್ಯೀಕರಿಸದೆ ಯುದ್ಧಮಂ ಮಾಡುವ ಅಮಾತ್ಯರಾಕ್ಷಸನೊಡನೆ ನಮಗೆ ವಿಯೋಗವನ್ನುಂಟುಮಾಡಿ ದೈವವು ನಮ್ಮಂ ನಿಗ್ರಹಿಸಬೇಕೆಂದು ಎಣಿಸಿತು. ಶತ್ರುಗಳಂ ನಿಂದಿಸಿ ಪ್ರಯೋಜನವೇನು ? ಎನಲು ; ಮತ್ತೊಬ್ಬನು—

"ಗತಂನಶೋಚಯೇತ್ ಪ್ರಾಜ್ಞಃ" ಎಂಬಂತೆ ಮೀರಿಹೋದ ಮಾತನ್ನು ನೆನಸಿಕೊಂಡು ಪಶ್ಚಾತ್ತಾಪಪಡುವುದರಿಂದ ಪ್ರಯೋಜನವೇನು ? "ವಿಪದಿ ಧೈರ್ಯಮಥಾಭ್ಯುದಯೇ ಕ್ಷಮಾ" ಎಂಬ ಹಾಗೆ ವಿಪತ್ತು ಬಂದಕಾಲದಲ್ಲಿ ಧೈರ್ಯವನ್ನು ಹಿಡಿದ ಅಭಿಮನ್ಯುವು ವಿರೋಧಿಗಳ ವಿಗಡವಾದ ಪದ್ಮವ್ಯೂಹಮಂ ಭೇದಿಸಿಕೊಂಡು ಒರ್ವನೇ ಅರಿಸೇನೆಯಂ ಪೊಕ್ಕು ಪರಿಪಂಥಿಬಲಜಲಧಿಗೆ ಕುಂಭಸಂಭವನಾಗಿ ಷಡ್ರಥರಾದ ಕರ್ಣದ್ರೋಣಾಶ್ವತ್ಥಾಮ ಕೃಪಾಚಾರ್ಯಾದಿಗಳಂ ಜಯಿಸಿ ನೂರುಮಂದಿ ಕೌರವ ಕುಮಾರರನ್ನು ಸಂಹರಿಸಿ ಪ್ರಾಣವನ್ನು

ಬಿಟ್ಟು ವೀರಸ್ವರ್ಗಮಂ ಪಡೆದಂತೆ ಮಾಡಬೇಕಲ್ಲದೆ ಹೀಗೆ ಅಧೈರ್ಯದಿಂ ವ್ಯಸನ ಪಡುವುದರಿಂದ ಪ್ರಯೋಜನವೇನು ? ಎಂದು ಹೇಳಲು; ಮತ್ತೊಬ್ಬನು—

ಅಭಿಮನ್ಯುವು ಪ್ರಾಣವನ್ನು ಬಿಟ್ಟಾಗ್ಗೂ ಅರ್ಜುನನು ಪುತ್ರಶೋಕವನ್ನು ಸಹಿಸಲಾರದೆ ಕುಮಾರನಿಗೆ ಸಹಾಯಕರಾಗಿ ಬರುವ ಭೀಮಾದಿಗಳನ್ನು ಸೈಂಧವನು ಕಾಲರುದ್ರಸಮಾನನಾಗಿ ಪದ್ಮವ್ಯೂಹಮಂ ಹೋಗಲೀಸದೆ ತಡೆದನೆಂದು ಕೇಳಿ ಆ ಸೈಂಧವನನ್ನು ಶಪಥಪೂರ್ವಕವಾಗಿ ಸಂಹರಿಸಿ ಕೀರ್ತಿಯನ್ನು ಪಡೆದಂತೆ ನಮ್ಮ ತಂದೆಯಿಂದಧಿಕನಾದ ಅಮಾತ್ಯರಾಕ್ಷಸನು ನಾವು ವೀರಸ್ವರ್ಗವನ್ನು ಪಡೆದಾಗ್ಯೂ ಸ್ವಾಮಿಭಕ್ತಿಯಿಂದ ಯುದ್ಧದಿಂದಾಗಲಿ ಭಿನ್ನತಂತ್ರದಿಂದಾಗಲಿ ಶತ್ರುಗಳಿಗೆ ಸಹಾಯವಾಗಿ ಬಂದ ಪರ್ವತರಾಜನನ್ನು ಸಂಹರಿಸಿ ಆ ಮೇಲೆ ಚಂದ್ರಗುಪ್ತನನ್ನು ವಧಿಸಿ ತಪೋವನಕ್ಕೆ ಪೋಗುವನು. ಇದರಲ್ಲಿ ಸಂದೇಹವಿಲ್ಲವೆನಲು;

ಮತ್ತೊಬ್ಬನು—ಹೌದು, ಆ ಅರ್ಜುನನಿಗೆ ಕೃಷ್ಣಸಹಾಯವಿದ್ದಂತೆ ನಮ್ಮ ಗುರುವಾದ ಅಮಾತ್ಯರಾಕ್ಷಸನಿಗೂ ದೈವಾನುಗ್ರಹವಿದ್ದಲ್ಲಿ ಆತನು ಮಾಡಿದ ಭಿನ್ನತಂತ್ರವು ಭಗ್ನವಾಗಿ ನಮ್ಮ ವಿಪತ್ತಿಗೆ ಕಾರಣವಾಗುವುದೇ ? ಇದೇನು ಯೋಚನೆ ! ಎನಲು; ಮತ್ತೊಬ್ಬನು—

ನಾವು ಮಾಡಿದ ದುಷ್ಕರ್ಮದಿಂದಲೂ ನಮ್ಮ ಐಕಮತ್ಯದಿಂದಲೂ ನಮಗೆ ದೈವಬಲ ತಪ್ಪಿ ಇಂಥ ವಿಪತ್ತಿಗೆ ಪಾತ್ರರಾದೆವು. ನಮ್ಮ ಪಾಪವೇ ನಮ್ಮಂ ಕೊಲ್ಲುತ್ತದೆ. ಇದೋ ! ಶತ್ರುವರ್ಗವು ಅಧಿಕವಾಯಿತು. ಯಾರ ಯತ್ನವೂ ಇಲ್ಲ. ನಾವು ಕ್ಷತ್ರಿಯರಾದುದಕ್ಕೆ ನಮ್ಮ ಧರ್ಮಮಂ ಬಿಡದೆ ಧೈರ್ಯವನ್ನವಲಂಬಿಸಿ ಹರ ಮಹಾದೇವಾ ! ಎನ್ನುತ್ತ ಅರಿಗಳ ಮೇಲೆ ಬಿದ್ದು ಬಾಹುಬಲದಿಂದ ಕ್ಷಾತ್ರಧರ್ಮಮಂ ತೋರಿಸಿ ಹಿಮ್ಮೆಟ್ಟದೆ ಯುದ್ಧಮಂ ಮಾಡಿ ಜಯಿಸಿದರೆ ಉತ್ತಮವು. ಇಲ್ಲದಿದ್ದರೆ ಸದ್ಗತಿಯುಂಟಾಗುವುದಕ್ಕೆ ಸಂಶಯವೆಂದು ಹೇಳುತ್ತನಂದರು ಕಾಸೆಯಂ ಬಿಗಿದುಕಟ್ಟಿ ಸಮೀಪಸ್ಥರಾದ ತಮ್ಮ ದೂತರ ಕೈಗಳಲ್ಲಿರುವ ಖಡ್ಗ ಖೇಡಯಂಗಳಂ ತೆಗೆದುಕೊಂಡು ನಿಂತು ತುರಗಾರೂಢರಾಗಬೇಕೆಂಬ ಸಮಯದಲ್ಲಿ ಅಲ್ಲಿದ್ದ ಅಮಿತ್ರಯೋಧಿಗಳು ನಂದರ ಹಯಂಗಳ ಕಾಲುಗಳಂ ಖಡ್ಗದಿಂ ಛೇದಿಸಿ ಜಪಶಾಲೆಗೆ ಹೊಕ್ಕು ಅಲ್ಲಿದ್ದ ಬ್ರಾಹ್ಮಣರೆಲ್ಲರಂ ಓಡಿಸಿ ಜಪಶಾಲೆಯ ಹೋಮಕುಂಡದ ಅಗ್ನಿಯಿಂದಲೇ ಆ ಶಾಲೆಯಂ ಹೊತ್ತಿಸಿ ಬೆಳಕು ಮಾಡುತ್ತಿರಲು; ಆಗ ಮಾಸೋಪವಾಸಿಯು ಜಡೆಗಳಂ ಜೋಲಾಡಿ

ಸುತ್ತ ಕೃಷ್ಣಾಜಿನವನ್ನೀಡಾಡುತ್ತ ಭೀತಿಪಟ್ಟವನಂತೆ ಬಂದು ನಿಂತು ನಂದರಂ ಕುರಿತು—

ಎಲೈ ಅರಸುಗಳಿರಾ, ನಿಮಗೆ ದೇವತಾದರ್ಶನಮಂ ಮಾಡಿಸಬೇಕೆಂಬ ಸಮಯದಲ್ಲಿ ಇವರು ನನ್ನ ಜಡೆಗಳಂ ಕೀಳುವುದಕ್ಕೆ ಯತ್ನಮಂ ಮಾಡುತ್ತಾರೆ. ಈಗ ಉಪೇಕ್ಷಿಸುವುದು ನಿಮಗೆ ಯುಕ್ತವೇ ? ಎಂದು ಅವಹೇಳನಮಂ ಮಾಡುತ್ತ ಆದರೂ ನೀವು ಹಿಡಿದಿರುವ ಖಡ್ಗಮಂ ಬಿಸುಟರೆ ನಿಮಗೆ ಖಡ್ಗಸ್ತಂಭ ಮಂತ್ರ ವನ್ನುಪದೇಶಿಸುವೆನೆಂಬುದಾಗಿ ವಿದೂಷಕನಂತೆ ಹಾಸ್ಯಮಂ ಮಾಡುತ್ತ ನಾನು ಹೇಳಿದಂತೆ ಇಂದು ನಿಮ್ಮ ಅರಾತಿಗಳು ನಾಶವಾಗದಿದ್ದರೂ ನಮ್ಮ ದ್ವೇಷಿಗಳು ನಾಶವಾಗುವುದು ಸಿದ್ಧವೇ ಸರಿ. “ಅತ್ಯುತ್ಕಟೈಃ ಪುಣ್ಯಪಾಪೈಃ ಇಹೈವ ಫಲಮಶ್ನುತೆ” ಎಂಬ ಶಾಸ್ತ್ರಾರ್ಥವು ಸತ್ಯವಾದುದರಿಂದ ನಿಷ್ಕಾರಣವಾಗಿ ಸಂಪಾದಿಸಿಕೊಂಡ ಮೌರ್ಯಹಿಂಸಾದೋಷವೇ ನಿಮಗೆ ಈ ಶತ್ರುರೂಪವಾಗಿ ಅದರ ಫಲಮಂ ಅನುಭವಗೊಳಿಸುವುದಕ್ಕೆ ಸಿದ್ಧವಾಗಿರುವಲ್ಲಿ ನೀವಲ್ಲದೆ ಮತ್ತಾರು ಅನುಭವಿಸಾರು ? ಎಂದು ಮರ್ಮಸ್ಪೃಕ್ಕಾದ ವಾಕ್ಯಮಂ ಹೇಳುತ್ತ ಚಾಣಕ್ಯರಿದ್ದೆಡೆಗೆ ಬರುತ್ತಿದ್ದನು. ಆಗ ಜಪಶಾಲೆಯು ಬೇಯುತ್ತಿರುವುದರಿಂದುಂಟಾದಬೆಳಕಂ ನೋಡಿ ಶೇಖರನು ಹೇಳಿದ ಸಂಕೇತ ಪ್ರಕಾರಕ್ಕೆ ಪರ್ವತರಾಜನ ಸೇನೆಯಲ್ಲವೂ ನಂದರಂ ಬಿಡಿಸಿಕೊಳ್ಳುವುದಕ್ಕೆ ಅವರ ಪಡೆಯು ಪುನಃ ಬಾರದಂತೆ ನಾಲ್ಕು ದಿಕ್ಕಿನಲ್ಲಿಯೂ ಯುದ್ಧಸನ್ನದ್ಧವಾಗಿ ಬಂದು ನಿಲ್ಲುತ್ತಿರಲು ; ಜ್ಯೇಷ್ಠನಂದನು ತಮ್ಮ ಅಶ್ವಂಗಳು ಹತವಾದುದಂ ನೋಡಿ ಅದರ ಆಶೆಯಂ ಬಿಟ್ಟು ತನ್ನ ಕರಖಡ್ಗಮಂ ಝಳಪಿಸುತ್ತ ಇದಿರಿಗೆ ಖಡ್ಗಮಂ ಹಿಡಿದು ನಿಂದಿರುವ ಆ ಕಪಟ ಮಲಯಕೇತುವಂ ನಿರೀಕ್ಷಿಸಿ ಈ ವೇಷಮಂ ನೀನು ಧರಿಸಿದುದಕ್ಕೆ ಇದೀಗ ಫಲ. ಬಡವರ ಮಕ್ಕಳಂ ಬಾವಿಗೆ ತಳ್ಳಿ ಆಳನೋಡಿದರೆಂಬ ಲೋಕದ ಗಾದೆಗೆ ಸರಿಯಾಗಿ ವೈರಿಗಳು ನಿನ್ನನ್ನು ನಮ್ಮ ಖಡ್ಗಧಾರೆಗೆ ಗುರಿಮಾಡಿದರು ಎಂದು ಅವನ ಶಿರಸ್ಸನ್ನು ಛೇದಿಸಿ ಅಲ್ಲಿಂದ ಹಾರಿ ಪರಸೇನೆಯಂ ಪೊಕ್ಕು ನಿಂದಲ್ಲಿ ನಿಲ್ಲದೆ ಹುಲ್ಲೆಯ ಕರುವಿನೋಪಾದಿಯಲ್ಲಿ ಹಾರಿಯಾಡುತ್ತ ಒಂದೊಂದು ಖಡ್ಗಪ್ರಹಾರದಿಂದ ಎಂಟು ಹತ್ತು ಅರಿಭಟರ ಶಿರಂಗಳಂ ಕತ್ತರಿಸುತ್ತ ಪ್ರಳಯಕಾಲಭೈರವನೋ ! ಅಥವಾ ದಕ್ಷಪ್ರಜಾಪತಿಯಂ ಸಂಹರಿಸಲು ಕಾಲರುದ್ರನ ಜಟೆಯಿಂ ಪುಟ್ಟಿದ ಖಡ್ಗಧಾರಿಯಾದ ವೀರಭದ್ರನೋ ! ಅಲ್ಲದೆ ಪ್ರಾಣಿಗಳಂ ಹಿಂಸಿಸುವುದಕ್ಕೆ ಮೃತ್ಯುವೇ ಈ ಜ್ಯೇಷ್ಠನಂದನ ರೂಪವನ್ನು ಧರಿಸಿ ಬಂದನೋ ? ಎಂಬಂತೆ ಮುಖ

ದಲ್ಲಿ ಪರಾಕ್ರಮಾಗ್ನಿಯು ಪ್ರಜ್ವಲಿಸುತ್ತಿರಲು; ನಿಮೇಷಮಾತ್ರದಲ್ಲಿ ಅಮಿತ್ರ ಸೇನೆಗಳನ್ನು ಸಂಹರಿಸುತ್ತ ಬಂದನು. ಹೀಗೆ ತಮ್ಮಂದಿರಾದ ಎಂಟು ಜನ ನಂದರೂ ಒಬ್ಬರಿಗೊಬ್ಬರು ಅಧಿಕಸಾಹಸಮಂ ತೋರಿಸುತ್ತ ನಿಜಖಡ್ಗಹತಿ ಗಳಿಂದ ರಿಪುಸೇನಾಗಜತುರಗ ರಥಿಕ ಪದಾತಿಗಳಂ ಸಂಹರಿಸುತ್ತ ಅಷ್ಟದಿಕ್ಕುಗಳ ಲ್ಲಿಯೂ ಎಂಟುಜನ ಆಕಾಶಮಾರ್ಗದಲ್ಲಿ ಓರ್ವ ಈ ಪ್ರಕಾರ ಸುತ್ತುತ್ತ ಹಾರುತ್ತ ಕಡಿಯುತ್ತ ಕೂಗುತ್ತ ಪರಬಲಮಂ ಸಂಹರಿಸುತ್ತಿರಲು; ಆಗ ಪರಿ ಪಂಥಿವಾಹಿನಿಯು ಅಗ್ನಿಜ್ವಾಲೆಗೆ ಸಿಕ್ಕಿದ ತೃಣಗಳಂತೆ ಅವರ ಕೋಪಾನಲನಿಂದ ದಹಿಸಲ್ಪಡುತ್ತ ಪ್ರಚಂಡ ಮಾರುತನ ವೇಗಕ್ಕೆ ಸಿಕ್ಕಿದ ಒಣಗಿದೆಲೆಗಳಂತೆ ಪಲಾಯನಂ ಗೆಯ್ಯುತ್ತ ಇದ್ದಿತು. ಆಗ ಕೆಲರು ಓಡಲಾರದೆ ಭಯಭ್ರಾಂತರಾಗಿ ಹಿಡಿದಿದ್ದ ಆಯುಧಗಳಂ ಬಿಸುಟು ಬಾಯಲ್ಲಿ ಹುಲ್ಲುಗಳಂ ಕಚ್ಚಿಕೊಳ್ಳುತ್ತ ಇದ್ದರು. ಇನ್ನು ಕೆಲವರು ಅವರ ಸಾಮರ್ಥ್ಯಕ್ಕೆ ಬೆಗಡುಗೊಂಡು ಮೇಲೆ ಬೀಳುವುದಕ್ಕೆ ಅಂಜಿ ಎಷ್ಟು ಫೌಜನ್ನಾದರೂ ಈ ನವನಂದರಲ್ಲಿ ಓರ್ವನೇ ಸಂಹರಿ ಸುವನು. ಈ ಒಂಭತ್ತು ಜನವೂ ಆಯುಧಪಾಣಿಗಳಾಗಿ ಯುದ್ಧಮಂ ಮಾಡಿ ದರೆ ಇವರಿಗೆ ದೇವಾಸುರರಲ್ಲಿ ಯಾರುತಾನೇ ಇದಿರು ? ನಮ್ಮಂಥ ಹುಲ್ಲುಮಾನಿ ಸರ ಪಾಡೇನು ? ಇವರು ಮನುಷ್ಯಮಾತ್ರದವರಲ್ಲ ! ದೇವಾಂಶ ಸಂಭೂತರೇ ಹೌದು. ಅಹಹಾ ! ಏನು ಹೇಳಬೇಕು ? ಹಗೆಯ ಪಾಳೆಯಗಳೊಳಗೆಲ್ಲಾ ನವನಂ ದರೇ ಸಂಚರಿಸುತ್ತ ಶತ್ರುಸೇನೆಗಳು ನಂದಮಯವಾದುವೊ ಎಂಬಂತೆ ತೋರು ತ್ತಿದೆ. ಪೂರ್ವದಲ್ಲಿ ದಶರಥತನಯನಾದ ಶ್ರೀರಾಮನು ಕೋಟಿರಾಮರೂಪ ನಾಗಿ ರಾವಣನ ಮೂಲಬಲವನ್ನೆಲ್ಲಾ ಕ್ಷಣಾರ್ಧದಲ್ಲಿ ಸಂಹರಿಸಿದನೆಂದು ಕೇಳಿ ದ್ದೆವು. ಈಗ ಪರ್ವತರಾಜನ ವಾಹಿನಿಯಲ್ಲಿ ಈ ನವನಂದರು ಅದೇ ರೀತಿಯಲ್ಲಿ ಸರ್ವರಿಗೂ ನಂದಮಯವಾದಂತೆ ಹೊಕ್ಕು ಕೊಂದುದನ್ನು ನಾವು ಕಣ್ಣಾರ ಕಂಡೆವು. ಇವರಿಗೆ ಈ ಖಡ್ಗವಿದ್ಯಾಲಾಘವಮಂ ಕಲಿಸಿಕೊಟ್ಟಂಥ ಮಹಾಪುರು ಷನು ಯಾರೋ ? ಎಂದು ಹೊಗಳುತ್ತ ಇದ್ದರು. ಹೀಗೆ ಶೂರರೆಲ್ಲರೂ ಸ್ತಂಭೀ ಭೂತರಾಗಿ ನಿಂತಿರಲು ; ಆ ವರ್ತಮಾನಮಂ ಕೇಳಿದ ಚಾಣಕ್ಯನು ಕ್ರುದ್ಧನಾಗಿ ಅತಿವೇಗದಿಂ ತನ್ನ ಉತ್ತರೀಯಮಂ ನಡುವಿಗೆ ಕಟ್ಟಿ ಯಜ್ಞೋಪವೀತಮಂ ಕಿವಿಗೆ ಸುತ್ತಿ ದಂಡಮಂ ಹಿಡಿದು ಇನ್ನೂ ನಂದಾಧಮರು ಹತರಾಗದಿದ್ದ ಬಳಿಕ ಎಲ್ಲರೂ ಹೇಡಿಗಳು. ನಾನೇ ಹೋಗಿ ಸಂಹರಿಸುವೆನೆಂದು ಓಡಿಬರುತ್ತಿರಲು; ಅದಂ ನೋಡಿ ಚಂದ್ರಗುಪ್ತನು ಕವಚಮಂ ಧರಿಸಿ ಖಡ್ಗ ನಿಷಂಗ ಚಾಪ ಭಲ್ಲೆಯ

ಸಮೇತನ್ನಾಗಿ ತುರಗವನ್ನೇರಿ ಹೊರಡುವುದಂ ಕಂಡು ಶೇಖರಮುಖ್ಯರಾದ ಸೇನಾನಾಯಕರೆಲ್ಲರೂ ಚಂದ್ರಗುಪ್ತನ ಸಂಗಡಲೇ ಸನ್ನದ್ಧರಾಗಿ ಬರುತ್ತಿದ್ದರು. ಇತ್ತಲಾ ರಾಕ್ಷಸನ ದೂತರು ಜಪಶಾಲೆಯು ಬೇಯುವುದನ್ನೂ ನಂದರ ಗೂಡಾರವು ಸೂರೆಹೋದುದನ್ನೂ ಭದ್ರಭಟಾದಿಗಳ ಫೌಜುಗಳು ದೂರವಾದುದನ್ನೂ ಮೈಗಾವಲಿನ ಪರಿವಾರವು ನಷ್ಟವಾದುದನ್ನೂ ನಂದರು ಜಪಶಾಲೆಗೆ ಹೋದುದನ್ನೂ ಕಂಡು ಇದೇನೋ! ಅನರ್ಥ ಸಂಭವಿಸಿತೆಂದು ಭಯಭ್ರಾಂತರಾಗಿ ಏನು ಅಪರಾಧ ಬಂದರೂ ಬರಲಿ ಎಂದು ರಾಕ್ಷಸನಂ ತಟ್ಟಿ ಎಚ್ಚರವಂ ಮಾಡಿ ಅತನು ಎದ್ದು ಕುಳಿತ ಬಳಿಕ ಕೈಮುಗಿದು—

ಬುದ್ಧೀ, ತಮಗೆ ಆಕಸ್ಮಿಕವಾದ ನಿದ್ರೆಯು ಸಂಭವಿಸಿತು. ನಂದರು ಜಪಶಾಲೆಗೆ ಹೋದಬಳಿಕ ಜಪಶಾಲೆಯು ಹೊತ್ತಿಕೊಂಡು ಬೇಯುತ್ತಿದೆ. ಅವರ ಮೈಗಾವಲಿನ ಪಡೆಯು ಸೆರೆಸಿಕ್ಕಿದ ಮಲಯಕೇತುವಂ ಬಳಸಿ ಬರುವ ಕಾಶೀರಾಜನ ಸೇನೆಯಿಂದ ಸಂಹೃತವಾಗಿ ನಂದರ ಗೂಡಾರವು ಸೂರೆಹೋಯಿತು. ಭದ್ರಭಟಾದಿಗಳ ದಳವೆಲ್ಲವೂ ನಂದರ ಅಪ್ಪಣೆಯಿಂದಲೇ ಕಾಶೀರಾಜರಿಗೆ ಕೈಸರೆ ಸಿಕ್ಕಿದ ಮಲಯಕೇತುವಂ ಬಿಡಿಸಿಕೊಳ್ಳುವುದಕ್ಕಾಗಿ ಬರುವ ಪರ್ವತರಾಜನ ಚತುರಂಗದ ಸಂಗಡ ಯುದ್ಧಕ್ಕೆ ತೆರಳಿ ಹೋಯಿತು. ಇದೇನು ವಿಪರೀತವೋ! ಎಂದು ಭೀತಿಯಿಂ ಬಂದು ವಿಜ್ಞಾಪಿಸಿದೆವು ಎನಲು; ಅದಂ ಕೇಳಿ ರಾಕ್ಷಸನು ವಿಸ್ಮಯಂಗೊಂಡು ತ್ವರಿತದಿಂದೆದ್ದು ತನಗೆ ನಿದ್ರೆತಟ್ಟಿದಸಮಯದಲ್ಲಿ ಶತ್ರುಗಳು ಮೈಗಾವಲಿನ ಸೇನೆಗೂ ನಂದರಿಗೂ ವಿಯೋಗವನ್ನುಂಟುಮಾಡಿ ಅವರು ಜಪಶಾಲೆಗೆ ಹೋಗುವಂತೆ ಕಪಟವನ್ನಾಚರಿಸಿ ಗೂಡಾರದ ಬಳಿಯಣ ಮೈಗಾವಲಿನ ಬಲಮಂ ಸಂಹರಿಸಿ ಅದಂ ಸೂರೆಗೊಂಡಿರಬೇಕು. ಇದಲ್ಲದೆ ಕಾಶೀರಾಜನ ವ್ಯಾಜಮಂ ತೋರಿಸಿ ಭದ್ರಭಟಾದಿಗಳ ಸೈನ್ಯವು ನಂದರಂ ಬಿಟ್ಟು ಹೋಗುವಂತೆ ಮಾಡಿರಬಹುದು. ಹೋ! ಹೋ! ಈಗ ತಿಳಿಯ ಬಂದಿತು. ನಾನು ಕಾಶೀರಾಜನ ಮುಖದಿಂದ ಮಾಡಿದ ಕಪಟಮಂ ಪರಪಕ್ಷದವರು ತಿಳಿದು ಅದಕ್ಕೆ ಪ್ರತಿಕುಟಿಲವನ್ನಾಚರಿಸಿ ನಂದರಿಗೆ ವಿಪತ್ತನ್ನುಂಟು ಮಾಡಿದಂತೆ ತೋರುತ್ತದೆ. ವಿಪಕ್ಷನಾಶಕ್ಕೆ ನಾನು ಮಾಡಿದ ಕಪಟವೆಲ್ಲವೂ ಅವರಿಗೆ ಅನುಕೂಲವಾಗಿ ನಂದವಿಪತ್ತಿಗೇ ಕಾರಣವಾಯಿತು. ಅಯ್ಯೋ! ನಂದರೇನಾದರೋ! ಭಾಗ್ಯಹೀನನಾದ ನನಗೆ ಈ ಕನಿಷ್ಟ ನಿದ್ರೆಯು ಯಾಕೆ ಸಂಭವಿಸಿತೋ! ಎನ್ನುತ್ತ ಕವಚವಂ ತೊಟ್ಟು ತುರಗವನ್ನೇರಿ ಆಯುಧಸಮೇತನ್ನಾಗಿ ನೇಜಯವಂ ಪಿಡಿದು ವೇಗದಿಂ

ತೆರಳುತ್ತಿರಲು ; ಅಷ್ಟರಲ್ಲೇ ಶತ್ರುಗಳ ಜಯಭೇರೀಶಬ್ದವೂ ಅವರ ಕೋಲಾಹಲವೂ ದಿಕ್ತಟಂಗಳಂ ಮುಚ್ಚುವಂತೆ ಕೇಳಿಸುತ್ತಿದ್ದುವು. ಆಗ ಅಮಾತ್ಯನು ಅಕಟಕಟಾ! ಅರಿಗಳ ಜಯಭೇರೀಶಬ್ದವು ಕೇಳಿಸುತ್ತಿದೆ. ನಂದರು ನಷ್ಟರಾದರೋ! ಏನೋ! ಎಂದು ಊಹಿಸುತ್ತ ಸೂರೆಹೋದ ಗೂಡಾರವನ್ನೂ ಉರುಳಿರುವ ಪೀಗಳನ್ನೂ ನೋಡುತ್ತ ಜಪಶಾಲೆಯ ಬೇಗೆಯಿಂದುಂಟಾದ ಧೂಮರಾಜಿಯು ಭೂಮ್ಯಂತರಿಕ್ಷದಿಕ್ತಟಂಗಳಂ ಮುಸುಕಿದುದರಿಂದ ಶತ್ರುಸಂಘಮಂ ಕಾಣದೆ ಅಶ್ವಮಂ ಚಬುಕುಮಾಡುತ್ತ ಬರುತ್ತಿರುವಲ್ಲಿ ನಂದರ ತುರಗಗಳಿಗೆ ಅಲಂಕರಿಸಿದ್ದ ಅನರ್ಘ್ಯಾಭರಣಗಳನ್ನು ತಮ್ಮ ಕುದುರೆಗಳಿಗೆ ಸಿಂಗರಿಸಿಕೊಂಡು ನಂದರಿಗೆ ಹಿಡಿದಿದ್ದ ಮುತ್ತಿನ ಶ್ವೇತಛತ್ರಂಗಳಂ ನನಗೆ ತನಗೆ ಎಂದು ಹರಿದು ಹಂಚಿಕೊಳ್ಳುತ್ತ ಬರುತ್ತಿರುವ ಅಮಿತ್ರಯೋಧಿಗಳಂ ನೋಡಿ ಹಾ! ಹಾ! ನಂದರು ಸಂಹೃತರಾದುದು ಸತ್ಯವೇ ಸರಿ. ಅವರು ಜೀವವಂತರಾಗಿದ್ದರೆ ಅವರ ತುರಗಾಭರಣಗಳೂ ಅವರಿಗೆ ಹಿಡಿಯುವ ಛತ್ರಗಳೂ ಶತ್ರುಗಳ ಪಾಲಾಗುವುದುಂಟೇ? ಹಾ! ದೈವವೇ, ಏನು ವಿಪತ್ತಂ ತಂದುಬಿಟ್ಟೆ? ಹಾ! ನಂದಭೂಪತಿಗಳಿರಾ, ಎಂದಿಗೂ ನಿಮ್ಮನ್ನಗಲದೆ ಸಮ್ಮಾನಿತನಾಗಿದ್ದು ನಿಮ್ಮ ಆಪತ್ಸಮಯಕ್ಕೆ ಒದಗದಿದ್ದ ನನ್ನ ಜನ್ಮಮಂ ಸುಡಬೇಡವೇ! ಇನ್ನು ಯಾರನ್ನು ಅರಸುಗಳಿರಾ ಎಂದು ಕರೆದೇನು? ನಿಮ್ಮಂ ಬಿಟ್ಟು ನಾನಿದ್ದು ಫಲವೇನು? ನಿಮ್ಮಂ ಕಪಟದಿಂದ ಸಂಹರಿಸಿದ ಅರಿಗಳ ಮೇಲೆ ಬಿದ್ದು ಅವರಂ ಘಾತಿಸಿ ಅವರಿಂದ ಸಂಹೃತನಾಗಿ ನೀವು ಹೋದ ಗತಿಗೆ ನಾನೂ ಬರುವೆನೆಂದು ಹೇಳುತ್ತ ರೋಷದಿಂ ಖಡ್ಗಮಂ ಝಳುಪಿಸಿ ತುರಗಮಂ ಹಾರಿಸುತ್ತ ಹೋಗುತ್ತಿರಲು; ಆತನ ಮೈಗಾವಲಿನ ಜನಕ್ಕೆ ಗೊತ್ತುಗಾರನೂ ರಾಜಬೀಜೋತ್ಪನ್ನನೂ ಆದ ವಿನತನೆಂಬುವನು ರಾಕ್ಷಸನ ಹಯಕ್ಕೆ ಅಡ್ಡಲಾಗಿ ತನ್ನ ಅಶ್ವಮಂ ನಿಲ್ಲಿಸಿ ರಾಕ್ಷಸನಿಗಿಂತೆಂದನು—

ಸ್ವಾಮೀ ಅಮಾತ್ಯರೇ, ಒಂದು ವಿಜ್ಞಾಪನೆಯುಂಟು. ಅವಧರಿಸಬೇಕು. ಲೋಕದಲ್ಲಿ ಸ್ವಾಮಿಭಕ್ತರಾದವರು ತಮ್ಮ ಸ್ವಾಮಿಯು ಮೆಚ್ಚುವಂತೆ ಸ್ವಾಮಿ ಕಾರ್ಯನಿರ್ವಾಹಮಂ ಮಾಡಿ ಯಶಸ್ಸಂ ಸಂಪಾದಿಸುವುದು ವಿಹಿತವು. ಈಗ ಪ್ರಭುಗಳಾದ ನಂದರು ಅನ್ಯಥಾ ಆದ ಬಳಿಕ ನೀವು ಮಾಡುವ ಸಾಹಸಮಂ ನೋಡಿ ಸಂತೋಷಪಡುವವರಾರು? ಆದರೂ ಪ್ರಯೋಜನವೇನು? ದೊರೆಗಳಾದ ನಂದರ ನಿಮಿತ್ತದಿಂದ ಪರರಾಜರು ನಿಮಗೆ ಹಗೆಗಳಾಗಿದ್ದರೂ ಈಗ ನಿಮಗೂ ಅವರಿಗೂ ಶತ್ರುತ್ವವೆಂದರೇನು? ಯುದ್ಧದಲ್ಲಿ ಹತವಾಗುವುದು ಕ್ಷತ್ರಿಯ

ಧರ್ಮವಲ್ಲದೆ ಬ್ರಾಹ್ಮಣೋತ್ತಮರಾದ ನಿಮಗೆ ಧರ್ಮವಲ್ಲ. ದ್ವಾಪರದಲ್ಲಿ ಶಸ್ತ್ರಾಚಾರ್ಯರೆಂದು ಪ್ರಸಿದ್ಧರಾದ ದ್ರೋಣಾಚಾರ್ಯರು ಶಸ್ತ್ರವಿದ್ಯೆಯಿಂದಲೇ ಜೀವಿಸಿ ಅವಸಾನದಲ್ಲಿ ಬ್ರಾಹ್ಮಣಂಗೆ ಆಯುಧಮುಖದಿಂ ಸದ್ಗತಿಯಿಲ್ಲವೆಂದು ತಿಳಿದು ಶಸ್ತ್ರಸನ್ಯಾಸಮಂ ಮಾಡಿ ಭೂಸುರರಿಗೆ ವಿಹಿತವಾದ ಧ್ಯಾನದಿಂದಲೇ ಸದ್ಗತಿಯಂ ಸಂಪಾದಿಸಿದರು. ಆದುದರಿಂದ ಈ ಸೇವಕವೃತ್ತಿಯು ಹೀನ ಜೀವನವು. ವೃಥಾಯಾಸದಿಂ ಫಲವೇನು? ನೀವಾದರೂ ಜೀವಂತರಾಗಿದ್ದರೆ ವೃದ್ಧಮಹಾರಾಜರ ಅಂತಃಪುರವಾಸಿಗಳೂ ಪತಿವ್ರತೆಯರೂ ಆದ ನಂತರ ಮಾತೃ ಪತ್ನಿಗಳ ಮಾನಸಂರಕ್ಷಣೆಯು ಶತ್ರುಗಳಾದ ಈ ಮ್ಲೇಚ್ಛರಿಂದ ಸ್ಖಲಿತವಾಗದೆ ನಿಮ್ಮಿಂದ ರಕ್ಷಿತವಾದೀತು. ಇನ್ನು ನೀವು ಮಾಡುವ ಸ್ವಾಮಿಕಾರ್ಯವೇನಿದ್ದರೂ ಆ ವಿಷಯದಲ್ಲಿ ಉಪಯೋಗಿಸಲ್ಪಡಲಿ ಎಂದು ಪ್ರಕೃತೋಚಿತವಾಗಿ ಹೇಳುತ್ತಿರಲು ; ರಾಕ್ಷಸನು ಅದಂ ಕೇಳಿ ಈ ವಿನತನು ನಮಗೆ ವೈಗಾವಲಿನವನಾದರೂ ಬಂಗಾರದವಳ ಮಗನಾದುದರಿಂದ ಪ್ರಕೃತದಲ್ಲಿ ಇವನು ಹೇಳಿದಂತೆ ನಡೆಯುವುದು ಯುಕ್ತವಲ್ಲದಿದ್ದರೂ ಭಾವಿಸಿ ನೋಡಿದರೆ ಯೋಗ್ಯವಾಗಿದೆ ಎಂದು ತಿಳಿದು ತನಗೆ ಇನ್ನೇನೂ ಕರ್ತವ್ಯವು ತೋರದೆ ಸ್ತಬ್ಧನಾಗಿ ಕ್ಲೇಶಪಡುತ್ತ ಇದ್ದ ಬಳಿಯಲ್ಲಿಯೇ ಇರುತ್ತಿದ್ದನು.

ಅತ್ತಲಾ ನಂದರಂ ಬಳಸಿ ದೂರದಲ್ಲಿ ನಿಂತಿದ್ದ ವೈರಿ ಸಮೂಹವು ಶೇಖರಾದಿ ಸೇನಾಪತಿಗಳು ಸನ್ನದ್ಧರಾಗಿ ಆ ರಣಾಂಗಣಕ್ಕೆ ಬರುವುದಂ ತಿಳಿದು ಇನ್ನು ಮೇಲೆ ಏನಾದರೂ ಮಾಡಿ ನಂದರಂ ನಿಗ್ರಹಿಸದಿದ್ದರೆ ತಮ್ಮಂ ಹೇಡಿಗಳೆಂದು ಜರೆದಾರು ಎಂಬುದಾಗಿ ಒಂದೇ ವೇಳೆ ಪ್ರಾಸ ತೋಮರ ಗದಾ ಕುಂತಗಳಂ ನಂದರ ಮೇಲೆಸೆಯುತ್ತ ಕವಿಯುತ್ತಿರಲು; ಕೆರಳಿದ ಸಿಂಹಗಳಂತೆ ಹಾರಿ ಕುಪ್ಪಳಿಸುತ್ತ ವೃಕ್ಷಾಗ್ರಗಳ ದೆಸೆಯಿಂದ ಫಲಗಳನ್ನುದುರಿಸುವಂತೆ ಒಂದೊಂದು ಖಡ್ಗ ಪ್ರಹಾರಕ್ಕೆ ನಾಲ್ಕಾರು ಶತ್ರುಗಳ ಶಿರಂಗಳಂ ನೆಲಕ್ಕೆ ಕೆಡಹುತ್ತಿರಲು ; ಆಗ ಶೇಖರಾದಿ ಸೇನಾನಾಯಕರು ಅದಂ ನೋಡಿ ತಮ್ಮ ಅಸೀಕಿಸಿಯಲ್ಲಿ ಮೂರು ಪಾಲು ಹತವಾಯಿತು. ಇನ್ನೂ ನಂದರ ಪರಾಕ್ರಮವು ಹೆಚ್ಚಿ ಬರುತ್ತಿದೆ ಎಂದು ಮೆಚ್ಚಿ ವೀರರಹುದೋ? ಶೂರರಹುದೋ? ಎಂದು ನಂದರಂ ಶ್ಲಾಘಿಸುತ್ತಿರಲು ; ಅದಂ ಕೇಳಿ ಚಾಣಕ್ಯರು ಹವ್ಯವಾಹನನಿಗೆ ಆಜ್ಯಾಹುತಿಯಂ ಕೊಟ್ಟಂತೆ ಬಹುಕೋಪದಿಂ ಜ್ವಲಿಸುತ್ತ ದಂಡವನ್ನೆತ್ತಿಕೊಂಡು ನಂದರಂ ನಿಮಿಷದಲ್ಲಿ ನಿಗ್ರಹಿಸುವೆನೆಂದು ಅವರ ಮೇಲೆ ತಾವೇ ಬೀಳುವುದಕ್ಕೆ

ಯತ್ನಮಂ ಮಾಡಲು ; ಅದಂ ಕಂಡು ಶೇಖರಾದಿ ಸೈನ್ಯಾಧಿಪರು ಭೀತರಾಗಿ ಚಂದ್ರಗುಪ್ತ ಚಾಣಕ್ಯರಂ ಕುರಿತು—

ಸ್ವಾಮಿಾ, ದರ್ವಿಯಂ ಸಂಪಾದಿಸಿರಲು ಕೈಯ್ಯನ್ನು ಸುಟ್ಟುಕೊಳ್ಳುವುದೇಕೆ? ನಾವೆಲ್ಲರೂ ನಿಮ್ಮ ಸೇವಕರಾಗಿರುವಲ್ಲಿ ತಮಗೆ ಆಯಾಸವೇತಕ್ಕೆ ? ನಾವು ಮಾಡುವ ಸಮರಮಂ ದೂರದಿಂದಲೇ ನೋಡಬಹುದೆಂದು ಹೇಳಿ ಅವರಂ ತಡೆದು ನಿಲ್ಲಿಸಿ ಖಡ್ಗ ಖೇಟಕಾದ್ಯಾಯುಧಂಗಳಂ ಹಿಡಿದು ನಂದರ ಮೇಲೆ ಕವಿಯುತ್ತಿರಲು; ಶಬರವರ್ಮನಿಗೂ ಜ್ಯೇಷ್ಠನಂದನಿಗೂ ನಡೆದ ಮಹಾಯುದ್ಧದಲ್ಲಿ ಜ್ಯೇಷ್ಠ ನಂದನು ಶಬರವರ್ಮನ ಖಡ್ಗಪ್ರಹಾರಮಂ ಶೀಘ್ರದಿಂ ತಪ್ಪಿಸಿಕೊಂಡು ಲಾಘವದಿಂ ಹಾರಿ ಪರುಷವಾದ ತನ್ನ ಕತ್ತಿಯ ದೆಬ್ಬೆಯಿಂದ ಆ ಶಬರವರ್ಮನ ಶಿರಸ್ಸಂ ಛೇದಿಸಲು ; ಅದಂ ನೋಡಿ ಚಂದ್ರಗುಪ್ತನು ಕ್ರುದ್ಧನಾಗಿ ತನ್ನ ಕರ ಕೋದಂಡಮಂ ಆಕರ್ಣಾಂತವಾಗಿ ಸೆಳೆದು ಅರ್ಧಚಂದ್ರಬಾಣದಿಂದ ಜ್ಯೇಷ್ಠ ನಂದನ ಖಡ್ಗಸಮೇತವಾದ ಹಸ್ತಮಂ ಛೇದಿಸಿ ತಾನು ಕುಳಿತಿದ್ದ ತುರಗಮಂ ಹಾರಿಸಿ ಧಾರಾವಾಸಿಯಾದ ಭಲ್ಲೆಯಮಂ ಆ ನಂದನ ವಕ್ಷಸ್ಥಳಕ್ಕೆ ಗುರಿ ಮಾಡಿ ತೂಗಿ ಇಡಲು; ಆ ಭಲ್ಲೆಯವು ಅವನ ಹೃದಯಮಂ ಛೇದಿಸಿಕೊಂಡು ಹುತ್ತಮಂ ಹೊಗುವ ಸರ್ಪದಂತೆ ಭೂಮಿಯಲ್ಲಿ ನೆಟ್ಟುಕೊಳ್ಳುತ್ತಿರಲು; ಆ ಕೂಡಲೇ ವಜ್ರಪ್ರಹಾರದಿಂದ ಧರಣಿಗೆ ಉರುಳುವ ಗಿರಿ ಶಿಖರದಂತೆ ಜ್ಯೇಷ್ಠನಂದನು ನೆಲ ದಲ್ಲಿ ಬಿದ್ದು ಗತಪ್ರಾಣನಾದನು. ಸೋದರಮಾವನಾದ ಶಬರವರ್ಮನು ಹತ ನಾದುದಂ ಕಂಡು ಶೇಖರನು ಕ್ರುದ್ಧನಾಗಿ ನಂದರ ಮೇಲೆ ಬಿದ್ದು ಯುದ್ಧಮಂ ಮಾಡುತ್ತ ಉಪನಂದನ ಮೇಲೆ ಕವಿದು ಅವನ ಖಡ್ಗಪ್ರಹಾರಮಂ ಶೀಘ್ರ ದಿಂದ ಹೊರ ತಟ್ಟಿ ತನ್ನ ಕೈಗತ್ತಿಯಿಂದ ಅವನ ಶಿರಸ್ಸಂ ಛೇದಿಸಲು; ಅದಂ ನೋಡಿ ಚಿತ್ರವರ್ಮನು ಕನಿಷ್ಠನಂದನನ್ನು ಹೊಡೆದನು. ಆ ಖಡ್ಗಹತಿಯಿಂದ ಅವನ ತಲೆಯು ಶಿವ ಶಿವಾ ! ಎಂದು ನೆಲಕ್ಕೆ ಬೀಳಲು; ವಿನಂದನು ಕಾಂಭೋಜ ಪತಿಯೊಡನೆ ಭಯಂಕರವಾದ ಯುದ್ಧಮಂ ಮಾಡಿ ಅಡ್ಡಗಟ್ಟಿದ ಅವನ ಪರಿವಾ ರಮಂ ಛೇದಿಸಿ ಅಸಿಯಿಂದವನ ಶಿರವನ್ನಿಳುಹಲು; ಅದಂ ಕಂಡು ಚಿತ್ರವರ್ಮನು ತೀವ್ರದಿಂ ತನ್ನ ಕೈಯ್ಯಲ್ಲಿದ್ದ ಗದೆಯಂ ಬೀಸಿ ವಿನಂದನ ವಕ್ಷಸ್ಥಳಕ್ಕೆ ಎಸೆ ಯಲು; ಆ ಪ್ರಹಾರದಿಂದವನ ಎದೆಯೊಡೆದು ರಕ್ತಮಂ ಕಾರುತ್ತ ಅವನು ನೆಲಕ್ಕೆ ಬಿದ್ದು ಪ್ರಾಣಮಂ ಬಿಟ್ಟನು. ಲೋಕನಂದನು ತನ್ನ ಸಂಗಡ ಯುದ್ಧಮಂ ಮಾಡುತ್ತಿರುವ ಮಗಧಾಧಿಪತಿಯ ಮೇಲೆ ಹಾರಿ ಖಡ್ಗದಿಂ ಅವನ ಬಾಹುಯು

ಗ್ರಮಂ ಭೇದಿಸಲು ; ಅದಂ ಕಂಡು ಸಿಂಧುಷೇಣನು ರೋಷಾವೇಶದಿಂದವನ ಸಮ್ಮುಖಕ್ಕೆ ತುರಗಮಂ ಹಾರಿಸಿ ತನ್ನ ಕೈಯ್ಯಲ್ಲಿದ್ದ ಪ್ರಾಸದಿಂದ ಲೋಕನಂದನಂ ಇರಿದು ಕೆಡಹಲು ; ಪುಷ್ಕರಾಕ್ಷನು ಅನುನಂದನಂ ಅಡ್ಡಗಟ್ಟಿ ನಿಲ್ಲಿಸಿ ತನ್ನ ಹಸ್ತದ ಚಕ್ರಾಯುಧದಿಂದ ಅವನ ತಲೆಯಂ ನೆಲಕ್ಕೆ ಉರುಳಿಸಲು ; ಪಾರಶೀಕಪತಿ ಮೇಘನಾದನು ಕುರುನಂದನ ಸಮ್ಮುಖಕ್ಕೆ ಹೋಗಿ ಮುಸಲ ಪ್ರಹಾರದಿಂದ ಅವನ ತೊಡೆಗಳಂ ಹೊಡೆದು ಕೆಡಹಲು ; ಇದೆಲ್ಲಮಂ ನೋಡುತ್ತಿದ್ದ ಚಾಣಕ್ಯರು ಶೇಖರನಂ ಕುರಿತು—

ಅಯ್ಯಾ ಸೇನಾಪತಿಯೇ, ಇವರೊಡನೆ ಎಷ್ಟು ಹೊತ್ತು ವಿನೋದಯುದ್ಧವು? ಬಲುಬೇಗನೆ ಪಾಶಗಳಂ ಬೀಸಿ ಉಳಿದಿರುವ ಮೂರುಮಂದಿ ನಂದರಂ ಹಿಡಿದು ಬಂಧಿಸಿ ಕಾಲುಗಳಿಗೆ ನೇಣುಗಳಂ ಬೀರಿ ಎಳಸಿ ಸಂಹರಿಸುವವನಾಗು ಎನಲು ; ಅದೇ ರೀತಿಯಲ್ಲಿ ಶೇಖರನು ನೇಟಾದ ಉರುಲುಗಳಂ ಬೀಸಿ ನೆಲಕ್ಕೆ ಕೆಡವಿ ಆ ಮೂವರು ನಂದರಂ ಹಿಡಿದು ಬಂಧಿಸಿ ಬಹುವಿಧವಾಗಿ ಪ್ರಹರಿಸುತ್ತಿರಲು ; ಅವರು ಚಂದ್ರಗುಪ್ತ ಚಾಣಕ್ಯರಂ ಕುರಿತು—

ಎಲೈ ಕುಲಘಾತುಕನಾದ ಚಂದ್ರಗುಪ್ತನೇ, ಎಲೈ ಕಿರಾತಸದೃಶನಾದ ಬ್ರಾಹ್ಮಣಾಧಮನೇ, ಶತ್ರುವು ಆಯುಧರಹಿತನಾಗಿ ಕೈಗೆ ಸಿಕ್ಕಿದ ಬಳಿಕ ಹೀಗೆ ಬಾಧಿಸುವುದು ಧರ್ಮವೇ ? ಎನಲು ; ಆ ಮಾತಿಗೆ ಚಂದ್ರಗುಪ್ತನು—

ಎಲೈ ನಂದಾಧಮರುಗಳಿರಾ, ನೀವು ಕ್ರೂರಕರ್ಮಿಗಳಾಗಿ ಅಕಾರಣ ಮತ್ಸರದಿಂದ ನನ್ನ ತಂದೆ ತಮ್ಮಂದಿರಂ ನೆಲಮಾಳಿಗೆಯಲ್ಲಿ ಕಪಟದಿಂ ಕೂಡಿ ಅವರಿಗೆ ಅನ್ನೋದಕಂಗಳಂ ಕೊಡದೆ ಸಂಹರಿಸಿದ ಮಹಾಧರ್ಮಾಚರಣೆಗೆ ಇಹದಲ್ಲಿಯೇ ಪ್ರಾಪ್ತವಾದ ಫಲಮಂ ನೀವೇ ಅನುಭವಿಸಬೇಕು ಎನಲು ; ಚಾಣಕ್ಯನು—

ಎಲೈ ಕ್ಷತ್ರಿಯಕೀಟಗಳಿರಾ, ಅತಿಥಿಯಾಗಿ ಬಂದು ಪಙ್ತಿಯಲ್ಲಿ ಕುಳಿತಿದ್ದ ಈ ನಮ್ಮಂ ಅಪರಾಧಮಂ ಕಾಣದೆ ಬ್ರಾಹ್ಮಣಾಧಮನೆಂದು ಮೊದಲು ಅಪಮಾನಮಂ ಮಾಡಿದುದಕ್ಕೆ ನಿಮಗೆ ಈ ದುರ್ದಶೆಯುಂಟಾಯಿತು. ಅದಂ ಈಗಲೇ ಮರೆತು ಪುನಃ ಅದೇ ಪರುಷ ವಾಕ್ಯವನ್ನಾಡುವುದಕ್ಕೆ ಫಲಮಂ ನಿಮ್ಮವರನುಭವಿಸುವರು ಎಂದು ಹೇಳಿ ಇನ್ನು ಈ ದುರಾತ್ಮರ ಮುಖಮಂ ನೋಡಬಾರದೆಂದು ಹಿಂದಿರುಗಿ ಈಕ್ಷಿಸಿ ಶೇಖರನಂ ನೋಡಿ—

ಅಯ್ಯಾ ಸೇನಾಪತಿಯೇ, ಈಗಲೇ ಈ ದುರಾತ್ಮರಾದ ನಂದರ ಒಂಭತ್ತು ಶಿರಸ್ಸುಗಳಂ ತಂದು ನಮಗೆ ತೋರಿಸುವವನಾಗು ಎಂದು ನೇಮಿಸಿ ಚಂದ್ರಗುಪ್ತ ಸಮೇತನಾಗಿ ಚಾಣಕ್ಯನು ತಾಸಿದ್ದೆಡೆಗೆ ಬರುತ್ತಿರಲು ; ಪುತ್ರನೊಡನೆ ಗಜಾರೂಢನಾಗಿ ಇದೆಲ್ಲಮಂ ನೋಡುತ್ತಿದ್ದ ಪರ್ವತರಾಜನು ಮನಸ್ಸಿನಲ್ಲಿ ಚಾಣಕ್ಯರ ಅಧಿಕವಾದ ಸಾಹಸಕ್ಕೆ ಭಯಪಟ್ಟು ನಂದರು ಅಕಸ್ಮಿಕವಾಗಿ ಶತ್ರುಗಳ ಕಪಟಕ್ಕೆ ತಗುಲಿದುದಕ್ಕೆ ಆಶ್ಚರ್ಯಗೊಂಡು ನಂದರ ಸಂಹಾರಕ್ಕೆ ಸಂತೋಷಯುಕ್ತನಾಗಿ ತಾಸಿದ್ದೆಡೆಗೆ ತೆರಳಿದನು. ಚಾಣಕ್ಯರು ನೇಮಿಸಿದ ಮೇರೆಗೆ ಶೇಖರನು ತನ್ನ ಭಟರಿಗೆ ಆಜ್ಞಾಪಿಸಲು ; ಅವರು ಕುಂಡಲ ಶಿರೋಭೂಷಣಗಳಿಂ ಶೋಭಿತವಾದ ನಂದರ ಶಿರಸ್ಸುಗಳಂ ತೆಗೆದುಕೊಂಡು ಹೊರಟರು. ಆಗ ವೀರಭಟರ ಸಿಂಹನಾದಗಳೂ ಜಯಭೇರಿಶಬ್ದಗಳೂ ಸಮುದ್ರ ಘೋಷದಂತೆ ಭೂಮಂಡಲಮಂ ಮುಚ್ಚುತ್ತಿರಲು ; ಅದಂ ಕೇಳಿ ನಂದ ಸೇನೆಯು—ತಮ್ಮ ಪ್ರಭುಗಳು ಶತ್ರುಗಳ ಕಪಟದಿಂ ನಷ್ಟವಾದರೆಂದು ತಿಳಿದು ಇನ್ನು ಯಾರಿಗೋಸುಗ ಯುದ್ಧಮಂ ಮಾಡಬೇಕೆಂದು ಹೇಳಿಕೊಳ್ಳುತ್ತ ಸ್ವೇಚ್ಛಾನುಸಾರವಾಗಿ ಪಲಾಯನಂಗೆಯ್ಯುತ್ತಿದ್ದಿತು. ಸ್ತಬ್ಧನಾಗಿ ನಿಂತಿದ್ದ ರಾಕ್ಷಸನು ನಂದರು ಸಂಹೃತರಾದುದನ್ನೂ ಅರಿಸೈನ್ಯವು ತಮ್ಮ ಪಾಳಯಕ್ಕೆ ಹೋಗುವ ಉತ್ಸಾಹವನ್ನೂ ತಿರಿಗಿ ನೋಡಿ ಮೌರ್ಯವಧೆಯ ದೋಷದಿಂದ ನಂದರ ಭಾಗ್ಯವೆಲ್ಲವೂ ಕ್ಷಣಿಕಚಿತ್ತನಾದ ಪುರುಷನೈಶ್ವರ್ಯದಂತೆ ಬಯಲಾಯಿತೆಂದು ದುಃಖಪಡುತ್ತ ತನ್ನ ತುರಗಮಂ ಚಬುಕು ಮಾಡಿ ಪಟ್ಟಣದ ಬಾಗಿಲಿಗೆ ಬಂದು ನಿಂತು ಶತ್ರುಗಳು ಬರುತ್ತಿದ್ದಾರೆ. ಪುರದ ಬಾಗಿಲುಗಳಂ ಹಾಕಿ ಜಾಗ್ರತೆಯಾಗಿ ಕಾದಿರಿ ಎಂದು ಪುರದ್ವಾರರಕ್ಷಕರಾದ ಸೈನಿಕರಿಗೆ ನೇಮಿಸಿ ತನ್ನ ಮನೆಗೆ ಬಂದು ಮಂಚದ ಮೇಲೆ ಮೊಗಮಡಿಯಾಗಿ ಬಿದ್ದು—ಹಾ ! ಭೂಪತಿಗಳಾದ ನಂದರುಗಳಿರಾ, ನೀವು ಮಾಡಿದ ಆದರಣೆಗಳಂ ಎಷ್ಟು ದಿನಗಳಿಗೆ ಮರೆಯಲಿ ? ಈಗ ನನ್ನ ಸಾಹಸ ಬಲ ಬುದ್ಧಿಪೌರುಷಗಳು ಲುಬ್ಧನು ಗಳಿಸಿದ ಧನಗಳಂತೆ ನಿಷ್ಫಲವಾದುವು. ನಿಮ್ಮ ತಂದೆತಾಯಿಗಳಿಗೆ ಏನಂ ಹೇಳಲಿ ? ನೀವು ಕುಳಿತ ಸಿಂಹಾಸನವೂ ನಿಮ್ಮ ರಾಜ್ಯವಸ್ತುಗಳೆಲ್ಲವೂ ಪರಾಧೀನವಾದುದಂ ಕಂಡು ತುಚ್ಛಗಳಾದ ಈ ಪ್ರಾಣಗಳಂ ಧರಿಸಿಕೊಂಡು ಸಿಂಹಕ್ಕೆ ಸಿಕ್ಕಿದ ಹುಲ್ಲೆಯಂತೆ ಪ್ರತ್ಯರ್ಥಿಗಳ ಅಧೀನದಲ್ಲಿ ನಾಸಿದ್ದು ಪ್ರಯೋಜನವೇನು ? ಈಗ ಸೇನಾಪತಿಗಳೆಲ್ಲರೂ ಚಂದ್ರಗುಪ್ತನನ್ನನುಸರಿಸುವರು. ಅರಸುಗಳಾದ ನಿಮಗೆ ಆಪ್ತ

ನಾದ ನಾನು ಅವರಿಗೆ ಸಿಕ್ಕಿದರೆ ಸ್ವಜನಸಮೇತವಾಗಿ ದ್ವೇಷಿಗಳ ಪಕ್ಷದವನೆಂದು ನನ್ನಂ ನಿಗ್ರಹಿಸುವರು ಎಂಬುದಾಗಿ ಹಂಬಲಿಸುತ್ತಿರಲು ; ಅತ್ತಲಾ ಹೊರಗೆ ಯುದ್ಧದಲ್ಲಿ ಸಂಹೃತರಾದ ನಂದರ ಶಿರೋಭೂಷಣ ಸಮೇತವಾದ ರುಂಡಗಳಂ ತೆಗೆದುಕೊಂಡು ಶಬರರ ಸೇನೆಯ ಭಟರು ಚಾಣಕ್ಯನ ಮುಂದೆ ತಂದಿಟ್ಟು—ಇವು ನಂದರ ಒಂಭತ್ತು ಶಿರಸ್ಸುಗಳು ಎಂದು ಹೇಳಲು ; ಕಸ್ತೂರಿಯ ತಿಲಕಗಳಿಂದಲೂ ಕಂಠದಲ್ಲಿ ಲೇಪಿಸಿದ ಅನುಲೇಪನಂಗಳಿಂದಲೂ ರತ್ನಖಚಿತವಾದ ಶಿರೋಭೂಷಣಂಗಳಿಂದಲೂ ಶೋಭಿಸುತ್ತ ಬಿಡುಗಳಂ ಕಚ್ಚಿ ಅರೆಗಣ್ಣಂ ಮುಚ್ಚಿ ನಿದ್ರೆಯಂ ಮಾಡುತ್ತಿರುವಂತೆ ಇರುವ ಶಿರಸ್ಸುಗಳಂ ನೋಡಿ—ಇವರು ಮಾಡಿದ ದುರ್ವಿನಯವೇ ಇವರಿಗೆ ಈ ದುರ್ದಶೆಯಂ ತಂದುಬಿಟ್ಟಿತು. ಆದರೂ ಯುದ್ಧದಲ್ಲಿ ಹಿಮ್ಮೆಟ್ಟದೆ ಹತರಾಗಿರುವುದರಿಂದ ಇವರಿಗೆ ಸದ್ಗತಿಯುಂಟು ಎಂದು ಚಾಣಕ್ಯನು ಹೇಳುತ್ತ ಚಂದ್ರಗುಪ್ತನಂ ನೋಡಿ—

ಎಲೈ ಕುಮಾರಕನೇ, ಈ ನಂದರ ಶಿರೋಭೂಷಣ ರತ್ನಪ್ರಭಾವಲೋಕನದಿಂದ ಪಿತೃಸೋದರವಧೆಯಿಂದುಂಟಾದ ನಿನ್ನ ದುಃಖಾಂಧಕಾರವು ನಿಶ್ಶೇಷವಾಗಿ ತೊಲಗಲಿ. ಇನ್ನು ಶೋಕಮಂ ಬಿಡು. ವೈರವೆಂಬುವುದು ಶತ್ರುಗಳ ಮರಣಾವಧಿಯು. ಗಂಗಾನದಿಯ ಸ್ನಾನಕ್ಕೆ ನಡೆ. ಯುದ್ಧದಲ್ಲಿ ಹತರಾದ ಈ ನಿನ್ನ ಜ್ಞಾತಿಗಳಿಗೆ ಸದ್ಗತಿಯುಂಟಾಗುವಂತೆ ಸ್ನಾನತರ್ಪಣಂಗಳನ್ನಾಚರಿಸು. ಇಂದು ನನ್ನ ಪ್ರತಿಜ್ಞೆಯು ಸಫಲವಾಯಿತು ಎಂದು ಹೇಳಲು ; ಆಗ ಚಂದ್ರಗುಪ್ತನು ಕಣ್ಣಿನಲ್ಲಿ ನೀರಂ ತುಂಬಿಕೊಂಡು—

ಸ್ವಾಮೀ, ಈ ಪಾಪಿಗಳು ನಮ್ಮವರಂ ಅನ್ಯಾಯವಾಗಿ ಕೊಂದು ತಾವೂ ವ್ಯರ್ಥವಾಗಿ ನಾಶವನ್ನು ಹೊಂದಿದರು. ನಮ್ಮ ಸರ್ವಾರ್ಥಸಿದ್ಧಿಯ ಸದ್ವಂಶವು ಈ ಪ್ರಕಾರ ಶಿಥಿಲವಾಗಿ ಈ ನೂರೊಂಭತ್ತು ಜನಕ್ಕೂ ತಿಲೋದಕಂಗಳಂ ಬಿಡುವಂತೆ ನನ್ನೊಬ್ಬನ ಹಣೆಯಲ್ಲಿ ಬರೆಯಿತು. ಇವರು ಮಾಡಿದ ಅನ್ಯಾಯವಾದ ಪಿತೃಸೋದರವಧೆಯ ದುಃಖದಿಂದಲೂ ಮಾತ್ಸರ್ಯದಿಂದಲೂ ತಮಗೆ ಶರಣಾಗತನಾಗಿ ಇವರಂ ವಧಿಸಿದೆನು. ಇದರಿಂದ ನನ್ನನ್ನು ಸರ್ವಜನರೂ ಕುಲಘ್ನನೆಂದು ದೂಷಿಸುವರು. ಈ ಅಪಕೀರ್ತಿಯಂ ಹೊತ್ತು ನಾನು ಜೀವಿಸುವುದಕ್ಕಿಂತ ಈ ವಂಶಘಾತಕಾರಣಭೂತವಾದ ಈ ನನ್ನ ದೇಹವು ಪವಿತ್ರವಾಗಿ ಸದ್ಗತಿಯನ್ನೈದುವುದಕ್ಕೆ ಏನಾದರೂ ಒಂದು ಧರ್ಮಮಾರ್ಗಮಂ ಉಪದೇಶಿಸ ಬೇಕು ಎಂದು ಪಾದಗಳ ಮೇಲೆ ಬಿದ್ದು ಹೊರಳುತ್ತಿರುವುದಂ ಚಾಣಕ್ಯನು ನೋಡಿ—

ಎಲೈ ಕುಮಾರನೇ, ನಿನಗೆ ಲೇಶಮಾತ್ರವೂ ಪಾಪವಿಲ್ಲ. ಕ್ಷತ್ರಿಯವಂಶ ಸಂಭೂತರಾದವರಿಗೆ ಇದು ಧರ್ಮವು. ಪೂರ್ವದಲ್ಲಿ ರಾಮನಿಗೆ ಶರಣಾಗತನಾಗಿ ರಾವಣನನ್ನು ಸಂಹಾರಂ ಗೆಯಿಸಿದ ವಿಭೀಷಣನಿಗೂ ಅದೇ ರಾಮನ ಮಿತ್ರತ್ವ ದಿಂದ ವಾಲಿಯಂ ಕೊಲ್ಲಿಸಿದ ಸುಗ್ರೀವನಿಗೂ ಶ್ರೀಕೃಷ್ಣಸಹಾಯದಿಂದ ಸರ್ವ ಬಂಧುಗಳಂ ಘಾತಿಸಿದ ಪಾಂಡವರಿಗೂ ಪಾಪಮುಂಟಾಯಿತೇ? ಅವರೆಲ್ಲರೂ ಇಹಲೋಕದಲ್ಲಿ ಜಗತ್ಪ್ರಖ್ಯಾತರಾದ ಯಶೋವಂತರಾಗಿ ಸುಖಸಾಮ್ರಾಜ್ಯಮಂ ಗೆಯ್ಯುತ್ತ ತಮ್ಮ ವಂಶೀಯರಿಗೆಲ್ಲ ಸದ್ಗತಿಯುಂಟಾಗುವಂತೆ ಸಕಲಧರ್ಮ ಗಳನ್ನೂ ಮಾಡುತ್ತ ಇರಲಿಲ್ಲವೇ? ಅದುಕಾರಣ ನೀನು ಯೋಚನೆಯಂ ಮಾಡ ಬೇಡ. ಇದೆಲ್ಲ ಮನುಷ್ಯಯತ್ನವಲ್ಲ. ಕೊಲ್ಲುವುದಕ್ಕೂ ಕೊಲ್ಲಿಸುವು ದಕ್ಕೂ ಈಶ್ವರನೇ ಬಾಧ್ಯನು. ಈ ಮಮತಾಹಂಕಾರಗಳಂ ಬಿಟ್ಟು ಕ್ಷತ್ರಿಯ ಧರ್ಮಪ್ರಕಾರವಾಗಿ ಇವರಿಗೆ ಯುಕ್ತವಾದ ತಿಲೋದಕಮಂ ಕೊಡು ಹೋಗು ಎಂದು ಸಮಾಧಾನಂಗೆಯ್ದು ಚಂದ್ರಗುಪ್ತನಂ ಗಂಗಾಸ್ನಾನಕ್ಕೆ ಕಳುಹಿಸಿ ಶೇಖರನಂ ಕುರಿತು—

ಅಯ್ಯಾ ಸೇನಾಪತಿಯೇ, ಈ ನಂದರ ಕಬಂಧಗಳನ್ನು ರಾಜಬೀಜೋತ್ಪ ನ್ನರಾದ ಅರಸುಗಳ ಕೈಯ್ಗಳಿಂದ ಗಂಗಾಜಲದಲ್ಲಿ ತೊಳೆಯಿಸಿ ಜಪಶಾಲೆಯ ಅಗ್ನಿಯಲ್ಲಿ ಹಾಕಿಸುವವನಾಗು. ಇವರ ಪತ್ನಿಯರು ಅಪೇಕ್ಷಿಸಿದರೆ ಈ ಶಿರಸ್ಸು ಗಳಂ ತೈಲಕಟಾಹದಲ್ಲಿ ಇರಿಸಿ ಕಳುಹಿಸುವವನಾಗು. ನಿಮ್ಮೆಲ್ಲರ ಸೇನೆಯಲ್ಲಿ ಶತ್ರುಜಯಾಂಗವಾದ ಉತ್ಸವಗಳು ನಡೆಯಲಿ ಎಂದು ಹೇಳಿದನು. ಆಗ ಅದೇ ರೀತಿಯಲ್ಲಿ ಶೇಖರನು ನಂದರ ದೇಹಂಗಳನ್ನೊಪ್ಪವಮಂ ಮಾಡಿಸಿ ಅವರ ಶಿರಸ್ಸು ಗಳಂ ಎಣ್ಣೆಯ ಕೊಪ್ಪರಿಗೆಯಲ್ಲಿರಿಸಿ ತಮ್ಮ ತಮ್ಮ ಪಡೆಯಲ್ಲಿ ಅರಿವಿಜಯ ಸೂಚಕೋತ್ಸವಗಳಾಗಲಿ ಎಂದು ನೇಮಿಸಲು; ಆ ಸಮಯದಲ್ಲಿ ಉತ್ಸಾಹಿಗ ಳಾದ ವೀರಭಟರ ಸಿಂಹನಾದಗಳೂ ಜಯಭೇರೀಶಬ್ದಗಳೂ ಫಿರಂಗಿಯ ಧ್ವನಿ ಗಳೂ ಭೂಮ್ಯಂತರಿಕ್ಷಗಳಂ ಮುಚ್ಚುತ್ತಿರಲು; ಪರ್ವತರಾಜನ ಸೇನಾಜನರು ಒಬ್ಬರೊಬ್ಬರನ್ನಾಲಂಗಿಸುತ್ತ ಬಾಹುಗಳಂ ತಟ್ಟುತ್ತ ನೀನು ಶೂರನೆಂದು ಸ್ತುತಿಸುತ್ತ ನಾಟ್ಯಂಗಳನ್ನವಲೋಕಿಸುತ್ತ ಸಕ್ಕರೆಗಳಂ ಬೀರಿಸುತ್ತ ಗಂಧ ಮಾಲಿಕೆಗಳಿಂದಲಂಕರಿಸುತ್ತ ವಿವಿಧಪಾನಂಗಳಂ ಸೇವಿಸುತ್ತ ಸಂತೋಷವಲ್ಲಿ ರುತ್ತಿರಲು; ಅತ್ತ ಚಾಣಕ್ಯನು ಗಂಗಾಜಲದಲ್ಲಿ ಸ್ನಾನಮಂ ಮಾಡಿ ಬಿಚ್ಚಿದ್ದ ತನ್ನ ಶಿಖೆಯಂ ಬಂಧಿಸಿ ಚಂದ್ರಗುಪ್ತಸಮೇತನಾಗಿ ತಾನಿದ್ದೆಡೆಗೆ ಬರುತ್ತಿದ್ದನು.

ಹೀಗಿರುತ್ತಿರಲು ಶತ್ರುಗಳ ಕಪಟದಿಂದ ನಂದರೆಲ್ಲರೂ ಸಂಹೃತರಾದರೆಂಬ ವಾರ್ತೆಯು ಜನಜನಿತವಾಗಿ ವೃದ್ಧನಾದ ಸರ್ವಾರ್ಥಸಿದ್ಧಿರಾಜನಿಗೆ ತಿಳಿಯಬಂದು ಆತನು ತಾನು ಕುಳಿತಿದ್ದ ಪೀಠದಿಂ ನೆಲಕ್ಕೆಬಿದ್ದು ಮೂರ್ಛಾಗತನಾಗಲು; ಅದೆಲ್ಲಮಂ ನೋಡಿದ ಅಂತಃಪುರ ಸ್ತ್ರೀಯರ ರೋದನಧ್ವನಿಯು ಪುರಸೂರೆಹೋದಂತೆ ಕೇಳಿಸುತ್ತಿತ್ತು. ಆಗ ಕೋಟೆಯ ಮೇಲೆ ಬರುತ್ತಿರುವ ಭಾಗುರಾಯಣನು ಆ ಶಬ್ದಮಂ ಕೇಳಿ ಇದೇನು? ಎಂದೆನಲು; ನಂದರು ಹತರಾದರೆಂಬ ವರ್ತಮಾನವು ಶ್ರುತವಾಗಿ ಅಂತಃಪುರದ ಸ್ತ್ರೀಜನರು ಆಕ್ರಂದನಂಗೆಯ್ವರೆನಲು; ಆ ಮಾತಿಗೆ ವಿಸ್ಮಯಂಗೊಂಡು ನಿಜ ಕ್ಷತ್ರಿಯ ಸಂತತಿ ಇನ್ನಿರಬಾರದೆಂದು ದೈವ ಮುನಿದುದಕ್ಕೆ ಮನುಷ್ಯಯತ್ನವೇನಿದೆ? ಈ ವೇಳೆಯಲ್ಲಿ ವೃದ್ಧರಾಜನಿಗೆ ಸಮಾಧಾನಮಂ ಹೇಳುವ ಪ್ರಮುಖರೊಬ್ಬರೂ ಇಲ್ಲ. ಪುತ್ರಕ್ಲೇಶದಿಂ ಪ್ರಾಣಗಳಂ ತ್ಯಜಿಸದಂತೆ ನಾನು ಪೋಗಿ ಆತನ ಚಿತ್ತಸ್ವಾಸ್ಥ್ಯಂಗೊಳಿಸಿ ಬರುವೆನೆಂದು ಅಲ್ಲಿಂದ ಹೊರಟು ರಾಜಭವನಕ್ಕೆ ಭಾಗುರಾಯಣಂ ಬಂದು ಅಲ್ಲಿ ಗವಾಕ್ಷಗಳಿಂದೀಡಾಡಿ ಎರಚಲ್ಪಟ್ಟಿರುವ ನಂದಪತ್ನಿಯರುಗಳ ಆಭರಣರಾಶಿಗಳಂ ದಾಟುತ್ತ ಕಿತ್ತು ಬಿಸುಟರುವ ಪುಷ್ಪಮಾಲಿಕೆಗಳಂ ಬಳಸಿ ಬರುತ್ತ ಕಾಡಿಗೆಗಳಂ ಕಪ್ಪಾಗಿ ಬರುವ ಬಾಷ್ಪೋದಕ ಪ್ರವಾಹವನ್ನತಿಕ್ರಮಿಸಿ ನಡೆಯುತ್ತ ಪೀಠದಿಂ ಬಿದ್ದು ಮೂರ್ಛಿತನಾಗಿರುವ ವೃದ್ಧರಾಜನನ್ನು ಶೀತಜಲಗಳಿಂದಲೂ ಬೀಸಣಿಗೆಯ ಗಾಳಿಯಿಂದಲೂ ಎಚ್ಚರಮಂ ಮಾಡಿ ತನ್ನ ಬುದ್ಧಿಗೆ ಗೋಚರವಾದ ಮೇರೆಗೆ ಪ್ರಕೃತೋಚಿತವಾಗಿ ದುಃಖಶಾಮಕವಾದ ವಾಕ್ಯಮಂ ಹೇಳಿ ಪುರದ್ವಾರದ ಬಳಿಗೆ ಶತ್ರುಗಳು ಬಂದಾರೆಂದು ಅಲ್ಲಿಂದ ಹೊರಟು ಎಂದಿನಂತೆ ಬರುತ್ತಿರಲು; ಆ ಸಮಯದಲ್ಲಿ ಪತಿವಿಯೋಗದಿಂದ ಪ್ರಲಾಪಿಸುತ್ತಿರುವ ನಂದಪತ್ನಿಯರು ಭಾಗುರಾಯಣರು ವೃದ್ಧರಾಜನ ಬಳಿಗೆ ಬಂದು ಹೋಗುವುದಂ ತಿಳಿದು ಲಜ್ಜಾಭಿಮಾನಗಳಂ ತೊರೆದು ಅಂತಃಪುರದ ಬಾಗಿಲಿನಲ್ಲಿ ಬಂದುನಿಂತರು. ಅವರಲ್ಲಿ ಜ್ಯೇಷ್ಠನಂದಪತ್ನಿಯು ಆತನಂ ಕುರಿತು ಇಂತೆಂದಳು—

ಅಯ್ಯಾ ಭಾಗುರಾಯಣನೇ, ಈಗ ಈಶಸಂಕಲ್ಪದಿಂ ನಡೆದಿರುವ ಈ ನಂದಪ್ರಳಯಮಂ ನೀನು ತಿಳಿದಿರುವಿಯಷ್ಟೆ? ನಾವು ಪತಿವಿಯುಕ್ತರಾಗಿ ಇನ್ನು ಮೇಲೆ ಏನುಪ್ರಯೋಜನಕ್ಕೆ ಈ ಭೂಮಿಯಲ್ಲಿರಬೇಕು? ಶೈತ್ಯಾಧಿಕ್ಯದಿಂ ಹೆಚ್ಚಿ ಪ್ರಜ್ವಲಿಸುವ ಬಡಬಾಗ್ನಿಯಂತೆ ಅನುಸಯಸಹಸ್ರಗಳಂ

ಇನ್ನೂ ಪ್ರಜ್ವಲಿಸುವ ಪತಿವಿಯೋಗದುಃಖಾಗ್ನಿಯು ಇಂಧನಾಗ್ನಿಯಿಂದಲ್ಲದೆ ಮತ್ತೊಂದರಿಂ ಶಮನವಾಗಲಾರದು. ನಮ್ಮ ವೃದ್ಧರಾಜನು ಪುತ್ರಶೋಕಗ್ರಹ ಗ್ರಸ್ತರಾದುದರಿಂದ ಪ್ರಜಾಶೂನ್ಯರಾಗಿ ಗದ್ವ್ಯವಹಾರಮಂ ತ್ಯಜಿಸಿರುವುದರಿಂದ ನಮ್ಮ ಸಂಕಲ್ಪಕ್ಕೆ ಅಂತರಾಯ ಬಾರದಂತೆಯೂ ನಮಗೆ ಸದ್ಗತಿರೂಪವಾದ ಪತಿಸನ್ನಿಧಿಯು ದೊರಕುವಂತೆಯೂ ನೀನೇ ನಿಂತು ಕರ್ಮಗಳಂ ಮಾಡಿಸ ಬೇಕು. ನಮಗೆ ಪರಲೋಕಸಾಧನಾರ್ಥವಾಗಿ ಇದೋ! ಈ ಕೋಟಿ ದ್ರವ್ಯ ದಲ್ಲಿ ಪಾದಾಂಶವು ವಿಪ್ರವರ್ಗಕ್ಕೆ, ಪಾದಾಂಶವು ಪೂರ್ವಕರ್ಮಕ್ಕೆ, ಪಾದಾಂಶವು ದೀನಾನಾಥವಿಪನ್ನಪೋಷಣೆಗೆ, ಮಿಕ್ಕ ಪಾದಾಂಶವು ರಾಜಕೋಶಕ್ಕೆ ಸಲ್ಲಲಿ. ನೀನು ಈ ರೀತಿಗೆ ಮಾಡಿಸಿ ಶ್ರೇಯೋವಂತನಾಗಿರುವುದೆಂದು ನಾವು ಹೇಳಿದೆ ವೆಂಬುದಾಗಿ ಚಂದ್ರಗುಪ್ತನಿಗುಸುರುವವನಾಗು. ಎಲ್ಲವಮಂ ಬೇಗ ಸಜ್ಜುಮಾ ಡಿಸು ಎಂದು ಹೇಳಲು ; ಮತ್ತೋರ್ವಳು—

ತಾಯೇ ಅಕ್ಕಾಜಿಗಳಿರಾ, ಶಕ್ಯವಾಗುವುದಾದರೆ ಪತಿಯಂ ತಂದು ತೋ ರೆಂದು ಯಾಚಿಸುವುದುಂಟು. ಅಲ್ಲದಿದ್ದರೆ ಪತಿಯ ಕಳೇಬರಮಂ ತೋರೆಂದು ನೇಮಿಸಬಹುದು. ನೆನೆದ ಬಳಿಯಲ್ಲಿ ನೆಲಸುವ ಅಗ್ನಿಯಂ ಬೇಡುವುದುಂಟೇ? ಪತಿಪರಲೋಕಗತನಾದ ಬಳಿಕ ಗೃಹವು ಇನ್ನಾರಿಗಾಗಬೇಕು? ಸಮೃದ್ಧವಾಗಿ ರುವ ಈ ಗೃಹಮಂ ಹವ್ಯದಂತೆ ಹವ್ಯವಾಹಂಗೆ ಸಮರ್ಪಿಸಿ ಈ ದೇಹಮಂ ಆತನಿಗೆ ಕೊಡಬಹುದು ಎನಲು ; ಬಾಗುರಾಯಣನು ಇದೆಲ್ಲಮಂ ಕೇಳಿ ಪತಿ ವಿಯೋಗದುಃಖದಿಂ ವಿವೇಕಶೂನ್ಯರಾದ ಈ ರಾಜಪತ್ನಿಯರು ಅನ್ಯರ ಯೋಗ ಕ್ಷೇಮಮಂ ಸ್ಮರಿಸದೆ ಬಾಲಬುದ್ಧಿಯಿಂದ ಏನು ಅಕಾರ್ಯವನ್ನಾದರೂ ಮಾಡು ವುದಕ್ಕೆ ಹಿಂದಾಗುವವರಲ್ಲ. ಇದರಿಂ ಈ ಪಟ್ಟಣಕ್ಕೂ ಮಹಾಪ್ರಳಯ ಸಂಭ ವಿಸೀತು. ಇದರಲ್ಲಿ ಜ್ಯೇಷ್ಠರಾಜಪತ್ನಿಯೇ ವಿವೇಕಶಾಲಿನಿ ಎಂದು ತೋರುತ್ತಿದೆ. ಆಕೆ ಹೇಳಿದ ರೀತಿಗೆ ನಡಸಬೇಕಾಯಿತು ಎನ್ನುತ್ತ ನಿಶ್ಚಯಿಸಿ ಕನಿಷ್ಠಳು ಹೇಳಿದ ಮಾತಿಗೆ ಬಾಗುರಾಯಣನು—

ಮಾತೃಶ್ರೀಯವರುಗಳಿರಾ, ತಾವು ಹೇಳಿದ ಮಾತು ಶಿಷ್ಟಾನುಮತವಲ್ಲ ದಿರುವುದೊಂದಲ್ಲದೆ ಧರ್ಮವಿರುದ್ಧವೂ ಆದುದರಿಂದ ಸದ್ಗತಿಪ್ರದವಾಗದು. ಮಹಾಮಾತೃಶ್ರೀಯವರು ಅಪ್ಪಣೆ ಪಾಲಿಸಿದ ಮೇರೆಗೆ ಎಲ್ಲರೂ ಸಮ್ಮತರಾದರೆ ಪರಮಪದಕ್ಕೆ ಸಂಶಯವಿಲ್ಲ. ಅಪ್ಪಣೆಯಾದರೆ ರಣಾಂಗಣಮಂ ಶೋಧಿಸಿ

ಬಂದು ವಿಜ್ಞಾಪಿಸುವೆನು ಎಂಬುದಾಗಿ ಹೇಳಿ ಕೈಮುಗಿದು ಬಾಗುರಾಯಣನು ಬರುತ್ತಿರಲು ;

ಆ ಸಮಯದಲ್ಲಿ ರಾಕ್ಷಸನು ತನ್ನ ಮನಸ್ಸಿನೊಳ್—ಈಗ ನಂದರಂ ನಿಗ್ರಹಿಸಿ ಜಯಶೀಲರಾದೆವೆಂಬ ಗರ್ವದಿಂದ ಪರಿಪಂಥಿಗಳು ಈ ಪಟ್ಟಣವನ್ನಾಕ್ರಮಿಸಬೇಕೆಂದು ಯಾವಾಗ ಬರುವರೋ! ಹಾಗಾದರೆ ರಾಜಸ್ತ್ರೀಯರಲ್ಲಿ ಮುಖ್ಯರಾದವರಿಗೆ ಮ್ಲೇಚ್ಛರಿಂದ ಉಪದ್ರವ ತಪ್ಪೀತು. ರಾಜ್ಯವು ಅನಾಯಕವಾಯಿತೆಂದು ಪುರದಲ್ಲಿಯೂ ಹೊರಗೂ ಇರುವ ನಮ್ಮ ಸೇನೆಯು ಶತ್ರುಗಳ ಮೇಲೆ ಪುನಃ ಯುದ್ಧಮಂ ಮಾಡಲಾರದು. ಸ್ವಕಾರ್ಯಸ್ಥರಾಗಿರುವುದರಿಂದ ನಾನು ಹೋಗಿ ನಿಂತರೂ ಕಣ್ಣುಮರೆಯಾಗುವರು. ಪಟ್ಟಣವು ಕೊಳ್ಳೆಯಾದರೆ ಇನ್ನೂ ಒಂದು ದೊಡ್ಡ ವಿಪತ್ತು ಬಂದೀತು. ಮಾನಿತನಾಗಿ ವೃದ್ಧನಾಗಿರುವ ಸರ್ವಾರ್ಥಸಿದ್ಧಿರಾಜನು ಪುತ್ರರಂ ಹೋಗಲಾಡಿಸಿಕೊಂಡು ತನ್ನ ಅಂತಃಪುರಸ್ತ್ರೀಜನವನ್ನು ದ್ವೇಷಿಗಳಾದ ಮ್ಲೇಚ್ಛರು ನೋಡುವುದನ್ನು ತನ್ನ ಕಣ್ಣಾರ ದೃಷ್ಟಿಸಿದನು ಎಂಬ ಲೋಕಾಪವಾದಕ್ಕೆ ಪಾತ್ರನಾಗದಂತೆ ಇಷ್ಟರಲ್ಲಿ ಯಾದರೂ ನಿಲ್ಲಿಸಿಕೊಳ್ಳಲಿ ಎಂದು ನಿಶ್ಚಯಿಸಿ ತನ್ನ ದೂತನಂ ಕರೆದು—

ಎಲೈ, ಬಾಗುರಾಯಣನೆಲ್ಲಿದ್ದರೂ ಈ ಕ್ಷಣವೇ ಬಂದು ಮಾತನಾಡಿಕೊಂಡು ಆ ಬಳಿಕ ಯಾವ ಕೆಲಸವಿದ್ದರೂ ಮಾಡಲಿ ಎಂದು ಹೇಳಲು ; ಬುದ್ಧೀ ಎಂದು ಆ ದೂತನು ಬಂದು ಹುಡುಕಿ ರಾಜಭವನದಿಂ ಬರುತ್ತಿರುವ ಬಾಗುರಾಯಣನಂ ಕಂಡು—ಅಮಾತ್ಯರು ನಿಮ್ಮಂ ಶೀಘ್ರವಾಗಿ ಕರತರಹೇಳಿದರು ಎನಲು ; ಆತನು ರಾಕ್ಷಸನ ಬಳಿಗೆ ಬಂದು ಕಂಡು ನಂದರಂ ನೆನೆನೆನೆದು ಅವರೀರ್ವರೂ ದುಃಖಪಟ್ಟು ಆ ಬಳಿಕ ರಾಕ್ಷಸನು—

ಅಯ್ಯಾ ಬಾಗುರಾಯಣನೇ, ಇಂದಿಗೆ ನಮ್ಮ ಬುದ್ಧಿ ಬಲಪೌರುಷಗಳೆಲ್ಲವೂ ವ್ಯರ್ಥವಾದುವು. ಇನ್ನು ಯಾವಾಗಲೋ ಅರಿಗಳು ಈ ಪುರವನ್ನಾಕ್ರಮಿಸುವವರಾಗಿದ್ದಾರೆ. ಈ ಭಾಗದಲ್ಲಿ ನಿನ್ನ ಮನೋಗತವೇನು ? ಎನಲು ;

ಅಯ್ಯಾ, ಅಮಾತ್ಯರೇ, ನಿಮಗಿಂತಲೂ ಬುದ್ಧಿಯಲ್ಲಿ ನಾನು ಅಧಿಕನೇ ? ನೀವು ಹೇಳಿದಂತೆ ಯಾವಾಗಲೂ ಕೇಳುತ್ತಿದ್ದೆನು. ಈಗಲೂ ಹಾಗೇ ಸರಿ. ಆದಾಗ್ಗೂ ನಿಮ್ಮ ಅಪ್ಪಣೆಯಾದರೆ ನನಗೆ ತೋರಿದರ್ಥಮಂ ವಿಜ್ಞಾಪಿಸುವೆನು. ಏನಂದರೆ ಈಗ ನಂದನಾಶದಿಂದಲೂ ವೃದ್ಧನಾಗಿ ಪುತ್ರಶೋಕದಿಂದ ಪ್ರಾಣಾಭಿಮಾನವಿಲ್ಲದೆ ಜಡನಾದ ಸರ್ವಾರ್ಥಸಿದ್ಧಿಯು ಜೀವಿತದಲ್ಲಿ ಭರವಸವಿಲ್ಲದೆ ಇರು

ವುದರಿಂದಲೂ ಅವಲಂಬನಾಂತರ ದೊರಕದೆ ಇರುವ ವೇಳೆಯಲ್ಲಿ ಶತ್ರುರಹಿತನೂ ತ್ಯಾಗಶೀಲನೂ ಪ್ರಜಾರಂಜಕನೂ ಆದ ಚಂದ್ರಗುಪ್ತನು ಸರ್ವಾರ್ಥಸಿದ್ಧಿರಾಜನಿಗೆ ಪೌತ್ರನಾದುದರಿಂದ ಈ ರಾಜ್ಯಕ್ಕೆ ಬಾಧ್ಯನೆಂದೆನಿಸಿಕೊಂಡು ಸೇನಾಸಮೇತನಾಗಿ ಬಂದಿರುವುದರಿಂದಲೂ ನಮ್ಮ ಪಡೆಯ ಜನಗಳಿಗೆ ಯುದ್ಧದಲ್ಲಿ ಆಗ್ರಹವಿಲ್ಲ. ಸ್ವಕಾರ್ಯದಲ್ಲೇ ನಿರತರಾಗಿದ್ದಾರೆ. ಈಗ ಅನಾಯಕರಾಜ್ಯವೆಂದು ತಿಳಿದು ತುಂಟರಾಗಿ ಪ್ರಜೆಗಳಂ ಪೀಡಿಸುವವರಂ ನಿಗ್ರಹಿಸುವದಕ್ಕಾದರೂ ನಮಗೆ ಸಾವಕಾಶವಿಲ್ಲ. ಇನ್ನು ವೈರಿಗಳ ಮೇಲೆ ಯುದ್ಧಮಂ ಮಾಡುವುದೆಲ್ಲಿ? ನನಗೆ ಪುರರಕ್ಷಣೆಯಂ ನೇಮಿಸಿರುವುದರಿಂದ ಕೋಟೆಯ ಮೇಲೆ ಲಗ್ಗೆಯಂ ಹತ್ತಿದಂತೆ ಆಜೆಯಂ ಮಾಡುತ್ತಿದ್ದೇನೆ. ಭದ್ರಭಟಾದಿಗಳ ದಳಗಳು ಕಣ್ಣು ಮರೆಯಾಗಿವೆ. ಹಗೆಗಳು ಕೋಟೆಗೆ ಮುತ್ತಿಗೆಯಂ ಹಾಕಿ ನನ್ನ ಅಧೀನವಂ ಮೀರಿ ಒಳಕ್ಕೆ ಬಂದು ಅಂತಃಪುರವಂ ಪೊಕ್ಕು ಪುತ್ರರಂತೆ ಸಂರಕ್ಷಿತರಾದ ಅಂತಃಪುರದ ಸ್ತ್ರೀಜನವಂ ನಮ್ಮ ಕಣ್ಣು ಮುಂದೆ ನೋಡಿದರೆ ನಾವು ಇಷ್ಟು ದಿನ ಬದುಕಿದುದೂ ವ್ಯರ್ಥವಾಗುವುದು. ಇದರ ಮೇಲೆ ತಾವು ಹೇಳಿದಂತೆ ಕೇಳುವೆನು ಎಂದು ಬಾಗುರಾಯಣನು ರಾಕ್ಷಸನಿಗೆ ಹೇಳಲು ; ಅದಂ ಕೇಳಿ ರಾಕ್ಷಸನು—ಈ ಬಾಗುರಾಯಣನಿಗೆ ಯುದ್ಧದಲ್ಲಿ ಮನಸ್ಸಿಲ್ಲ. ನಾನು ಯತ್ನವಂ ಮಾಡಿದರೂ ಸಾಗುವುದಿಲ್ಲ. ರಾಜಪತ್ನಿಯರ ಮಾನಸಂರಕ್ಷಣಾರ್ಥವಾಗಿ ಈ ಪಟ್ಟಣದ ಬೀಗದ ಕೈಯ್ಯಂ ಚಂದ್ರಗುಪ್ತನಿಗೆ ಒಪ್ಪಿಸಿ ಆತನಂ ಪ್ರಭುವೆಂದು ಕರೆತರಲಿ. ಚಿಂತೆ ಏನು? ನಾನು ಕಾಣಿಸಿಕೊಳ್ಳದೆ ಕಾರ್ಯೋದ್ಯೋಗವಂ ಮಾಡಿ ಪರಲೋಕದಲ್ಲಿರುವ ನಂದರಿಗೆ ಸಂತೋಷವನ್ನಾದರೂ ಮಾಡುವೆನೆಂದು ತನ್ನ ಮನಸ್ಸಿನಲ್ಲಿ ನಿಶ್ಚಯಿಸಿ—

ಅಯ್ಯಾ ಬಾಗುರಾಯಣನೇ, ನೀನು ಹೇಳಿದುದೆಲ್ಲವೂ ವಿಹಿತವೇ ಸರಿ. ದೈವಯತ್ನದಿಂದ ಆಗುವ ಕಾರ್ಯವಾಯಿತು. ಅದಕ್ಕಾಗಿ ಇನ್ನು ಸಾಹಸವಂ ಮಾಡಿದರೆ ನೋಡಿ ಸಂತೋಷಪಡುವವರು ಯಾರು? ಮಾಡಿದರೂ ಕೂಡಿ ಬರಲಾರದು. ಜೀವವಂತರಾಗಿರುವ ಜನರ ಸಂರಕ್ಷಣಾರ್ಥವಾಗಿ ಚಂದ್ರಗುಪ್ತನು ಸುಖದಿಂದ ಪಟ್ಟಣಕ್ಕೆ ಬರಲು ; ಸಕಲಾಶೆಯಂ ಬಿಟ್ಟು ವಿರಕ್ತನಾದ ವೃದ್ಧರಾಜನು ಈ ಮಾತಿಗೆ ಏನು ಹೇಳಿಯಾನು? ನಾವು ನಮ್ಮ ಮನಸ್ಸಿಂದರೆ ಚಂದ್ರಗುಪ್ತಂ ಹೇಳಿದಂತೆ ಇರಬಹುದು. ಶತ್ರುಗಳು ಪುರವನ್ನಾಕ್ರಮಿಸುವುದಕ್ಕೆ ಮುಂಚೆ ಅದರ ಬೀಗದ ಕೈಗಳಂ ಚಂದ್ರಗುಪ್ತನಿಗೆ ಒಪ್ಪಿಸುವವನಾಗು ಎಂದು

ಹೇಳಿ ಬಾಗುರಾಯಣನಂ ಕಳುಹಿಸಿ ಆಗಲೇ ವೃದ್ಧರಾಜನ ದುಃಖವಂ ಸಮಾಧಾನಪಡಿಸುವುದಕ್ಕೆ ರಾಕ್ಷಸನು ಹೊರಟು ರಾಜಭವನಕ್ಕೆ ಬಂದು ಅಲ್ಲಿ ಬಲು ಹೊತ್ತು ರೋದನದಿಂದ ಗಂಟಲು ಬಿಗಿ ಕುಗ್ಗಿದ ಧ್ವನಿಯೊಡನೆ ಹಾ! ನಾಥನೇ ಹಾ! ಕುಮಾರರುಗಳಿರಾ ಎಂದು ಹಂಬಲಿಸುತ್ತಿರುವ ಸ್ತ್ರೀಜನರ ಪ್ರಲಾಪವನ್ನೂ ಬೇಡವೆಂದು ಒಡಂಬಡಿಸುತ್ತಿರುವ ಪರಿಚಾರಿಣಿಯರ ಧ್ವನಿಯನ್ನೂ ಕೇಳಿ ಮನದಲ್ಲಿ ಮಹಾದುಃಖಪಡುತ್ತ ಬಂದು ನೆಲಕ್ಕೆ ಬಿದ್ದು ಹೊರಳಿ ಅಳುತ್ತ ಮೈಮರೆತ ವೃದ್ಧನಾದ ಅರಸನಂ ಕಂಡು ಎತ್ತಿ ತಕ್ಕೈಸಿ—

ಅಯ್ಯೋ ರಾಯನೇ, ನಿನಗೆ ಈ ಯವಸ್ಥೆ ಬರಬಹುದೇ? ನೀನು ಸಜ್ಜನರಂ ನಿಂದಿಸಿದವನಲ್ಲ. ದೇವಬ್ರಾಹ್ಮಣರಿಗೆ ಅಪಮಾನವಂ ಮಾಡಿದವನಲ್ಲ. ಅಪರಾಧಿಗಳಿಗೆ ಅವಿಹಿತ ದಂಡನೆ ಗೆಯ್ದವನಲ್ಲ. ನ್ಯಾಯದಲ್ಲಿ ಪಕ್ಷಪಾತವಂ ಮಾಡಿದವನಲ್ಲ. ಅಪೂಜ್ಯರಂ ಪೂಜಿಸಿದವನಲ್ಲ. ಇಂಥ ನಿನಗೆ ಈ ದುರ್ದೆಶೆ ಬಂದಿರುವುದು ಜನ್ಮಾಂತರೀಯವಲ್ಲದೆ ಇಹ ಜನ್ಮದಲ್ಲಿ ಮಾಡಿದುದಲ್ಲ. ಆದರೆ ನಂದರಲ್ಲಿ ಈ ದೋಷಗಳುಂಟೇ? ಎಂದರೆ ನಾನು ಸೇವಕನಾಗಿದ್ದು ಲೋಕಾಂತರಸ್ಥರಾದ ನಂದರಲ್ಲಿ ದುರ್ಗುಣ ಕಥನವುಂ ಮಾಡುವುದು ಯುಕ್ತವಲ್ಲದಿದ್ದರೂ ಅನಧಿಕಾರಿಗಳಾದ ಶೂದ್ರರು ವೇದವನ್ನೋದುವ ಬ್ರಾಹ್ಮಣರಂ ನಿಂದಿಸುತ್ತ ಬ್ರಾಹ್ಮಣ ಸ್ತ್ರೀಯರುಗಳಂ ಅನುರಾಗದಿಂ ನೋಡುವುದಂ ಕೇಳಿಯೂ ಅವರಂ ದಂಡಿಸದೆ ದಾಕ್ಷಿಣ್ಯಕ್ಕೆ ಒಳಗಾದುದರಿಂದ ಆ ಮಹಾದ್ರೋಹವೇ ರಾಜ್ಯಾರಿಷ್ಟಕವಾಗಿ "ರಾಜ್ಞೋ ರಾಷ್ಟ್ರಕೃತಂ ಪಾಪಂ" ಎಂಬ ಶಾಸ್ತ್ರವು ಸತ್ಯವಾದುದರಿಂದ ಆ ಪಾಪವೇ ನಂದರಿಗೆ ಇಹದಲ್ಲಿ ಇಂಥ ಅಪಮೃತ್ಯುವನ್ನುಂಟುಮಾಡಿತು. ಇದಕ್ಕೆ ಮೌರ್ಯಪುತ್ರನು ನಿಮಿತ್ತನಾದನು. ಮೀರಿಹೋದ ಕೆಲಸಕ್ಕೆ ಹೋರಿ ಫಲವೇನು? ನಿನ್ನ ವಂಶಸ್ಥನಾದ ಧೃತರಾಷ್ಟ್ರಂಗೆ ಪುತ್ರಕ್ಲೇಶ ಮುಂಟಾದಂತೆ ನಿನಗೂ ಸಂಭವಿಸಿತು. ಆದರೂ ಯುದ್ಧದಲ್ಲಿ ಹತವಾಗುವುದು ಕ್ಷತ್ರಿಯ ಧರ್ಮವು. ಈಗಲೂ ನಿನ್ನ ಕುಮಾರರು ಅರಿಗಳ ಕಪಟಕ್ಕೆ ತಗುಲಿದವರಾದಾಗ್ಯೂ ಹಿಮ್ಮೆಟ್ಟದೆ ಹಗೆಗಳ ಮೇಲೆ ಬಿದ್ದು ಸಹಸ್ರೋಪಸಹಸ್ರ ವೈರಿಗಳಂ ಸಂಹರಿಸಿ ವೀರಸ್ವರ್ಗವನ್ನೈದಿದರೇ ಹೊರತು ಹಿಮ್ಮೆಟ್ಟಿ ಕುಲಕ್ಕೆ ಅಪಯಶಸ್ಸನ್ನುಂಟುಮಾಡಲಿಲ್ಲ. ಈ ಕಲಿಯುಗದೊಳ್ ಇಲ್ಲಿಂದ ಮುಂದೆ ಜಾತಿಕ್ಷತ್ರಿಯರು ಇರಕೂಡದೆಂಬ ಈಶಸಂಕಲ್ಪವಂ ಮೀರುವುದಕ್ಕೆ ಯಾರು ಸಮರ್ಥರು? ಈ ಸಂಸಾರವು ತುಚ್ಛವು ಎಂದು ತಿಳಿದು ವ್ಯಸನಾಭ್ಯುದಯಗಳಲ್ಲಿ

ಚಿತ್ತಕ್ಷೋಭೆಯಿಲ್ಲದ ಜನರು ಪರಮಪದಮಂ ಪಡೆವರು ಎಂಬ ಶಾಸ್ತ್ರಾರ್ಥ ವನ್ನು ನೀವೇ ಹೇಳುತ್ತಿದ್ದಿರಷ್ಟೆ. ಲೋಕದಲ್ಲಿ ಹೇಳಿದಂತೆ ನಡೆವವನು ಧನ್ಯನು. ಅದಕ್ಕೆ ನೀವೇ ಅಧಿಕಾರಿಗಳು. ನಿರರ್ಥಕವಾದ ದುಃಖವಮಂ ಬಿಟ್ಟು ಈಶ್ವರಗತ ಚಿತ್ತರಾಗಬೇಕು. ನಾನು ಇಲ್ಲಿದ್ದರೆ ಪ್ರಭುವಾಗಿ ಬರುವ ಚಂದ್ರಗುಪ್ತನು ನನ್ನಂ ನಂದರಿಗೆ ಆಪ್ತನೆಂದು ನಿಗ್ರಹಿಸೂನು. ಈಗ ಇಲ್ಲಿಂದ ಹೊರಟು ಹೋಗುತ್ತಿದ್ದೇನೆ. ಚಂದ್ರಗುಪ್ತನು ತಮಗೆ ಪೌತ್ರನಾದುದರಿಂದ ಆತನಿಗೆ ನಂದರಲ್ಲಿದ್ದಂತೆ ನಿಮ್ಮಲ್ಲಿ ದ್ವೇಷವಿಲ್ಲ. ಮೊದಲೇ ನಿಮಗೆ ತಿಳಿಸಿದ್ದರೆ ಇಷ್ಟನರ್ಥಕ್ಕೆ ನಿಮಿತ್ತವಾಗುತ್ತಿರಲಿಲ್ಲ. ನಂದರು ತಾವೇ ಈ ದುರ್ದಶೆಯಂ ತಂದುಕೊಂಡರು. ಇನ್ನು ಚಂದ್ರಗುಪ್ತನು ಬಂದು ನಿಮ್ಮಂ ಕಂಡಲ್ಲಿ ಆತನ ಮನಸ್ಸಿಗೆ ಕ್ಷೋಭೆಯಾಗದಂತೆ ಸಮಯೋಚಿತವಾಗಿ ಹಿಂದೆಯೂ ಮುಂದೆಯೂ ಏಕಪ್ರಕಾರವಾಗಿ ಮಾತನಾಡುತ್ತ ಅವನು ಕೊಟ್ಟುದರಿಂದಲೇ ಸಂತುಷ್ಟರಾಗುತ್ತ ಆತನನ್ನೇ ಔರಸಪುತ್ರನೆಂದು ಭಾವಿಸುತ್ತ ಕಾಲಹರಣಮಂ ಮಾಡುತ್ತ ಇದ್ದರೆ ಕೆಲವು ದಿವಸದ ಮೇಲೆ ಆಗತಕ್ಕ ಕ್ಷೇಮಲಾಭವನ್ನು ಈಗ ಬಾಯಿಮಾತಿನಿಂದ ಹೇಳಿ ಫಲವೇನು? ಎಂದು ವೃದ್ಧರಾಜನಂ ಸಮ್ಮತಿಗೊಳಿಸಿ ತನ್ನ ಮನೆಗೆ ಬರುತ್ತಿದ್ದನು.

ಅಷ್ಟರಲ್ಲಿಯೇ ಸೂರ್ಯನುದಯಿಸಲು; ಚಾಣಕ್ಯನೆದ್ದು ಶೇಖರನಂ ಕರೆಯ ಕಳುಹಿಸಿ–ಅಯ್ಯಾ ಚಮೂಪತಿಯೇ, ನೀನು ಸಕಲಸೇನಾಪರಿವೃತನಾಗಿ ಪ್ರಾಕಾರಮಂ ಕೆಡಹುವ ಫಿರಂಗಿಗಳನ್ನು ಪುರದ ನಾಲ್ಕುದಿಕ್ಕುಗಳಲ್ಲಿಯೂ ನಿಲ್ಲಿಸಿ ಲಗ್ಗೆಯಂ ಹತ್ತುವ ಜನಗಳಂ ಪುನಃ ಸಜ್ಜುಮಾಡಿ ಪಟ್ಟಣಕ್ಕೆ ಮುತ್ತಿಗೆಯಂ ಹಾಕಿ ಕೋಟೆಯ ಮೇಲೆ ಗುಂಡುಗಳಂ ಹಾರಿಸುತ್ತ ಪುರರಕ್ಷಕರಿಗೆ–ಚಂದ್ರಗುಪ್ತಮಹಾರಾಜರು ಶತ್ರುಗಳಾದ ನಂದರಂ ಸಂಹರಿಸಿ ಪ್ರಭುತ್ವಕ್ಕೆ ಬಂದಿರುವಲ್ಲಿ ನೀವು ವ್ಯರ್ಥವಾಗಿ ಉಪೇಕ್ಷೆಯಿಂದ ತುಂಟತನಮಂ ಮಾಡಿಕೊಂಡು ಹತರಾಗದೆ ಪುತ್ರಬಂಧುಸಮೇತರಾಗಿ ಬಂದು ರಾಜಾಜ್ಞೆಗೆ ಒಳಗಾಗಿ ಪ್ರಭುಮನೋನುಗುಣವಾಗಿ ನಡೆದುಕೊಳ್ಳುತ್ತ ಮೊದಲಿಗಿಂತಲೂ ಅಧಿಕರಾಗಿರಬೇಕೆಂಬ ಅಪೇಕ್ಷೆ ಇದ್ದರೆ ಬೀಗಮುದ್ರೆಯಂ ತಂದು ಒಪ್ಪಿಸತಕ್ಕುದು ಎಂದು ಹೇಳಿ ಕಳುಹಿಸುವವನಾಗು. ರಾಕ್ಷಸನೇನಾದರೂ ದುರ್ಯೋಧನೆಯಿಂದ ಕಾಲಹರಣಮಂ ಮಾಡಿದರೆ ಉಪಾಯಾಂತರದಿಂದ ಪುಟಭೇದನಮಂ ಸಾಧಿಸಬಹುದು ಎಂಬುದಾಗಿ ಶೇಖರನಿಗೆ ಹೇಳಿ ಅವನಂ ಕಳುಹಿಸಲು; ಚಾಣಕ್ಯಂ ಹೇಳಿದ

ರೀತಿಗೆ ಶೇಖರನು ಆ ಪಾಟಲೀಪುರಕ್ಕೆ ಮುತ್ತಿಗೆಯಂ ಹಾಕಲು; ಪಟ್ಟಣದ ಜನರೆಲ್ಲರೂ ಭಯಭ್ರಾಂತರಾಗುತ್ತಿದ್ದರು. ಆಗ ಬಾಗುರಾಯಣನು ತನ್ನ ಬಳಿಯಣ ದೂತರಂ ಕರೆದು ಪರ್ವತರಾಜನ ಸೇನಾಪತಿಯಾದ ಶೇಖರನಂ ಕಂಡು ಹೀಗೆ ಹೇಳಿ ಬನ್ನಿರಿ ಎಂದು ಕಳುಹಿಸಲು; ಆ ದೂತರು ಬಂದು ಶೇಖರನಂ ಕಂಡು—

ಅಯ್ಯಾ ಸೇನಾಪತಿಗಳಿರಾ, ಪುರರಕ್ಷಕರಾದ ಬಾಗುರಾಯಣರು ನಿಮ್ಮಂ ಕಂಡು ಸಂದರನಂತರ ಈ ನಗರದಲ್ಲಿ ನಿಮಗೆ ಶತ್ರುಗಳು ಯಾರೂ ಇಲ್ಲ. ಬೀಗಮುದ್ರೆಯಿಂ ಸಮೇತರಾಗಿ ಚಂದ್ರಗುಪ್ತಮಹಾರಾಜರಂ ಕಾಣುವುದಕ್ಕೆ ಈಗಲೇ ನಾವೆಲ್ಲರೂ ಬರುತ್ತಿದ್ದೇವೆ, ಯುದ್ಧದಿಂ ಇನ್ನು ಮೇಲೆ ಪ್ರಕೃತ ವೇನೂ ಇಲ್ಲವೆಂದು ಹೇಳಿ ಬರುವುದು ಎಂಬುದಾಗಿ ನಮ್ಮಸ್ನಿಲ್ಲಿಗಟ್ಟಿದರು ಎಂದು ದೂತರುಸುರಲು; ಆ ಮಾತಿಗೆ ಶೇಖರನು—

ಅಯ್ಯಾ ದೂತರುಗಳಿರಾ, ಊರುಗಾವಲಿನವನ ಮನೋಗತಮಂ ತಿಳಿಯ ಲೋಸುಗ ಪ್ರಭುಗಳ ಅಪ್ಪಣೆಯಿಂದ ಮುತ್ತಿಗೆಯಂ ಹಾಕಿದೆವು. ಈಗ ಮುದ್ರೆ ಗಳಂ ಒಪ್ಪಿಸಿದರೆ ಯುದ್ಧಯತ್ನಮಂ ನಿಲ್ಲಿಸುವೆವು. ಬೇಗ ಬರುವುದೆಂದು ಆತನಿಗೆ ಹೇಳಿರಿ ಎನಲು; ದೂತರು ಬಂದು ಆ ಮಾತಂ ಬಾಗುರಾಯಣನಿಗೆ ತಿಳುಹಿಸಿದರು. ಆಗ ಬಾಗುರಾಯಣನು ಕೋಶಾಧಿಕಾರಿಯಾಗಿರುವ ರುಕ್ಮನೇ ಮುಖ್ಯರಾದ ಅಧಿಕಾರಿಗಳೆಲ್ಲರಂ ಕರೆಯಿಸಿ ಸಕಲವಸ್ತುಗಳಂ ಸಜ್ಜುಮಾಡಿ ಕೊಂಡು ಹೊರಡುವುದಕ್ಕೆ ಯತ್ನಮಂ ಮಾಡುತ್ತಿರುವ ಸಮಯದಲ್ಲಿ ಸಿದ್ಧಾರ್ಥಕನು ಬಂದು ಬಾಗುರಾಯಣನಂ ಕಂಡು—ಏನೈ ಕುಶಲವೇ? ಎನಲು;

ಅಯ್ಯಾ ಬುದ್ಧಿವಂತನಾದ ಸಿದ್ಧಾರ್ಥಕನೇ, ನೀನು ಹೇಳಿದರ್ಥವೆಲ್ಲವೂ ಸಿದ್ಧವಾಗಿ ಅನುಭವಕ್ಕೆ ಬಂದುದರಿಂದ ನಿನಗೆ ಸಿದ್ಧಾರ್ಥಕನೆಂಬ ಹೆಸರು ಸಲ್ಲು ವುದು. ಚಂದ್ರಗುಪ್ತನಂ ಕಾಣುವುದಕ್ಕೆ ಹೊರಡುತ್ತಿದ್ದೇವೆ ಎಂದು ಬಾಗು ರಾಯಣಂ ಹೇಳಿದನು. ಅದಕ್ಕೆ—

ಅಯ್ಯಾ ಸೇನಾಪತಿಯೇ, ನೀನು ಹೋಗಿ ಕಾಣಿಸಿಕೊಳ್ಳದಿದ್ದರೂ ನಿನ್ನಲ್ಲಿ ಚಂದ್ರಗುಪ್ತನಿಗಿರುವ ವಿಶ್ವಾಸವು ತಪ್ಪಲಾರದು. ತನ್ನ ಕಾರ್ಯಕ್ಕೋಸುಗವೇ ಹಿಂದಣಿಂದ ಬಂದಾನು ಎಂದು ತಿಳಿಯುವನು. ಪ್ರಕೃತದಲ್ಲಿ ನಿನಗೆ ತಮ್ಮನಾದ ವತ್ಸಲಾಯನನ ಕೈಯಲ್ಲಿ ಬೀಗಮುದ್ರೆಯಂ ಕಳುಹಿಸುವವನಾಗು. ಇದೇ ರೀತಿಯಲ್ಲಿ ನಿನಗೆ ಮಿತ್ರರಾದ ಭದ್ರಭಟಾದಿಚಮೂಪತಿಗಳಿಗೂ ಹೇಳಿಕಳುಹಿ

ಸುವವನಾಗು ಎನಲು ; ಏನೋ! ಘುಂದಣಕಾರ್ಯದೃಷ್ಟಿಯಿಂದ ಈ ಸಿದ್ಧಾರ್ಥಕನು ಹೀಗೆ ಹೇಳುತ್ತಾನೆಂದು ತಿಳಿದು ಹಾಗೇ ಆಗಲೆಂದಂದು ತನ್ನ ತಮ್ಮನಾದ ವತ್ಸಲಾಯನನಂ ಕರೆದು ಎಲ್ಲವಂ ಅವನ ವಶಕ್ಕೆ ಕೊಟ್ಟು—ನೀನು ಹೋಗಿ ಚಂದ್ರಗುಪ್ತರಾಜರಂ ಕಂಡು ಬೀಗಮುದ್ರೆಗಳಂ ಅವರಿಗೆ ಒಪ್ಪಿಸಿ ಅಪ್ಪಣೆಯಾದ ರೀತಿಗೆ ನಡೆದುಕೊಳ್ಳುವುದೆಂದು ನೇಮಿಸಿ ರುಕ್ಮಮುಖ್ಯರಾದ ಅಧಿಕಾರಿಗಳಂ ಸಂಗಡವೇ ಹೋಗಿ ಬನ್ನಿರೆಂದು ಕಳುಹಲು ; ಆ ವತ್ಸಲಾಯನನು ಸಮಸ್ತ ವೈಭವದಿಂದ ಬಂದು ದೂರದಲ್ಲಿಯೇ ಚಂದ್ರಗುಪ್ತನಂ ಕಂಡು ಅಭಿವಂದಿಸಿ ಕೈಗಾಣಿಕೆಗಳಂ ಒಪ್ಪಿಸಿ ಬೀಗಮುದ್ರೆಗಳಂ ಮುಂದಿರಿಸಿ ಕೈಕಟ್ಟಿ ನಿಂತಿರಲು ; ಸಂಗಡ ಬಂದ ಜನರೆಲ್ಲರೂ ಮುಕುಳಿತಹಸ್ತರಾಗಿ ದೂಥದಲ್ಲಿಯೇ ವಿನಮಿಸಿ ನಿಂತಿದ್ದರು. ಅವರಂ ನೋಡಿ ಚಂದ್ರಗುಪ್ತನು ಉಚಿತಪ್ರಕಾರದಿಂ ಕುಶಲಮಂ ಕೇಳಿ ಕುಳ್ಳಿರಿ ಎಂದು ಹೇಳಲು ; ಅವರೆಲ್ಲರೂ ಯೋಗ್ಯತೆಯನ್ನತಿಕ್ರಮಿಸದೆ ಇರುತ್ತಿದ್ದರು. ಆಗ ವತ್ಸಲಾಯನನು ಚಂದ್ರಗುಪ್ತನಂ ಕುರಿತು—

ಜೀಯಾ, ಅಸಿತಪಕ್ಷಾಂತದಲ್ಲಿ ಅಸ್ತಾಚಲಮಂ ಹೊಂದಿದ ಸೂರ್ಯನಂ ಹಿಂದುಮಾಡಿ ಉದಯಿಸುವ ಬಾಲಚಂದ್ರನ ದರ್ಶನವನ್ನಪೇಕ್ಷಿಸುತ್ತಿರುವ ಕುಮುದನಿಕರಗಳಂತೆ ಪ್ರತಿದಿನ ಪ್ರವರ್ಧಮಾನ ಸಂಪದ್ವಿಶೇಷದಿಂದ ಕೂಡಿ ಗಜಾರೂಢರಾಗಿ ರಾಜವೀಧಿಯಲ್ಲಿ ಬರುವ ನಿಮ್ಮಂ ನೋಡಿ ನಮ್ಮ ನೇತ್ರಗಳು ಎಂದಿಗೆ ಸಫಲವಾದಾವ್ರೋ? ಎಂದು ಸಕಲಜನರೂ ತವಕಂಬಡುತ್ತಿದ್ದಾರೆ. ಹಾಗೆಯೇ ನಂದರಾಜ್ಯಲಕ್ಷ್ಮಿಯು ಕೈಗಳಿಂ ವರಣಮಾಲೆಯಂ ಪಿಡಿದು ನಿಮ್ಮಂ ಇದಿರುನೋಡುತ್ತಿರುವಳು. ಪಟ್ಟಣಕ್ಕೆ ಬಿಜಮಾಡಬೇಕೆಂದು ವಿಜ್ಞಾಪಿಸುವ ಸಮಯದಲ್ಲಿ ಭದ್ರಭಟಾದಿ ಸೇನಾಪತಿಗಳ ಅಣ್ಣತಮ್ಮಂದಿರು ಬಂದು ದೂರದಲ್ಲಿಯೇ ಕೈಮುಗಿದು ಕೈಗಾಣಿಕೆಗಳಂ ನೀಡಿ ಅಪ್ಪಣೆ ಮೇರೆಗೆ ಉಚಿತಪ್ರಕಾರದಿಂ ಕುಳ್ಳಿರಲು ; ಅವರಂ ನೋಡಿ ಚಂದ್ರಗುಪ್ತನು—

ಏನಿರೈ, ಭದ್ರಭಟಾದಿ ಸೇನಾಪತಿಗಳು ಎಲ್ಲಿದ್ದಾರೆ? ಎನಲು ;

ಜೀಯಾ, ಚದರಿರುವ ಸೇನೆಗಳಂ ಕೂಡಿಸಿಕೊಂಡು ದರ್ಶನಕ್ಕೆ ಬರುತ್ತಿದ್ದೇವೆ. ನೀವು ಮೊದಲು ಹೋಗಿ ಪ್ರಭುಗಳಂ ಕಂಡು ಆಜ್ಞಾನುಸಾರವಾಗಿ ನಡೆದುಕೊಳ್ಳುವುದೆಂದು ನಮ್ಮಂ ಕಳುಹಿಸಿದರೆಂಬುದಾಗಿ ಬಿನ್ನೈಸಿದರು. ಅದಕ್ಕೆ ಚಂದ್ರಗುಪ್ತನು—ಹಾಗೇ ಆಗಲೆಂದು ಹೇಳಿ ಅವರೆಲ್ಲರಿಗೂ ವೀಳಯಮಂ

ಕೊಡಿಸಿ ಮೊದಲಿನ ಮೇರೆಗೆ ನಿಮ್ಮ ನಿಮ್ಮ ಅಧಿಕಾರಗಳಲ್ಲಿ ಎಚ್ಚರಿಕೆಯಿಂದಿರುವುದೆಂದು ನೇಮಿಸಿ ಕೋಶಾಧಿಕಾರಿಯಂ ನೋಡಿ—

ಅಯ್ಯಾ ರುಕ್ಮನೇ, ನಮ್ಮ ಪಿತಾಮಹರು ಈಗಿನ ಕಾರ್ಯಕ್ಕೆ ಯಾವ ವಸ್ತುಗಳಲ್ಲಿ ಎಷ್ಟು ಕೇಳಿದರೂ ಆಗಲೇ ಅದೆಲ್ಲವನ್ನೂ ಒದಗಿಸಿಕೊಡುವವನಾಗು. ನಂದರ ಪತ್ನಿಯರು ತಮ್ಮಲ್ಲಿರುವ ವಸ್ತುಗಳಂ ಅವರ ಮನಸ್ಸು ಬಂದಂತೆ ಮಾಡಿಕೊಳ್ಳಲಿ ಎಂದು ಹೇಳಿ ಅವರೆಲ್ಲರಂ ಕಳುಹಿಸಲು ; ಆಗ ಸಾಮಂತ ನರಪತಿಗಳೆಲ್ಲರೂ ಬಂದು ಚಂದ್ರಗುಪ್ತನಂ ಕಂಡು ಕೈಮುಗಿಯುತ್ತಿರಲು ; ಪೀಠದಿಂದೆದ್ದು ನಾಲ್ಕಾರು ಹೆಜ್ಜೆ ನಡೆದು ಬಂದು ಆಲಿಂಗನಮಂ ಕೊಟ್ಟು ಕುಶಲಮಂ ಕೇಳಿ ಅವರೆಲ್ಲರಂ ಉಚಿತಾಸನಗಳಲ್ಲಿ ಕುಳ್ಳಿರಿಸಿ ತಮ್ಮ ದರ್ಶನವಿಂದಿಗೆ ಲಭಿಸಿತೆಂದು ಚಂದ್ರಗುಪ್ತನು ಅರಸುಗಳಿಗೆ ಉಪಚಾರೋಕ್ತಿಗಳಂ ಹೇಳುತ್ತಿರಲು ; ಆ ನೃಪರುಗಳು ರಾಜಗುಪ್ತನಂ ಕುರಿತು—

ಬಹು ನಕ್ಷತ್ರಗಳಿಂದ ಶೋಭಿತವಾದ ನಭೋಮಂಡಲವು ಉದಯಿಸಿ ಬರುವ ಚಂದ್ರನಿಂ ವಿಶೇಷವಾಗಿ ಬೆಳಗುವಂತೆ ಇರುವ ರಾಜಚಂದ್ರರಾದ ಚಂದ್ರಗುಪ್ತ ಮಹಾರಾಜರೇ, ನಿಮ್ಮ ಅಭ್ಯುದಯದಿಂ ರಾಜ್ಯವೆಲ್ಲವೂ ಅಲಂಕೃತವಾಗಿ ಭಯರಹಿತವಾಯಿತು ಎಂದು ನುಡಿದರು. ಆಗ ಅವರೆಲ್ಲರಂ ಗಂಧಮಾಲ್ಯ ಕರ್ಪೂರವೀಳೆಯಗಳಿಂದುಪಚರಿಸಿ ಸನ್ಮಾನಂಗಳಿಂ ಯಥಾಸ್ಥಾನಂಗಳಿಗೆ ಕಳುಹಿಸುತ್ತಿದ್ದನು.

ಅತ್ತಲಾ ಬಾಗುರಾಯಣನು ರಣಾಂಗಣಮಂ ಶೋಧನೆಗೊಳಿಸಿ ನಂದರ ಕಬಂಧಗಳು ಜಪಶಾಲೆಯ ಅಗ್ನಿಯಿಂದ ಭಸ್ಮಾವಶೇಷವಾದುದನ್ನೂ ಅವರುಗಳ ಶಿರಸ್ಸುಗಳಂ ಶೇವರನ ಅಪ್ಪಣೆಯಿಂ ತೈಲಕಟಾಹದಲ್ಲಿರಿಸಿರುವುದನ್ನೂ ತಿಳಿದು ಸಿದ್ಧಾರ್ಥಕನಂ ಕರೆದು—ಅಯ್ಯಾ, ನಂದಪತ್ನಿಯರು ಸಹಗಮನಕ್ಕೆ ಸಿದ್ಧರಾಗಿದ್ದಾರೆ. ತಮ್ಮ ಬಳಿಯಣ ವಸ್ತುಗಳಲ್ಲಿ ಪಾದಾಂಶವು ರಾಜಕೋಶಕ್ಕೂ ಉಳಿದುದೆಲ್ಲವೂ ತಮ್ಮ ಪರಲೋಕಾರ್ಥಕ್ಕೂ ಉಪಯೋಗಿಸಲ್ಪಡಲಿ ಎಂದು ನಿಶ್ಚಯಿಸಿ ಈ ಯರ್ಥಮಂ ನಡಸಿಕೊಡುವುದರಿಂ ಚಂದ್ರಗುಪ್ತನು ಶ್ರೇಯೋವಂತನಾಗಲಿ ಎಂದು ಹೇಳುತ್ತ ತ್ವರೆಪಡುತ್ತಿದ್ದಾರೆ. ಇದಕ್ಕೇನು ಅಪ್ಪಣೆ? ಎಂದು ಚಂದ್ರಗುಪ್ತನಿಗೆ ತಿಳುಹಿಸಿ ಒಡಂಬಡಿಸಿ ಆಜ್ಞೆಯಂ ತೆಗೆದುಕೊಂಡು ನಂದರ ತಲೆಗಳಂ ಪುರದ ಹೊರಗಣ ಗಂಗಾತೀರದ ಉದ್ಯಾನದಲ್ಲಿರಿಸಿ ಬಂದು ವರ್ತಮಾನಮಂ ತಿಳುಹಿಸುವವನಾಗು ಎಂದು ಹೇಳಲು ; ಆ ಮಾತಿಗೆ ಸಿದ್ಧಾರ್ಥಕನು

ಹಾಗೇ ಆಗಲೆಂದು ನುಡಿದು ಹೋಗಿ ಚಂದ್ರಗುಪ್ತನಂ ಕಂಡು ಕೈಮುಗಿದು ಬಾಗುರಾಯಣನು ಉಸುರಿದರ್ಥಮಂ ತಿಳುಹಿಸಲು ; ಆ ಮಾತಿಗೆ ಚಂದ್ರಗುಪ್ತನು ಸಿದ್ಧಾರ್ಥಕನಂ ಕುರಿತು—

ನಂದರು ನಮ್ಮವರಿಗೆ ಮಾಡಿದ ದ್ರೋಹಕ್ಕಾಗಿ ದೈವವು ಸಹಿಸಲಾರದೆ ಅವರಿಗೆ ಈ ದುರ್ದಶೆಯನ್ನುಂಟುಮಾಡಿತು. ಮಿಂಚಿಹೋದ ಕಾರ್ಯಕ್ಕೆ ಚಿಂತಿಸಿ ಫಲವೇನು ? ನಂದಪತ್ನಿಯರು ನಮಗೆ ಮಾತೃಗಳಲ್ಲದೆ ಬೇರೆಯಲ್ಲ. ಸೌಮಾಂಗಲ್ಯ ಒಂದು ಹೊರತು ಎಲ್ಲದರಲ್ಲಿಯೂ ಮಾತೃಸಮಾನರನ್ನಾಗಿ ತಿಳಿದು ನಡಸಿಕೊಂಡು ಬರುವೆನು. ಅವರು ನನ್ನಂ ಔರಸಪುತ್ರನೆಂದು ಭಾವಿಸುತ್ತ ನಿರಂತರವೂ ಸಲಹುತ್ತಿರಲಿ. ವೃದ್ಧರಿಗೆ ಧೈರ್ಯಮಂ ಹೇಳುತ್ತ ನನ್ನಂ ನೋಡಿ ಎಲ್ಲ ದುಃಖಮಂ ಮರೆತು ಪೂಜ್ಯರಾಗಿರಲಿ. ಈ ವೇಳೆಯಲ್ಲಿ ನಾನು ಅಲ್ಲಿ ಇರುವುದು ಯುಕ್ತವಾದರೂ ನನ್ನಂ ಕಂಡರೆ ಅವರಿಗೆ ದುರ್ಯೋಧನಾದಿಗಳಂ ಸಂಹರಿಸಿದ ಭೀಮಸೇನನಂ ಕಂಡು ಗಾಂಧಾರಿಗೆ ದುಃಖವಿಮ್ಮಡಿಸಿದಂತಾಗುವುದು. ಆದರಿಂದಿದು ಸಮಯವಲ್ಲ. ನಾನು ಹೇಳಿದರ್ಥವೆಲ್ಲಮಂ ವೃದ್ಧರಾಜರಿಗೂ ತಾಯಿಯರಿಗೂ ಅಡ್ಡಬಿದ್ದು ಬಿನ್ನೈಸಿದನೆಂದು ಸೂಚಿಸುವಂತೆ ಬಾಗುರಾಯಣನಿಗೆ ತಿಳುಹಿಸಿದ ಬಳಿಕ ನಂದಪತ್ನಿಯರು ವೃದ್ಧರ ಸಾಂತ್ವವಚನವನ್ನೂ ನನ್ನ ವಿಜ್ಞಾಪನೆಯನ್ನೂ ಮನಸ್ಸಿಗೆ ತಾರದೆ ಅನುಗಮನಕ್ಕೇ ನಿಶ್ಚಯಿಸಿದರೆ ಯಾರ ಯತ್ನವೇನಿದೆ ? ಅವರ ಚಿತ್ತವಿದ್ದಂತೆ ಆಗಲಿ. ಅಲ್ಲಿ ಆಗತಕ್ಕುದಕ್ಕೆಲ್ಲ ರುಕ್ಮನಿಗೆ ಮೊದಲೇ ಆಜ್ಞೆಯು ಕೊಡಲ್ಪಟ್ಟಿದೆ. ಎಲ್ಲಮಂ ಬಾಗುರಾಯಣನೇ ನಿಂತು ಮಾಡಿಸಲಿ ಎಂದು ಹೇಳಲು ; ಸಿದ್ಧಾರ್ಥಕನು ನಂದರ ಶಿರಸ್ಸುಗಳಂ ತೆಗಸಿಕೊಂಡು ಹೋಗಿ ಉದ್ಯಾನದಲ್ಲಿ ಇಳುಹಿಸಿ ಬಳಿಕ ಬಾಗುರಾಯಣನಂ ಕಂಡು ಅವನಿಗೆ ಎಲ್ಲಮಂ ತಿಳುಹಿಸಲು; ಆಗ ಬಾಗುರಾಯಣನು ಚಂದ್ರಗುಪ್ತಂ ಹೇಳಿಕಳುಹಿಸಿದುದೆಲ್ಲಮಂ ನಂದಪತ್ನಿಯರಿಗೆ ಅರಿಕೆ ಮಾಡಲು; ಅದಂ ಕೇಳಿ ಅವರು—

ಅಯ್ಯಾ ಬಾಗುರಾಯಣನೇ, ಚಂದ್ರಗುಪ್ತನು ಹೇಳಿದ ಸಾಂತ್ವವಚನಮಂ ಕೇಳಿದೆವು. ಆತನು ಗುಣಶಾಲಿಯು, ಹೇಳಿದಂತೆ ನಡಸತಕ್ಕವನು. ಆದರೂ ಅದರಿಂ ನಮಗೆ ಸದ್ಗತಿ ಲಭಿಸಲಾರದು. ನಮ್ಮ ವಂಶದಲ್ಲಿ ಚಂದ್ರಗುಪ್ತನಾದರೂ ಶ್ರೇಯೋವಂತನಾಗಿರಲಿ. ಮುಂದಣ ಕಾರ್ಯಕ್ಕೆ ನಾವು ಹೇಳಿದಂತೆ ಎಲ್ಲಮಂ ಸಿದ್ಧಮಾಡಿಸುವವನಾಗು. ಇದೋ ! ನಾವು ಹೊರಡುವೆವು ಎನಲು; ಅದಂ ಕೇಳಿ ಬಾಗುರಾಯಣನು ಕೈಮುಗಿದು ಹೋದನು. ಅದಂ ನೋಡಿ ಸುನಂದಾ

ದೇವಿಯು ತನ್ನ ಸೊಸೆಯರಂ ಕೈಪಿಡಿದು ನಾನಾ ಪ್ರಕಾರವಾಗಿ ಒಡಂಬಡಿಸು ತ್ತಿರಲು; ಅದಕ್ಕೆ ಸಮ್ಮತಿಸದೆ ಹೊರಡುವುದಕ್ಕೆ ತವಕಪಡುವ ನಂದಪತ್ನಿಯರಂ ಕಂಡು ವೃದ್ಧರಾಜನು ತನ್ನ ಭಾರ್ಯೆಯಂ ಕುರಿತು—

ಎಲೈ ದೇವಿಯೇ, ನಿನ್ನ ಸಾಂತ್ವವಚನಗಳಿಗೆ ಈ ಬಾಲೆಯರು ಒಡಂಬ ಡುವಂತೆ ತೋರುವುದಿಲ್ಲ. ಅವರು ಸದ್ಗತಿಯಂ ಸಂಪಾದಿಸಿಕೊಳ್ಳುವುದಕ್ಕೆ ನೀನು ಸಮ್ಮತಳಾಗು. ಮೊದಲು ಹೇಳಿದ ಋಷಿವಾಕ್ಯವು ಅನ್ಯಥಾ ಆಗಲಿಲ್ಲ. ಅದೇ ನಂದರೆ—ಪುತ್ರಾಭಿಲಾಷಿಯಾಗಿ ಇರುತ್ತಿದ್ದ ನಾನು ನಿನ್ನ ಶಿರಸ್ಸಿನಲ್ಲಿ ತಳಿದ ಪಾದೋದಕಬಿಂದುಗಳು ಜಗುಳಿ ಹೋದುದನ್ನೂ ಪ್ರಿಯಪತ್ನಿಯ ಶಿರಸ್ಸಿನಲ್ಲಿ ತಳಿದ ಒಂದು ಬಿಂದು ಮಾತ್ರ ಚಲಿಸದೇ ಇರುವುದನ್ನೂ ನೋಡಿ ಅದರ ಕಾರಣ ಮಂ ಕುರಿತು ಆ ಮಹರ್ಷಿಗಳಂ ಕೇಳಿದುದಕ್ಕೆ ಅವರು ತರಂಗಗಳು ಸ್ತಿಮಿತವಾ ಗಲು; ಚಂದ್ರಬಿಂಬ ಒಂದೇ ನಿಲ್ಲುವುದೆಂದು ಭಾವಗರ್ಭಿತವಾಗಿ ಹೇಳಿದ ಮಾತಿಗೆ ಈಗ ನಿದರ್ಶನಮುಂಟಾಯಿತು. ನಾವು ಮೊದಲು ಪಡೆದುದಕ್ಕೆ ಈಗ ದುಃಖ ಪಟ್ಟು ಫಲವೇನು ? ಹಿಂದೆ ಹೋದುದೆಲ್ಲ ಸ್ವಪ್ನದರ್ಶನವೆಂದು ತಿಳಿಯುವವಳಾಗು. ಮುಂದೆ ನಾವು ಸದ್ಗತಿಯಂ ಬಯಸಬೇಕಲ್ಲದೆ ಮೂಢಜನರಂತೆ ನಾನಾವಿಧವಾಗಿ ಹಂಬಲಿಸಿದುದರಿಂದ ಪ್ರಯೋಜನವೇನು? ಎಂದು ಹೇಳುತ್ತಿರಲು; ಅಷ್ಟ ರಲ್ಲಿಯೇ ಅಂತಃಪುರದ ದಾಸೀಜನದ ಕಲಕಲಧ್ವನಿಯು ಪಟ್ಟಣವೆಲ್ಲಮಂ ಮುಚ್ಚಿ ಜನಸಂಘವು ನೆರೆಯುತ್ತಿರಲು; ನಂದಪತ್ನಿಯರೆಲ್ಲರೂ ತಮ್ಮ ತಮ್ಮ ಬಳಿಯಣ ವಸ್ತುಗಳಂ ಸುವಾಸಿನಿಯರಿಗೆ ದಾನವಾಗಿ ಕೊಡುತ್ತ ಸರಭಸದಿಂ ಹೊರಟು ವಾತಾಹತಿಯಿಂ ಭಗ್ನವಾದ ಕದಳಿಕಾನಿಕರದಂತೆ ವೃದ್ಧರಾಜದಂಪತಿ ಗಳಿಗೆ ದಂಡವದಂತ್ಯಪ್ರಣಾಮಂಗೆಯ್ದು ರಾಜದ್ವಾರದಿಂ ಹೊರಡುತ್ತಿದ್ದರು. ಆಗ ಪೌರಜನಂಗಳಿಂದೀಡಾಡುವ ಕುಂಕುಮಪಟವಾಸಪುಷ್ಪಧೂಳಿಗಳಂ ಸೂ ರ್ಯಾತಪಂ ಮರೆಯಾದುದು. ಕಾಳಾಗರುಧೂಮರಾಜಿಯಿಂದಂಧಕಾರವೆದ್ದಂತೆ ಕಾಣಿಸಿತು. ಬಾಷ್ಪೋದಕಧಾರೆಗಳಿಂ ಪುರವೀಥಿಗಳೆಲ್ಲವೂ ಪಂಕಪ್ರಾಯ ವಾದುವು. ಈಡಾಡುವ ಭೂಷಣಪ್ರಭಾಜಾಲವೆಂಬ ಇಂದ್ರಚಾಪಗಳಿಂದಲೂ ಬಾಷ್ಪಧಾರೆಗಳೆಂಬ ವರ್ಷಬಿಂದುಗಳಿಂದಲೂ ಆಕ್ರಂದನಮೆಂಬ ಅಶನಿರವಗ ಳಿಂದಲೂ ತನುಕಾಂತಿಗಳೆಂಬ ಕುಡಿಮಿಂಚುಗಳಿಂದಲೂ ಆ ದಿನವು ಕಾರ್ಗಾ ಲದ ದುರ್ದಿನದಂತೆ ಕಾಣಿಸುತ್ತಿರಲು; ಈ ತೆರದಿಂದೆಲ್ಲರೂ ಗಂಗಾತೀರದ ಉದ್ಯಾನಕ್ಕೆ ಹೋಗಿ ಸಿಡಿಲಿನ ದೆಬ್ಬೆಯಿಂದುದುರಿದ ಫಲಗುಚ್ಛಗಳಂತೆ ವನ

ಕರಿಯಿಂದೀಡಾಡಿದ ವಾರಿಜಸಿಕರದಂತೆ ಕುಂಡಲಮಂಡಿತಗಳಾಗಿ ಕಸ್ತೂರೀತಿಲಕಂ ಗಳಿಂ ಪೂಸಿದ ಕಂಠಾನುಲೇಪಂಗಳಿಂ ಬಿಚ್ಚಿದ ಕುರುಳುಗಳಿಂ ಅರೆಗಣ್ಣುಗಳಿಂ ಮುಚ್ಚಿ ಸುಖಸಾರವಶ್ಯವನೊಂದಿದಂತೆ ಕಂಗೊಳಿಸುವ ಪತಿಗಳ ಶಿರಸ್ಸುಗಳಂ ನೋಡಿ ಕೆಲಂಬರು ಗಿರಿಶಿಖರದಿಂ ನೆಲಕ್ಕೆ ಬೀಳುವಂತೆ ಭೂಮಿಯಲ್ಲಿ ಬಿದ್ದು ಮೂರ್ಛಾಂಧಕಾರಾವೃತರಾದರು. ಕೆಲಂಬರು ಧೈರ್ಯದಿಂ ಪತಿಯರುಂಡಮಂ ತಮ್ಮ ವಕ್ಷಸ್ಥಳದಲ್ಲಿಟ್ಟುಕೊಂಡು ಬಾರಿಬಾರಿಗೂ ಚುಂಬಿಸುತ್ತ—ಸ್ವಾಮಿಾ ನಾಥನೇ, ಎಂದು ಬಾಷ್ಪಧಾರೆಗಳಿಂದದಂ ತೊಳೆಯುತ್ತ ದುಃಖಗ್ರಹಗ್ರಸ್ತರಾಗಿ ಮರುಳುಗಳಂತೆ ಲಜ್ಜೆಯುಂ ಬಿಟ್ಟರು. ಹಾ! ರಮಣನೇ ಯಾಕೆ ಮಾತನಾಡೆ? ಏನುಮುನಿಸು ನಿನಗೆ? ಏನು ಎನ್ನಲ್ಲಿ ಅಪರಾಧವು? ಎಂದು ಓರ್ವಳು. ಪತಿಯ ಅಂಗದಲ್ಲಿ ಐಕ್ಯಮಂ ಪಡೆವಳಂತೆ ಕಂಠದೇಶವನ್ನಾಲಿಂಗಿಸುತ್ತ ಕೈಮುಗಿದು ದಮ್ಮಯ್ಯ ಒಂದು ಮಾತನಾಡೈ! ಎಂದು ಪ್ರಾರ್ಥಿಸುತ್ತ ನೀವು ಪತಿಯಂ ಬದುಕಿಸಿಕೊಳ್ಳಿರೇ! ತಾವು ಜೀವಮಂ ತಂದು ಕೊಡಿರೇ! ಎಂದು ಇತರರ ಪಾದಂಗಳಂ ಪಿಡಿಯುತ್ತ ಹಾ! ಪತಿನಷ್ಟವಾದುದು ದಿಟವೇ ಇದು ಏನು ವಿಚಿತ್ರವು! ಎಂದು ಧ್ಯಾನಿಸುತ್ತ ಹಾ! ನಾಥನೇ, ನಿನಗೆ ಏನು ದುರ್ದಶೆ ಸಂಭವಿಸಿತು? ಪುಷ್ಪಶಯನಮಂ ಪಳಿಯುವವನಿಗೆ ಕಂಟಕಪಾಷಾಣಗಳಿಂ ಪರುಷವಾದ ಈ ಭೂಶಯನಮನುಕೂಲಿಸಿತೇ? ಎಂದು ಪ್ರಿಯನ ಮುಖದ ಧೂಳಿಗಳಂ ಸೆರಗಿನಿಂದ ಒರಸುತ್ತ ಹಾ! ತಾಯಿ ಕಮಲಾಂಬಿಕೆಯೇ, ಹಾ! ತಂದೆ ವಿದರ್ಭರಾಜನೇ, ತಪಮಂ ಮಾಡಿ ನನ್ನಂ ಪಡೆದುದು ಈ ಕ್ಲೇಶಕ್ಕೋಸುಗವಾಯಿತೇ ಎಂದು ಒಬ್ಬ ಬಾಲೆಯು—

ಹಾ! ನಾಥನೇ; ಎಷ್ಟು ವಿಧವಾಗಿ ಒರಲಿಕೊಂಡರೂ ಯಾಕೆ ಕಣ್ಣು ತೆರೆದು ನೋಡೆ? ನಿನ್ನ ಹೃದಯವು ಯಾಕಿಷ್ಟು ಕಠಿಣವಾಯಿತು? ಹಾ! ಕ್ಷಾತ್ರಧರ್ಮವೇ, ಪತಿಯಂ ಹೊಂದಿದೆಯಾ? ವೀರಲಕ್ಷ್ಮಿಯೇ ಇನ್ನು ಯಾರ ಕೈ ಪಿಡಿಯುವೆ? ಶಸ್ತ್ರವಿದ್ಯೆಯೇ, ನಮ್ಮಂತಾದೆಯಾ? ವನದೇವತೆಗಳಿರಾ, ನಮಗೆ ಪತಿದಾನಮಂ ಮಾಡಿರಿ. ಅಂಬಾ ಭಾಗೀರಥಿಯೇ, ಸಂತಾಪಮಂ ಶಮನಗೊಳಿಸು ಎಂದು ಓರ್ವಳು—

ಹಾ! ರಮಣನೇ, ನಾನು ಹೇಳಿದುದಂ ತಂದುಕೊಟ್ಟೆಯಾ? ಬೇಗ ಬರುವೆನೆಂದು ವಂಚಿಸಿ ಹೋದೆಯಾ? ಸಖೀಜನರುಗಳಿರಾ, ಲೋಕದಲ್ಲಿ ನಿನಗೆ ಸರಿ ಯಾರು ಎಂದು ಹೇಳುತ್ತಿದ್ದಿರಲ್ಲೇ? ಪತಿಯ ಚಿತ್ತಾನುಸಾರ ನಡೆದುದಕ್ಕೆ ಈ ತೆರನಾಯಿತೇ? ಹೋಗುವ ಅವಸರದಲ್ಲಿ ನಿನಗೆ ಏನು ಹೇಳಿಹೋದನೇ?

ಈ ಸೊಬಗು ಚಲುವಿಕೆ ಸಿಂಗರಂಗಳಂ ಯಾರು ನೋಡುವರು ? ಎಂದು ಸಖೀ ಜನಮಂ ತಕ್ಕೈಸಿ ಹಂಬಲಿಸುವಳೊರ್ವಳು.

ಹಾ ! ನನ್ನ ಒಡತಿ ಮಾಲಿನಿಯೇ, ಪ್ರಿಯನಕರದಿಂ ಬರೆದ ಮಕರಪತ್ರ ಗಳು ನಿನ್ನ ಕಪೋಲನದಲ್ಲಿ ಕಾಣಿಸುವುವಲ್ಲೇ ? ಪತಿಯು ಬರುವನೆಂಬ ಸಡಗರ ದಿಂದ ಅಲಂಕರಿಸಿದುದೆಲ್ಲವೂ ಇದ್ದಂತೇ ಇರುವುದಲ್ಲೇ ? ಎಷ್ಟೆಂದು ನೋಡಿ ಸೈರಿಸಲಿ ? ಎಂದು ಓರ್ವದೂತಿಯು.

ನಿನ್ನ ಪ್ರಿಯನು ಬಂಗಾರದವಳ ಬನ್ನಣೆಗೆ ಬೆರಗಾಗಿ ಭಾವಮೈದುನನಂ ತನ್ನಂತೆ ಭಾಗ್ಯದಿಂ ಮಾಡುತ್ತಿದ್ದರೂ ನೀನು ಪ್ರತ್ಯುತ್ತರಮಂ ಹೇಳಿದವಳಲ್ಲ! ನನ್ನ ಕಂದಾ, ನೀನು ಎಷ್ಟು ಗುಣವಂತೆಯೇ ? ಎಂದು ಓರ್ವಸೈರೇಂಧ್ರಿಯು.

ಅಕ್ಕಯ್ಯ, ನಾವು ಇಲ್ಲಿ ಬಂದ ಬಳಿಕ ನಿಮ್ಮ ರನ್ನಗನ್ನಡಿಯಂ ಯಾರು ಒಯ್ವರೋ ? ಗಿಳಿವಿಂಡುಗಳಂ ಯಾರು ಪೋಷಿಸುವರೋ ? ಎಂದು ಓರ್ವಮು ಗ್ಧಚೇಟಿಯು.

ಈ ರೀತಿಯಲ್ಲಿ ಪುರುಷನನ್ನಗಲಿದ ಚಕ್ರವಾಕಿಗಳಂತೆ ನಾನಾವಿಧದಿಂ ಪ್ರಲಾಪಿಸುತ್ತಿರುವ ನಂದಪತ್ನಿಯರುಗಳನ್ನೂ ಚೇಟಿಯರನ್ನೂ ನೋಡಿ ಸಹಿಸ ಲಾರದೆ ಜನರೆಲ್ಲರೂ ಬಾಷ್ಪೋದಕವೃಷ್ಟಿಯಿಂದಭಿಷಿಕ್ತರಾಗುತ್ತಿರಲು ; ಆಗ ಜ್ಯೇಷ್ಠ ನಂದಪತ್ನಿಯು ಶೋಕಿಸುವ ಓರಗಿತ್ತಿಯರಂ ನೋಡಿ—

ಎಲೈ ಬಾಲಕಿಯರಿರಾ, ಜೀವಿತಾಶೆಯಂ ತ್ಯಜಿಸಿ ಇಲ್ಲಿ ಬಂದ ಬಳಿಕ ವೃಥಾ ಹಂಬಲಿಸಿದುದರಿಂದ ಫಲವೇನು ? ಲೋಕಾಂತರಗತರಾದ ಪತಿಗಳು ನಿಮ್ಮಂ ಕಾಣದೆ ಎಷ್ಟು ಕ್ಲೇಶಪಡುವರೋ ! ಸತ್ಕೃತವಿಮಾನಗಳು ಸನ್ನಿಹಿತವಾಗುವುವು. ಬೇಗ ಏಳಿರಿ. ನಮ್ಮ ಸಕಲ ಸಂತಾಪಗಳನ್ನೂ ಭಾಗೀರಥಿಯೇ ಶಮನಗೊಳಿಸು ವಳು ಎಂದು ಹೇಳಿ ಎಲ್ಲರೂ ಗಂಗಾನದಿಯಲ್ಲಿ ಸ್ನಾನಮಂ ಮಾಡಿ ಪತಿಗಳ ಶಿರಸ್ಸುಗಳಂ ಗಂಗೋದಕದಲ್ಲಿ ತೊಳೆದು ಮೇಲೆ ಬರುತ್ತಿರಲು ; ಆಗ ನಂದರಿಗೆ ಪ್ರಿಯಪತ್ನಿಯರಾದ ಬಂಗಾರದ ಸ್ತ್ರೀಯರೆಲ್ಲರೂ ಬಂದು ನಂದಮಹಿಷಿಯರ ಗಭಿವಂದಿಸಿ—

ಅಕ್ಕಯ್ಯಗಳಿರಾ, ನಮಗೆ ಸ್ನಾನವಾಯಿತು. ನಾವೂ ನಿಮ್ಮ ಸಂಗಡಲೇ ಬರುವೆವು. ಇದಕ್ಕೆ ನೀವು ಸಮ್ಮತಿಸಬೇಕು ಎಂದು ಪ್ರಾರ್ಥಿಸಲು ; ಅದಂ ಕೇಳಿ ನಂದಭಾರ್ಯೆಯು—

ಎಲೈ ಮರುಳುಗಳಿರಾ, ಸಹಗಮನವೆಂಬುವುದು ಧರ್ಮಪತ್ನಿಯರಿಗೇ ಯೋಗ್ಯವು. ಅನ್ಯರಿಗೆ ದುರ್ಮರಣದೋಷಕ್ಕೆ ಕಾರಣವಲ್ಲದೆ ಸದ್ಗತಿದಾಯಕ ವಲ್ಲವು. ಆದುದರಿಂದ ಗುಣವಂತನಾದ ಚಂದ್ರಗುಪ್ತಂ ತಾಯಂದಿರಂ ಕಂಡಂತೆ ನಿಮ್ಮೆಲ್ಲರನ್ನೂ ಸಲಹುತ್ತಿರುವನು. ವಿಹಿತದಿಂದಿರುತ್ತ ಸದ್ಗತಿಯಂ ಕಾಣುವವರಾಗಿರಿ ಎಂದು ನೇಮಿಸಿ ನಂದಸತಿಯರು ಜ್ಞಾನಿಗಳಾದ ಭೂಸುರಸ್ತೋಮಕ್ಕೆ ಮಹಾದಾನ ಪ್ರತಿನಿಧಿಯಾದ ದ್ರವ್ಯಂಗಳಂ ಭಗವದರ್ಪಣವೆಂದು ಕೊಟ್ಟು ಸಾಲಂಕಾರ ಗೋಲಕ್ಷಗಳಂ ದಾನಮಂ ಮಾಡಿ ಮತ್ತು ಬ್ರಹ್ಮವಿದ್ವಿಪ್ರದಂಪತಿಗಳಿಗಲಂಕರಿಸಿ ಅವರಿಗೆ ಬಾಗಿನಗಳಂ ಕೊಟ್ಟು ವೃದ್ಧರಾಜರ ಅನುಮತಿಯಿಂದ ಪುರೋಹಿತರು ಮಾಡುವ ತತ್ಕಾಲೋಚಿತಕರ್ಮವಾದುದಂ ನೋಡಿ ದ್ವಿಜರನುಮತಿಯಂ ಕೈಕೊಂಡು ಗಾಂಗಾದೇವಿಯಂ ಪೂಜಿಸಿ ಪ್ರಾರ್ಥಿಸಿ ದೇವತೆಗಳಿಗಭಿವಂದಿಸಿ ಪತಿಗಳ ಶಿರಸ್ಸುಗಳಂ ತೆಗೆದುಕೊಂಡು ಅಗಿಲು ಚಂದನ ಮೊದಲಾದ ಸುಗಂಧ ದ್ರವ್ಯಗಳಿಂ ರಚಿಸಿರುವ ಚಿತೆಗಳನ್ನಾರೋಹಣಂಗೆಯ್ದು ಪತಿಮೂರ್ಧಗಳನ್ನಾಲಿಂಗಿಸಿದವರಾಗಿ ಶಿವ ಶಿವಾ! ಮುಕುಂದನೇ! ಎಂದು ಅಚಲಚಿತ್ತದಿಂದ ಹರಿಹರ ಸ್ಮರಣೆಯಂ ಮಾಡುತ್ತಿರಲು; ಆಗ ಹವ್ಯವಾಹನನು ಪ್ರಜ್ವಲಿಸುತ್ತ ಆವರಿಸಿ ಬರುತ್ತಿರಲು; ಆ ಸಮಯದಲ್ಲಿ ಅಗ್ನಿಗೆ ಕೊಡುವ ಆಹುತಿಯಂತೆಯೂ ದಾವಾಗ್ನಿಗೆ ಬಾಡುವ ಪುಷ್ಪಲತೆಗಳಂತೆಯೂ ತರಣಿಕಿರಣಗಳಲ್ಲಸ್ತಮಿಸುವ ತಾರೆಗಳಂತೆಯೂ ನಂದಪತ್ನಿಯರುಗಳೆಲ್ಲರೂ ಆಶುಶುಕ್ಷಣಿಗೆ ತಮ್ಮ ತನುಗಳನ್ನೊಪ್ಪಿಸಿ ಜಯಜಯವೆಂದು ಜನರು ಕೊಂಡಾಡುತ್ತಿರಲು; ಸಹಗಮನದಿಂದುಂಟಾದ ಸದ್ಗತಿಗೆ ಸಂದರು. ಅನೇಕಲಕ್ಷ ಭೂರಿದಕ್ಷಿಣೆಗಳಂ ಕೊಟ್ಟು ಬಾಗುರಾಯಣನೇ ಮುಖರಾದವರೆಲ್ಲರೂ ಗಂಗಾನದಿಯಲ್ಲಿ ಸ್ನಾನಮಂ ಮಾಡಿ ಪುರಕ್ಕೆ ಬರುತ್ತಿದ್ದರು. ಅಂದು ಮೊದಲ್ಗೊಂಡು ವೃದ್ಧರಾಜನ ಅಪ್ಪಣೆಯಿಂದ ಬಾಗುರಾಯಣನು ನಂದರಿಗೆ ಸದ್ಗತಿಯುಂಟಾಗುವುದಕ್ಕಾಗಿ ಲಕ್ಷಬ್ರಾಹ್ಮಣ ಭೋಜನಗಳಂ ಮಾಡಿಸಿ ದರಿದ್ರ ಹತವಾಗುವಂತೆ ವಿಪ್ರರಿಗೆ ಬಹು ದ್ರವ್ಯಂಗಳಂ ಕೊಡುತ್ತ ಪೂರ್ತಕರ್ಮಂಗಳಂ ಬಹುಪ್ರಕಾರವಾಗಿ ಮಾಡುತ್ತಿದ್ದನೆಂಬಲ್ಲಿಗೆ ಮುದ್ರಾಮಂಜೂಷವೆಂಬ ಗ್ರಂಥದಲ್ಲಿ ನಂದಪಂಚತ್ವಕಥನವೆಂಬ ಅಷ್ಟಮಾಶಯವು ಸಮಾಪ್ತಮಾದುದು.

---

# ನವಮಾಶಯು ಪ್ರಾರಂಭವು.

---

## ವಿಷಕನ್ಯಾಗಮನವು.

ಅನಂತರದೊಳ್ ಪುರದಲ್ಲಿರುವ ಅಮಾತ್ಯರಾಕ್ಷಸನು ತನ್ನ ಮನಸ್ಸಿನಲ್ಲಿ— ಈಗ ಪರ್ವತರಾಜನ ಸೇನೆ ಬಂದು ನಗರದ ಕಾವಲುಮಾಡಿಕೊಂಡಿದೆ. ನಂದರಿಗೆ ಆಪ್ತನಾಗಿ ತನಗೆ ವೈರಿಯಾಗಿ ಇದ್ದುದರಿಂದ ನಾನು ಚಂದ್ರಗುಪ್ತನಿಗೆ ಸಿಲುಕಿದರೆ ಏನು ಮಾಡುವನೋ! ಈ ಸಮಯದಲ್ಲಿ ಮಿತ್ರರೇ ಶತ್ರುಗಳಾದಾರು. ನಂದರಿಗೆ ಮುಗಿದ ಕೈಗಳಂ ಪ್ರಭುಗಳೆಂದು ಮತ್ತೊಬ್ಬರಿಗೆ ಮುಗಿದರೆ ನನ್ನ ಪೌರುಷ ಸಾಹಸ ಸ್ವಾಮಿಭಕ್ತಿಗಳು ವ್ಯರ್ಥವಾಗುವುವು. ಆದುದರಿಂದ ನಂದರಿಗೆ ಶತ್ರುವಾದ ಈ ಚಂದ್ರಗುಪ್ತನಂ ಯಾವ ಉಪಾಯದಿಂದಲಾದರೂ ಸಂಹರಿಸಿ ಲೋಕಾಂತರಸ್ಥರಾಗಿರುವ ನಮ್ಮ ಅರಸುಗಳಿಗೆ ಸಂತೋಷವನ್ನುಂಟುಮಾಡುವೆ ನಲ್ಲದೆ ವೃಥಾ ಜೀವನಮಂ ಮಾಡುವವನಲ್ಲ. ಪ್ರಕೃತದಲ್ಲಿ ಸ್ವಜನಕ್ಕೆ ಅಹಿತ ಬಾಧೆ ತಟ್ಟದಂತೆ ಮಾಡಬೇಕೆಂದು ನಿಶ್ಚಯಿಸಿ—ರಹಸ್ಯದಲ್ಲಿ ತನಗೆ ಪ್ರಿಯಸಖ ನಾದ ಚಂದನದಾಸನೆಂಬ ವರ್ತಕನಂ ಕರೆಯಕಳುಹಿಸಿ—

ಎಲೈ ಆಪ್ತಸಖನೇ, ನಂದವೈರಿಯಾದ ಚಂದ್ರಗುಪ್ತನಂ ಉಪಾಯಾಂತ ರದಿಂದ ಸಂಹರಿಸಿ ವೃದ್ಧನಾದ ಸರ್ವಾರ್ಥಸಿದ್ಧಿರಾಜನಿಗೆ ಸ್ವೀಕೃತ ಪುತ್ರನನ್ನಾ ದರೂ ಮಾಡಿ ಅವನಿಗೆ ಈ ರಾಜ್ಯಾಧಿಪತ್ಯಮಂ ಕೊಡಿಸಿ ನಂದಕುಲವು ಉತ್ಪನ್ನ ವಾಗದಂತೆ ಮಾಡುವುದಕ್ಕಾಗಿ ನಾನು ಈ ಪಟ್ಟಣಮಂ ಬಿಟ್ಟು ಹೋಗುವೆನು. ನೀನು ಅನ್ಯರಿಗೆ ತಿಳಿಯದಂತೆ ನನ್ನ ಪತ್ನೀಪುತ್ರರಂ ರಹಸ್ಯದಲ್ಲಿಟ್ಟು ಸಲಹು ವವನಾಗು. ಈ ವಸ್ತುಗಳು ನಿನ್ನ ವಶದಲ್ಲಿ ಇರಲಿ ಎಂದು ಹೇಳಿ ಹೆಂಗಸರನ್ನೂ ಮಕ್ಕಳನ್ನೂ ಚಂದನದಾಸನ ವಶಮಂ ಮಾಡಿ ಕಳುಹಿಸಿ ತಾನು ರಿಪುನಿಗ್ರಹಕ್ಕೆ ಮಾಡುವ ಕಪಟೋಪಾಯಗಳಂ ನೆನೆದು ನಿಶ್ಚಯಿಸಿ ಯಾವುದಾದರೊಂದು ಸಮಯದಲ್ಲಿ ಸಾಮಾದ್ಯುಪಾಯಚತುಷ್ಟಯದಿಂದಲೂ ಜಯಿಸುವುದಕ್ಕೆ ಶಕ್ಯವ ಲ್ಲದೆ ವೈರಮಂ ಸಾಧಿಸಬೇಕೆಂದು ಬರುವ ಆರಾತಿಯ ನಿಗ್ರಹಾರ್ಥವಾಗಿ ಮೊದಲೇ ಸಮುದ್ರದಲ್ಲಿ ಉದ್ಭವಿಸಿದ ವಿಷಮತ್ಸ್ಯಾಹಾರದಿಂದಲೇ ಜೀವಿಸುತ್ತಿ ರುವ ತಾಯಿತಂದೆಗಳ ಗರ್ಭದಲ್ಲಿ ಜನಿಸಿದ ಒಂದು ಹೆಣ್ಣು ಶಿಶುವಿಗೆ ಸಂಸ್ಕಾರ ದಿಂದ ಪಾರದರಸಮಂ ಸ್ಪರ್ಶವೇದಿಯಂ ಮಾಡಿ ಸಮಯದಲ್ಲಿ ಕಾರ್ಯಕ್ಕೆ ಉಪ

ಯೋಗಿಸಿಕೊಳ್ಳುವಂತೆ ಬಾಲ್ಯಾದಾರಭ್ಯ ಆ ಕೂಸಿಗೆ ವಯೋನುಗುಣವಾಗಿ ವಿಷಸೇವನೆಯಂ ಮಾಡಿಸಿ ಹನ್ನೆರಡು ವರುಷಗಳ ವಯಸ್ಸಾದ ಮೇಲೆ ಆ ಬಾಲೆಯ ಅಂಗಸ್ಪರ್ಶವಾದರೆ ವಿಷದೋಷದಿಂದ ಪ್ರಾಣಿಗಳು ಆಗಲೇ ಹತವಾಗುವುದಂ ತಿಳಿದು ಸೌಂದರ್ಯಶಾಲಿನಿಯಾದ ಆ ಕನ್ಯಕೆಗೆ ಸಂಗೀತಾದಿಕುಶಲವಿದ್ಯೆಗಳಂ ಕಲಿಸಿ ರಸಿಕ ಜನಂ ಮೆಚ್ಚುವಂತೆ ಆ ಸ್ತ್ರೀಯಂ ಪ್ರೌಢೆಯಂ ಮಾಡಿ ಸಮಯಬಂದಾಗ ಉಪ ಯೋಗಕ್ಕೆ ಬರಲಿ ಎಂದು ಹೇಳಿ ರಕ್ಷಿಸಿಕೊಂಡಿದ್ದ ಆ ಯುವತಿಯಂ ಕರೆಯಕಳು ಹಿಸಿ ಅವಳನ್ನು ದಿವ್ಯವಸ್ತ್ರಭೂಷಣಗಳಿಂದಲಂಕರಿಸಿ ಅವಳಿಗೆ ಹೇಳುವ ಬುದ್ಧಿವ ಚನಮಂ ತಿಳಿಸಿ ತನಗೆ ಆಪ್ತನಂತೆ ಕಾದುಕೊಂಡಿದ್ದ ಕ್ಷಪಣಕನಂ ಕರೆದು—

ಎಲೈ ಜೀವಸಿದ್ಧಿಯೇ, ಈ ಕನ್ಯೆಯು ಸೆರೆಸಿಕ್ಕಿದ ವಲ್ಲಭರಾಜನ ಪ್ರಿಯ ಪುತ್ರಿಯು. ಇವಳು ಮಹಾಪ್ರೌಢೆಯು. ಜ್ಯೇಷ್ಠನಂದನಿಗೆ ಪ್ರಿಯಪತ್ನಿಯಂ ಮಾಡಬೇಕೆಂದು ಬಾಲ್ಯದಿಂದ ಹದಿನೈದು ವರುಷಗಳ ಪರ್ಯಂತರವೂ ಸಾಕಿ ಯೌವನವತಿಯಂ ಮಾಡಿದೆನು. ಅವರು ಕಾಲವಾದುದರಿಂದ ರಾಜಯೋಗ್ಯಳಾದ ಈ ತರುಣಿಯನ್ನು ನಾನು ಕಳುಹಿಸಿದೆನೆಂದು ಚಂದ್ರಗುಪ್ತನಿಗೆ ಒಪ್ಪಿಸಿದರೆ ಎಲ್ಲಮಂ ಬಿಟ್ಟು ರಾಕ್ಷಸನು ಸ್ತ್ರೀಮೂಲಕದಿಂದ ಚಂದ್ರಗುಪ್ತನ ಪ್ರಸಾ ದಮಂ ಸಂಪಾದಿಸಿಕೊಂಡನೆಂಬ ಅಪಯಶಸ್ಸು ಬರುವುದರಿಂದ ನನ್ನಿಂ ಪ್ರೋಷಿತ ಳಾದರೂ ಈ ಸುದತಿಯು—ನನ್ನ ಶಿಷ್ಯಳೆಂದು ಹೇಳಿ ನೀನಾಗಿ ಒಪ್ಪಿಸುವಂತೆ ಒಪ್ಪಿಸಿ ಶಯನಗೃಹಕ್ಕೆ ಬರಮಾಡಿಕೊಳ್ಳುವಂತೆ ಚಂದ್ರಗುಪ್ತನಂ ಒಡಂಬಡಿಸಿ ದರೆ ನನ್ನ ಮನೋರಥವು ಸಫಲವಾಗುವುದು. ನಾನು ಸನ್ಯಾಸಿಯು. ನನಗೆ ಈ ಸ್ತ್ರೀ ಮಾಧ್ಯಸ್ಥವು ನಿಂದಿತವೆಂದು ಹೇಳಬೇಡ. ಮತ್ತೊಬ್ಬರ ಸಂಗಡ ಕಳುಹಿಸಿದರೆ ಸೌಂದರ್ಯಕ್ಕೆ ಮೋಹಿಸಿ ಈಕೆಯನ್ನು ತಾವೇ ಅಪಹರಿಸಿಯಾರು. ಅಲ್ಲದೆ ಘಟನೆಮಾಡುವ ಸಾಮರ್ಥ್ಯವು ಇತರರಿಗೆ ಸಾಲದು. ಹೇಗಾದರೂ ಈ ಕುಮಾರಿಯ ಅಂಗಸ್ಪರ್ಶವು ಚಂದ್ರಗುಪ್ತನಿಗೆ ಸ್ವಲ್ಪವಾದರೂ ಉಂಟಾದರೆ ಸಹಿಸಲಶಕ್ಯವಾದ ನಂದನಾಶನಸಂಜಾತದುಃಖವಮಂ ಮರೆಯಬಹುದು. ನೀನು ಅವರೆಗೂ ಇವಳಿಗೆ ಅನ್ನೋದಕಂಗಳಂ ಕೊಡುತ್ತ ಸಮಯಮಂ ನಿರೀಕ್ಷಿಸಿ ಚಂದ್ರಗುಪ್ತನಿಗೆ ಒಪ್ಪಿಸುವವನಾಗು ಎಂದು ಹೇಳಲು ; ಆ ಮಾತಿಗೆ ಕ್ಷಪಣಕ ನಿಂತೆಂದನು—

ಅಯ್ಯಾ ಅಮಾತ್ಯರೇ, ಇಂಥ ಸಮಯದಲ್ಲಿ ನಾನು ನಿಮ್ಮ ಮಾತಂ ಮೀರು ವವನಲ್ಲ. ನನ್ನ ಬುದ್ಧಿಬಲವಿದ್ದಮಟ್ಟಿಗೆ ಚಂದ್ರಗುಪ್ತನಂ ಒಡಂಬಡಿಸಿ ಈ

ಕನ್ಯೆಯಂ ಆತನ ಪ್ರೀತಿಗೆ ಪಾತ್ರಳಂ ಮಾಡುವೆನು. ಇದರಲ್ಲಿ ಸಂಶಯವಿಲ್ಲ. ಏನಾದರೂ ಒಂದು ವೇಳೆ ಇವಳು ರಾಕ್ಷಸನಿಂದ ಸಂರಕ್ಷಿತಳಾದ ಕಾರಣ ಪರಿಗ್ರಹಕ್ಕೆ ಯೋಗ್ಯಳಲ್ಲವೆಂದು ಚಾಣಕ್ಯನ ವಚನಗೌರವದಿಂ ಚಂದ್ರಗುಪ್ತನು ಸಮ್ಮತಿಸದೆ ಉಪೇಕ್ಷಿಸಿದರೆ ನಿನ್ನ ಸಂಕಲ್ಪವು ನಿಷ್ಫಲವಾಗುವುದಷ್ಟೆ? ಆಗಲಾದರೂ ಚಂದ್ರಗುಪ್ತನಿಗೆ ಶರಣಾಗತನಾಗುವೆಯೋ? ಇನ್ನೂ ಪ್ರಯತ್ನಶೇಷಮುಂಟೋ? ಎನಲು ;

ಕ್ಷಪಣಕನೇ, ನಿನ್ನೊಡನೆ ಮರೆಮಾಡುವುದುಂಟೇ? ಹೀಗೆ ನಿನ್ನ ಮುಖದಿಂದ ಕಲ್ಪಿತವಾದ ಸಾಮದಾನಗಳಿಗೆ ವಶನಾಗದಿದ್ದರೆ ಚಂದ್ರಗುಪ್ತ ಚಾಣಕ್ಯರಿಗೆ ಭೇದವಂ ಕಲ್ಪಿಸುವುದಕ್ಕೆ ಚಾಣಕ್ಯನು ಜಾಗರೂಕನಾದುದರಿಂದಲೂ ವಿರಕ್ತನಾದುದರಿಂದಲೂ ಅವರೀರ್ವರಿಗೆ ಭೇದ ಸಂಘಟಿಸದಿದ್ದರೂ ನನಗೆ ಪೂರ್ವಮಿತ್ರನಾದ ಪರ್ವತರಾಜನಲ್ಲಿಗೆ ಹೋಗಿ ಸೇರಿದರೆ ಪೂರ್ವೋಪಕಾರಸ್ಮರಣೆಯಿಂದ ತನಗೆ ಬಂದ ಚಂದ್ರಗುಪ್ತನ ರಾಜ್ಯಕ್ಕೆ ನನ್ನನ್ನೇ ಅಧಿಪತಿಯಂ ಮಾಡಿಯಾನು. ನಂದಕೋಶರಹಸ್ಯಮಂ ನಾನು ತಿಳಿದಿರುವವನಾದುದರಿಂದ ಒಂದು ಕಡೆಯಲ್ಲಿರುವ ಹೊರಗಣ ಭಂಡಾರಮಂ ವೆಚ್ಚಮಾಡಿದರೆ ಪರ್ವತರಾಜನಂಥ ಅರಸುಗಳು ಎಂಟು ಜನರಾದರೂ ವಶರಾದಾರು. ಹೀಗೆ ನಾವೀರ್ವರೂ ಮಿಳಿತರಾಗಲು ಚಂದ್ರಗುಪ್ತನಿಗೆ ಆಗ ರಾಜ್ಯಲಾಭವೆಂದರೇನು? ಈ ಯರ್ಥವು ನಿನಗೆ ತಿಳಿದಿರಲಿ. ನಿನ್ನ ಮಾಧ್ಯಸ್ಥ್ಯ ಸಫಲವಾಗದಿದ್ದರೆ ಆ ಬಳಿಕ ಈ ಪ್ರಯತ್ನವು ಎಂದು ಹೇಳಿ ಆ ಕನ್ಯೆಯಂ ಜೀವಸಿದ್ಧಿ ಎಂಬ ಕ್ಷಪಣಕನ ವಶಮಂ ಮಾಡಿ ಕಳುಹಿಸಲು ; ಆತನು ರಾಕ್ಷಸನ ಮಾತಿಗೆ ಒಡಂಬಟ್ಟು ಅವಳಂ ಕರತರುತ್ತ—

ಹೇಗಾದರೂ ಈ ಕುಮಾರಿಯ ಅಂಗಸ್ಪರ್ಶವು ಚಂದ್ರಗುಪ್ತನಿಗೆ ಸ್ವಲ್ಪಮಾತ್ರಮುಂಟಾದರೆ ತನ್ನ ಮನೋರಥವು ಸಫಲವಾಗುವುದೆಂದು ನನಗೆ ಮರೆಮಾಜಿ ಹೇಳಿ ರಾಕ್ಷಸನು ಇವಳನ್ನು ಕಳುಹಿಸಿದನು. ಇವಳಿಂದ ಚಂದ್ರಗುಪ್ತನಿಗೆ—ಹಿತವೋ! ಅಹಿತವೋ! ಅದನ್ನು ಈಗ ತಿಳಿಯಕೂಡದು. ಇವಳ ಗುಣದೋಷಗಳಂ ಹೇಗೆ ತಿಳಿಯಬೇಕು? ಎಂದು ಯೋಚಿಸುತ್ತ ಅವಳಂ ತಾನಿದ್ದೆಡೆಗೆ ಕರತಂದು ಕುಳ್ಳಿರಿಸಿ ಸ್ವಲ್ಪ ಹೊತ್ತಿನ ಮೇಲೆ ಭುಂಜಿಸೆಂದು ಅನ್ನವನ್ನಿಕ್ಕಿಸಲು ; ಅವಳು ಓಗರವನ್ನುಂಡು ಶೇಷಮಂ ಹೊರಗೆ ಪರಿಹರಿಸಿ ಕೈತೊಳೆದು ಕುಳ್ಳಿರಲು ; ಆ ಬಿಸುಟ ಎಂಜಲನ್ನಮಂ ಮಾರ್ಜಾಲಂ ಭುಂಜಿಸಿ ಆಗಲೇ ಮೃತವಾಗಲು ; ಅದಂ ಕಂಡು ಜೀವಸಿದ್ಧಿಯು—ಈ ಸ್ತ್ರೀಯು ವಿಷಕನ್ಯಕೆಯು! ಚಂದ್ರ

ಗುಪ್ತನ ನಾಶಾರ್ಥವಾಗಿ ರಾಕ್ಷಸನು ನನಗೆ ಕಪಟಮಂ ಹೇಳಿ ಇವಳಂ ನನ್ನ ಸಂಗಡ ಕಳುಹಿಸಿದನು. ಈ ಅಭಿಪ್ರಾಯಗಳೆಲ್ಲಮಂ ನಮ್ಮ ಚಾಣಕ್ಯರಿಗೆ ಅರ್ಥಾಂತರದಿಂದ ಮೊದಲೇ ಸೂಚಿಸುವೆನೆಂದು ನಿಶ್ಚಯಿಸಿ ಸಮಯಮಂ ನೋಡುತ್ತಿದ್ದನು. ಆ ಬಳಿಕ ಪುನಃ ರಾಕ್ಷಸನು—ತಾನು ಕಳುಹಿಸಿದ ಕನ್ಯೆಗೂ ಚಂದ್ರಗುಪ್ತನಿಗೂ ಘಟನೆಯಾಗದಿದ್ದರೆ ಪಟ್ಟಾಭಿಷಿಕ್ತನಾಗಿ ರಾಜದ್ವಾರದಲ್ಲಿ ಮೆರವಣಿಗೆಯಿಂ ಬರುವಾಗಲಾದರೂ ಸಂಹೃತನಾಗಲೆಂದು ಯೋಚಿಸಿ ನಂದರ ಗಂಧಮಾದನವೆಂಬ ಪಟ್ಟದಾನೆಯ ಮಾವುತನಂ ಕರೆಯ ಕಳುಹಿಸಿ—

ಎಲೈ ಬರ್ಬರಕನೇ, ನಿಮ್ಮ ಅರಸುಗಳಿಗೆ ವೈರಿಯಾದ ಚಂದ್ರಗುಪ್ತನು ಪೂರ್ವಮರ್ಯಾದಾನುಗುಣವಾಗಿ ರಾಜ್ಯಾಭಿಷಿಕ್ತನಾದ ಅರಸಿನಂತೆ ಪಟ್ಟದಾನೆಯ ಮೇಲೆ ಕುಳಿತು ರಾಜದ್ವಾರದೊಳ್ ಬರುವ ಸಮಯದಲ್ಲಿ ನಿನಗೆ ಅವಕಾಶ ದೊರಕುವುದು. ಇದೋ! ಸ್ವರ್ಣದಂಡದಲ್ಲಿ ಹುದುಗಿಸಿರುವ ಗುಪ್ತಿ ಎಂಬ ಈ ಶಸ್ತ್ರದಿಂದ ಹಿಂದುಗಡೆಯಲ್ಲಿ ಕುಳಿತಿರುವ ಚಂದ್ರಗುಪ್ತನಂ ಸಂಹರಿಸಿ ಸಂದಣಿಯಲ್ಲಿ ನೀನು ತಪ್ಪಿಸಿಕೊಳ್ಳುವವನಾಗು ಎಂದು ಹೇಳಿ ಅವನಿಗೆ ಧನಗಳಂ ಕೊಟ್ಟು ಕಳುಹಿಸಿದ ಬಳಿಕ ದಾರುವರ್ಮನೆಂಬ ಶಿಲ್ಪಿಯಂ ಕರೆಯಿಸಿ—

ಎಲೈ ಸ್ವಾಮಿಭೃತ್ಯನೇ, ಚಂದ್ರಗುಪ್ತನು ಪಟ್ಟಾಭಿಷಿಕ್ತನಾದ ಮೇಲೆ ಗಜಾರೂಢನಾಗಿ ರಾಜದ್ವಾರದಲ್ಲಿ ಬರುವುದಕ್ಕಿಂತಲೂ ಮೊದಲೇ ಕಪಟಶಿಲ್ಪವಂ ರಚಿಸಿ ಆ ಸಮಯಮಂ ನಿರೀಕ್ಷಿಸುತ್ತಿದ್ದು ಅವನಂ ಈ ರೀತಿಯಲ್ಲಿ ಸಂಹರಿಸುವವನಾಗು. ನಿನಗೆ ಬೇಕಾದ ದ್ರವ್ಯಮಂ ತೆಗೆದುಕೋ! ಎಂದು ಕೊಟ್ಟು ಅವನಂ ಕಳುಹಿಸಿ ಭವನಪಾಲಕನಂ ಕರೆದು—

ಎಲೈ ಆಪ್ತನಾದ ಭವನಾಧಿಕಾರಿಯೇ, ನಾಲ್ಕೆಂಟು ದಿವಸಗಳಲ್ಲಿ ಚಂದ್ರಗುಪ್ತನು ಅರಸನಾಗಿ ಪುರಕ್ಕೆ ಬರುವುದರಿಂದ ಆತನಿಗೆ ಯೋಗ್ಯವಾದ ಬಿಡಾರವಾಗಬೇಕಾಗುತ್ತಿದೆಯಷ್ಟೆ? ತಮ್ಮ ತಂದೆಯ ಗೇಹವು ಉಗ್ರಾಣವಾಗಿ ಬಹು ಕಶ್ಮಲವಾಗಿರುವುದರಿಂದ ಅದು ಆತನ ಮನಸ್ಸಿಗೆ ರುಚಿಸದು. ಪತಿವಿಯೋಗದಿಂದ ದುಃಖಿತರಾಗಿ ಗೋಳಿಡುತ್ತಿರುವ ಭೋಗಿನೀಜನಪರಿವೃತವಾದ ನಂದರವಾಸಗೃಹಮಂ ಆತನು ಇಷ್ಟಣಿಕಿ ನೋಡನು. ವೃದ್ಧರಾಜದಂಪತಿಗಳು ಪುತ್ರಶೋಕದಿಂದ ಕ್ಷುಬ್ಧರಾಗಿರುವ ಕಾರಣ ಆ ಮಂದಿರವೂ ಆತನ ಮನಸ್ಸಿಗೆ ಸಮ್ಮತಿಸದು. ತಾನು ಪ್ರಭುವಾದುದರಿಂದ ಪ್ರಾರ್ಥಿಸಿದರೂ ಅನ್ಯರ ನಿವಾಸಮಂ ನಿರೀಕ್ಷಿಸುವವನಲ್ಲ. ವಾಣೀವಿಲಾಸವೆಂಬ ತೊಟ್ಟಿಯು ವಿದ್ವಾಂಸರ ಗೋಷ್ಠಿಗೆಂಯೋ

ಗ್ಯವು. ಅದರಿಂ ಓಲಗದ ಹಜಾರದ ಹಿಂದುಗಡೆಯಲ್ಲಿ ನಂದರ ವಿನೋದವಿಹಾ ರಕ್ಕೆ ಮಾಡಿರುವ ಕುಮಾರ ಭವನವನ್ನಲಂಕರಿಸಿ ಅದರ ಅರನೇ ತೊಟ್ಟಿಯ ಶಯನಗೃಹಮಂ ಶೃಂಗರಿಸಿ ಅಲ್ಲಿ ಈ ರೀತಿ ಕಪಟದಿಂದ ಚಂದ್ರಗುಪ್ತನಂ ಸಂಹರಿಸುವಂತೆ ಜನಗಳಿಗೆ ನೇಮಿಸಿ ಆತನು ಶಯನಗೃಹಾಭಿಮುಖನಾದುದಂ ನೋಡಿ ರಾಜಭವನದ ಸುರಂಗಮಾರ್ಗದಿಂದ ತಪ್ಪಿಸಿಕೊಂಡು ಹೋಗುವವ ನಾಗು. ನಾನು ಅದೇ ಮಾರ್ಗದಿಂದ ಈ ಪುರಮಂ ಬಿಟ್ಟು ಹೋಗುವೆನು. ಬಳಿ ಬೊಕ್ಕಸದ ಗೊಲ್ಲನಿಗೆ ಈ ಗುರುತಂ ತೋರಿಸಿ ಬೇಕಾದ ಧನಮಂ ತೆಗೆದುಕೊ ಳ್ಳೆಂದು ಅವನಿಗೆ ನೇಮಿಸಿ ಆ ಮಲಗುವ ಮನೆಯಲ್ಲಿ ಮಾಡತಕ್ಕ ಕಪಟೋಪಾ ಯಂಗಳೆಲ್ಲಮಂ ಹೇಳಿ ಭವನಪಾಲಕನಂ ಕಳುಹಿಸಿ ರಾಜವೈದ್ಯನಂ ಬರಿಸಿ ಕೊಂಡು ಅವನಿಗೆ ಹೇಳತಕ್ಕ ವಿವರವೆಲ್ಲಮಂ ಹೇಳಿ ಆತನ ಇಚ್ಛಾನುಸಾರ ದ್ರವ್ಯಮಂ ಕೊಟ್ಟು ಸಾಗಿಸಿ ಮನೆವಾರ್ತೆಯಂ ವಿಚಾರಿಸುತ್ತ ಇರುವ ತನ್ನ ರಾಯಸದವನಾದ ಶಕಟದಾಸನಿಗೆ ಹೇಳುವ ಮಾತುಗಳಂ ಹೇಳಿ ಗೂಢಚಾರರಂ ಕರೆದು ಅವರಿಂದ ನಡಸಲ್ಪಡತಕ್ಕ ಕಾರ್ಯಮಂ ನೇಮಿಸಿ ತಾಸಿರುವ ಸ್ಥಳಮಂ ತಿಳುಹಿಸಿ ತನ್ನ ಪರಿಚಾರಕರಂ ಕೂಗಿ ಇಂಥಿಂಥ ವಸ್ತುಗಳಂ ತೆಗೆದುಕೊಂಡು ಇಂಥ ಸ್ಥಳದಲ್ಲಿ ಬಂದು ಇರಬೇಕು ಎಂದು ಸೂಚಿಸಿ ಅವರಂ ಕಳುಹಿಸಿ ಬಿಟ್ಟು ರಾಕ್ಷಸನು ರಾಜಭವನದ ಸುರಂಗಮಾರ್ಗದಿಂದ ಪುರಮಂ ತ್ಯಜಿಸಿ ನಡೆ ಯುತ್ತಿದ್ದನು.

ಇತ್ತಲಾ ಚಾಣಕ್ಯನು ಸಭೆಯಲ್ಲಿ ಕುಳಿತು ಚಂದ್ರಗುಪ್ತನಂ ಕುರಿತು— ಅಯ್ಯಾ ಅರಸನೇ, ಪಾಟಲೀಪುರದ ಅಧಿಕಾರಿಗಳೆಲ್ಲರೂ ನಿನ್ನಂ ಕಂಡು ಸಮ್ಮಾ ನಿತರಾಗಿ ತಮ್ಮ ತಮ್ಮ ಅಧಿಕಾರಗಳಲ್ಲಿ ನಿಯುಕ್ತರಾಗಿ ಹೋದರು. ಚದರಿರುವ ಸೇನೆಯಂ ಜೊತೆಗೊಳಿಸುವ ಕಾರ್ಯದಿಂದ ಮತ್ತೆ ಕೆಲಂಬರು ತಮ್ಮವರ ಕರಗ ಳಲ್ಲಿ ಕೈಗಾಣಿಕೆಯಂ ಕೊಟ್ಟು—ನೀವು ಪ್ರಭುಗಳಂ ಕಂಡುಬನ್ನಿರಿ. ಹಿಂದಣಿಂದ ನಾವು ಬರುತ್ತಿದ್ದೇವೆಂದು ಹೇಳಿ ಕಳುಹಿಸಿದ ಬಳಿಕ ಅವರೂ ಬಂದಂತೇ ಆಯಿತು. ಅಥವಾ ಕಾರ್ಯಗೌರವದಿಂದ ನಿಂತಿದ್ದಾರು ಅದಂತಿರಲಿ. ಇವರೆಲ್ಲ ರಿಗೂ ಮುಖ್ಯನಾಗಿ ರಾಜ್ಯತಂತ್ರಮಂ ನಿರ್ವಹಿಸುತ್ತಿರುವ ಅಮಾತ್ಯರಾಕ್ಷಸ ನೊಬ್ಬನು ಬಂದು ಕಾಣಲಿಲ್ಲ. ವ್ಯಾಜಾಂತರವನ್ನಾದರೂ ಹೇಳಿ ತನ್ನ ಕಡೆಯ ವರನ್ನು ಕಳುಹಿಸಲೂ ಇಲ್ಲ. ಅದಕ್ಕೆ ನಿಮಿತ್ತವೇನೋ ಗೊತ್ತಾಗಲಿಲ್ಲವೆಂದು ಉಸುರಿ ಆತನು ಎಲ್ಲಿದ್ದಾನೆ? ಏನು ಮಾಡುತ್ತಿದ್ದಾನೆ? ಎಂಬ ಸಂಗತಿ

ಯನ್ನು ದೂತರು ತಿಳಿದು ಬಂದು ಹೇಳಲಿ ಎನಲು ಬುದ್ಧೀ ಎಂದು ದೂತರು ಹೋಗಿ ರಾಕ್ಷಸನ ಮನೆಯಲ್ಲಿ ಹುಡುಕಿ ಅಲ್ಲಿ ರಾಕ್ಷಸನನ್ನೂ ಆತನ ಹೆಂಗಸರು ಮಕ್ಕಳನ್ನೂ ಕಾಣದೆ ಆತನ ಮನೆವಾರ್ತೆಯ ರಾಯಸಗವನಾದ ಶಕಟದಾಸನಂ ಕೇಳಲು ; ಆ ಮಾತಿಗೆ ಅವನು—

ಅಯ್ಯಾ ದೂತರುಗಳಿರಾ, ಅಮಾತ್ಯರಾಕ್ಷಸರನ್ನು ಯುದ್ಧಕ್ಕೆ ಹೋದ ಸಮಯದಲ್ಲಿ ಕಂಡುದಲ್ಲದೆ ಇಂದಿನವರೆಗೂ ಅವರ ದರ್ಶನವೇ ಘಟಿಸಲಿಲ್ಲ. ನನ್ನ ಗೃಹಕೃತ್ಯಗೌರವದಿಂದ ಈ ದಿವಸವೇ ಅಮಾತ್ಯರ ಗೃಹಕ್ಕೆ ಬಂದೆನು. ಅವರ ಪತ್ನೀಪುತ್ರರನ್ನೂ ಕಾಣೆನು. ಅದೇ ಸಂಗತಿಯಂ ಕುರಿತು ನಾನೂ ಯೋಚಿಸುತ್ತಿದ್ದೇನೆ ಎನಲು ; ಅದಂ ಕೇಳಿ ದೂತರು ಪುರದ ಬಾಗಿಲವರಂ ಬೆಸಗೊಳ್ಳಲು ; ಅವರು ಸೇನೆ ಗಾಬರಿಯಾದ ವೇಳೆಯಲ್ಲಿ ಬಾಗಿಲಿನಿಂದ ಅಮಾತ್ಯರು ಪಟ್ಟಣದ ಒಳಯಿಂಕೆ ಹೋದಮೇಲೆ ಪುನಃ ಇಲ್ಲಿಗೆ ಬಂದುದಿಲ್ಲ ಎಂದು ಹೇಳಲು ; ಅದಂ ಕೇಳಿ ದೂತರು ಅಲ್ಲಲ್ಲಿ ಹುಡುಕಿ ರಾಕ್ಷಸನ ಗೊತ್ತು ತಿಳಿಯದೆ ಬಂದು ಚಾಣಕ್ಯರಿಗೆ—

ಬುದ್ಧೀ, ಅಪ್ಪಣೆ ಮೇರೆಗೆ ಅಮಾತ್ಯರಾಕ್ಷಸರನ್ನು ಪುರದಲ್ಲಿಯೂ ಅವರ ಗೃಹದಲ್ಲಿಯೂ ಹುಡುಕಿ ನೋಡಿದೆವು. ಅವರನ್ನು ಎಲ್ಲಿಯೂ ಕಾಣೆವು. ಅವರ ಗೃಹದಲ್ಲವರ ಹೆಂಗಸರು ಮಕ್ಕಳು ಸಹ ಕಾಣುವುದಿಲ್ಲ. ನಗರದ್ವಾರದವರಂ ಕೇಳಿದಲ್ಲಿ ಸಮರವಾದ ಬಳಿಕ ಪುಟಭೇದನಪ್ರವೇಶಮಂ ಮಾಡಿದಮೇಲೆ ಪುನಃ ಬಾಗಿಲಲ್ಲಿ ಬಂದುದೇ ಇಲ್ಲವೆಂದು ಅವರು ಹೇಳುತ್ತಾರೆ. ಅವರ ಮನೆಯ ರಾಯಸದ ಶಕಟದಾಸನಂ ಕೇಳಿದರೆ ಈ ದಿವಸವೇ ಅವರ ಗೃಹಕ್ಕೆ ಬಂದೆನು. ಯುದ್ಧಕ್ಕೆ ಹೋದಬಳಿಕ ಅಮಾತ್ಯರ ದರ್ಶನವೇ ತನಗಿಲ್ಲವೆಂದು ಹೇಳುತ್ತಾನೆ ಎನಲು ; ಅದಂ ಕೇಳಿ ಚಾಣಕ್ಯನು—

ಎಲೈ ದೂತರುಗಳಿರಾ, ಅಮಾತ್ಯರಾಕ್ಷಸನು ತಾನು ನಂದರಿಗೆ ಆಪ್ತನಾದುದರಿಂದ ಚಂದ್ರಗುಪ್ತನ ಮುಖಾಂತರ ತನಗೆ ಭಯ ಬಂದೀತೆಂದು ಈ ಪುರದೊಳಗೆ ತನ್ನಾಪ್ತರಲ್ಲಿ ಹೆಂಗಸರು ಮಕ್ಕಳನ್ನಿರಿಸಿ ತಾನು ಕಳ್ಳದಾರಿಯಿಂದ ಹೊರಗೆ ಹೋಗಿರಬೇಕು. ಚಂದ್ರಗುಪ್ತನಿಗೆ ನಂದರ ಮೇಲೆ ಮತ್ಸರವಿತ್ತಲ್ಲದೆ ರಾಕ್ಷಸನ ಮೇಲೆ ದ್ವೇಷಕ್ಕೆ ಕಾರಣಮುಂಟೇ? ಆ ದುಷ್ಟರಾದವರು ಮೌರ್ಯವಧೆಯಂ ಮಾಡಿದುದು ಪ್ರಾಜ್ಞಶಿರೋಮಣಿಯಾದ ಅಮಾತ್ಯರಾಕ್ಷಸನಿಗೆ ಸಮ್ಮತವಿಲ್ಲವೆಂದು ಸಕಲಜನರೂ ತಿಳಿದಿದ್ದಾರೆ. ಎಲ್ಲರಂತೆ ತಾನೂ ಬಂದು

ಪೃಥುವಂ ಕಂಡು ಮಾತನಾಡಿಕೊಂಡು ಇಲ್ಲಿಂದ ಸಮ್ಮಾನಿತನಾಗಿ ಪೂರ್ವಕ್ಕಿಂ
ತಲೂ ಅಧಿಕನಾಗಿರಬೇಕಲ್ಲದೆ ಧೀರನಾದ ತಾನು ಹೀಗೆ ಭಯಪಟ್ಟು ಮರೆಯಾ
ಗುವುದುಂಟೇ? ಆತನು ಈ ಆಸ್ಥಾನದಲ್ಲಿರದೆ ಇರುವುದರಿಂದ ಚಂದ್ರನಿಲ್ಲದೆ
ನಕ್ಷತ್ರಗಳಿಂದ ಕೂಡಿರ್ಪ ಆಕಾಶದಂತೆಯೂ ಶೂರನಿಲ್ಲದ ಸೇನೆಯಂತೆಯೂ
ಗಾಂಭೀರ್ಯವಿಲ್ಲದ ಕವಿತ್ವದಂತೆಯೂ ಔದಾರ್ಯವಿಲ್ಲದ ಧನಸಮೃದ್ಧಿಯಂ
ತೆಯೂ ಸ್ವತಃ ಶೌರ್ಯವಿಲ್ಲದ ಪ್ರಭುತ್ವದಂತೆಯೂ ನೀತಿ ಗುಣವಿಲ್ಲದ ಮಂತ್ರಿ
ಯಂತೆಯೂ ಆಚಾರವಿಲ್ಲದ ಬ್ರಾಹ್ಮಣನಂತೆಯೂ ಗುರುತ್ವವಿಲ್ಲದ ಸಜ್ಜನನಂ
ತೆಯೂ ಜೋಯಿಸನಿಲ್ಲದ ಗ್ರಾಮದಂತೆಯೂ ವಿದ್ವಾಂಸರಿಲ್ಲದ ರಾಜಸಭೆಯಂ
ತೆಯೂ ಶ್ರುತಿಪಾಠವಿಲ್ಲದ ಬ್ರಾಹ್ಮಣನ ಮುಖದಂತೆಯೂ ರಾಜರಿಲ್ಲದ ರಾಷ್ಟ್ರ
ದಂತೆಯೂ ಅನಾಚಾರಿಣಿಯಾದ ಪತಿವ್ರತೆಯಂತೆಯೂ ಹರಿಕಥೆಯಿಲ್ಲದ ಕಾವ್ಯ
ದಂತೆಯೂ ಸತ್ಸಂತಾನವಿಲ್ಲದ ಸಂಸಾರದಂತೆಯೂ ಕಲಶವಿಲ್ಲದ ಉಪ್ಪರಿಗೆಯಂ
ತೆಯೂ ಈ ಚಂದ್ರಗುಪ್ತನ ಸಭೆಯು ಶೋಭಿಸುವುದಿಲ್ಲ. ಹುಡುಕಿ ನಂಬಿ
ಕೆಯಂ ಹೇಳಿ ಆತನಂ ಕರತನ್ನಿರಿ. ಆತನು ಹೇಳಿದಂತೆ ಚಂದ್ರಗುಪ್ತನು ನಡಸಿಕೊ
ಟ್ಟಾನು ಎಂದು ನುಡಿದು ಪುನಃ ಆ ದೂತರಂ ಕಳುಹಿಸಿ ತನ್ನ ಮನಸ್ಸಿನಲ್ಲಿ
ನಂದರಿಗಾಪ್ತನಾದ ರಾಕ್ಷಸನು ಚಂದ್ರಗುಪ್ತನ ಭಯದಿಂದಲೋ! ಅಥವಾ
ದ್ವೇಷಮಂ ಸಾಧಿಸಲೋಸುಗವೋ! ಪುರಮಂ ಬಿಟ್ಟು ಹೋಗಿದ್ದಾನೆ. ಭಯದಿಂ
ದಾದರೆ ಪತ್ನೀಪುತ್ರರಂ ಮರೆಮಾಡನು. ಆದರಿಂ ದ್ವೇಷಮಂ ಸಾಧಿಸುವುದಕ್ಕೇ
ಎಂದು ತೋರುತ್ತಿದೆ. ಹೀಗೆ ವೈರಿಯಾದವನಂ ಒಡಂಬಡಿಸುವುದುಚಿತವಲ್ಲ.
ವಿರೋಧಮಂ ಬಿಟ್ಟು ಭೀತನಾಗಿರುವನೆಂದು ಹೇಳಿಕಳುಹಿಸಿದರೆ ಮೊದಲಿಗಿಂತಲೂ
ಅಧಿಕನನ್ನಾಗಿಯೇ ಮಾಡಬಹುದು. ಜ್ವರವಿದ್ದವನಿಗೆ ಅಪಥ್ಯಸೇವನೆಯಿಂದ
ನಾಭಿಯಲ್ಲಿ ಕುಟಿಲವಿದ್ದರೆ ಅದು ಜಿಹ್ವಾಗ್ರಹದಲ್ಲಿ ಹೇಗೆ ತೋರುವುದೋ ಹಾಗೇ
ರಾಕ್ಷಸನ ಮನಸ್ಸಿನಲ್ಲಿರುವ ದ್ವೇಷವು ಸ್ವಲ್ಪದಿವಸದಲ್ಲಿಯೇ ಪ್ರಕಟವಾದೀತು.
ಆ ಬಳಿಕ ತದನುಗುಣವಾಗಿ ಯತ್ನಮಂ ಮಾಡುವೆನು ಅದಂತಿರಲಿ. ನಂದರಂ
ಸಂಹರಿಸಿ ಚಂದ್ರಗುಪ್ತನಿಗೆ ಅವರ ಪದವಿಯನ್ನುಂಟುಮಾಡುವೆನೆಂದು ಮಾಡಿದ
ಪ್ರತಿಜ್ಞೆಗೆ ನಂದರ ಮೂಲೋತ್ಪಾಟನಮಂ ಮಾಡಿದಾಗಲೇ ಚಂದ್ರಗುಪ್ತನೇ
ಅಧಿಪತಿಯಾದನೆಂಬುದಾಗಿ ತಿಳಿದು ಶಿಖೆಯಂ ಬಂಧಿಸಿದೆನು. ನಂದರಾಜ್ಯಾಭಿಷೇ
ಕಮಂ ಚಂದ್ರಗುಪ್ತನಿಗೆ ಮಾಡಿಸಿ ಸಾರ್ವಭೌಮನೆಂದು ಮಂಡಲಾಧಿಪತಿಗಳ
ಕೈಯ್ಯಿಂದ ಕಪ್ಪವಂ ಕೊಡಿಸಬೇಕೆಂದರೆ ಅದಕ್ಕೆ ಮೊದಲು ನೀವು ಹೇಳಿದ ರೀತಿಗೆ

ಅರ್ಧರಾಷ್ಟ್ರಮಂ ನಮಗೆ ಕೊಟ್ಟು ಉಳಿದ ಅರ್ಧರಾಜ್ಯಕ್ಕೆ ಚಂದ್ರಗುಪ್ತನಂ ಅಭಿಷಿಕ್ತನಂ ಮಾಡಬಹುದೆಂಬ ಪರ್ವತರಾಜನ ವಾಕ್ಯವಿಘ್ನಂ ಸಂಭವಿಸುತ್ತಿದೆ. ಯಾವ ಉಪಾಯದಿಂದ ಈ ಪರ್ವತರಾಜನ ವಿಘ್ನಮಂ ಪರಿಹರಿಸಿಕೊಳ್ಳಬೇಕೆಂದು ಚಿಂತಿಸುತ್ತ ಆ ದಿವಸಮಂ ಕಳೆಯುತ್ತಿದ್ದನು. ಮಾರನೇ ದಿವಸ ಜ್ಞಾತಿಸೂತಕಸ್ನಾನದಿಂದ ಪರಿಶುದ್ಧನಾದ ಚಂದ್ರಗುಪ್ತನು ರಾಜಸಭೆಗೆ ಬರುತ್ತಿರಲು ; ಆಗ ಚಾಣಕ್ಯನು ನಂದರ ಬೊಕ್ಕಸದಲ್ಲಿ ದಿವ್ಯಭೂಷಣ ವಸ್ತ್ರಮಾಲಿಕೆಗಳಂ ತರಿಸಿ ಚಂದ್ರಗುಪ್ತನಿಗೆ ಅಲಂಕರಿಸಿ ತಾಂಬೂಲಮಂ ಕೊಡಿಸಿ ಸ್ವರ್ಣಪೀಠದಲ್ಲಿ ಕುಳ್ಳಿರಿಸಿ ಆಗ ದೂತರಂ ಕರೆದು—

ಎಲೈ ದೂತರಿರಾ, ಭದ್ರಭಟಾದಿಸೇನಾನಾಯಕರ ಕಡೆಯವರು ಬಲಸಮೇತರಾಗಿ ವಂದನೆಗೆ ಬರುತ್ತೇವೆಂದು ಹೇಳಿ ಹೋದಾರಭ್ಯ ಇದುವರೆಗೂ ಬರಲಿಲ್ಲ. ಫೌಜು ಜೊತೆಯಾಯಿತೋ ಇಲ್ಲವೋ? ಈಗ ಸಿದ್ಧವಾದಷ್ಟು ದಳವಂ ಕೂಡಿಕೊಂಡು ಮೊದಲು ಬಂದು ಮಾತನಾಡಿ ಹೋದವರೇ ಈಗ ವಂದನೆಗೆ ಬರಲಿ ಎಂದು ನೇಮಿಸಲು ; ಆ ದೂತರು ಅತಿತ್ವರೆಯಿಂದ ಹೊರಟುಹೋಗಿ ಹೊರಡಿರಿ! ಹೊರಡಿರಿ! ಎಂದು ಚಮೂಪತಿಗಳಿಗೆ ಹೇಳಲು; ಆ ಅಧಿಕಾರಿಗಳು ಜೊತೆಯಾದ ವಾಹಿನೀಸಮೇತರಾಗಿ ಬಂದು ಸೇನೆಗಳಂ ಸಾಲುಸಾಲಾಗಿ ನಿಲ್ಲಿಸಿ ಕೈಗಳಂ ಮುಗಿಯುತ್ತಿರಲು ; ಆಗ ವೈತಾಳಿಕರು ಅವರವರ ನಾಮಗಳಂ ಹೇಳಿ ಇಷ್ಟು ಲಕ್ಷ ಅಶ್ವಸೇನೆಗೆ ಪತಿಯಾದ ಇಂಥವನು ವಂದನಮಂ ಮಾಡುತ್ತಾನೆ ಜೀಯಾ ಎಂದೂ, ಈತನು ಇಷ್ಟು ಸಹಸ್ರ ಗಜಗಳಿಗೆ ರಕ್ಷಕನಾದವನು, ಇಷ್ಟು ಲಕ್ಷ ಧನುರ್ಧಾರಿಗಳಿಗೆ ನಾಯಕನಾದವನಿವನು, ಇಷ್ಟು ಲಕ್ಷ ಕುಂತಧಾರಿಗಳಿಗೆ ಒಡೆಯನಾದವನೀತನು, ಇಷ್ಟು ಸಹಸ್ರರಥಿಕರಿಗೆ ಪ್ರೇರಕನಿವನು, ಇಷ್ಟು ಲಕ್ಷ ಗದಾಪಾಣಿಗಳಿಗೆ ಪಾಲಕನೀತನು, ಇಷ್ಟು ಸಹಸ್ರ ಫಿರಂಗಿಯವರಂ ಪೋಷಿಸುವವನೀತನು, ಈತನು ಬಂಗಾಳ ದೇಶಾಧಿಪತಿಯು, ಈತನು ಭಿಲ್ಲನಾಯಕನು, ಈತನು ಕಳಿಂಗರಾಜನು, ಈತನು ಓಢ್ರಧರಣೀಧವನು, ಈತನು ಮಾತ್ಸ್ಯವಲ್ಲಭನು, ಈತನು ಅವಂತೀರಾಜನು, ಈತನು ಕೋಸಲೇಶನು, ಈತನು ಸೌರಾಷ್ಟ್ರದ ಒಡೆಯನು, ಇವರು ದಕ್ಷಿಣದೇಶಾಧೀಶ್ವರರು, ಇವರು ಪಶ್ಚಿಮದಿಕ್ಕಿನ ಅರಸುಗಳು ಎಂದೂ, ಅವರವರ ಬಿರುದು ನಾಮಾಂಕಿತಗಳೊಡನೆ ಘೋಷಿಸುತ್ತ ಜೀಯಾ! ನಮಸ್ಕರಿಸುತ್ತಿದ್ದಾರೆ. ಕೈಗಾಣಿಕೆಗಳಂ ಒಪ್ಪಿಸುತ್ತಿದ್ದಾರೆ. ಪರಾಕು! ಎಂದು ಪೊಗಳುತ್ತಿರಲು; ಆಗ ಚಂದ್ರಗುಪ್ತನು ಅವರೆಲ್ಲರಂ ಉಚಿತಪ್ರಕಾರದಿಂ

ಕುಳ್ಳಿರಿಸಿ ಬೊಕ್ಕಸದಿಂ ದಿವ್ಯವಸ್ತ್ರಭೂಷಣಂಗಳಂ ತರಿಸಿ ಅವರು ತಂದುದಂ ಸ್ವೀಕರಿಸಿ ಅವರೆಲ್ಲರಂ ವಸ್ತ್ರಾಭರಣಗಂಧಮಾಲ್ಯಾದಿಗಳಿಂದಲಂಕರಿಸಿ ವೀಳೆಯಮಂ ಕೊಡಿಸಿ—ಅಯ್ಯಾ ಅರಸುಗಳಿರಾ, ನಮ್ಮ ಪಿತಾಮಹರ ಅಧಿಪತ್ಯದಲ್ಲಿ ನಿಮಗಿದ್ದ ದೇಶಾಧಿಪತ್ಯವಂ ಅದೇ ರೀತಿಯಲ್ಲಿ ನೋಡುತ್ತ ನಮಗೆ ಕೊಡುವ ಪಗದಿಗಳಂ ಕೊಡುತ್ತ ಎಂದಿನಂತೆ ನಮ್ಮ ಕಾರ್ಯಕ್ಕೆ ಸಹಾಯಕರಾಗಿ ಇರಿ ಎಂದು ನೇಮಿಸಿ ಆಗ ಅಧಿಕಾರಿಗಳ ಮುಖವಂ ನೋಡಿ—ಅಯ್ಯಾ ನಮ್ಮ ಪರಂಪರೆಯಿಂದ ಬಂದ ಉದ್ಯೋಗಸ್ಥರುಗಳಿರಾ, ಬುದ್ಧಿಯಲ್ಲಿ ಸುರಗುರುವಿಗೆ ಸಮಾನರೂ ನಮಗೆ ಆಪದ್ಬಂಧುಗಳೂ ಆಗಿ ದೇಶಮರ್ಯಾದಾಸ್ಥಾಪನಾರ್ಥವಾಗಿ ಯಜಮಾನರಾದ ಚಾಣಕ್ಯರು ನಮ್ಮ ಬಳಿಯಣ ಮಂತ್ರಿತ್ವಕ್ಕೆ ಒಡಂಬಟ್ಟು ಪ್ರಾಧಾನ್ಯಶಸ್ತ್ರವಂ ಸ್ವೀಕರಿಸಿದ್ದಾರೆ. ಅವರ ಆಜ್ಞೆಯಂ ಅರಸಾದ ನಾನೂ ಕೂಡ ಶಿರಸಾವಹಿಸುವೆನು. ಆದುದರಿಂದ ಯಾವ ಸಮಯದಲ್ಲಿ ಇವರ ಅಪ್ಪಣೆ ನಿಮಗೆ ಏನಾದಾಗ್ಯೂ ಆ ಕ್ಷಣವೇ ಅದಂ ಮಾಡಿ ಬಂದು ನಮಗೆ ತಿಳುಹಿಸತಕ್ಕುದು ಎಂದು ನಿರೂಪಿಸಲು; ಅವರೆಲ್ಲರೂ ಮಹಾಪ್ರಸಾದವೆಂದು ಕೈಮುಗಿದು ಅಪ್ಪಣೆಯಂ ತೆಗೆದುಕೊಂಡು ಹೊರಡಲು ; ಅವರ ಫೌಜು ಮಹಾಸಮುದ್ರದಂತೆ ದೃಷ್ಟಿಗೆ ಗೋಚರವಾಗದೆ ಹೊರಟಿತು. ಅದಂ ನೋಡಿ ಪರ್ವತರಾಜನ ಸೇನಾಜನವು ತಮ್ಮೊಳಗೆ ತಾವೇ—ಇಷ್ಟು ವಾಹಿನಿಯಿಂ ಪರಿವೃತರಾಗಿದ್ದರೂ ನಂದರು ಹತರಾದುದಕ್ಕೆ ದೈವಸಂಕಲ್ಪವೇ ಕಾರಣವಲ್ಲದೆ ಮನುಷ್ಯಯತ್ನದಿಂದ ಆಗುವುದುಂಟೇ? ಎಂದು ಹೇಳಿಕೊಳ್ಳುತ್ತಿದ್ದರು. ದಂಡೆಲ್ಲವೂ ಪುರದ ದಕ್ಷಿಣ ಪೂರ್ವದಿಕ್ಕುಗಳಲ್ಲಿ ಇಳಿಯುತ್ತಿರಲು ; ಚಾಣಕ್ಯನು ಶೇಖರನಂ ಕರೆಯ ಕಳುಹಿಸಿ—

ಅಯ್ಯಾ ಸೇನಾಪತಿಯೇ, ನಾವು ಹೇಳಿದ ರೀತಿಗೆ ಸೈನ್ಯವೆಲ್ಲಮಂ ಜೊತೆಗೊಳಿಸಿ ಸಾಹಸಂಗೆಯ್ದು ನಂದಸಂಹಾರಮಂ ಮಾಡಿಸಿದವನಾದೆ. ಪರ್ವತರಾಜರಿಗೆ ನೀನು ಹೇಗೆ ಆಪ್ತನೋ ನಮಗೂ ಹಾಗೇ ಆಪ್ತನು. ಶತ್ರುನಿಗ್ರಹವಾದ ಬಳಿಕ ಪುನಃ ಯುದ್ಧಕ್ಕೆ ನಿಮಿತ್ತವಿಲ್ಲ. ಉಭಯಬಲವೂ ಒಂದೇ ಕಡೆಯಲ್ಲಿ ನಿಂತರೆ ಕ್ಷಾಮವೂ ಕ್ಷುದ್ರರೋಗೋಪದ್ರವವೂ ತಟ್ಟುವುದರಿಂದ ಪ್ರಜಾಕ್ಷೋಭೆಯುಂಟಾಗಿ ಪ್ರಕೃತಗಳಿಗೆ ಕೇಡು ಸಂಭವಿಸಲು ; ಅದೇ ಅರಸುಗಳಿಗೆ ಹಾನಿಯು. ಆದರಿಂದ ಪಾರ್ವತೇಯರ ಪತಾಕಿನಿಯಲ್ಲಿಯೂ ನಿಮ್ಮೆಲ್ಲರ ಬಲದಲ್ಲಿಯೂ ಪ್ರಕೃತೋಚಿತವಾಗಿ ಸೈನ್ಯವನ್ನು ನಿಲ್ಲಿಸಿಕೊಂಡು ಉಳಿದ ಚತುರಂಗವೆಲ್ಲವೂ

ಅವರವರ ದೇಶಗಳಿಗೆ ಹೋಗುವಂತೆ ಪರ್ವತರಾಜರಿಗೆ ತಿಳುಹಿಸಿ ಕಳುಹಿಸುವವನಾಗು ನಂದರಾಜ್ಯಾರ್ಧಮಂ ಪರ್ವತೋರ್ವೀಪತಿಗೆ ನಾವು ಕೊಡುವಲ್ಲಿ ರಾಷ್ಟ್ರಾನುಗುಣ್ಯವಾಗಿ ದಳಗಳಂ ನಿಲ್ಲಿಸಿಕೊಂಡು ಉಳಿದ ಪಡೆ ಸಹಿತ ಕೊಡಬೇಕಾಗುತ್ತಿದೆ ಎಂದು ಹೇಳಿ, ಅನರ್ಘ್ಯವಸ್ತ್ರಭೂಷಣಂಗಳಂ ತರಿಸಿ ಶೇಖರ ಮುಖ್ಯರಾದ ಅವರ ಕಡೆಯ ಅರಸುಗಳೆಲ್ಲರಿಗೂ ಕೊಡಿಸಿ ಗಂಧಮಾಲ್ಯ ಕರ್ಪೂರ ವೀಳಯಗಳಿಂದುಪಚರಿಸಿ ಉಚಿತವಾಕ್ಯಂಗಳಿಂ ಸಂತೋಷಗೊಳಿಸಿ ಅವರಂ ಕಳುಹಿಸಲು; ಶೇಖರನು—ತನಗೆ ಕೊಟ್ಟ ಭೂಷಣಂಗಳೆಲ್ಲಮಂ ಪರ್ವತಭೂಧವನ ಮುಂದಿಟ್ಟು ಚಾಣಕ್ಯರು ಹೇಳಿದ ಮಾತುಗಳೆಲ್ಲಮಂ ತಿಳುಹಿಸಿದನು. ಅದಂ ಕೇಳಿ—

ಎಲೈ ಶೇಖರನೇ, ಚಾಣಕ್ಯರು ಉಸುರಿದ ಅರ್ಥವು ನಿಶ್ಚಯವೇ ಸರಿ. ಅದೇ ಪ್ರಕಾರವಾಗಿ ಅವರಂ ಕಳುಹಿಸುವವನಾಗು. ನಮ್ಮ ಸಂಗಡ ಬಂದಿರುವ ಅರಸುಗಳಿಗೂ ಈ ಸಂಗತಿಯಂ ಹೇಳುವವನಾಗು. ಅವರು ನಿನಗೆ ಸಂತೋಷದಿಂ ಕೊಟ್ಟಭೂಷಣಂಗಳಂ ನೀನೇ ತೆಗೆದುಕೊಳ್ಳುವವನಾಗು ಎಂದು ರಾಯನು ಹೇಳಲು ; ಮಹಾಪ್ರಸಾದವೆಂದು ಶೇಖರನು ಹೊರಟು ಬಂದು ಧ್ವಜಿನಿಗಳಲ್ಲಿ ಸ್ವಲ್ಪಮಂ ನಿಲ್ಲಿಸಿಕೊಂಡು ಮಿಕ್ಕ ಬಲವೆಲ್ಲಮಂ ಅವರವರ ದೇಶಗಳಿಗೆ ಹೋಗುವಂತೆ ನೇಮಿಸಲು ; ಕೂಡಲೇ ವರೂಥಿನೀಪ್ರಯಾಣಸೂಚಕವಾದ ಭೇರೀಧ್ವನಿಗಳುಂಟಾಗಿ ಪರ್ವತಕ್ಷ್ಮಾಪತಿಯ ಅನೀಕವು ಸ್ವದೇಶಕ್ಕೆ ಹೋಗುವುದಂ ಕಂಡು ಚಂದ್ರಗುಪ್ತನ ರಾಜ್ಯಾಭಿಷೇಕವಿಘ್ನದಲ್ಲಿ ಅರ್ಧಪರಿಹಾರವಾಯಿತು. ಉಳಿದ ವಿಘ್ನಾರ್ಧಮಂ ಯಾವರೀತಿಯಿಂದ ನಿವಾರಿಸಿಕೊಳ್ಳಬೇಕೆಂದು ಚಾಣಕ್ಯನು ಚಿಂತಿಸುತ್ತಿದ್ದನು.

ಮತ್ತೊಂದು ದಿವಸ ಸಾಯಾಹ್ನದಲ್ಲಿ ಚಂದ್ರಗುಪ್ತ ಚಾಣಕ್ಯರು ಮಿತಪರಿವಾರದಿಂ ಯುಕ್ತರಾಗಿ ಆಸ್ಥಾನದೊಳ್ಕುಳಿತಿರುವುದಂ ತಿಳಿದು ರಾಕ್ಷಸನಿಗೆ ಮಿತ್ರನಂತಿದ್ದ ಕ್ಷಪಣಕನು ತನಗೆ ಇದೇ ಸಮಯವೆಂದು ನಿಶ್ಚಯಿಸಿ ಅಮಾತ್ಯಂ ಹೇಳಿ ತನ್ನ ಸಂಗಡ ಕಳುಹಿಸಿದ್ದ ಆ ಕನ್ಯೆಯಂ ಕರೆದುಕೊಂಡು ಬರುತ್ತಿರಲು; ಮುಕ್ತಾಮಯಭೂಷಣಂಗಳಂ ಧರಿಸಿ ಚಂದ್ರಗಾವಿಯ ವಸ್ತ್ರಮಂ ಮುಸುಗಿಟ್ಟು ತಾರಾಗಣಂಗಳಿಂ ಶೋಭಿಸುವ ಸಂಧ್ಯಾಸಮಯಲಕ್ಷ್ಮಿಯೋ ಎಂಬಂತೆಯೂ ಅಮೃತಾವಿರ್ಭಾವಾವಸರದಲ್ಲಿ ಕಪಟಾಂಗನೆಯಾಗಿ ಅವಲೋಕನಮಾತ್ರದಿಂ ಅಸುರವರ್ಗದ ಮನಸ್ಸುಗಳಂ ತವಕಂಗೊಳಿಸುತ್ತ ಬರುತ್ತಿರುವ ನಾರಾಯಣಿಯ ಪ್ರತಿಬಿಂಬವೋ ಎಂಬಂತೆಯೂ ದೃಷ್ಟಿಪಾತಮಾತ್ರದಿಂದಲೇ ಗುಂಪುಗುಂಪಾಗಿ

ನೋಡಬರುವ ವಿಟಜನಚಿತ್ತವೃತ್ತಿಯನ್ನಪಹರಿಸುತ್ತ ಸಂಚರಿಸುತ್ತಿರುವ ಶೃಂಗಾರಕಳೆಯೋ ಎಂಬಂತೆಯೂ ಲಾವಣ್ಯವೇ ಸ್ತ್ರೀರೂಪಿನಿಂ ಬಂದಂತೆಯೂ ಅಮೂರ್ತದ್ರವ್ಯದಂತೆ ಸ್ಪೃಶಿಸಲಶಕ್ಯವಾಗಿ ಚಿತ್ರದ ಪುತ್ಥಳಿಯಂತೆ ಭೋಗೋಪಯುಕ್ತವಲ್ಲದೆ ವಿಲೋಕನಮಾತ್ರದಿಂದಲೇ ಜನರ ಚಿತ್ತಾನುರಂಜನೆಯಂ ಮಾಡುತ್ತ ಅತತ್ವವೇದಿಗಳಿಗಭಿಮತವಾದ ಅಭಿಚಾರವಿದ್ಯಾವೈಖರಿಯೇ ನಾರೀರೂಪಿನಿಂ ಬಂದಂತೆ ಗುರುಕುಚಭಾರಕ್ಕೆ ಬಡನಡು ಬಳುಕುತ್ತ ಸೊಕ್ಕಿ ಸೋಲುತ್ತ ಬೆಡಗಂ ಬೀರುತ್ತ ಬರುತ್ತಿರುವ ಆ ಯುವತಿಯಿಂದೊಡಗೂಡಿ ಕ್ಷಪಣಕನು ಬಂದು ಚಂದ್ರಗುಪ್ತನಂ ಕಂಡು ಧರ್ಮಾಭಿವೃದ್ಧಿರಸ್ತು ಎಂದು ಹರಸಿ ಆ ಕನ್ನೆಯಂ ಕರೆದು ಮುಂದೆ ನಿಲ್ಲಿಸಲು; ಆ ಬಾಲೆಯು ಮಣಿಮಯವಲಯರವದಿಂ ಮನೋಹರವಾಗಿ ತೋರುವ ಹಸ್ತಗಳಿಂ ಚಂದ್ರಗುಪ್ತನಿಗೆ ಕೈಮುಗಿದು ವಿಲಾಸಮಂ ನಟಿಸುತ್ತ ಕ್ಷಪಣಕನ ಹಿಂದೆ ತಲೆಬಾಗಿ ನಿಂತಿರಲು ; ಚಾಣಕ್ಯನು ಆ ಕನ್ಯಕೆಯ ಸೌಂದರ್ಯಮಂ ನೋಡಿ ಕ್ಷಪಣಕನ ವೇಷಮಂ ಧರಿಸಿ ಬಂದಿರುವ ತನ್ನ ಸಹಾಧ್ಯಾಯಿಯಾದ ಇಂದುಶರ್ಮನಂ ಎಂದಿಗೂ ತಾನು ಕಾಣದವನಂತೆ ಜನಗಳಿಗೆ ತೋರ್ಪಡಿಸಲೋಸುಗ—ಅಯ್ಯಾ ಕ್ಷಪಣಕರೇ, ನೀವು ಎಲ್ಲಿಂದ ಬಂದಿರಿ ? ನಿಮ್ಮ ನಾಮಧೇಯವೇನು ? ಶಾಪವಶದಿಂ ಪುರೂರವಶ್ಚಕ್ರವರ್ತಿಯಂ ಮೋಹಿಸಲು ಭೂಮಿಗೆ ಬಂದ ಊರ್ವಶಿಯೋ ಎಂಬಂತೆಯೂ ಬ್ರಹ್ಮರ್ಷಿಯಾಗಬೇಕೆಂದು ತಪಮಂ ಮಾಡುತ್ತಿರುವ ವಿಶ್ವಾಮಿತ್ರರ ತಪಸ್ಸಂ ಕೆಡಿಸಲೋಸುಗ ಬಂದ ಹೇಮೆ ಎಂಬ ಅಪ್ಸರಸ್ತ್ರೀಯೋ ಎಂಬಂತೆಯೂ ನವಯೌವನಶಾಲಿನಿಯಾಗಿ ಸುಂದರಾಂಗಿಯಾದ ಈ ಕನ್ಯೆಯು ಯಾರಪುತ್ರಿಯು ? ಈಕೆಯು ನಿಮಗೆ ಎಲ್ಲಿ ದೊರಕಿದಳು ? ನಿಮ್ಮ ದೇಶವಾವುದು ? ಆಕೆಯೊಡನೆ ಕೂತುಕೊಂಡು ಹೇಳಿರಿ ಎನಲು ; ಹಾಗೇ ಕುಳಿತು ಕ್ಷಪಣಕನು ಚಾಣಕ್ಯರಂ ಕುರಿತು—

ದೇವರೂ, ಮೊದಲು ನಂದರಿಗೆ ಆಪ್ತನಾಗಿ ಈಗ ಚಂದ್ರಗುಪ್ತನ ದೆಸೆಯಿಂ ಭಯಪಟ್ಟು ಹೋಗಿರುವ ಅಮಾತ್ಯರಾಕ್ಷಸನಿಗೆ ಮಿತ್ರನು ನಾನು, ನನ್ನಂ ಜೀವಸಿದ್ಧಿ ಎಂದು ಹೇಳುವರು. ಈ ಯುವತಿಯು ನೆರೆಸಿಕ್ಕಿದ ವಲ್ಲಭರಾಜನ ಪ್ರಿಯಪುತ್ರಿಯು. ಈಕೆಯಂ ಬಾಲ್ಯಾದಾರಭ್ಯ ಹದಿನೈದು ವರುಷ ಪರಿಯಂತರವೂ ಸಲಹುತ್ತ ಕುಶಲ ವಿದ್ಯೆಯಿಂದ ಸುಪ್ರಾಜ್ಞೆಯಂ ಮಾಡುವಂತೆ ನನಗೆ ನೇಮಿಸಿ ನನ್ನಿಂದ ಶಿಕ್ಷಿತವಾದ ವಿದ್ಯಾಕೌಶಲ್ಯಮಂ ನೋಡಿ ವಿಚಕ್ಷಣಳಾದಳೆಂದು ಸಂತೋ

ಷಪಡುತ್ತ ಇವಳಂ ಜ್ಯೇಷ್ಠನಂದನಿಗೆ ಪ್ರಿಯಪತ್ನಿಯಂ ಮಾಡಬೇಕೆಂದು ರಾಕ್ಷಸನು ನಿಶ್ಚಯಿಸಿರಲು ; ದೈವಯೋಗದಿಂ ನಂದರು ಅನ್ಯಥಾ ಆದ ಮೇಲೆ ರಾಕ್ಷಸನು ವಿದೇಶಗತನಾದುದಂ ತಿಳಿದು ಅನಾಥಳಾದೆನೆಂದು ಖಿನ್ನಳಾಗಿ ಅವಲಂಬನವೃಕ್ಷವಿಲ್ಲದ ಮಾಲತೀಲತೆಯಂತೆ ತನ್ನ ಯೌವನವು ಅರಣ್ಯದ ಬೆಳದಿಂಗಳಂತೆ ವ್ಯರ್ಥವಾಯಿತೆಂದು ಹಂಬಲಿಸುತ್ತಿರುವ ಈ ಬಾಲೆಯಂ ನೋಡಿ ನನಗೆ ಮನಸ್ಸು ಮರುಗಿ ರಾಜಯೋಗ್ಯಳಾದ ನಿನಗೆ ಅನುರೂಪನಾದ ಪತಿಯನ್ನುಂಟುಮಾಡುವೆನೆಂದು ಒಡಂಬಡಿಸಿ ಅಪರ್ಯುಷಿತಯೌವನಶಾಲಿನಿಯಾದ ಇವಳಂ ಅನ್ಯರು ಅಪೇಕ್ಷಿಸುವುದಕ್ಕೆ ಮುಂಚಿತವಾಗಿಯೇ ನಿಮ್ಮ ಸನ್ನಿಧಿಗೆ ಕರತಂದೆನು. ರಾಜೋತ್ತಮನಾದ ಚಂದ್ರಗುಪ್ತನಿಗೆ ವೀಳೆಯಮಂ ಕೊಡುವುದಕ್ಕಾಗಲಿ ಪಾದಸೇವೆಗಾಗಲಿ ಇಂಗಿತವಿದ್ದಂತೆ ನಡೆದುಕೊಳ್ಳುವುದಕ್ಕೆ ಯೋಗ್ಯಳಿವಳು ಎಂದು ಹೇಳಿ—ಅಯ್ಯಾ, ಉಚಿತಜ್ಞರಾದ ಚಾಣಕ್ಯರೇ ಎಂದು ಓರೆ ನೋಟದಿಂ ನೋಡಿ ಈ ಕನ್ಯೆಯು ನಾಡಾಡಿಹೆಣ್ಣೆಂದು ತಿಳಿಯತಕ್ಕವಳಲ್ಲ. ಪಾರ್ಥನ ಚಿತ್ತವನ್ನಪಹರಿಸಿದ ಉಲೂಪಿಯಂತೆ ಬಹುಚತುರಳು. ಕಾಳಸರ್ಪದಂತೆ ತೋರುವ ರೋಮರಾಜಿಯಿಂದ ರಸಿಕರ ಮನಸ್ಸನ್ನು ಸೆಳೆಯುವಳು. ಹರಕಂಠಚ್ಛವಿಯಂತೆ ಶೋಭಿಸುವ ಕೇಶಭಾರದಿಂ ಪ್ರಿಯನ ಚಿತ್ತವೃತ್ತಿಯಂ ಮೋಹಗೊಳಿಸುವಳು. ಇವಳ ಅಂಗಸುಖವನ್ನನುಭವಿಸಿ ಸ್ವಸ್ಥನಾಗಿದ್ದ ವಲ್ಲಭನು ಇವಳನ್ನಗಲಿ ಶಯನಗೃಹದಿಂದ ಮರಳಿ ಈಚೆಗೆ ಬಾರನು ಎಂದು ಹೇಳಲು ; ಕ್ಷಪಣಕನ ವಾಕ್ಯಮಂ ಕೇಳಿ ಚಾಣಕ್ಯನು ತನ್ನ ಮನಸ್ಸಿನಲ್ಲಿ—

ಈಗ ಜೀವಸಿದ್ಧಿಯು ಇಲ್ಲಿರುವ ಜನರಿಗೆ ತಿಳಿಯದೆ ನನಗೆ ಮಾತ್ರ ತಿಳಿಯುವಂತೆ ಭಾವಗರ್ಭಿತವಾದ ವಾಕ್ಯದಿಂದ ಸೂಚಿಸಿದನು. ಅದರಲ್ಲಿ ಉಲೂಪಿ ಎಂಬ ಶಬ್ದೋಪಮಾನದಿಂದಲೂ ಕಾಳಸರ್ಪಹರಕಂಠಚ್ಛವಿಗಳ ಸಾಮ್ಯದಿಂದಲೂ ವಿಚಾರಿಸಿ ನೋಡಿದರೆ ಈ ಕನ್ಯೆಯಲ್ಲಿ ವಿಷದೋಷಮುಂಟೆಂದು ಹೇಳಬೇಕು. ಅಂಗಸಂಗಸುಖದಿಂ ಸ್ವಸ್ಥನಾಗಿದ್ದವನು ಶಯನಗೃಹದಿಂ ಮರಳಿ ಬಾರನೆಂದು ಹೇಳಿದ ಮಾತಿಗೆ ಈ ಬಾಲೆಯ ಶರೀರದ ವಿಷಸ್ಪರ್ಶದಿಂದ ಮೃತನಾದ ಪುರುಷನು ಹೊರಗೆ ಬಾರನೆಂದು ಅರ್ಥವಾಯಿತು. ಆದರಿಂದ ಇವಳನ್ನು ವಿಷಕನ್ಯೆಯೆಂದೇ ತಿಳಿಯಬೇಕು. ರಾಕ್ಷಸನು ಚಂದ್ರಗುಪ್ತನ ಸಂಹಾರ ನಿಮಿತ್ತವಾಗಿ ಇವಳಂ ಕಳುಹಿಸಿದುದರಿಂದ ಅತನು ದ್ವೇಷಮಂ ಸಾಧಿಸುವುದಕ್ಕೋಸ್ಕರವೇ ಮರೆಯಾಗಿದ್ದಾನೆಂದು ಈಗ ತಿಳಿಯಬಂದಿತು. ಭೀತಿಯಿಂದ ಹೊರಟು

ಹೋದವನಲ್ಲ. ಈ ಸುದತಿಯಲ್ಲಿರುವ ವಿಷದೋಷಮಂ ಪರೀಕ್ಷಿಸಿ ಆ ಬಳಿಕ ಮುಂದಣ ಕಾರ್ಯಮಂ ಯೋಚಿಸಬೇಕೆಂದು ನಿಶ್ಚಯಿಸಿ ಕ್ಷಪಣಕನ ಮುಖಮಂ ನೋಡಲು ;

ಅಯ್ಯಾ ಕಾಲದೇಶಜ್ಞರಾದ ಚಾಣಕ್ಯರೇ, ನಿನ್ನ ದೇಶವಾವುದೆಂದು ಕೇಳಿದ ಮಾತಿಗೆ ಉತ್ತರಮಂ ವಿಜ್ಞಾಪಿಸುವೆನು. ಯುಗಾಂತರದಲ್ಲಿ ಭೂಲೋಕಾಧಿಪತ್ಯಮಂ ಬಯಸಿ ಬಂದ ರಾಕ್ಷಸರು ದೇವತೆಗಳಿಂದ ಮುರಿದು ಓಡುತ್ತ ಸಮುದ್ರಮಂ ಪೊಕ್ಕು ಕಾಲಾಂತರದಲ್ಲಿ ತಿರಿಗಿ ಬಂದು ಮರ್ತ್ಯಲೋಕಮಂ ಬಾಧಿಸುತ್ತಿರಲು ; ದೇವೇಂದ್ರನು ತಮ್ಮಂ ಅಟ್ಟುತ್ತ ಬಂದರೆ ಎಂದಿನಂತೆ ಸಮುದ್ರಮಂ ಹೊಗುತ್ತ ಪುನಃ ಪುನಃ ಭೂಲೋಕಮಂ ಬಾಧಿಸುತ್ತಿರುವುದಂ ನೋಡಿ ದೇವತೆಗಳು ಅಗಸ್ತ್ಯಮಹಾಮುನಿಯಂ ಪ್ರಾರ್ಥಿಸಲು ; ಆ ಮುನಿಗೆ ಸಮುದ್ರರಾಜನ ಮೇಲೆ ಕೋಪಮುಂಟಾಗುವುದಕ್ಕೆ ನಿಮಿತ್ತ ದೊರೆತು ಆ ಜಲವೆಲ್ಲಮಂ ಪಾನಮಾಡಲು ; ಅಲ್ಲಿ ರಾಕ್ಷಸರಿಗೆ ಆಸ್ಪದ ತಪ್ಪಿ ಪಾತಾಳವಿವರವನ್ನಾಶ್ರಯಿಸಿ ಮರಳಿ ಬಂದು ಭೂಮಿಯ ನವಖಂಡಗಳಲ್ಲಿರುವ ಕುಲಾಚಲಗಳ ವಿಸ್ತಾರಗಳಾದ ಪಕ್ಷಕುಹರಗಳನ್ನಾಶ್ರಯಿಸಿ ಅವನಿಯಂ ಬಾಧಿಸುತ್ತಿರಲು ಸಮಯಾಂತರಗಳಲ್ಲಿ ಪರ್ವತಗಳಿಗೆ ಮದ ಹೆಚ್ಚಿ ಪಕ್ಷಗಳಂ ಕೊಡಹುತ್ತ ಹಾರಿ ಬಂದು ಪ್ರಜಾಪಶುಸಮೇತವಾದ ಗ್ರಾಮಗಳ ಮೇಲೆ ಕುಳಿತು ದೇಶಗಳಂ ಕ್ಷೋಭೆಪಡಿಸುವುದಂ ತಿಳಿದು ಕ್ರುದ್ಧನಾದ ದೇವೇಂದ್ರನು ವೃತ್ರ ಶೋಣಿತಪಾನದಿಂದತಿಪರುಷವಾದ ಮಹಾವಜ್ರಪ್ರಹಾರದಿಂದ ನವಕುಭೃತ್ತುಗಳ ಪಕ್ಷಂಗಳಂ ಛೇದಿಸಿ ಹೋಗುತ್ತ ದೇವತಾವಾಸಯೋಗ್ಯವೂ ಮಹರ್ಷಿಗಳಿಗೆ ಸಮ್ಮತವೂ ಯಜ್ಞಸಾಧನಗಳಿಗುಪಯುಕ್ತವೂ ಆದ ಹಿಮಾಚಲಮಂ ನೋಡಿ ಇದು ಸಹ ಸಮಯಾಂತರದಲ್ಲಿ ರಾಕ್ಷಸರಿಗೆ ಆವಾಸಯೋಗ್ಯವಾದೀತೆಂಬ ಶಂಕೆಯಿಂದ ಗಿರಿರಾಜನೆಂಬ ದಾಕ್ಷಿಣ್ಯವನ್ನಿಡದೆ ಅದರ ರಕ್ಕೆಗಳಂ ಕೂಡ ಛೇದಿಸಿದನು. ಆಗ ತಂದೆಯಾದ ಹಿಮಾಚಲದ ಪಕ್ಷಗಳು ಛೇದಿತವಾದುದಂ ನೋಡಿ ಆತನ ಪುತ್ರನಾದ ಮೈನಾಕನು ವಾಯುಪ್ರೇರಣೆಯಿಂದ ಹಾರಿ ಹೋಗುವುದಂ ದೇವೇಂದ್ರನು ಕಂಡು ಅದರ ಪಕ್ಷಗಳಂ ಛೇದಿಸದೆ ಪಾತಾಳ ಕುಹರದಿಂ ಬರುವ ರಾಕ್ಷಸರ ಮಾರ್ಗಕ್ಕೆ ಅಡ್ಡಲಾಗಿ ಸಮುದ್ರವಲ್ಲಿರುವಂತೆ ಮೈನಾಕನಿಗೆ ನೇಮಿಸಿ ಸ್ವಸ್ಥಾನವನ್ನೈದಿದನು. ಹಾಗೆ ಪಾಕಶಾಸನನು ನವಕುಲಾಚಲಂಗಳ ಪಕ್ಷಗಳಂ ಛೇದಿಸದೆ ಹಿಮಾಚಲಮಂ ಬಹೂಪಕಾರಿ ಎಂಬ ದಾಕ್ಷಿಣ್ಯದಿಂ ಬಿಟ್ಟು ಮೈನಾ

ಕಸಿಗೂ ನೇಮಿಸದೆ ಹೋದವನಾಗಿದ್ದರೆ ಲೋಕಕ್ಕೆ ರಾಕ್ಷಸರ ಬಾಧೆ ತಪ್ಪು ತ್ತಿರಲಿಲ್ಲ. ಪ್ರಕೃತವೇನಂದರೆ ಪರ್ವತಗಳ ಪಕ್ಷಗಳಂ ಛೇದಿಸುವ ರಭಸಕ್ಕೆ ಬಂದಾನೊಂದು ಪರ್ವತಶಿಖರವು ಛಿನ್ನವಾಗಿ ಹಾರಿ ಬಂದು ಬಿದ್ದುದರಿಂದ ಆ ಪ್ರದೇಶವು ವಜ್ರಪಾತಕ್ಷೇತ್ರವೆನಿಸಿತು. ಅದು ನಮ್ಮ ದೇಶವು ಎಂದು ಹೇಳಿದ ಕ್ಷಪಣಕನ ವಾಕ್ಯಮಂ ಕೇಳಿ ಚಾಣಕ್ಯನು ಆ ಮಾತಿಗೆ ಅಭಿಪ್ರಾಯಮಂ ನಿಶ್ಚಯಿಸುತ್ತಿದ್ದನು.

ಈ ಕ್ಷಪಣಕನು ಹೇಳಿದ ಮಾತಿನಲ್ಲಿ ರಾಕ್ಷಸ ಶಬ್ದ ಗ್ರಹಣದಿಂದ ಅಮಾತ್ಯರಾಕ್ಷಸನಂ ಉದ್ದೇಶಮಾಡಿ ಹೇಳಿದಂತಾಯಿತು. ಗಿರಿರಾಜಶಬ್ದ ಗ್ರಹಣದಿಂದ ಪರ್ವತೇಶ್ವರನಂ ಲಕ್ಷೀಕರಿಸಿ ಸೂಚಿಸಿದಂತಾಯಿತು. ಅಗಸ್ತ್ಯನು ರಾಕ್ಷಸರಿಗೆ ಆವಾಸವಾದ ಸಮುದ್ರಮಂ ಪಾನಂಗೆಯ್ದನೆಂದು ಉಸುರಿದ ಮಾತಿಗೆ ಅಮಾತ್ಯ ರಾಕ್ಷಸನು ಎಲ್ಲಿ ಆಶ್ರಯಮಂ ಸಂಪಾದಿಸಿದವನಾದರೂ ಆ ಆಶ್ರಯಮಂ ನಷ್ಟ ಗೊಳಿಸಬೇಕೆಂದು ನುಡಿದಂತಾಯಿತು. ರಾಕ್ಷಸರಿಗೆ ಆಧಾರವಾಗಿದ್ದ ನವಕುಲಾ ಚಲಂಗಳ ಪಕ್ಷಗಳಂ ಛೇದಿಸಿದ ಬಳಿಕ ಗಿರಿರಾಜನಾದ ಹಿಮಾಚಲದ ಪಕ್ಷಮಂ ಉಪಕಾರಿ ಎಂದು ಉಳಿಸದೆ ಛೇದಿಸಲು ; ಆತನ ಪುತ್ರನಾದ ಮೈನಾಕನು ವಾಯುಪ್ರೇರಣೆಯಿಂದ ಓಡುವುದಂ ಕಂಡು ಅವನ ರಕ್ಕೆಗಳಂ ಕತ್ತರಿಸದೆ ಪಾತಾಳಕುಹರಕ್ಕೆ ಅಡ್ಡಲಾಗಿರುವಂತೆ ದೇವೇಂದ್ರನು ಹೇಳಿ ಹೋದನೆಂಬ ಮಾತಿಗೆ—ಅಮಾತ್ಯರಾಕ್ಷಸನಿಗೆ ಸಹಾಯಕರಾಗಿದ್ದ ನವನಂದರು ಸಂಹೃತರಾದು ದರಿಂದ ಅವಲಂಬನರಹಿತನಾದ ರಾಕ್ಷಸನು ಈಗ ಪರ್ವತೇಶ್ವರನಲ್ಲಿ ಆಶ್ರಯ ಮಂ ಸಂಪಾದಿಸುವವನಾಗಿರುವುದರಿಂದ ಈ ಪರ್ವತರಾಜನಲ್ಲಿ ದಾಕ್ಷಿಣ್ಯವನ್ನಿ ಡದೆ ಸಂಹರಿಸಬೇಕೆಂದೂ ಈತನ ಪುತ್ರನಾದ ಮಲಯಕೇತುವಂ ಪ್ರೇರಣೆಯಿಂ ದೋಡಿಸಿ ಆತನ ದೇಶದಲ್ಲಿದ್ದುಕೊಂಡು ನಮ್ಮ ಆಜ್ಞಾನುಸಾರ ನಡೆದುಕೊಳ್ಳು ವಂತೆ ನೇಮಿಸಬೇಕೆಂದೂ ಉಸುರಿದಂತಾಯಿತು. ಇಂದ್ರನು ವೃತ್ರಾಸುರ ಶೋಣಿತಪಾನದಿಂದತಿಪರುಷವಾದ ಮಹಾವಜ್ರದಿಂದ ಹಿಮಾಚಲದಲ್ಲಿ ದಾಕ್ಷಿ ಣ್ಯವಿಟ್ಟು ಅದರ ಪಕ್ಷಮಂ ಛೇದಿಸದೆ ಮೈನಾಕನಂ ಬೆದರಿಸಿ ಓಡಿಸದೆ ಸ್ವಸ್ಥಾ ನಕ್ಕೆ ಹೋಗಿದ್ದರೆ ಲೋಕಕ್ಕೆ ರಾಕ್ಷಸಬಾಧೆ ತಪ್ಪಿ ಕ್ಷೇಮವಾಗುತ್ತಿತ್ತೋ? ಎಂದು ಹೇಳಿದ ಮಾತಿಗೆ ವಿಷಸೇವನೆಯಿಂದತಿತಪ್ತಳಾದ ಈ ಕನ್ಯಾಮುಖದಿಂದ ಪರ್ವತರಾಜನಂ ಸಂಹರಿಸದೆ ಇವನ ಪುತ್ರನಾದ ಮಲಯಕೇತುವಂ ಓಡಿಸದೆ ಉಪೇಕ್ಷಿಸಿದರೆ ಚಂದ್ರಗುಪ್ತನಿಗೆ ಅಭಯಮಂ ಕೊಟ್ಟ ಮೇರೆಗೆ ಅಖಂಡ

ರಾಜ್ಯಾಧಿಪತ್ಯವೆಂತು ಲಭಿಸೀತು ? ಎಂದು ಬಕ್ಕಣಿಸಿದಂತಾಯಿತು ಎಂಬುದಾಗಿ ನಿಶ್ಚಯಿಸಿ ಇಂದುಶರ್ಮನಂ ನೋಡಿ—

ಏನೈ ಕ್ಷಪಣಕನೇ, ವೃತ್ರಾಸುರಶೋಣಿತಪಾನದಿಂದತಿಪರುಷವಾದ ಮಹಾವಜ್ರವು ಹಸ್ತಂಗತವಾದ ಸಮಯದಲ್ಲಿಯೇ ಇಂದ್ರನು ಗಿರಿರಾಜನಾದ ಹಿಮವಂತನ ಪಕ್ಷಮಂ ಛೇದಿಸಬೇಕಾಯಿತಲ್ಲವೇ? ಎಂದು ಕೇಳಲು ; ಆ ಮಾತಿಗೆ ತಾನು ಗೂಢಾರ್ಥದಿಂದ ಅನ್ಯಾಪದೇಶವಾಗಿ ಹೇಳಿದ ಮಾತುಗಳು ಚಾಣಕ್ಯರಿಗೆ ಅರ್ಥವಾಯಿತೆಂದು ಕ್ಷಪಣಕನು ತಿಳಿದವನಾಗಿ ಸರ್ವಜ್ಞಚಿತ್ತಕ್ಕೆ ವೇದ್ಯವಾದ ಬಳಿಕ ವಿಶೇಷವಿಜ್ಞಾಪಿಸುವುದೇಸಿದೆ? ಎಂದು ಹೇಳಲು ; ಚಾಣಕ್ಯನು ತನ್ನ ಮನಸ್ಸಿನಲ್ಲಿ—ಕ್ಷಪಣಕವೇಷಮಂ ಧರಿಸಿರುವ ನಮ್ಮ ಇಂದುಶರ್ಮನು ಅರ್ಥಗರ್ಭಿತವಾಗಿ ಹೇಳಿದಂತೆ ರಾಕ್ಷಸನು ಪರ್ವತರಾಜನನ್ನಾಶ್ರಯಿಸಿ ಚಂದ್ರಗುಪ್ತನಲ್ಲಿ ವೈರಮಂ ಸಾಧಿಸತಕ್ಕವನೇ ಹೌದು ! ಆದರೆ ಪರ್ವತೇಶ್ವರನಂ ಕಳುಹಿಸಿ ರಾಕ್ಷಸನಂ ಸಂಹರಿಸೋಣವೆಂದರೆ ಏನು ವ್ಯಯವಾದರೂ ಪೌರುಷ ಬುದ್ಧಿಬಲಗಳಲ್ಲಿ ರಾಕ್ಷಸನಿಗೆ ಸಮಾನನಾದ ಪುರುಷನು ಎಲ್ಲಿಯೂ ದೊರೆಯಲಾರನು. ಇವರೀರ್ವರುಗಳನ್ನೂ ಉಳುಹಿಸಿದರೆ ಮಧುಘೃತಗಳು ಸಮವಾಗಿ ಮಿಳಿತವಾದರೆ ಸೇವಿಸಿದವರಿಗೆ ವಿಷವಾಗಿ ಪರಿಣಮಿಸುವಂತೆ ಇವರೀರ್ವರೂ ಕೂಡಿಕೊಂಡು ರಾಜಕಾರ್ಯದಲ್ಲಿ ಉದ್ಯೋಗಿಸಿದರೆ ಸದ್ಯಃ ಅರ್ಧರಾಜ್ಯಮಂ ಪರ್ವತರಾಜನಿಗೆ ಕೊಡಬೇಕಾದೀತು. ನಾನು ತಪೋವನಾಭಿಮುಖನಾಗಲು ಚಂದ್ರಗುಪ್ತನು ತನ್ನ ಅರ್ಧರಾಷ್ಟ್ರಮಂ ಕಳೆದುಕೊಂಡು ಹಿಂದುಗಡೆಯಲ್ಲೇ ಅರಸುತ್ತ ನನ್ನ ಮಾರ್ಗದ ಬಳಿವಿಡಿದು ತಪೋವನಕ್ಕೆ ಬರುವುದರಲ್ಲಿ ಸಂದೇಹವಿಲ್ಲ. ಇವರೀರ್ವರಲ್ಲಿ ಗುಣದೋಷಂಗಳೇನೆಂದರೆ—ರಾಕ್ಷಸನಾದರೋ ! ತನಗೆ ಪ್ರಭುಗಳಾದ ನಂದರು ನಷ್ಟರಾದರೆಂದು ಅವರಿಗೆ ವೈರಿಯಾದ ಚಂದ್ರಗುಪ್ತನನ್ನಾಶ್ರಯಿಸಿ ಆತನಿಂದ ಲಭ್ಯವಾಗುವ ತನ್ನ ಮಹಾಪದವಿಯಂ ತ್ಯಜಿಸಿ ಸ್ವಾಮಿಭಕ್ತಿಯಂ ಸಫಲಗೊಳಿಸಲೋಸುಗ ಅವನಂ ಸಂಹರಿಸಲೆಣಿಸಿರುವನು. ಪರ್ವತರಾಜನಾದರೋ ! ಮೊದಲು ನಮಗೆ ಕೊಟ್ಟ ಅಭಯಮಂ ಮೀರಿ ಲಂಪಾಕಪತಿಯ ದೆಸೆಯಿಂದ ಅನಿವಾರ್ಯವಾಗಿ ತನಗೆ ಬದಗಿದ್ದ ವಿಪತ್ತನ್ನು ನಾವು ಇದ್ದ ಬಳಿಯಲ್ಲೇ ಯಾರಿಗೂ ಗೋಚರವಿಲ್ಲದಂತೆ ಕ್ಷಿಪ್ರದಲ್ಲಿ ಪರಿಹಾರಮಂ ಮಾಡಿದ ಉಪಕಾರ ಸಾಹಸ ಇವುಗಳಂ ಸ್ಮರಿಸದೆ ನಂದರ ನಿಯೋಗಿ ಬಂದು ಹೇಳಿದ ಸ್ವಲ್ಪ ಮಾತಿಗೆ ವಿಹ್ವಲನಾಗಿ ಚಂದ್ರಗುಪ್ತನಂ ನಂದರಿಗೆ ಒಪ್ಪಿಸುವವನಾಗಿದ್ದನು. ಆದ

ರಿಂದ ಈತನು ಕೃತಘ್ನನು. ಇವನಲ್ಲಿ ರಾಕ್ಷಸನು ಬಂದು ಜೊತೆಯಾದರೆ ಚಂದ್ರಗುಪ್ತನ ಮೇಲೆ ರಾಜಕಾರ್ಯಕ್ಕೆ ಈ ಪರ್ವತರಾಜನೇ ಮುಂದೆ ನಡೆ ಯುವುದರಲ್ಲಿ ಸಂಶಯವಿಲ್ಲ. ಗ್ರಾಮಕ್ಕೆ ಅವಲಂಬನವಾಗಬೇಕೆಂದು ಬೆಳಸಿದ ಬೇಲಿಯು ಚೋರವ್ಯಾಘ್ರಾದಿಗಳಿಗೆ ಆಶ್ರಯವಾದರೆ ಗ್ರಾಮದವರಿಗೆ ಅದಂ ಛೇದಿಸುವುದೇ ಅವಶ್ಯಕವಾಗುವಂತೆ ಪರ್ವತರಾಜನು ರಾಕ್ಷಸನಿಗೆ ಆಧಾರವಾ ಗುವುದರಿಂದ ಈಗಲೇ ಆತನಂ ಸಂಹರಿಸಿ ಅನಂತರದಲ್ಲಿ ರಾಕ್ಷಸನಂ ಸರ್ವೋ ಪಾಯದಿಂದಲೂ ಸಂಗ್ರಹಿಸಬೇಕಾಯಿತು. ಅದರಿಂದ ವಿಷಕನ್ಯೆಯಂ ಮೊದಲು ಪರೀಕ್ಷಿಸಿದಲ್ಲದೆ ಯಾವುದೂ ನಿದರ್ಶನಕ್ಕೆ ಬರಲಾರದು ಎಂದು ನಿಶ್ಚಯಿಸಿ ದೂತರ ಮುಖವಂ ನೋಡಿ—

ಎಲೈ, ನೂತನವಾಗಿ ಹಿಡಿದುತಂದ ಗಿಳಿಗಳಿಗೆ ಮಾತುಕಲಿಸುವಂತೆ ನೇಮಿ ಸಿದ ಮೇರೆಗೆ ಅವು ಶಿಕ್ಷಿತವಾದುವೋ ಇಲ್ಲವೋ? ಪಾರಾವತಚಕೋರಗಳಿಗೆ ಪೋಷಣೆಯಂ ಮಾಡುವಂತೆ ನೇಮಿಸಿದ ಪ್ರಕಾರ ಆ ಪಕ್ಷಿಗಳು ಪುಷ್ಟಿಯಾಗಿ ವೆಯೋ ಇಲ್ಲವೋ? ನೋಡಬೇಕು. ಅವುಗಳಂ ಇಲ್ಲಿಗೆ ತೆಗೆದುಕೊಂಡು ಬನ್ನಿರಿ ಎನಲು ; ಆ ದೂತರು ಹೋಗಿ ಆ ಗಿಳಿಗಳ ಪಂಜರಂಗಳನ್ನೂ ಪಾರಾವತ ಚಕೋರಪಕ್ಷಿಗಳನ್ನೂ ತಂದು ಇರಿಸಲು ; ಆಗ ಶುಕಗಳು ಆ ವಿಷಕನ್ಯೆಯಂ ನೋಡಿ ಕೋ! ಎಂದು ಅರಚುತ್ತಿರಲು ; ಹಾಗೇ ಪಾರಾವತಚಕೋರ ಪಕ್ಷಿಗಳು ಆ ಬಾಲೆಯಂ ನಿರೀಕ್ಷಿಸಿ ಪಕ್ಷಗಳನ್ನೊದರುತ್ತ ಬಿರಬಿರನೆ ಕಣ್ಣು ಗಳಂ ತಿರಿಗಿಸುತ್ತ ಆಗಲೇ ಮೃತವಾಗಲು ; ಅದಂ ನೋಡಿ ಇವಳು ವಿಷಕ ನ್ಯೆಯೇ ಹೌದು ! ಎಂದು ನಿಶ್ಚಯಿಸಿ ಆ ಪಕ್ಷಿಗಳಂ ಪೋಷಿಸುವವರ ಮೇಲೆ ಕೋಪಮಂ ಮಾಡುವವನಂತೆ ಆಹಾರ ಸಾಲದುದರಿಂದ ಈ ಹಕ್ಕಿಗಳು ಮೃತ ವಾದುವೆಂದು ಹೇಳುತ್ತ ಅವುಗಳಂ ಆಚೆಗೆ ತೆಗೆಯಿಸಿ ಈ ವಿಷಕನ್ಯೆಯಂ ನೋಡಿ ಪಕ್ಷಿಗಳು ಮೃತವಾದುದರಿಂದ ವಿಷಸಂಪರ್ಕಪದಾರ್ಥಪರೀಕ್ಷೆಯಂ ಹೇಳಿರುವ ವೈದ್ಯಶಾಸ್ತ್ರವು ಸತ್ಯವೆಂದು ಚಾಣಕ್ಯನು ತನ್ನ ಮನಸ್ಸಿನೊಳ್ ಯೋಚಿಸು ತ್ತಿದ್ದನೆಂಬಲ್ಲಿಗೆ ಮುದ್ರಾಮಂಜೂಷವೆಂಬ ಗ್ರಂಥದಲ್ಲಿ ವಿಷಕನ್ಯಾಗಮನವೆಂಬ ನವಮಾಶಯವು ಸಮಾಪ್ತಮಾದುದು.

---

# ದಶಮಾಶಯ ಪ್ರಾರಂಭವು.

## ಪರ್ವತರಾಜನ ಮರಣವು

ಅನಂತರದಲ್ಲಿ ಚಾಣಕ್ಯನು ವಿಷಕನ್ಯಾಸಮೇತನಾದ ಇಂದುಶರ್ಮನಂ ಪರ್ವತರಾಜನ ಬಳಿಗೆ ಕಳುಹಿಸಬೇಕೆಂದು ನಿಶ್ಚಯಿಸಿ ಈ ಕಾಮಿನಿಯಿಂದ ಪರ್ವತರಾಜನು ಮೃತನಾದರೆ ಛದ್ಮನೆಯಿಂದ ಅವನ ಪುತ್ರನಾದ ಮಲಯಕೇತುವಂ ಅಲ್ಲಿಂದ ಅವನ ದೇಶಕ್ಕೆ ಓಡಿಸಿ ಚಂದ್ರಗುಪ್ತನಿಗೆ ರಾಜ್ಯಾಭಿಷೇಕಮಂ ಮಾಡಬೇಕೆಂದು ಮನಸ್ಸಿನಲ್ಲಿ ಯೋಚಿಸಿದವನಾಗಿ ಇಂದುಶರ್ಮನಂ ಕುರಿತು ಇಂತೆಂದನು—

ಅಯ್ಯಾ ಜೀವಸಿದ್ಧಿಯೇ, ಚಂದ್ರಗುಪ್ತನು ಪಾಣಿಗ್ರಹಣಮಂ ಮಾಡಿದ ಪತ್ನಿಯಲ್ಲಿಯೇ ಹೊರತು ಅನ್ಯರಲ್ಲಿ ಆತನ ಮನಸ್ಸು ಒಡಂಬಡುವುದಲ್ಲವಾದುದರಿಂದ ನಮ್ಮೆಲ್ಲರಿಗೂ ಪ್ರಭುವಾದ ಪರ್ವತವಸುಧಾಧಿನಾಥನಿಗೆ ಈ ಸುಂದರಿಯನ್ನೊಪ್ಪಿಸಿ ಚತುರೆಯಾದ ಇವಳ ಯೌವನವು ಸಫಲವಾಗುವಂತೆ ಮಾಡು. ರಾಜಯೋಗ್ಯಳಾದ ಈ ಭಾಮಿನಿಯನ್ನೊಡಗೂಡಿ ಪರ್ವತೋರ್ವೀಪತಿಯು ಸುಖವಾಗಿದ್ದರೆ ಅದೇ ನಮಗೆ ಪರಮಸಂತೋಷವು. ಈ ಯುವತಿಯಿಂದ ಆ ರಾಯನು ಸಂತುಷ್ಟನಾದರೆ ಚಂದ್ರಗುಪ್ತನಿಗೆ ರಾಕ್ಷಸನಲ್ಲಿ ಇರುವ ಕೋಪವು ಶಾಂತವಾಗುವುದು. ಈಗ ಅಶ್ವಿನೀ ನಕ್ಷತ್ರವು ಕಳೆದು ಬರುವ ಸಮಯವು. ಆದುದರಿಂದ ನೀನು ಬೇಗ ಕರೆದುಕೊಂಡು ಹೋಗಿ ಪರ್ವತೇಶ್ವರನು ಶಯನಗೃಹಕ್ಕೆ ಬರುವ ಸಮಯದಲ್ಲಿ ಈ ಕನ್ಯೆಯಂ ಆತನಿಗೆ ಒಪ್ಪಿಸುವವನಾಗು ಎಂದು ಹೇಳಿ ಕ್ಷಪಣಕನಂ ಕಳುಹಿಸಲು; ಆತನು ಆ ಕನ್ಯಾಸಮೇತನಾಗಿ ಪರ್ವತರಾಜನಿದ್ದೆಡೆಗೆ ಬರುತ್ತಿದ್ದನು. ಆಗ ಚಾಣಕ್ಯನು ಮುಂದಣ ಕಾರ್ಯಮಂ ಮನಸ್ಸಿನಲ್ಲಿ ಯೋಚಿಸಿ ಕಾಗದಮಂ ಬರೆದು ಅದಂ ತನ್ನ ಶಿಷ್ಯನ ಕೈಯ್ಯಲ್ಲಿತ್ತು—ಇದಂ ಸಿದ್ಧಾರ್ಥಕನಿಗೆ ಕೊಟ್ಟು ಬಾರೆಂದು ನೇಮಿಸಲು; ಆತನು ಅದೇ ಪ್ರಕಾರಂಗೆಯ್ದನು. ಸಿದ್ಧಾರ್ಥಕನು ಆ ಕಾಗದಮಂ ನೋಡಿಕೊಂಡು ಆ ಕ್ಷಣವೇ ಬಾಗುರಾಯಣನ ಬಳಿಗೆ ಬಂದು ಅವನಂ ಕುರಿತು—

ಅಯ್ಯಾ ಬಾಗುರಾಯಣನೇ, ಚಾಣಕ್ಯರು ನಿನ್ನಲ್ಲಿ ಆಪ್ತವಿಶ್ವಾಸಮಂ ಮಾಡಿದ್ದಾರೆ. ಚಂದ್ರಗುಪ್ತನ ಕಾರ್ಯವು ನಿನ್ನಿಂದ ಬಹುವಾಗಿ ಆಗಬೇಕಾಗುತ್ತಿದೆ. ರಾಕ್ಷಸನಂತೆ ಎಲ್ಲದರಲ್ಲಿಯೂ ಪ್ರೌಢನು ನೀನು. ಈ ಲೇಖನಮಂ

ನೋಡಿಕೊಂಡು ಇದರಲ್ಲಿದ್ದ ಮೇರೆಗೆ ನಡೆದುಕೊಂಡರೆ ನಿನಗೆ ವಿಶೇಷಾಭ್ಯು ದಯಮುಂಟಾಗುವುದು ಎಂದು ಹೇಳಿ ಆ ಪತ್ರಿಕೆಯಂ ಅವನಿಗೆ ಕೊಡಲು; ಅದಂ ಓದಿಕೊಂಡು ಬಾಗುರಾಯಣನು ಆಶ್ಚರ್ಯಪಟ್ಟು ಚಾಣಕ್ಯರ ಆಜ್ಞೆಯಂ ಶಿರಸಾವಹಿಸಿ ಈ ಕಾರ್ಯಮಂ ಮಾಡುತ್ತಿದ್ದೇನೆ ಎಂದು ಹೇಳಿ ಆಗ ತನ್ನ ದೂತನೊಬ್ಬನಂ ಕರೆದು—ಡಿಂಗಿರಾತ ಪುರುಷದತ್ತ ಬಲಗುಪ್ತರ ಕಿವಿಯಲ್ಲಿ ಚಂದ್ರಗುಪ್ತರ ಅಪ್ಪಣೆಯಾಗಿದೆ ಎಂದು ಹೇಳಿ ಈ ಕ್ಷಣವೇ ನಿಮ್ಮ ಸೇನೆಗಳಂ ಸನ್ನಾಹಗೊಳಿಸಿಕೊಂಡು ಮಲಯಕೇತುವಿನ ದಂಡಿನ ಪಾಳೆಯದ ಪಶ್ಚಿಮ ದಿಕ್ಕಿನಲ್ಲಿ ನಿಂತಿರುವಂತೆ ಹೇಳಿ ಅವರಂ ಹೊರಡಿಸಿ ಬಾರೆಂದು ಕಳುಹಿಸಲು; ಆ ದೂತನು ಅದೇ ಪ್ರಕಾರ ಹೋಗಿ ಅವರಿಗೆ ತಿಳಿಸಲು; ಅದಂ ಕೇಳಿ ದಳಪತಿ ಗಳು ಆ ಕ್ಷಣವೇ ತಮ್ಮ ಬಲಗಳಂ ತೆಗೆದುಕೊಂಡು ಆ ರಾತ್ರಿವೇಳೆಯಲ್ಲಿ ಮಲಯಕೇತುವಿನ ಗೂಡಾರದ ಪಶ್ಚಿಮದಿಕ್ಕಿನಲ್ಲಿ ನಿಲ್ಲಿಸಿದರು. ಆಗ ಬಾಗು ರಾಯಣನು—ತನಗೆ ಚಾಣಕ್ಯರು ಬರೆದ ಕಾಗದಮಂ ಪುನಃ ನೋಡಿಕೊಂಡು ಅದರ ಅಭಿಪ್ರಾಯಮಂ ಮನಸ್ಸಿನಲ್ಲಿ ಪರಿಭಾವಿಸುತ್ತಿದ್ದನು. ಏನಂದರೆ—

ಈಗ ವಿಷಕನ್ಯಾಸಂಗದಿಂದ ಪರ್ವತರಾಜನು ಮೃತನಾಗುವನು. ಈ ಸಮಯದಲ್ಲಿ ಪಡೆಯಂ ಮಲಯಕೇತುವಿನ ಗೂಡಾರದ ಬಳಿಗೆ ಕಳುಹಿಸಿ ಅವ ನಿಗೆ ಭಯಮಂ ಕಲ್ಪಿಸಿ ಅಲ್ಲಿಂದ ಅವನಂ ಓಡಿಸಿಕೊಂಡು ಅವನ ಪಟ್ಟಣಕ್ಕೆ ಹೋಗಿ ಅವನಿಗೆ ಆಪ್ತಮಂತ್ರಿಯಾಗಿದ್ದುಕೊಂಡು ಏನಾದರೂ ಬಂದುವೇಳೆ ಅವಲಂಬನವಿಲ್ಲದೆ ರಾಕ್ಷಸನು ಮಲಯಕೇತುವಿನ ಬಳಿಗೆ ಬಂದು ಅವನಂ ಒಡಂಬಡಿಸಿ ಪುನಃ ಚಂದ್ರಗುಪ್ತನ ಮೇಲೆ ರಾಜಕಾರ್ಯಮಂ ಯೋಚಿಸಿದರೆ ಸಮಯಮಂ ನೋಡಿ ರಾಕ್ಷಸನಲ್ಲಿ ಇಲ್ಲದ ದೋಷವನ್ನಾದರೂ ಕಲ್ಪಿಸಿ ಅವನಂ ಪ್ರಾಣದಿಂದುಳಿಸಿ ಅನ್ಯರಿಗೆ ವಿಕಲ್ಪತೋರದಂತೆ ಮಾಡುತ್ತ ಅಲ್ಲಿಂದ ಹೊರಡಿಸತಕ್ಕದು. ನೀನು ಸ್ವಾಮಿಕಾರ್ಯದಲ್ಲೇ ನಿರತನಾಗಿರತಕ್ಕದು ಎಂದು ಬರೆದಿರುವ ಕಾಗದದ ಅಭಿಪ್ರಾಯಮಂ ತಿಳಿದು ಈಗ ವಿಳಂಬಮಂ ಮಾಡಿದರೆ ರಾಜಕಾರ್ಯವು ಕೆಟ್ಟು ಪ್ರಭುಗಳ ಕೋಪಕ್ಕೆ ಪಾತ್ರನಾದೇನೆಂದು ನಿಶ್ಚಯಿಸಿ ತನ್ನ ಭೂಷಣಂಗಳಂ ಸಡಿಲಿಸಿ ಕರವಸ್ತ್ರಮಂ ತಲೆಗೆ ಸುತ್ತಿ ಬೆತ್ತಲೆ ಗುದುರೆಯನ್ನೇರಿ ತ್ವರಿತದಿಂ ಮಲಯಕೇತುವಿದ್ದೆಡೆಗೆ ಬರುತ್ತಿರಲು ; ಆ ಸಮ ಯದಲ್ಲಿ ಕ್ಷಪಣಕನು ಪರ್ವತರಾಜನ ಗೂಡಾರದ ಮುಂದೆ ನಿಂತು ಹೀಗೆ ನಾನು

ಬಂದು ಇದ್ದೇನೆ. ಪ್ರಭುವಿಗೆ ಈ ವಿಷಯವನ್ನು ತಿಳುಹಿಸಿರಿ ಎಂದು ಅಲ್ಲಿನ ಕಂಚುಕಿಗಳಿಗೆ ಹೇಳಲು ; ಅವರು ಬಂದು ಪರ್ವತರಾಜನಿಗೆ ಕೈಮುಗಿದು ನಿಂತು—

ಜೀಯಾ, ಸಕಲವಸ್ತುಗಳ ಲಾವಣ್ಯಾಂಶಗಳಂ ತೆಗೆದು ಬ್ರಹ್ಮನಿಂದ ನಿರ್ಮಿತಳಾದ ತಿಲೋತ್ತಮೆಯೋ ಎಂಬಂತೆ ಅತಿಮೋಹನಾಂಗಿಯಾಗಿ ಮಂದ ಮಾರುತದಿಂ ಚಲಿಸುವ ಕನ್ನೈದಿಲೆಯ ದಳಗಳಂತಿರುವ ನಿಜನೇತ್ರಕಾಂತಿಯಿಂ ರಸಿಕಜನಚಿತ್ತಮಂ ಮೋಹಗೊಳಿಸುತ್ತ ಚಂದ್ರಗಾವಿಯ ವಸ್ತ್ರದಿಂ ಮುಸುಗಿಟ್ಟು ಕುಚಭಾರದಿಂ ಬಳುಕುವ ಬಡನಡುವಿನಲ್ಲಿ ವಾಮಹಸ್ತವನ್ನಿಕ್ಕಿ ಬೆಡಗಂ ಬೀರುತ್ತಿರುವ ಕನ್ಯಾರತ್ನದಿಂ ಸಹಿತನಾಗಿ ಒಬ್ಬ ಕ್ಷಪಣಕನು ಸನ್ನಿಧಿಯಂ ಕಾಣಬೇಕೆಂದು ಕುತೂಹಲದಿಂ ಬಂದಿದ್ದಾನೆ ಅಪ್ಪಣೆ ಏನು ? ಎಂದೆನಲು ; ಆ ಮಾತಿಗೆ ಪರ್ವತೋರ್ವೀಪತಿಯು—ಬರಲಿ ಅವನಂ ಒಳಯಿಂಕೆ ಬಿಟ್ಟುಬಿಡು ಎಂದನು. ಆಗ ಆ ಕಂಚುಕಿಯು—ಲಲನಾಸಮೇತವಾಗಿ ಆ ಕ್ಷಪಣಕನಂ ಕರತರಲು ; ಆ ಅಬಲೆಯು ಆ ರಾಯನಿಗೆ ಕೈಮುಗಿದು ಸೊಬಗಂ ಬೀರುತ್ತ ಶಿರಮಂ ಬಾಗಿ ಜೀವಸಿದ್ಧಿಯ ಹಿಂದೆ ನಿಂತಳು. ಆಗ ಪರ್ವತರಾಜನು ಅವಳಂ ನೋಡಿ ಮನುಷ್ಯರಲ್ಲಿ ಈ ಲಾವಣ್ಯ ಈ ರೂಪು ಈ ಸೌಂದರ್ಯ ಈ ಬೆಡಗು ಇವುಗಳಿಗಿರುವುದನ್ನು ಎಲ್ಲಿಯೂ ಕಂಡುದಿಲ್ಲ. ಇವಳು ಬಹು ಪುಣ್ಯಶಾಲಿಗೆ ದೊರತಕ್ಕವಳು. ಇವಳ ಅಂಗಸಂಗವಾದ ಪುರುಷನು ಬಹು ಧನ್ಯನು. ಇವಳ ನೋಟ ಬೇಟಗಳು ಋಷಿಗಳ ಮನಸ್ಸನ್ನಾದರೂ ಅಪಹರಿಸದಿರಲಾರವು. ಇವಳು ಕೇಳಿದರೆ ತನ್ನ ಪ್ರಾಣವನ್ನಾದರೂ ಕೊಡುವೆನಲ್ಲದೆ ತಪ್ಪುವನಲ್ಲವೆಂದು ಆಲೋಚಿಸುತ್ತ ಕ್ಷಪಣಕನಂ ನೋಡಿ—

ಅಯ್ಯಾ ಕ್ಷಪಣಕನೇ, ನೀನು ಯಾರು ? ಎಲ್ಲಿಂದ ಬಂದೆ ? ಸನ್ಯಾಸಿಯಾದ ನಿನಗೆ ಈ ಸ್ತ್ರೀರತ್ನವೆಲ್ಲಿ ದೊರಕಿತು ? ಎನಲು ; ಕ್ಷಪಣಕನು—

ಅಯ್ಯಾ ಭೂಪತಿಯೇ, ಚಂದ್ರಗುಪ್ತನ ದೆಸೆಯಿಂದ ಭೀತನಾಗಿ ಪುರದಿಂ ಹೋಗಿರುವ ರಾಕ್ಷಸನಿಗೆ ಮಿತ್ರನು ನಾನು. ನನ್ನಂ ಜೀವಸಿದ್ಧಿ ಎಂದು ಹೇಳುವರು. ಚಂದ್ರಗುಪ್ತನಂ ಅನುಗ್ರಹಿಸಿ ನಂದರಂ ನಿಗ್ರಹಿಸಿದ ಬಳಿಕ ಸಕಲ ರಾಜ್ಯಕ್ಕೂ ಅಧಿಪತಿಯಾದ ನಿಮ್ಮ ಪ್ರಸಾದವನ್ನಪೇಕ್ಷಿಸುವ ಅಮಾತ್ಯರಾಕ್ಷಸನಿಂದ ನಿಮಗೆ ಕಳುಹಿಸಲ್ಪಟ್ಟ ಕಾಂತೆಯು ಇವಳು. ಬಹುಚತುರಳು. ರಾಜಕುಲಸಂಭೂತಳು, ಅಪರ್ಯುಷಿತಯೌವನಶಾಲಿನಿಯಾದ ಈ ಸುಂದರಿಯಂ ಪರಿ

ಗ್ರಹಿಸಿ ರಾಕ್ಷಸನನ್ನನುಗ್ರಹಿಸಿ ಚಂದ್ರಗುಪ್ತನಿಗೆ ರಾಕ್ಷಸನಲ್ಲಿರುವ ವೈರಮಂ ಬಿಡುವಂತೆ ನೇಮಿಸಬೇಕು ಎನಲು ; ಆ ವಾಕ್ಯಮಂ ಕೇಳಿದ ರಾಯನು—

ಅಯ್ಯಾ ಜೀವಸಿದ್ಧಿಯೇ, ಇನ್ನು ಮೇಲೆ ರಾಕ್ಷಸನು ಚಂದ್ರಗುಪ್ತನ ದೆಸೆಯಿಂದ ಬಂದ ಭಯದಿಂದ ತನ್ನಂ ಬಿಡಿಸಿಕೊಳ್ಳಲಿ. ನಾನು ಸುಪ್ರೀತನಾಗಿರುವಲ್ಲಿ ರಾಕ್ಷಸನಿಗೆ ಯಾವ ವಿಷಯದಲ್ಲಿ ತಾನೇ ಕಡಮೆ ? ಮೊದಲು ಲೇಖನಮುಖದಿಂದ ಅವರಿಗೂ ನಮಗೂ ಮಿತ್ರತ್ವಮುಂಟು. ಚಾಣಕ್ಯರು ಮಾಡಿದ ಕಾರ್ಯಗೌರವದಿಂದ ನಂದರು ಸಂಹೃತರಾಗಿ ರಾಕ್ಷಸನ ಮನಸ್ಸಿಗೆ ವ್ಯಸನಮುಂಟಾಯಿತು. ಒಂದು ವೇಳೆ ಏನಾದರೂ ಚಂದ್ರಗುಪ್ತನು ರಾಕ್ಷಸನನ್ನು ಉಪೇಕ್ಷಿಸಿದರೆ ನಂದರಾಜ್ಯದಲ್ಲಿ ನನಗೆ ಬರುವ ಅರ್ಧರಾಷ್ಟ್ರವನ್ನಾದರೂ ಅಮಾತ್ಯನ ವಶವಂಗೆಯ್ದು ಅದಕ್ಕವನಂ ಅಧಿಪತಿಯಂ ಮಾಡುವೆನು. ಆತನು ನಿರ್ಭಯದಿಂದ ಬರಲಿ ಎಂದು ಹೇಳಿ ಅಷ್ಟರಲ್ಲಿಯೇ ಆ ಸ್ತ್ರೀಯಂ ನೋಡಿ ಕಾಮಶರಪ್ರಹಾರಪರವಶನಾಗಿ ಆಸನ್ನಮೃತಿಯುಳ್ಳವನಾದುದರಿಂದ ಸಮೀಪದ ಜನಮಂ ಮೃತ್ಯುವಿನ ಆಳಗದಂತೆ ಕಾಣುತ್ತಿರಲು ; ಕ್ಷಪಣನು ಅವಳಂ ಕುರಿತು—

ಎಲೌ ನಾರೀಶಿರೋಮಣಿಯೇ, ನಿನಗನುರೂಪನಾದ ಪತಿಯು ದೊರಕಿದನು. ಈತನ ಚಿತ್ತಾನುಸಾರವಾಗಿ ನಡೆದುಕೊಳ್ಳುವವಳಾಗು. ಭಯಪಡಬೇಡ. ನಾನು ಇಲ್ಲಿಯೇ ಇರುವೆನೆಂದು ಹೇಳಿ ಪರ್ವತರಾಜನಂ ಕುರಿತು—

ಅಯ್ಯಾ ಅರಸೇ, ಮಾಲತೀಕುಸುಮದಂತೆ ಮೃದ್ವಂಗಿಯಾದ ಈ ಕನ್ಯಾರತ್ನಮಂ ಪರಿಗ್ರಹಿಸುವವನಾಗೆಂದು ಅವಳಂ ತನ್ನ ನೌಲುಗರಿಯ ದೊಂದೆಯಿಂ ಆತನ ಕೈಯಲ್ಲಿ ಒಪ್ಪಿಸಲು ; ಆ ರಾಯಂ ತನಗೆ ವಿಧಿಬಲಂ ಕ್ಷೀಣವಾಗಿದ್ದ ಕಾರಣದಿಂ ದಾವಾನಲಶಿಖೆಗೆ ಮಾಂಸಭ್ರಾಂತಿಯಿಂದ ನಾಲಗೆಯ ತುದಿಯಂ ಚಾಚುವ ಮೃಗರಾಜನಂತೆ ಅವಳಲ್ಲಿ ಬೆರೆದು ಆ ಕನ್ಯೆಯ ವಿಷವೇಗವು ತಲೆಗೇರಿ ಬಲಗುಂದಿ ತಕ್ಷಕನಿಂದ ದಷ್ಟನಾದ ಪರೀಕ್ಷಿದ್ರಾಜನಂತೆಯೂ ಕಿಂದಮನ ಮುನಿಯ ಶಾಪದಿಂದ ಮಾದ್ರೀದೇವಿಯ ವಕ್ಷಸ್ಥಳದಲ್ಲೊರಗಿದ ಪಾಂಡುಮಹಾರಾಜನಂತೆಯೂ ಗತಪ್ರಾಣನಾದನು.

ಆಗ ಆ ಕನ್ಯೆಯು ಪ್ರಿಯನಾದ ಪರ್ವತೇಶ್ವರನು ಮೃತನಾದುದಂ ನೋಡಿ ದುಃಖಾಕ್ರಾಂತಳಾಗಿ ಎದ್ದು ಮಂಚದಲ್ಲಿಯೇ ಆ ರಾಯನಂ ಮಲಗಿಸಿ ಆತನ ಛಾದನದಿಂದಲೇ ತುಂಬಾ ಹೊದಿಸಿ ಮಹಾಪಾಪಿಷ್ಠೆಯಾದ ತನ್ನಿಂದ ಪ್ರಜಾಪರಿಪಾಲಕನಾದ ಈ ಪ್ರಭುವು ಪಂಚತ್ವವನ್ನೈದಿದನು. ನನ್ನ ಒಡೆಯನಾದ

ರಾಕ್ಷಸನು ನನ್ನಂ ಜೀವಸಿದ್ಧಿಯ ವಶಮಂ ಮಾಡಿ ಆತಂ ಹೇಳಿದಂತೆ ನಡೆದುಕೋ ಎಂದು ನೇಮಿಸಿದ ಮೇರೆಗೆ ಸ್ವಾಮಿಕಾರ್ಯಮಂ ಮಾಡಿದವಳಾದರೂ ರಾಜಹತ್ಯಾದೋಷಂ ನನಗೆ ಬಂದಿತು. ನಾನು ಭೃಗುಪತನದಿಂದಾದರೂ ದೇಹಮಂ ಬಿಟ್ಟು ಈ ಪಾಪಮಂ ಕಳೆಯುವೆನೆಂದರೆ ಈ ನನ್ನ ಶರೀರಭಕ್ಷಣೆಯಿಂದ ಬಹು ಪ್ರಾಣಿಗಳು ಮೃತವಾದಾವು. ಆ ಶವದ ಗಾಳಿ ಬೀಸಿದರೆ ದೇಶದ ಪ್ರಜೆಗಳಿಗೆ ಕ್ಷುದ್ರರೋಗಂ ಸಂಭವಿಸೀತು. ಆದುದರಿಂದ ಅಗ್ನಿಯನ್ನಾದರೂ ಪ್ರವೇಶಿಸಿ ಪಾಪಮುಕ್ತಳಾಗುವೆನೆಂದು ಬಗೆದು ಜೀವಸಿದ್ಧಿ ಎಲ್ಲಿ ಇದ್ದಾನೆ? ಎಂದು ಕೇಳುತ್ತ ಶಯನಗೃಹದಿಂದ ಈಚೆಗೆ ಬರುತ್ತಿರುವಲ್ಲಿ ಅವಳಂ ನೋಡಿ ಅಲ್ಲಿನ ಕಂಚುಕಿಗಳು—ಹೀಗೆ ಎಷ್ಟೋಮಂದಿ ವಾರಾಂಗನೆಯರು ರಾಯನ ಶಯನ ಗೃಹಕ್ಕೆ ಬರುತ್ತ ಹೋಗುತ್ತ ಇರುವರು ಎಂದು ಅವಳಂ ತಡೆಯದೆ ಬಿಡಲು ಆ ಸ್ಥವಮಂ ಬಿಟ್ಟು ಜೀವಸಿದ್ಧೀ! ಜೀವಸಿದ್ಧೀ! ಎಂದು ಕೂಗುತ್ತ ತೆರಳುತ್ತಿದ್ದಳು. ಆಗ ಜೆತ್ತಲೆಗುದುರೆಯನ್ನೇರಿ ಐದುತ್ತಿರುವ ಬಾಗುರಾಯಣನು ಆಕೆಯಂ ಕಂಡು ವಿಷಕನ್ಯೆ ಎಂದು ತಿಳಿದು ಅಲ್ಲಿನ ವೃತ್ತಾಂತವನ್ನರಿಯಲಿಚ್ಛೈಸಿದವನಾಗಿ—

ಎಲೈ ಅಂಗನೆಯೇ, ನೀನು ಜೀವಸಿದ್ಧೀ ಎಂದು ಕೂಗುತ್ತ ಅರುಣೋದಯಸಮಯದಲ್ಲಿ ಯಾವ ರಾಯನಂ ವಂಚಿಸಿ ಹೋಗುತ್ತಿದ್ದೀಯೇ? ನಿನ್ನಂ ನೋಡಿದರೆ ರಾಕ್ಷಸನು ಸಾಕುತ್ತಿದ್ದವಳಂತೆ ತೋರುತ್ತಿದೆ. ಆತನಿಗೆ ದ್ರೋಹವನ್ನೆಣಿಸಿ ಎಲ್ಲಿಗೆ ಗಮಿಸುವೆ? ಯಥಾರ್ಥಮಂ ಹೇಳದಿದ್ದರೆ ನಿನಗೆ ಚಿತ್ರಹಿಂಸೆಯಂ ಮಾಡಿಸುವೆನು. ನಾನು ಸೇನಾಪತಿಯಾದ ಬಾಗುರಾಯಣನು ಎನಲು; ಆ ಮಾತಿಗೆ—

ಅಯ್ಯಾ ಬಾಗುರಾಯಣನೇ, ನಾನು ನನ್ನ ಒಡೆಯನಂ ವಂಚಿಸಿದವಳಲ್ಲ. ಆತನ ಆಜ್ಞೆಯ ಮೇರೆಗೆ ನಡೆದುದರಿಂದ ಈಗ ಪರ್ವತೇಶ್ವರನು ಗತಪ್ರಾಣನಾದನು. ವಿಚಾರಿಸಿಕೋ. ಈ ಪಾಪ ನಿಷ್ಕೃತಿಗೋಸುಗ ಮಹಾತ್ಮರ ಸನ್ನಿಧಿಗೆ ಹೋಗುವೆನು. ಈಗ ನನ್ನಂ ವಧಿಸಬೇಡ. ಇದು ಸತ್ಯವು ಎನಲು; ಅದಂ ಕೇಳಿ—ಬಾಗುರಾಯಣನು ಹಾಗಾದರೆ ಹೋಗು. ಜೀವಸಿದ್ಧಿಯು ದೂರದಲ್ಲಿ ಓಡುತ್ತಿದ್ದಾನೆಂದು ಹೇಳಿ ಈ ಕುಟಿಲಕಾಮಿನಿಯ ವಾಕ್ಯದಿಂದಲೇ ಪರ್ವತರಾಜನ ಮೃತಿಯಂ ನಿಶ್ಚಯಿಸಕೂಡದು. ಇನ್ನೂ ಪ್ರಮಾಣಿಸಿ ತಿಳಿದು ಹೋಗಬೇಕೆಂದು ನೆನಸಿ ಆ ದೊರೆಯ ಶಯನಗೃಹದ ಕಂಚುಕಿಗಳು ಮಲಗುವ ಗೂಡಾರದ ಹಿಂದೆ ನಿಂತು ಅವರು ಆಡಿಕೊಳ್ಳುತ್ತಿರುವ ಸಂದಿಗ್ಧವಾರ್ತೆಯಿಂದ ಪರ್ವತರಾ

ಜನು ಮರಣ ಹೊಂದಿದುದು ಸಿದ್ಧವೆಂದು ತಿಳಿದು ಕುದುರೆಯಂ ಚಬುಕು ಮಾಡಿ ಅತಿ ವೇಗದಿಂ ಬಂದು ಮಲಯಕೇತುವಿನ ಗೂಡಾರದ ಬಾಗಿಲಲ್ಲಿ ನಿಂತು—ನಾನು ಬಂದು ಇದ್ದೇನೆ. ನಿಮ್ಮ ಮಲಯಕೇತುವಂ ತ್ವರಿತದಿಂದೆದ್ದು ಬರಹೇಳಿರಿ ಎನಲು; ಆ ದ್ವಾರಪಾಲಕರು ಬಂದು ಅರಸುಮಗನಿಗೆ ಕೈಮುಗಿದು—ಬುದ್ಧೀ, ಬಾಗು ರಾಯಣನು ಬೆತ್ತಲೆಗುದುರೆಯನ್ನೇರಿ ಘೂರ್ಣರಿಂತನಾಗಿ ಸರ್ವಸ್ವಮಂ ಕೊಳ್ಳೆಕೊಟ್ಟು ಓಡಿಬಂದವನಂತೆ ಬಂದು ಬಾಗಿಲಲ್ಲಿ ನಿಂತು ತಮ್ಮಂ ಕಾಣ ಬೇಕೆಂದು ವಿಜ್ಞಾಪಿಸುತ್ತಿದ್ದಾನೆ ಎನಲು; ಅದಂ ಕೇಳಿ ಇದೇನಾಶ್ಚರ್ಯವು! ಎಂದು ಮಲಯಕೇತುವೆದ್ದು ಬಂದು ಬಾಗುರಾಯಣನಂ ಕುರಿತು—

ಇದೇನೈ ಬಾಗುರಾಯಣನೇ, ನಿನಗೆ ಈ ಅವಸ್ಥೆ ? ಎನಲು; ಆತನು—

ಅಯ್ಯಾ ರಾಜಕುಮಾರನೇ, ನಿನ್ನ ನಿಮಿತ್ತವಾಗಿ ನನಗೆ ಈ ಅವಸ್ಥೆ ಬಂದಿತು ಎಂದನು.

ಹಾಗಂದರೇನು ? ಎಂದು ರಾಜಪುತ್ರನು ಕೇಳಲು; ಬಾಗುರಾಯಣನು—

ಅದಂ ಆ ಬಳಿಕ ಹೇಳುವೆನು. ನೀನು ಇಲ್ಲಿ ಕ್ಷಣಕಾಲ ನಿಂತರೆ ನಿನ್ನ ಶರೀರ ಉಳಿಯುವುದಿಲ್ಲ. ಈ ನನ್ನ ಬೆತ್ತಲೆಗುದುರೆಯನ್ನಾದರೂ ಏರಿ ದಂಡಿನ ಪಾಳೆಯಮಂ ಬಿಟ್ಟು ಎರಡು ಹರಿದಾರಿಯ ಆಚೆ ನಿಂತರೆ ಚಾಣಕ್ಯನು ನಿನ್ನ ಪ್ರಾಣಕ್ಕೆ ಮುನಿದಿರುವ ವಿವರಮಂ ವಿಸ್ತಾರವಾಗಿ ತಿಳುಹುವೆನು. ಹೊರಡು ಹೊರಡು ! ನಿಲ್ಲಬೇಡ. ಅದೋ ಸನ್ನದ್ಧವಾಗಿ ಸಮುದ್ರತರಂಗಗಳಲ್ಲಿ ಪ್ರತಿ ಫಲಿಸಿದ ಸೂರ್ಯಪ್ರಭೆಯಂತೆ ಆಯುಧಂಗಳಂ ಝಳಪಿಸುತ್ತ ನಿನ್ನಂ ಸಂಹರಿಸ ಲೋಸುಗ ಬರುವ ಅಪರಿಮಿತಸೇನೆಗಳನ್ನು ನೋಡೆನಲು; ಮಲಯಕೇತುವು ಆ ವಾಹಿನಿಯಂ ನೋಡಿ ಭಯಭ್ರಾಂತನಾಗಿ ಹಿಂದು ಮುಂದು ತೋರದೆ— ನಮ್ಮ ತಂದೆ ಏನಾದನು ? ಎನ್ನುತ್ತ ಬಾಗಿಲಿನಲ್ಲಿ ಜೀನುಮಾಡಿದ ತುರಗವ ನ್ನೇರಲು; ಸೇನಾಪತಿಯು ನಿಮ್ಮ ತಂದೆಯ ವಿಚಾರಮಂ ಆ ಬಳಿಕ ಹೇಳುವೆನು ತಡೆಮಾಡದೆ ನಡೆ! ನಡೆ! ಎನಲು; ಆಗ ರಾಜಪುತ್ರನು ಮಹಾಖಿನ್ನನಾಗಿ ಕುದುರೆಯಂ ಚಬುಕು ಮಾಡಿ ಓಡಿಸುತ್ತಿದ್ದನು. ಅದಂ ಕಂಡು ಆತನ ಮೈಗಾವಲಿನವರು ಹಿಂದೆ ಓಡಿ ಬರುತ್ತಿರಲು; ಅತಿತ್ವರೆಯಿಂ ದಂಡಿನ ಪಾಳೆ ಯಮಂ ಬಿಟ್ಟು ಅರ್ಧಯೋಜನ ಆಚೆಯಲ್ಲಿರುವ ತಿಟ್ಟಿನ ಮೇಲೆ ನಿಂತು ವಿಶ್ರಮಿಸಿಕೊಂಡ ಬಳಿಕ ಬಾಗುರಾಯಣನಿಂತೆಂದನು—

ಅಯ್ಯಾ ನೃಪತನಯನೇ, ಈಶ್ವರನು ನಿನಗೆ ಈ ಬಾಲ್ಯದಲ್ಲಿಯೇ ಇಂಥ ದುರವಸ್ಥೆಯನ್ನುಂಟು ಮಾಡಬಾರದು. ತತ್ಕಾಲದಲ್ಲಿ ನಡೆದಿರುವುದೊಂದನ್ನೂ

ಅರಿಯದೆ ವಿಚಾರರಹಿತನಾಗಿರುವೆ. ಈಗ ನಾನು ನಿಮ್ಮ ತಂದೆಯು ಮೃತನಾದನೆಂಬ ವರ್ತಮಾನಮಂ ಕೇಳಿ ಈ ಸಮಯದಲ್ಲಿ ನಿನಗೂ ಏನಾದರೂ ಅಪಾಯ ಬಂದರೆ ಸಂದರ್ಯೈಶ್ವರ್ಯವು ರಾಜ್ಯಾರ್ಹನಲ್ಲದ ಚಂದ್ರಗುಪ್ತನ ವಶವಾದಂತೆ ಬಹುಕಾಲದಿಂ ನಡೆದು ಬಂದ ಪಾರ್ವತೇಯರ ಸಂಪತ್ತೂ ಕೂಡ ಕ್ಷುದ್ರರಾದ ಕಿರಾತರಿಂದಾಕ್ರಾಂತವಾದರೆ ಜನಗಳಿಗೆ ಪ್ರಾಪ್ಯಸ್ಥಳವಿಲ್ಲದೆ ಹೋದೀತೆಂಬ ಸಂತಾಪದಿಂದ ದೇಹಶ್ರಮಮಂ ಲಕ್ಷೀಕರಿಸದೆ ನಿನ್ನಲ್ಲಿ ಪೂರ್ವ ಪರಿಚಯವಿಲ್ಲದಿದ್ದಾಗ್ಗೂ ನೀನಾದರೂ ಉಳಿದರೆ ಉಪಕಾರಮಂ ಸ್ಮರಿಸಿಕೊಂಡಾನೆಂದು ನಿಶ್ಚಯಿಸಿ ನಿನ್ನ ಬಳಿಗೆ ಬಂದು ಈ ಸಂಗತಿಯಂ ತಿಳುಹಿಸಿದೆನು. ಅದರ ವಿವರಮಂ ಚೆನ್ನಾಗಿ ಹೇಳುವೆನು ಕೇಳು—ಇದೇ ರಾತ್ರಿ ಇಪ್ಪತ್ತುಗಳಿಗೆಯಲ್ಲಿ ಚಂದ್ರಗುಪ್ತನ ದೂತರಿಬ್ಬರು ಬಂದು—ಅಪ್ಪಣೆಯಾಗಿದೆ. ನಿಮ್ಮ ಸೇನೆಗಳಂ ಈ ಕ್ಷಣವೇ ಸಹ್ನಾಹಂಗೊಳಿಸಿಕೊಂಡು ಹೋಗಿ ಮಲಯಕೇತುವಿನ ಗೂಡಾರದ ಪಶ್ಚಿಮಭಾಗದಲ್ಲಿ ಯುದ್ಧಸನ್ನದ್ಧರಾಗಿ ದೂರದಲ್ಲಿ ನಿಂತಿದ್ದು ಆಮೇಲೆ ಅಪ್ಪಣೆಯ ಮೇರೆಗೆ ನಡೆದುಕೊಳ್ಳಬೇಕು ಎಂದು ಪ್ರಭುಗಳ ಆಜ್ಞೆಯಾಗಿದೆ. ಈಗಲೇ ನಿಮ್ಮ ಚತುರಂಗಗಳಂ ಹೊರಡಿಸುವವರಾಗಿರಿ ಎಂಬುದಾಗಿ ನನಗೂ ಡಿಂಗಿರಾತನಿಗೂ ಪುರುಪದತ್ತ ಬಲಗುಪ್ತರಿಗೂ ಹೇಳಿಹೋದರು. ರಾಜಾಜ್ಞೆಯಂ ಮೀರಿದರೆ ಅಪರಾಧಿಗಳಾದೇವೆಂಬ ಭೀತಿಯಿಂದ ನೇಮಿಸಿದ ಮೇರೆಗೆ ಸೇನೆಗಳು ಹೊರಡುತ್ತಿರಲು ; ನಾನು ನನ್ನ ಮನಸ್ಸಿನಲ್ಲಿ ನಾನಾ ವಿಕಲ್ಪದಿಂ ಆಲೋಚಿಸುತ್ತ ಪುನಃ ನನಗೆ ನಿದ್ರೆ ಬಾರದೆ ಅರುಣೋದಯ ಸಮಯವಾಗಲು ; ಆಗ ಎಂದಿನಂತೆ ಪುಷ್ಪವಾಟಿಯಂ ನೋಡುವುದಕ್ಕೆ ಶಯ್ಯಾತಲದಿಂದೆದ್ದು ಈ ವಿಷಯವನ್ನೇ ಚಿಂತಿಸುತ್ತ ಹೂದೋಟಕ್ಕೆ ಹೋಗಿ ಕುಸುಮಿತಗಳಾದ ಲತೆಗಳಂ ನೋಡುತ್ತ ನಾನು ಸಂಚರಿಸುತ್ತಿರುವಷ್ಟರಲ್ಲಿಯೇ ಸೂರ್ಯನುದಯಿಸಿ ಅಂಧಕಾರಂ ತೊಲಗುತ್ತಿರಲು ; ಆ ಸಮಯದಲ್ಲಿ ಸಕಲಾಭರಣಭೂಷಿತಳಾಗಿ ಸೌಂದರ್ಯಶಾಲಿನಿಯಾದ ಒಬ್ಬಳು ಕೆದರಿದ ಕೇಶಗಳಂ ಬಿಡುವ ನಿಟ್ಟುಸಿರುಗಳಂ ಕಳವಳದಿಂ ಬಿರಬಿರನೆ ಹಿಂದಿರುಗಿ ನೋಡುತ್ತ ಮುಂಜೆರಗಂ ಎತ್ತಿ ವಾಮಕರದಿಂ ಹಿಡಿದು ಬೀಳುವುದಂ ಕಾಣದೆ ಓಡಿ ಬರುವುದಂ ಕಂಡು ನಾನು ಇವಳಾರೋ! ತಿಳಿಯಬೇಕೆಂಬ ಕುತೂಹಲದಿಂದ ಹೋಗಿ—ಎಲೈ ಕನ್ನೆಯೇ, ನಿನ್ನನ್ನು ನೋಡಿದರೆ ಮೋಹಿನೀಸ್ತ್ರೀಯಂತೆ ಕಾಣುತ್ತಿದೆ. ಯಾವ ರಾಜಸನ ಮೋಸಗೊಳಿಸಿ ಈ ವೇಳೆಯಲ್ಲಿ ಗಾಬರಿ

ಯಿಂದ ಹೋಗುತ್ತಿರುವೆ? ಈ ಸಂಗತಿಯನ್ನು ಇದ್ದಂತೆ ಹೇಳಿದರೆ ಸರಿ. ಇಲ್ಲ ದಿದ್ದರೆ ನಿನಗೆ ಚಿತ್ರಹಿಂಸೆಯಂ ಮಾಡಿಸುವೆನು. ನಾನು ಬಾಗುರಾಯಣನು ಎಂದು ಬೆದರಿಸಲು ; ಆಗ ಅವಳು ಗಡಗಡನೆ ನಡುಗುತ್ತ—ಅಯ್ಯಾ ಬಾಗುರಾ ಯಣನೇ, ನನ್ನ ವಿಚಾರಮಂ ಯಥಾರ್ಥವಾಗಿ ಹೇಳುವೆನು ಕೇಳು. ನಾನು ರಾಕ್ಷಸನಿಂದ ಪೋಷಿತಳಾಗಿದ್ದ ವಿಷಕನ್ಯೆಯು. ಅತನು ಈ ಪುರಮಂ ಬಿಟ್ಟು ಹೋಗುವಾಗ ನನ್ನಂ ಜೀವಸಿದ್ಧಿಯ ವಶಮಂ ಮಾಡಿ ಅತನು ಹೇಳಿದಂತೆ ಕೇಳುತ್ತಿರು ಎಂದು ನೇಮಿಸಿ ಹೋದ ಬಳಿಕ ಕ್ಷಪಣಕನು ಪ್ರಬಲಾಧಿಕಾ ರಿಗಳ ವಾಕ್ಯೋಲ್ಲಂಘನಮಂ ಮಾಡುವುದಕ್ಕೆ ಅಸಮರ್ಥನಾಗಿ ಬಲವದ್ವಿ ರೋಧಂ ಒಂದೀತೆಂಬ ಶಂಕೆಯಿಂದ ತನ್ನ ಕ್ಷೇಮಾರ್ಥವಾಗಿ ನನ್ನನ್ನು ಪರ್ವ ತರಾಜನ ಬಳಿಗೆ ಕಳುಹಿಸಿಕೊಟ್ಟುದರಿಂದ ಈ ಪರ್ವತರಾಜನು ನನ್ನಂ ಕಂಡು ಕಾಮಮೋಹಿತನಾಗಿ ವಿಚಾರಿಸದೆ ತವಕದಿಂ ನನ್ನಲ್ಲಿ ಕುಕ್ಕುಟಾಚಾರಂಗೆಯ್ದು ಕೂಡಿ ಮೃತನಾದನು. ಆ ಬಳಿಕ ನಾನು ಉಪಾಯಾಂತರದಿಂದ ಅತನ ಶಯನ ಗೃಹಮಂ ಬಿಟ್ಟು ಪ್ರಾಣಮಂ ತಪ್ಪಿಸಿಕೊಂಡು ಓಡಿ ಬಂದೆನು. ಇದು ಸತ್ಯವು. ಇನ್ನು ನಿಮ್ಮ ಮನಸ್ಸು ಬಂದಂತೆ ಮಾಡಬಹುದು. ನಾನು ಪಾಪಿಷ್ಠಳು ಎನಲು ; ಆ ಮಾತಂ ಕೇಳಿ ನಾನು ಮನದಲ್ಲಿ—ಓಹೋ! ಪ್ರಬಲಾಧಿಕಾರಿ ಯಾದ ಚಾಣಕ್ಯನು ಪರ್ವತೇಶ್ವರನಿದ್ದರೆ ಅವನಿಗೆ ನಂದರಾಜ್ಯದಲ್ಲಿ ಅರ್ಧಮಂ ಕೊಡಬೇಕಾಗುತ್ತದೆಯಲ್ಲಾ? ಎಂಬ ಲೋಭಬುದ್ಧಿಯಿಂದ ರಾಕ್ಷಸನು ಯಾವ ಕಾರ್ಯಾರ್ಥವಾಗಿಯೋ ಸಂಗ್ರಹಿಸಿದ್ದ ಈ ವಿಷಕನ್ಯೆಯನ್ನು ಪರ್ವತರಾಜನ ಬಳಿಗೆ ಕಳುಹಿಸುವಂತೆ ಕ್ಷಪಣಕನಾದ ಜೀವಸಿದ್ಧಿಯಂ ನಯಭಯದಿಂ ಒಡಂ ಬಡಿಸಿ ಅವಳನ್ನಟ್ಟಿ ಪರ್ವತರಾಜನಂ ಸಂಹರಿಸಿದನು. ಇದಲ್ಲದೆ ಮೊದಲೇ ಕಾಲೋಚಿತವಾದ ಮೃದುವಾಕ್ಯಮಂ ಹೇಳಿ ಪರ್ವತೋರ್ವಿಪನ ಸೇನೆಯನ್ನು ಅವರ ದೇಶಕ್ಕೆ ಹೋಗುವಂತೆ ಮಾಡಿ ಕಳುಹಿಸಿ ಸ್ವಲ್ಪ ಪರಿವಾರಸಮೇತನಾದ ಮಲಯಕೇತುವಂ ಸಂಹರಿಸುವುದಕ್ಕೋಸುಗ ಈ ರಾತ್ರಿಯಲ್ಲಿ ಬಲಮಂ ಕರೆಯ ಕಳುಹಿಸಿಕೊಂಡನು ಎಂದು ನಿಶ್ಚಯಿಸಿ ಅವಳಂ ಹೊಗೆಂದು ಕಳುಹಿಸಿ ಈ ದುಷ್ಟಸ್ತ್ರೀ ವಾಕ್ಯದಿಂದಲೇ ಪರ್ವತೇಂದ್ರನ ಮೃತಿಯಂ ನಿಶ್ಚಯಿಸಕೂಡದು. ರಾಜಕೀಯವಾದುದರಿಂದ ಇನ್ನೂ ಪ್ರಮಾಣಿಸಿ ತಿಳಿಯಬೇಕೆಂದು ನಿಮ್ಮ ತಂದೆಯ ಶಯನಗೃಹದ ಕಂಚುಕಿಗಳು ಮಲಗುವ ಗೂಡಾರದ ಹಿಂದೆ ಬಂದು ನಿಂತು ಅವರು ಮಾತಾಡುವ ಮಾತುಗಳನ್ನಾಲಿಸುತ್ತಿರಲು ; ಅಷ್ಟರಲ್ಲಿಯೇ

ಆ ಮಲಗುವ ಮನೆಯ ಒಬ್ಬ ಕಂಚುಕಿಯು ಬಂದು ತನಗೆ ಯಜಮಾನನಾದ ವೃದ್ಧಕಂಚುಕಿಯಂ ಕುರಿತು—ಅಯ್ಯಾ ಹಂಸಕನೇ, ಯಾಕೆ ಮಲಗಿದ್ದೀ? ಬೇಗ ಏಳು. ಇಂದು ವಿಶೇಷವರ್ತಮಾನವುಂಟು ಕೇಳು! ಏನೆಂದರೆ—ಅರುಣೋದಯಸಮಯದಲ್ಲಿ ಪರ್ವತರಾಜನು ಎಂದಿನಂತೆ ನಿದ್ರೆಯಿಂದೆದ್ದು ಶಯನಗೃಹಮಂ ಬಿಟ್ಟು ಬಾರದೇ ಇದ್ದುದರಿಂದ ಮೊದಲ ಮೇರೆಗೆ ಪ್ರಾತಃಕಾಲದ ವಾದ್ಯಂಗಳಂ ಮಾಡಿಸಲು; ಆ ಧ್ವನಿಗೂ ನೃಪನಿಗೆ ಎಚ್ಚರವಿಲ್ಲದಿರಲು; ಶುಕವಾಕ್ಯಶ್ರವಣಕ್ಕೆ ಜಾಗ್ರತನಾಗುವ ಭೂಪತಿಗೆ ಏನು ಕಾರಣ ಈ ನಿದ್ರೆ ಸಂಭವಿಸಿತೋ! ಎಂದು ಚಿಂತಿಸಿ ಕೈಚಪ್ಪಾಳೆಗಳಂ ತಟ್ಟಿ ಶಯ್ಯಾಗೃಹದ ಒಳಯಿಂಕೆ ಹೋಗಿ ಪ್ರಾತಃಕಾಲದಲ್ಲಿ ಧ್ವನಿ ಮಾಡುತ್ತಿದ್ದ ಶುಕಶಾರಿಕಾ ಪಕ್ಷಿಗಳು ಪಂಜರದಲ್ಲಿಯೇ ಮೃತನಾಗಿರುವುದಂ ನೋಡಿ ಮನದಲ್ಲಿ ಮಹಾತಂಕಂಗೊಂಡು ರಾಯನಂ ತಟ್ಟಿ ಎಬ್ಬಿಸುವುದಕ್ಕೆ ಭೀತನಾಗಿ ನಾನು ಪಾದಸೇವೆಯಂ ಮಾಡುವಂತೆ ಅವನೀಶನ ಚರಣಗಳಂ ಗಟ್ಟಿಯಾಗಿ ಅಮುಕುತ್ತಿರಲು; ಆತನ ಅಂಘ್ರಿಗಳು ಕದಳೀಸ್ತಂಭಗಳಂತೆ ಅತಿಶೀತಲಗಳಾಗಿ ಸ್ವರ್ಣವರ್ಣವಾಗಿದ್ದ ಚರಣಗಳು ಹಸುರು ಬಣ್ಣವಾಗಿರುವುದಂ ನೋಡಿ ಆಕುಲದಿಂದ ಪ್ರಭುವಿನ ಮುಸುಕಂ ತೆಗೆದು ನೋಡುವುದಕ್ಕೆ ಭೀತನಾಗಿ ತ್ವರಿತದಿಂ ಬಂದು ನಿನಗೆ ತಿಳಿಸಿದೆನು. ನೀನೇ ಹೋಗಿ ವಿಚಾರಿಸು ಎಂದು ಹೇಳಲು; ಅವನು ತನಗೆ ಈ ವರ್ತಮಾನಮಂ ಉಸುರಿದ ಕಂಚುಕಿಯಂ ಕುರಿತು—

ಎಲೈ ದಾತ್ಯೂಹಕನೇ, ವೃದ್ಧನಾದ ನನಗೆ ನಿದ್ರೆಯು ಮಬ್ಬಿನಿಂದ ನೀನು ನುಡಿದ ವಾಕ್ಯವು ಅರ್ಥವಾಗಲಿಲ್ಲ. ಪಕ್ಷಿಗಳು ಮೃತವಾದುವು ಅಂದರೇನು? ಕಾಲುಗಳು ಶೀತಲಗಳಾಗಿಯೂ ಹಸುರಾಗಿಯೂ ಇದ್ದುವು ಅಂದರೇನು? ಇನ್ನೊಮ್ಮೆ ಚೆನ್ನಾಗಿ ಹೇಳು ಎನಲು; ಅವನು ಎಂದಿನಂತೆ ತಿಳಿಸುವುದಕ್ಕೆ ಉಪಕ್ರಮಿಸಲು; ಕಂಚುಕಿಯು ಮೊದಲು ಹೇಳಿದ ವಾಕ್ಯದಿಂದಲೇ ಪರ್ವತರಾಜನು ಮೃತನಾದುದು ಸಿದ್ಧವೆಂದು ನಿಶ್ಚಯಿಸಿ ನಿನ್ನ ಗೂಡಾರಕ್ಕೆ ಅಭಿಮುಖವಾಗಿ ಬರುವ ಸೇನೆಯಂ ದೂರದಿಂದಲೇ ನೋಡಿ ತ್ವರಿತನಾಗಿ ನಿನ್ನ ಬಳಿಗೆ ಬಂದು ತಿಳುಹಿಸಿದೆವು. ಇನ್ನು ನೀನು ಎಲ್ಲಿಯೂ ನಿಲ್ಲಕೂಡದು ತೆರಳುವವನಾಗು ಎಂದು ಭಾಗುರಾಯಣನು ಮಲಯಕೇತುವಿಗೆ ಹೇಳಲು; ಅದಂ ಕೇಳಿ ರಾಜಪುತ್ರನು ಮಹಾದುಃಖಿತನಾಗಿ ರೋದನಮಂ ಮಾಡುತ್ತ—

ಎಲೈ ಭಾಗುರಾಯಣನೇ, ನನ್ನ ತಂದೆಯು ಮೃತನಾದುದು ಸತ್ಯವೇ! ಸತ್ಯವೇ! ಹಾ! ವಿಧಿಯೇ! ಜನಕಂಗೆ ಏನು ವಿಪತ್ತಂ ತಂದು ಬಿಟ್ಟೆ? ಹಾ!

ರಾಜಾಧಿರಾಜನಾದ ತಂದೆಯೇ! ಯಾರೂ ಕಾಣದ ಈ ದೇಶಕ್ಕೆ ನಮ್ಮೆಲ್ಲರಂ ಕರತಂದು ಶತ್ರುಗಳ ಕಾಪಟ್ಯಕ್ಕೆ ವಶನಾಗಿ ಯಾವ ಲೋಕಕ್ಕೆ ಹೋಗಿ ಕಣ್ಣು ಮರೆಯಾದೆ? ನಿನಗೆ ಬಂದ ಆಪತ್ಸಮಯದಲ್ಲಿ ನಿನ್ನ ಬಳಿಯಲ್ಲಿದ್ದು ನಿನ್ನ ಶಿರಮಂ ತೊಡೆಯೊಳಿಟ್ಟುಕೊಂಡು ತಂದೆಯೇ! ನಿನಗೆ ಏನು ಸಂಕಟವು? ಎಂದು ಕೇಳುತ್ತ ಏನಂ ಬಯಸುವೆ? ಎಂದು ಮಾತನಾಡಿಸುತ್ತ ನಮ್ಮೆಲ್ಲರಿಗೂ ಏನು ಬುದ್ಧಿವಾದಗಳಂ ಹೇಳುವೆ? ಎಂದು ಪ್ರಾರ್ಥಿಸಿಕೊಳ್ಳುತ್ತ ಶ್ಲೇಷ್ಮರಭಸದಿಂದ ಶುಷ್ಕವಾಗುತ್ತಿರುವ ನಿನ್ನ ಗಂಟಲಿಗೆ ಆಪ್ಯಾಯನವಾಗುವಂತೆ ಶೀತಲಗಳಾದ ಜಲಗಳಂ ಬಿಡುವುದಕ್ಕೆ ಪುಣ್ಯವಿಲ್ಲದೆ ಹೋದ ನನ್ನ ಈ ಪುತ್ರತ್ವವನ್ನು ಸುಡಬೇಡವೇ? ನೀನು ಪುರಕ್ಕೆ ಬರುವೆಯೆಂದು ಸಡಗರದಿಂ ಸಿಂಗರಿಸಿಕೊಂಡು ಕೈಯ್ಯಲ್ಲಿ ಆರತಿಗಳಂ ಪಿಡಿದು ನಮ್ಮ ತಂದೆ ಎಲ್ಲಿ ಬರುವನು? ಎಂದು ನಿರ್ಬಂಧಪಡಿಸುವ ನನ್ನ ತಂಗಿಯಾದ ಕಾಂತಿಮಾಲಿನಿಗೆ ಏನು ಉತ್ತರಮಂ ಹೇಳಲಿ? ಪ್ರಿಯಂ ಬರುವನೆಂಬ ಕುತೂಹಲದಿಂ ಶಯನಗೃಹವನ್ನಲಂಕರಿಸಿ ನೂತನಾಭರಣಂಗಳಂ ಧರಿಸಿ ರಾಜಭವನದಲ್ಲಿ ಲಕ್ಷ್ಮಿಯರಂತೆ ಶೋಭಿಸುವ ಸಖೀಜನದ ಸ್ತುತಿವಚನಗಳಂ ಕೇಳುತ್ತ ಅವರ ವಾಕ್ಯಗಳಿಗೆ ಹರುಷಂಬಡುತ್ತ ಇದಿರು ನೋಡುತ್ತಿರುವ ನಮ್ಮ ತಾಯಿಗೆ ಏನೆಂದು ಉಸುರಿ ಮುಖಮಂ ತೋರಿಸಲಿ? ಎಂದು ಹಂಬಲಿಸುತ್ತಿರಲು; ಆ ಮಲಯಕೇತುವಂ ಕುರಿತು ಬಾಗುರಾಯಣನು—

ಅಯ್ಯಾ ರಾಜಕುಮಾರಕನೇ, ದೈವಸಂಕಲ್ಪದಿಂ ಬಂದ ಆಪತ್ತಿಗೆ ಇನ್ನು ದುಃಖಪಟ್ಟು ಫಲವೇನು? ಮಹಾರಾಜ್ಯಮಂ ನಿರ್ವಹಿಸುವುದಕ್ಕೆ ಯೋಗ್ಯನಾದ ನೀನು ವ್ಯಸನಪಡುತ್ತಿದ್ದರೆ ಪ್ರಜೆಗಳಿಗೂ ವ್ಯಸನಮುಂಟಾಗುವುದು. ರಾಜಕಾರ್ಯವೂ ಕೆಡುವುದು. ಶತ್ರುಗಳಿಗೆ ಹರ್ಷಮುಂಟಾದಿತು. ಈಗ ನಿಮ್ಮ ಚಿಕ್ಕಪ್ಪನಾದ ವಿರೋಚಕನನು ಅವರ ಬಳಿಯಲ್ಲಿಯೇ ತಗುಲಿರಬೇಕು. ಚಾಣಕ್ಯನಿಗೆ ಶೂರನಾದ ನಿನ್ನಲ್ಲಿ ದ್ವೇಷವಿದ್ದಂತೆ ವಿರೋಚಕನನಲ್ಲಿ ಇರಲಾರದು. ಆತನ ಮುಖದಿಂದಲೇ ನಿಮ್ಮ ತಂದೆಗೆ ಈಗ ಮಾಡತಕ್ಕ ಅಪರಕೃತ್ಯಗಳು ನೆರವೇರಿಯಾವು. ಮುಂದೆ ರಾಜ್ಯಭಾರವು ನಿನ್ನಿಂದಲೇ ನಿರ್ವಹಿಸಲ್ಪಡಬೇಕಾಗುತ್ತಿದೆ. ನೀನು ತಿಳಿದವನಾದರೂ ಬಾಲಕನಾದುದರಿಂದ ಪ್ರಮಾದಂ ಬರುವ ಮಾರ್ಗಮಂ ತಿಳುಹಿಸುವೆನು. ನೀನು ರಾಜ್ಯವಿಚಾರಮಂ ಮಾಡುತ್ತಿರುವಲ್ಲಿ ದೇಶಮರ್ಯಾದೆಯಂ ನಿನ್ನ ದೇಹಕ್ಕಿಂತಲೂ ಅತಿಶಯವಾಗಿ ರಕ್ಷಿಸುವವನಾಗು.

ಲೋಕಾಪವಾದಕ್ಕೆ ಭೀತನಾಗಿ ನಡೆ. ಕಾರ್ಯಮಂ ವಿಮರ್ಶೆಯಿಂದ ಮಾಡು
ವವನಾಗು. ಅಪರಾಧಿಗಳಂ ಯೋಗ್ಯತೆಯರಿತು ದಂಡಿಸು. ನೀನು ಮಾಡುವ ಕೆಲ
ಸಮಂ ಭೃತ್ಯರಿಗೆ ನೇಮಿಸದೆ ಅನ್ಯರು ಮಾಡುವ ಕಾರ್ಯಕ್ಕೆ ನೀನು ಮನಗೊ
ಡದೆ ಇಹಪರತತ್ವಂಗಳಂ ತಿಳಿದು ಪಾಪಭೀತರಾಗಿ ಹಿತಮಂ ಹೇಳುವ
ವಿದ್ವಜ್ಜನರ ವಾಕ್ಯಮಂ ಪರಮತಾರಕಮಂತ್ರಮೆಂದು ತಿಳಿ. ದೂರದರ್ಶಿಗಳೂ
ಸ್ವಾಮಿಭಕ್ತರೂ ಕಾರ್ಯದಕ್ಷರೂ ಆದವರಂ ಮಂತ್ರಿಪದದಲ್ಲಿ ನಿಲ್ಲಿಸು.
ಉಚಿತಪ್ರವರ್ತಕರಿಗೆ ದಿನೇ ದಿನೇ ಉತ್ಸಾಹಂ ತಗ್ಗಿ ಬಾರದಂತೆ ನಡೆಯಿಸುವವ
ನಾಗು. ನಿರ್ವಾಹವರಿತು ಕಾರ್ಯಮಂ ನೆರವೇರಿಸುವನಾಗು. ಕೆಲಸಮಂ
ನೋಡಿ ಸಂಬಳಮಂ ಮಾಡು ಎಂದು ವೃದ್ಧಮಂತ್ರಿಯು ಬಾಲಕನಾದ ಅರಸಂ
ಶಿಕ್ಷಿಸುವ ತೆರದಲ್ಲಿ ನಿರ್ವಂಚನೆಯಿಂ ನೀತಿಮಾರ್ಗಮಂ ಹೇಳುವವನಂತೆ
ಬೋಧಿಸುತ್ತಿರಲು ; ಮಲಯಕೇತುವು ಅದಂ ಕೇಳಿ ಹಿತವೆಂದು ತಿಳಿದು ಶಬ
ರವರ್ಮನು ಕಾಲವಾದುದರಿಂದ ಭಾಗುರಾಯಣನನ್ನೇ ಸಚಿವನಂ ಮಾಡಿಕೊಳ್ಳ
ಬೇಕೆಂದು ತನ್ನ ಮನಸ್ಸಿನಲ್ಲಿ ನಿಶ್ಚಯಿಸುತ್ತಿರಲು ; ಅಷ್ಟರಲ್ಲಿಯೇ ಪರ್ವತರಾ
ಜನ ದಂಡಿನ ಪಾಳೆಯದಿಂ ಮಲಯಕೇತುವು ಹೊರಟು ಹೋದುದಂ ಕಂಡು
ಕಂಚುಕಿಗಳು ಆ ಯರ್ಥಮಂ ಪರ್ವತೇಶ್ವರನಿಗೆ ತಿಳಿಸಬೇಕೆಂದು ಆತನ ಶಯ
ನಗೃಹಕ್ಕೆ ಬಂದು ಮಂಚದಲ್ಲಿ ನಿದ್ರೆಗೆಯ್ವವನಂತೆ ಮೃತನಾಗಿ ಮಲಗಿರುವ
ಪರ್ವತಕ್ಷ್ಮಾಪತಿಯ ಮುಸುಕಂ ತೆಗೆದು ಅಲ್ಲಾಡಿಸಿ ನೋಡಿ ಶ್ವಾಸವಿಲ್ಲದಿ
ರಲು ; ಹೋ ! ಹೋ ! ಮರಣಹೊಂದಿದನೆಂದು ತಿಳಿದು ಈಚೆಗೆ ಬಂದು
ಬೊಬ್ಬೆಗೆಯ್ಯಲು ; ಜನರೆಲ್ಲರೂ ನೆರೆದು ಕಲಕಲಮಂ ಮಾಡಿದರು. ಅಷ್ಟರ
ಲ್ಲಿಯೇ ಆಯುಧಂಗಳಂ ಝಳಪಿಸುತ್ತ ಅಪರಿಮಿತವಾಗಿ ಬರುವ ಚಂದ್ರಗು
ಪ್ತನ ಸೇನೆಯಂ ಕಂಡು ಇಲ್ಲಿದ್ದರೆ ಅರಸಿಗೆ ಬಂದಂತೆ ನಮಗೂ ಪ್ರಾಣಾ
ಪತ್ತು ಬರುವುದೆಂದು ನಿಶ್ಚಯಿಸಿ ಅಲ್ಲಿದ್ದ ಸ್ವಲ್ಪ ಪರಿವಾರವೂ ಮಲಯಕೇತು
ವಿನ ಬಳಿವಿಡಿದು ಬರುತ್ತಿತ್ತು. ಇದೆಲ್ಲಮಂ ನೋಡಿ ಇದ್ದುದು ಇದ್ದಂತೆ ಸರ್ವ
ಸ್ವಮಂ ತೊರೆದು ಅರಸಿನ ತಮ್ಮನಾದ ವಿರೋಚನನು ಮತ್ತೊಂದು ದಿಕ್ಕಿಗೆ
ಓಡುತ್ತಿದ್ದನು. ಆ ಬಳಿಕ ಶೇಖರಮುಖ್ಯರಾದ ಸೇನಾಪತಿಗಳೆಲ್ಲರೂ ತಾವು
ಮಿತಬಲಪರಿವೃತರಾದುದರಿಂದಲೂ ಪರ್ವತರಾಜನು ಕಾಲವಾದುದರಿಂದಲೂ
ಮಲಯಕೇತು ವಿರೋಚನರು ಓಡಿ ಹೋದುದರಿಂದಲೂ ನಾವು ಇಲ್ಲಿದ್ದು ಮಾಡ
ತಕ್ಕ ಕಾರ್ಯವೇನು ? ಎಂದು ಆಲೋಚಿಸಿ ಮಲಯಕೇತುವಿದ್ದೆಡೆಗೆ ಬಂದು
ಲಜ್ಜೆಯಿಂದ ಶಿರಸ್ಸಂ ಬಾಗಿಸಿ ನಿಂತು ಕಾಲೋಚಿತವಾದ ವಾಕ್ಯಗಳಿಂದ ಆ

ರಾಜಪುತ್ರನಂ ಸಮಾಧಾನಂಗೊಳಿಸುತ್ತಿರಲು ; ಭಾಗುರಾಯಣನು ಮಲಯಕೇತುವಂ ಕುರಿತು—

ಅಯ್ಯಾ ರಾಜಕುಮಾರಕನೇ, ನಿನ್ನ ಸೇನಾಪತಿಗಳೆಲ್ಲರೂ ಬಂದರು. ಇಲ್ಲಿ ನಿಲ್ಲದೆ ನಿನ್ನ ದೇಶಕ್ಕೆ ಹೋಗಿ ಮುಂದಣ ಕಾರ್ಯವನ್ನಾಲೋಚಿಸುವವನಾಗು. ಜನರಿಗೆ ತಿಳಿಯದಂತೆ ನಾನು ಹೋಗಬೇಕಾಗುತ್ತಿದೆ. ಕಾರ್ಯಗೌರವ ಒದಗಿದಲ್ಲಿ ಇನ್ನೊಂದು ವೇಳೆ ನಿನ್ನಂ ಕಾಣುವೆನು. ನಿನಗೆ ಶುಭವಾಗಲಿ. ಹೋಗಿ ಬರುತ್ತೇನೆ. ಅಪ್ಪಣೆಯೇ ಎನಲು ; ಆ ಮಾತಿಗೆ ಮಲಯಕೇತುವು ಭಾಗುರಾಯಣನಂ ಕುರಿತು—

ಅಯ್ಯಾ ಭಾಗುರಾಯಣನೇ, ಇಂಥ ಆಪತ್ಸಮಯದಲ್ಲಿ ಪ್ರಾಣಮಂ ರಕ್ಷಿಸಿ ಶತ್ರುಸೇನೆಯಿಂ ತಪ್ಪಿಸಿ ಇಲ್ಲಿಗೆ ನನ್ನಂ ಕರತಂದುದರಿಂದ ನನ್ನ ಪ್ರಾಣಮಿತ್ರನೂ ಮಹಾನೀತಿಜ್ಞನೂ ಆದ ನೀನು ನನಗೆ ಸಮಯವೇಳೆಗಳಲ್ಲಿ ಬುದ್ಧಿನೀತಿಗಳಂ ತಿಳುಹುತ್ತ ನನ್ನ ಬಳಿಯಲ್ಲಿಯೇ ಮಂತ್ರಿಯಾಗಿರಬೇಕಲ್ಲದೆ ಎಲ್ಲಿಗೆ ಅಪ್ಪಣೆಯಂ ಕೇಳುವೆ? ಇನ್ನು ಚಂದ್ರಗುಪ್ತನನ್ನನುವರ್ತಿಸಿಕೊಂಡಿರುವುದು ನಿನಗೆ ಬಹುಮಾನವಲ್ಲ. ನಾನು ಕ್ಷತ್ರಿಯಪುತ್ರನಾದುದರಿಂದ ಪುನಃ ಫೌಜುಗಳಂ ಜೊತೆಗೊಳಿಸಿಕೊಂಡು ಹೋಗಿ ಪಾಟಲೀಪುರಮಂ ಮುತ್ತಿ ಚಂದ್ರಗುಪ್ತ ಚಾಣಕ್ಯರಂ ಸಂಹರಿಸುವ ಪರಿಯಂತರವೂ ನನ್ನ ತಂದೆಗೆ ಔರ್ಧ್ವದೈಹಿಕಮಂ ಮಾಡುವವನಲ್ಲವೆಂದು ಹೇಳುತ್ತ ಅವರೀರ್ವರೂ ಮಾಡಿದ ದ್ರೋಹವು ಸ್ಮರಣೆಗೆ ಬರುತ್ತಿರಲು ; ನೃಪಸೂನು ಕೆಣಕಲ್ಪಟ್ಟ ಮಹೋರಗನಂತೆ ಕ್ರುದ್ಧನಾಗಿ ಖಡ್ಗಮಂ ಝಳುಪಿಸುತ್ತ ನನ್ನ ತಂದೆಗೆ ವಿಪತ್ತನ್ನುಂಟುಮಾಡಿ ಕೃತಘ್ನರಾದ ಚಂದ್ರಗುಪ್ತ ಚಾಣಕ್ಯರ ಶಿರಸ್ಸುಗಳನ್ನಿಳುಹದೆ ಹಿಂದಿರುಗುವವನಲ್ಲವೆಂದು ತುರಗವನ್ನೇರಲುದ್ಯುಕ್ತನಾಗಲು ; ಆಗ ಭಾಗುರಾಯಣನು ಮಲಯಕೇತುವಿನ ವ್ಯವಸಾಯಮಂ ನೋಡಿ ಅಡ್ಡಲಾಗಿ ತಡೆದು—

ಅಯ್ಯಾ ರಾಜಕುಮಾರನೇ, ಇದೇನು ಮಹಾಪ್ರಮಾದಕಾರ್ಯಮಂ ಯೋಚಿಸಿದೆ? ಪ್ರಭುಪದಕ್ಕೆ ಯೋಗ್ಯನಾದವನಿಗೆ ಸಂಪತ್ತಾದರೂ ವಿಪತ್ತಾದರೂ ಒದಗಿದ ಸಮಯದಲ್ಲಿ ವಿಮರ್ಶೆಯಿರಬೇಕು. ಬುದ್ಧಿಸಂಪನ್ನನಾದ ನೀನು ಕಾಲದೇಶಗಳನ್ನರಿಯದೆ ಕಾರ್ಯಾಕಾರ್ಯಮಂ ವಿಚಾರಿಸದೆ ಈ ರೀತಿಯಲ್ಲಿ ದುಡುಕಿ ಮಂತ್ರಿಯನ್ನಪೇಕ್ಷಿಸದೆ ಪ್ರಾಜ್ಞಂಮನ್ಯನಾದ ಅರಸಿನಂತೆ ಯತ್ನೀಕರಿಸಿದರೆ ಬಹುಕಾಲದಿಂ ನಿಮಗೆ ಕ್ರಮವಾಗಿ ನಡೆದು ಬರುವ ಪಾರ್ವತೇಯರ ಐಶ್ವ

ರ್ಯಕ್ಕೆ ದಕ್ಷರಾಗುವವರಾರು ? ಈ ಸಮಯದಲ್ಲಿ ಕೋಪವಂ ಮಾಡುವುದು ಯುಕ್ತವಲ್ಲ. ಎಂದಿನಂತೆ ನಿನ್ನ ದೇಶಕ್ಕೆ ಹೋಗಿ ನಿಮ್ಮ ತಂದೆಗಿಂತಲೂ ಅಧಿಕವಾಗಿ ರಾಜ್ಯಾಧಿಪತ್ಯವಂ ದೃಢಗೊಳಿಸಿಕೊಂಡು ಬಲಸನ್ನಾಹವಂ ಮಾಡಿದ ಬಳಿಕ ಯಾವ ಯತ್ನವಂ ಮಾಡಿದರೂ ಕೂಡಿ ಬರುವುದು ಎಂದು ಹೇಳುತ್ತಿರಲು ; ಮಲಯಕೇತುವು ಚಮೂಪತಿಯ ವಚನವನ್ನಂಗೀಕರಿಸಿ ಅವನಿಗೆ ಯೋಗ್ಯವಾದ ವಸ್ತ್ರಭೂಷಣ ವಾಹನಂಗಳಂ ಕೊಟ್ಟು ತನ್ನ ಸೇನಾಪತಿಗಳೊಡನೆಯೂ ಆ ಬಾಗುರಾಯಣನೊಡನೆಯೂ ಕೂಡಿದವನಾಗಿ ಸ್ವದೇಶವಂ ಕುರಿತು ತೆರಳುತ್ತಿದ್ದನೆಂಬಲ್ಲಿಗೆ ಮುದ್ರಾಮಂಜೂಷಮೆಂಬ ಗ್ರಂಥದಲ್ಲಿ ಪರ್ವತರಾಜನಿರ್ಯಾಣಕಥನಮೆಂಬ ದಶಮಾಶಯವು ಸಮಾಪ್ತಮಾದುದು.

---

## ಏಕಾದಶಾಶಯ ಪ್ರಾರಂಭವು.

---

### ಸರ್ವಾರ್ಥ ಸಿದ್ಧಿರಾಜನ ಪಂಚತ್ವವು.

ಈ ರೀತಿಯಲ್ಲಿ ಬಾಗುರಾಯಣನ ವಾಕ್ಯವಂ ಕೇಳಿ ಮಲಯಕೇತುವು ತಮ್ಮ ತಂದೆಯು ಕಾಲಾಧೀನನಾದನೆಂಬುದಂ ತಿಳಿದು ಆ ಬಾಗುರಾಯಣಸಮೇತನಾಗಿ ಸ್ವರಾಷ್ಟ್ರಮಂ ಕುರಿತು ತೆರಳುತ್ತಿರಲು; ಇದೆಲ್ಲಮಂ ನೋಡಿದ ಚಂದ್ರಗುಪ್ತನ ದೂತರು ಬಂದು ಚಾಣಕ್ಯರಂ ಕುರಿತು—

ಸ್ವಾಮಿಾ, ನಿನ್ನೆ ರಾತ್ರಿಯಲ್ಲಿ ಪರ್ವತರಾಜನು ಅಜ್ಞಾತಕುಲಗೋತ್ರಳಾದ ಒಬ್ಬ ಕನ್ನೆಯನೊಡಗೂಡಿ ಸುಖದ ಸನ್ನಿ ತಪ್ಪಿದುದರಿಂದಲೋ ! ಇನ್ನು ಯಾತರಿಂದಲೋ ! ದೀರ್ಘನಿದ್ರೆಯಂ ಗೆಯ್ಯುತ್ತ ಗಗನಗಮನಾಯಾಸದಿಂ ಭೂತಲಕ್ಕೆ ಬಂದು ಶಯನವಂ ಮಾಡಿರುವ ಸೂರ್ಯಾಶ್ವವೋ ಎಂಬಂತೆಯೂ ರಾಶಿಗೊಳಿಸಿದ ಕೋಮಲವಾದ ದೂರ್ವಾಂಕುರಗಳೋ ಎಂಬಂತೆಯೂ ಹಸುರು ಮರಳಿಕೊಂಡು ಚೇತನರಹಿತನಾಗಿ ಮಲಗಿದ್ದಾನೆಂದು ತಿಳಿದು ಆತನ ಪುತ್ರನಾದ ಮಲಯಕೇತು ನಮ್ಮ ಸೇನೆಯಂ ನೋಡಿ ತನಗೇನೋ ವಿಪತ್ತು ಬಂದಿತು ಎಂದು ಭಾವಿಸಿ ಪಲಾಯನಂಗೆಯ್ಯಲು ; ಆತನ ವಾಹಿನೀರಕ್ಷಕರಾದವರೆಲ್ಲರೂ ಬಿಟ್ಟದು ಬಿಟ್ಟಂತೆ ಅವನ ಬೆಂಬಿಡದೆ ಹೋದರು. ಇದೆಲ್ಲಮಂ ನೋಡಿ ವಿರೋಚನನೂ ಮತ್ತೊಂದು ಕಡೆಗೆ ಪಲಾಯನಂಗೆಯ್ದನು. ಪರ್ವತರಾಜನ ಬಳಿಯ

ಲ್ಲಿದ್ದ ಎಂಟು ಜನ ಕಂಚುಕಿಗಳು ಮತ್ತೆಂಟು ಜನ ಆತನ ಜ್ಞಾತಿಗಳಾದ ಮೈಗಾ
ವಲಿನ ರಾಜಪುತ್ರರು ಮಾತ್ರ ಹಂಬಲಿಸುತ್ತ ಭೀತರಾಗಿ ಆತನಂ ಬಿಟ್ಟು ಹೋಗ
ಲಾರದೆ ಅಲ್ಲಿಯೇ ಇದ್ದಾರೆ. ಕಂಡ ವಿದ್ಯಮಾನಮಂ ವಿಜ್ಞಾಪಿಸಿದೆವು ಎನಲು ;
ಆ ವಾಕ್ಯಮಂ ಕೇಳಿ ಚಾಣಕ್ಯನು ತನ್ನೊಳಗೆ—ನಾನು ನನ್ನ ಮನಸ್ಸಿನಲ್ಲಿ ಧರ್ಮ
ಸಂಸ್ಥಾಪನಾರ್ಥವಾಗಿ ಸಂಕಲ್ಪಮಂ ಮಾಡಿ ಆಶ್ರಮದಿಂದ ಹೊರಟು ಪಾಟಲೀ
ಪುರಕ್ಕೆ ಬಂದುದಕ್ಕೆ ನಂದರು ಸಂಹೃತರಾಗಿ ಪರ್ವತರಾಜನೂ ಮೃತನಾದುದ
ರಿಂದ ಧರ್ಮಮಾರ್ಗಕ್ಕೆ ವಿರೋಧಿಗಳಾದ ನಾಸ್ತಿಕಜನರ ಸೊಕ್ಕುಗಳಡಗಿ
ಚಂದ್ರಗುಪ್ತನ ರಾಜ್ಯಾಭಿಷೇಕವಿಘ್ನವು ಮೂರುಪಾಲು ಪರಿಹಾರವಾದಂತಾ
ಯಿತು ಎಂದು ನಿಶ್ಚಯಿಸಿ ಆ ದೂತನಂ ನೋಡಿ—ಇನ್ನೊಂದು ವೇಳೆ ಈ ವಿಷ
ಯವನ್ನು ಯಥಾರ್ಥವಾಗಿ ಹೇಳು. ನಮಗೆ ಪರಮಪ್ರಿಯನಾದ ಪರ್ವತರಾಜನು
ಪಂಚತ್ವವನ್ನೈಯ್ದಿದನೇ? ಎಂಥ ಆಕಸ್ಮಿಕವಾದ ಮರಣ ಸಂಭವಿಸಿತು! ಆತನ
ಮೃತ್ಯುವೇ ಆ ಕನ್ಯಾರೂಪದಿಂ ಒದಗಿತೋ! ಏನೋ! ಎಂದು ಮೂಗಿನ ಮೇಲೆ
ಬೆರಳಿಟ್ಟು ಆಶ್ಚರ್ಯಪಟ್ಟವನಂತೆ ತಲೆದೂಗುತ್ತ ಕ್ಷಣಕಾಲ ಯೋಚಿಸಿ—
ಆಹಾ! ಈಗ ತಿಳಿಯಬಂದಿತು. ನಿನ್ನೆ ಕ್ಷಪಣಕನು ನಮ್ಮ ಸಭೆಗೆ ರಾಜಯೋ
ಗ್ಯಳೂ ಸುಂದರಿಯೂ ಆದ ಒಬ್ಬ ಸ್ತ್ರೀಯಂ ಕರೆತಂದು ಈಕೆಯಂ ಚಂದ್ರ
ಗುಪ್ತನಿಗೆ ಒಪ್ಪಿಸಬೇಕೆಂದು ಅವಳ ಗುಣಕೌಶಲ್ಯಕಥನಮಂ ಮಾಡಿದುದರಿಂದ
ನಾನು ಆ ಕನ್ಯೆಯು ರಾಜಯೋಗ್ಯಳೆಂದು ನಿಶ್ಚಯಿಸಿದೆನು. ಕ್ಷಪಣಕನು ತಾನು
ರಾಕ್ಷಸನ ಮಿತ್ರನೆಂದು ಹೇಳಿಕೊಂಡಾಗ್ಯೂ ಅದರ ಗುಣದೋಷಮಂ ವಿಚಾರಿಸದೆ—
ಎಲೈ ಜೀವಸಿದ್ಧಿಯೇ, ಚಂದ್ರಗುಪ್ತನು ಧರ್ಮಪತ್ನಿಯರನ್ನು ಹೊರತು ಅನ್ಯ
ರಂ ಪರಿಗ್ರಹಿಸುವವನಲ್ಲ. ರಾಜಯೋಗ್ಯಳಾದ ಈ ಬಾಲೆಯೂ ಅನ್ಯರಿಗೆ
ತಕ್ಕವಳಲ್ಲ. ನಮ್ಮೆಲ್ಲರಿಗೂ ಪ್ರಭುವಾದ ಪರ್ವತೇಶ್ವರನಿಗೆ ತಕ್ಕವಳು
ಎಂದು ಹೇಳಿದ ಮಾತ್ರಕ್ಕೆ ಆ ಕ್ಷಪಣಕನು ಅವಳಂ ಪರ್ವತರಾಜನ ಬಳಿಗೆ
ಕರೆದುಕೊಂಡು ಹೋದನು. ಇದರಿಂದ ರಾಕ್ಷಸನು ಕ್ಷಪಣಕನಿಗೆ ಆ ವಿಷಕ
ನ್ಯೆಯಂ ಚಂದ್ರಗುಪ್ತನಲ್ಲಿ ಪ್ರಯೋಗಿಸಿ ಅವನಂ ಸಂಹರಿಸುವವನಾಗು. ಅದು
ಅನುಕೂಲಿಸದಿದ್ದರೆ ಪರ್ವತರಾಜನಲ್ಲಿಯಾದರೂ ಪ್ರಯೋಗಿಸಿ ವಧಿಸುವವ
ನಾಗು ಎಂದು ಹೇಳಿ ಕಳುಹಿಸಿರಬೇಕು. ನಾವು ಎಷ್ಟು ಜಾಗರೂಕರಾಗಿದ್ದರೂ
ನಮ್ಮ ಬುದ್ಧಿಗೆ ಇದು ಒಂದು ಮಹಾಪ್ರಮಾದಮುಂಟಾಗಿ ರಾಕ್ಷಸನಿಗೆ ಸಂತೋ
ಷವು ಲಭಿಸಿತು. ಚಂದ್ರಗುಪ್ತ ಪರ್ವತೇಶ್ವರರೊಳಗೆ ಒಬ್ಬರು ನಷ್ಟವಾದರೂ
ನಮಗೆ ಒಂದು ನೇತ್ರ ಲೋಪವಾದಂತಾಯಿತು. ಮುಂಚೆ ಹೋದ ಕಾರ್ಯಕ್ಕೆ

ಚಿಂತಿಸಿ ಫಲವೇನು ? ಇದೊಂದನ್ನೂ ವಿಚಾರಿಸದೆ ಗಣಿತಿಗಾಗಿ ಬಂದ ನಮ್ಮ ಸೇನೆಯಂ ಕಂಡು ತನ್ನಂ ಸಂಹರಿಸುವುದಕ್ಕೆ ಬರುವುದೆಂದು ಬಾಲಬುದ್ಧಿಯಿಂದ ಆತನ ಪುತ್ರನಾದ ಮಲಯಕೇತುವು ಭೀತನಾಗಿ ಓಡಿಹೋಗಿರಬೇಕು. ಅದಂ ನೋಡಿ ಆಲೋಚಿಸದೆ ವಿರೋಚನನೂ ಹಾಗೇ ಹೋಗಿದ್ದಾನೆಂದು ಸಭೆಯಲ್ಲಿ ಹೇಳುತ್ತ ಈ ಯರ್ಥಮಂ ನಾನೇ ಹೋಗಿ ನೋಡಿ ಬರುವೆನೆಂದು ಎದ್ದು ಚಂದ್ರಗುಪ್ತ ಸಮೇತನಾಗಿ ಮೃತನಾದ ಪರ್ವತರಾಜನಿದ್ದೆಡೆಗೆ ಬಂದು ಸಿಹ್ಮನಖಪ್ರಹಾರದಿಂ ಅಸುವಂ ಬಿಟ್ಟಿರುವ ಮದಗಜದಂತೆ ಗತಪ್ರಾಣನಾಗಿರುವ ನೃಪನಂ ನೋಡಿ—ಎಲೈ ಭೂಪತಿಯೇ, ನಿನಗೆ ಈ ಯವಸ್ಥೆ ಬರಬಹುದೇ ? ನೀನು ನಮಗೆ ಮಾಡಿದ ಉಪಕಾರಮಂ ಎಂದಿಗೆ ಮರೆಯಬೇಕು ? ಎಂದು ಜನಗಳ ಮುಂದೆ ದುಃಖಿಸುತ್ತ ಅಲ್ಲಿರುವ ರಾಜಪುತ್ರರ ಮುಖದಿಂದಲೇ ಆ ಅವನೀಶನ ಕಳೇಬರಕ್ಕೆ ಅವರ ಜಾತಿಮರ್ಯಾದಾನುಸಾರವಾಗಿ ಸಂಸ್ಕಾರಮಂ ಮಾಡಿಸಿ ಆತನು ಅಲಂಕರಿಸಿದ್ದ ಭೂಷಣಂಗಳಂ ಬೊಕ್ಕಸದಲ್ಲಿರಿಸಿ ಆ ಪೃಥ್ವೀಧವನಿಗೆ ಸದ್ಗತಿಯುಂಟಾಗುವಂತೆ ಬಹು ಧನ ಕನಕವಸ್ತ್ರವಾಹನಂಗಳಂ ವಿಪ್ರರಿಗೆ ದಾನವಾಗಿ ಕೊಡಿಸಿ ತಾನು ಚಂದ್ರಗುಪ್ತಸಮೇತನಾಗಿ ಗಂಗಾಜಲದಲ್ಲಿ ಸ್ನಾನಂಗೆಯ್ದು ತಾನಿದ್ದೆಡೆಗೆ ಬಂದನು. ಮತ್ತೆ ಮಾರನೆಯ ದಿವಸ ಚಾಣಕ್ಯನು ಸಭಾಪ್ರವೇಶಮಂ ಮಾಡಿ ಕುಳಿತು ತನ್ನ ಪಾರ್ಶ್ವದಲ್ಲಿ ಇಂಗಿತಜ್ಞನಾಗಿ ನಿಂತಿರುವ ದೂತನ ಮುಖಮಂ ದೃಷ್ಟಿಸಿ ನೋಡಿ—

ಎಲೈ ನಿಪುಣಕನೇ, ಗಣಿತಿಯಾಗುವುದಕ್ಕೆ ನಿನ್ನೆ ಕರೆಯಕಳುಹಿಸಿದ್ದ ನಮ್ಮ ಪಡೆಗಳಿಗೆ ಲೆಕ್ಕಗಳಾಗುತ್ತಿವೆಯೋ ಇಲ್ಲವೋ ಎಂದು ಕೇಳಲು ; ಚಾಣಕ್ಯರ ಮನೋಭಾವಮಂ ತಿಳಿದು ಆ ದೂತನು—

ಸ್ವಾಮಿ, ನಿನ್ನೆ ಪರ್ವತರಾಜನ ದಂಡಿನಲ್ಲಿ ನಡೆದ ವಿಶೇಷವ್ಯಾಪಾರದಿಂದ ಚತುರಂಗಮಂ ಎಣಿಕೆ ಮಾಡುವುದಕ್ಕೆ ಅವಕಾಶವಿಲ್ಲದೆ ನಿಂತು ಇದೆ. ಅಪ್ಪಣೆಯಾದರೆ ಈ ದಿವಸದಾರಭ್ಯ ಆಗುತ್ತಿದೆ ಎನಲು ; ಚಾಣಕ್ಯನು—

ಎಲ್ಲರಿಗೂ ಈ ತಿಂಗಳ ಸಂಬಳಮಂ ಕೊಟ್ಟು ಅದರಲ್ಲಿ ಬಂದವರಾರು ? ಉಳಿದವರಾರು ? ಎಂಬುದನ್ನು ಅರಿತು ಗಣಿತಿಯಾದ ಬಳಿಕ ತಿಳುಹಿಸತಕ್ಕದು ಎಂದು ನೇಮಿಸಿ ಅವನಂ ಕಳುಹಿಸಿ ತನ್ನ ಮನಸ್ಸಿನಲ್ಲಿ—ರಾಕ್ಷಸನು ಯಾವ ಪ್ರಕಾರದಿಂದಾದರೂ ಚಂದ್ರಗುಪ್ತನಂ ಸಂಹರಿಸಬೇಕೆಂದು ವಿಷಕನ್ಯೆಯಂ ಕಳುಹಿಸಿದನು. ದೈವಬಲದಿಂದ ಈ ವಿಪತ್ತು ಚಂದ್ರಗುಪ್ತನಂ ಬಿಟ್ಟು ಪರ್ವತರಾಜನಂ ಹೊಂದಿತು. ಇನ್ನೇನೇನು ಕಪಟಮಂ ರಚಿಸಿರುವನೋ ! ಎಂದು ಚಿಂತಿಸುತ್ತ

ಶತ್ರುಗಳ ಮೋಸದಿಂದ ಅರಸುಗಳಿಗೆ ಕಾಲದೇಶವಸ್ತು ವಿಶೇಷಗಳಲ್ಲಿ ಸಂಭವಿಸುವ ವಿಪತ್ತುಗಳೆಲ್ಲವಮಂ ಪರಿಭಾವಿಸಿ ಸಿಕ್ಷಯಿಸಿ ಅದೆಲ್ಲವಮಂ ಶೋಧಿಸಬೇಕೆಂದು ಯೋಚಿಸುತ್ತ ದೂತರಂ ಕರೆದು—

ಎಲೈ, ಈ ಶುದ್ಧ ದಶಮೀ ಬುಧವಾರದ ದಿವಸ ಚಂದ್ರಗುಪ್ತರಾಜರಿಗೆ ರಾಜ್ಯಾಭಿಷೇಕವಾಗುವುದೆಂದು ಪುರದ ಬೀದಿಗಳಲ್ಲಿ ಡಂಗುರಮಂ ಹಾಕಿ ಈ ಮೇರೆಗೆ ಸಾರತಕ್ಕದು. ಪಟ್ಟಣಂ ಶೃಂಗಾರವಾಗಲಿ. ರಾಜದ್ವಾರದಲ್ಲಿ ಕುರುಜು ತೋರಣ ಮೇಲುಕಟ್ಟುಗಳು ಕಟ್ಟಲ್ಪಡಲಿ. ಓಲಗದ ಹಜಾರವೂ ರಾಜಯೋಗ್ಯವಾದ ಬೀಡಾರವೂ ಅಲಂಕೃತವಾಗಿ ಶೋಭಿಸುತ್ತಿರಲಿ. ಅಭಿಷೇಕ ಸಾಮಗ್ರಿಗಳು ಸಿದ್ಧವಾಗಿರಲಿ. ಅಧಿಕಾರಿಗಳೆಲ್ಲರೂ ಕಾದುಕೊಂಡಿರಲಿ ಎಂದು ಅಜ್ಞಾಪಿಸಲು ; ಅದೇ ಮೇರೆಗೆ ದೂತರು ಬಂದು ನಗರವೀಧಿಗಳಲ್ಲಿ ಡಂಗೂರಮಂ ಹಾಕಿಸಿ ಸಾರಿಸಲು ; ಗಂಧೋದಕದ ಚಳಯಂಗಳಿಂದಲೂ ಚಿತ್ರತೋರಣ ವಿತಾನ ಕದಳೀಸ್ತಂಭ ಪುಷ್ಪಮಾಲಿಕಾದಿಗಳಿಂದಲೂ ಆ ಕುಸುಮಪುರವು ಅಲಂಕೃತವಾಗಿ ಅಮರಾವತಿಯಂತೆ ಶೋಭಿಸುತ್ತಿದ್ದಿತು. ಆ ಸಮಯದಲ್ಲಿ ರಾಕ್ಷಸನಿಂದ ಮೊದಲು ನೇಮಿಸಲ್ಪಟ್ಟಿದ್ದ ದಾರುವರ್ಮನೆಂಬ ಶಿಲ್ಪಿಯು ರಾಜದ್ವಾರದಲ್ಲಿ ದೇವತಾವಿಮಾನದಂತೆ ಕೃತ್ರಿಮಶಿಲ್ಪವಮಂ ರಚಿಸಿ ಜನಕ್ಕೆ ತಿಳಿಯದಂತೆ ಸೀರಾಜಿಯ ಮೇಲುಕಟ್ಟುಗಳಂ ಕಟ್ಟಿ ವಿಚಿತ್ರತೋರಣ ಕುರುಜು ಮುತ್ತಿನ ಕುಚ್ಚುಗಳಿಂದಲಂಕರಿಸಿ ನೋಡುವವರಿಗೆ ವಿಸ್ಮಯಕರವಾಗಿರುವಂತೆ ವಾದ್ಯಗಳಂ ಬಾಜಿಸುವ ಸೂತ್ರದ ಬೊಂಬೆಗಳ ಸಾಲುಗಳಂ ನಿಲ್ಲಿಸಿ ಈಗಲೇ ಬಹುಮಾನವಮಂ ಪಡೆಯಬೇಕೆಂದು ಬಂದು ಚಾಣಕ್ಯರಿಗೆ ಕೈ ಮುಗಿದು—

ಸ್ವಾಮಿ, ರಾಜದ್ವಾರವು ಕುರುಜು ಮೇಲುಕಟ್ಟುಗಳಿಂದ ಅಲಂಕರಿಸಲ್ಪಟ್ಟು ಸಿದ್ಧವಾಗಿದೆ ಎನ್ನಲು ; ಅದಂ ಕೇಳಿ ಚಾಣಕ್ಯನು—

ಎಲೈ ಶಿಲ್ಪಿಯೇ, ಬಹು ದಿವಸಗಳ ವರೆಗೂ ಮಾಡತಕ್ಕ ಹೆಬ್ಬಾಗಿಲಿನ ಶೃಂಗಾರವು ಇಷ್ಟು ಬೇಗ ಹೇಗಾಯಿತು ? ಎಂದನು. ಅದಕ್ಕೆ ಶಿಲ್ಪಿಯು—

ಸ್ವಾಮಿಯವರ ಅಪ್ಪಣೆಯಾಗುವುದಕ್ಕೆ ಮುಂಚಿತವಾಗಿಯೇ ವಿಶೇಷ ಕಟಾಕ್ಷಕ್ಕೆ ಪಾತ್ರನಾದೇನು ಎಂದು ನಾನು ಕಲಿತಿದ್ದ ಶಿಲ್ಪಕಲಾಕೌಶಲ್ಯಮಂ ತೋರಿಸಿರುವೆನು. ಅದಂ ಪರಾಂಬರಿಸಿ ನನ್ನಲ್ಲಿ ಕೃಪೆ ಮಾಡಬೇಕೆಂದು ಹೇಳಲು ; ಆ ಮಾತಂ ಕೇಳಿ ಚಾಣಕ್ಯನು ತನ್ನ ಮನಸ್ಸಿನಲಿ—ನಾನು ಹೇಳುವುದಕ್ಕೆ ಮುಂಚಿತವಾಗಿಯೇ ಈ ತ್ವಷ್ಟೃವು ಬಹು ದ್ರವ್ಯವನ್ನಾದರೂ ವ್ಯಯಮಂ ಮಾಡಿ ರಾಜ

ದ್ವಾರವನ್ನಲಂಕರಿಸುವುದಕ್ಕೆ ನಿಮಿತ್ತವೇನು ? ಆದರಿಂದಿವನು ರಾಕ್ಷಸನಿಂ ನಿಯುಕ್ತನಾಗಿ ಚಂದ್ರಗುಪ್ತನ ನಿಗ್ರಹಕ್ಕೆ ಅಲ್ಲಿ ಏನೋ ಕಪಟಶಿಲ್ಪವಂ ಮಾಡಿ ಇದ್ದಾನು. ಆಗಲಿ ಚಿಂತೆ ಏನು? ಈಗ ರಾಜ್ಯವಂ ಬಯಸುತ್ತಿದ್ದ ಪರ್ವತರಾಜನು ವಿಷಕನ್ಯಾಮೂಲಕದಿಂದ ಮೃತನಾದನು. ಮಲಯಕೇತುವು ಓಡಿ ಹೋದನು. ಹಾಗೆಯೇ ಓಡಿ ಹೋಗಿರುವ ಪರ್ವತರಾಜನ ತಮ್ಮನಾದ ವಿರೋಚನನಂ ಕರೆಯಕಳುಹಿಸಿ ನಿಮ್ಮ ಅಣ್ಣನಿಗೆ ಮಾತನಾಡಿದ್ದ ಅರ್ಧರಾಜ್ಯಕ್ಕೆ ನಿನ್ನಂ ಪಟ್ಟಾಭಿಷಿಕ್ತನಂ ಮಾಡುವೆನೆಂದು ಆತನಂ ಒಡಂಬಡಿಸಿ ಆತನಿಗೆ ಚಂದ್ರಗುಪ್ತನ ಆಭರಣಂಗಳಂ ತೊಡಿಸಿ ಯಥೋಚಿತವಾಗಿ ಅಭಿಷೇಕವಂ ಮಾಡಿದರೆ ಆಗ ಮೊದಲು ಚಾಣಕ್ಯನು ಪರ್ವತೇಶ್ವರನಂ ಒಡಂಬಡಿಸಿ ಕರ ತಂದು ತಮ್ಮ ಕಾರ್ಯವಂ ಮಾಡಿಸಿಕೊಂಡು ವಿಷಕನ್ಯಾಮೂಲಕದಿಂ ಆ ದೊರೆಯಂ ಸಂಹರಿಸಿ ಆತನ ಪುತ್ರನಂ ಓಡಿಸಿ ವಂಚನೆಯಿಂದ ತಾನು ಮಾತು ಕೊಟ್ಟ ಪ್ರಕಾರ ಅವರಿಗೆ ಕೊಡುವ ಅರ್ಧರಾಜ್ಯವಂ ಸಹ ಅಪಹರಿಸಿಕೊಂಡನೆಂಬ ಲೋಕಾಪವಾದವು ನಮಗೆ ತಪ್ಪಿ ರಾಕ್ಷಸನೇ ವಿಷಕನ್ಯೆಯಂ ಕಳುಹಿಸಿ ತನಗೆ ವೈರಿಯಾದ ಚಂದ್ರಗುಪ್ತನಿಗಿರುವ ಪ್ರಬಲಾಶ್ರಯವನ್ನು ಮುಂಚಿತವಾಗಿ ನಾಶಮಾಡಿ ಮುಂದಣ ಕಾರ್ಯವಂ ಸಾಧಿಸುವುದಕ್ಕಾಗಿ ಪರ್ವತರಾಜನಂ ಸಂಹಾರಂಗೆಯ್ಸಿದನು. ಭೀತಿಯಿಂದ ಮಲಯಕೇತುವೂ ಓಡಿಹೋದನು. ಆದುದರಿಂದ ಚಾಣಕ್ಯನು ಆಡಿದ ಮಾತಿಗೆ ತಪ್ಪದೆ ಆತನ ತಮ್ಮನಾದ ವಿರೋಚನನಿಗೆ ಅರ್ಧರಾಜ್ಯಾಭಿಷೇಕವಂ ಮಾಡಿಸಿದನೆಂದು ಹೇಳಿಕೊಂಡಾರು. ಹೀಗೆ ಅಭಿಷೇಕಂಗೆಯ್ಸಿ ಆ ಬಳಿಕ ವಿರೋಚನನಿಗೆ ಗಜಾರೋಹಣವಂ ಮಾಡಿಸಿ ಮೆರವಣಿಗೆಯ ನಿಮಿತ್ತಮಾಗಿ ಅವನಂ ಕರತಂದರೆ ರಾಜದ್ವಾರದಲ್ಲಿ ಈ ದಾರುವರ್ಮನು ಮೌರ್ಯಪುತ್ರನ ನಿಮಿತ್ತವಾಗಿ ರಚಿಸಿದ ಕಪಟಶಿಲ್ಪದ ವಿಪತ್ತಿಗೆ ಆ ಪರ್ವತರಾಜಾನುಜನು ಪಾತ್ರನಾದಾನು. ರಾಜ್ಯವ್ಯವಹಾರಕ್ಕೆ ಮುಂದೆ ಉಂಟಾಗುವ ಪ್ರತಿವಾದಿಯ ಆತಂಕವು ಪರಿಹೃತವಾಗುವುದು. ಆ ಕೃತ್ರಿಮ ಶಿಲ್ಪವು ನಾವು ಹೇಳುವುದಕ್ಕೆ ಮುಂಚಿತವಾಗಿಯೇ ಮಾಡಲ್ಪಟ್ಟು ಸಿದ್ಧವಾಗಿದ್ದುದರಿಂದ ಅಪವಾದವು ಸಹ ನಮ್ಮನ್ನು ಹೊಂದದೆ ರಾಕ್ಷಸನನ್ನೇ ಹೊಂದುವುದು ಎಂದು ನಿಶ್ಚಯಿಸಿ ಆಗ ದಾರುವರ್ಮನಂ ಕುರಿತು—

ಎಲೈ ಶಿಲ್ಪಿಯೇ, ನಾವು ಹೇಳುವುದಕ್ಕೆ ಮುಂಚಿತವಾಗಿ ನಮ್ಮ ಅಭಿಪ್ರಾಯವಂ ತಿಳಿದು ರಾಜದ್ವಾರವನ್ನಲಂಕರಿಸಿದುದರಿಂದ ಸಂತೋಷವಾಯಿತು. ಚಂದ್ರ

ಗುಪ್ತನ ಪಟ್ಟಾಭಿಷೇಕವಾದ ಮೇಲೆ ನೀನು ಮಾಡಿದ ಶಿಲ್ಪಕ್ಕನುಸಾರವಾದ ಫಲಕ್ಕೆ ಪಾತ್ರನಾಗುವೆ ಎಂದು ಹೇಳಿ ಅವನಿಗೆ ವೀಳೆಯಮಂ ಕೊಡಿಸಿ ಅವನಂ ಕಳುಹಿಸಿ ಚಾಣಕ್ಯನು ಭಾಗುರಾಯಣನ ತಮ್ಮನಾದ ವತ್ಸಲಾಯನನಂ ಕರೆಯ ಕಳುಹಿಸಿ ಅವನ ಸಂಗಡ ರಹಸ್ಯವಾಗಿ ಹೇಳತಕ್ಕ ಮಾತುಗಳಂ ಹೇಳಿ ಕಳುಹಿಸಲು ; ಆತನು ತುರಗವನ್ನೇರಿ ತ್ವರಿತದಿಂ ಹೋಗಿ ಸ್ವದೇಶಕ್ಕೈದುತ್ತಿರುವ ವಿರೋಚನನಂ ಕಂಡು ಸನ್ಮಾನದಿಂ ಕುಳ್ಳಿರಿಸಿಕೊಂಡು—

ಅಯ್ಯಾ ವಿರೋಚನನೇ, ಇದೇನಂ ಯೋಚಿಸದೆ? ಪುಷ್ಪಮಾಲಿಕೆಗಳಂ ನೋಡಿ ಸರ್ಪಗಳೆಂದು ಭಯಪಟ್ಟು ಓಡುವವನ ತೆರದಿಂ ಕಾರ್ಯಮಂ ಬಿಟ್ಟು ಹೋಗುತ್ತಿರುವೆ? ಮಲಯಕೇತುವು ಬಾಲನಾದುದರಿಂದ ಯುಕ್ತಾಯುಕ್ತಮಂ ವಿಚಾರಿಸದೆ ಹೊರಟು ಹೋದನು. ನೀನೂ ಹೀಗೆ ಮಾಡಿದರೆ ಮುಂದೆ ನಿನ್ನಿಂದ ರಾಜಕಾರ್ಯವು ಎಂತಾಗುವುದು? ಚಂದ್ರಗುಪ್ತನಂ ಪಕ್ಷೀಕರಿಸಿ ನಂದರಂ ನಿಗ್ರಹಿಸಿದ ಪರ್ವತರಾಜನಂ ಸಂಹರಿಸಿದರೆ ಚಂದ್ರಗುಪ್ತನಿಗೆ ಬಲ ತಪ್ಪುವುದು. ಆ ಬಳಿಕ ಅವನಲ್ಲಿ ದ್ವೇಷಮಂ ಸಾಧಿಸಬಹುದೆಂಬ ಬುದ್ಧಿಯಿಂದ ರಾಕ್ಷಸನೇ ಕುಟಿಲಕಾಮಿನಿಯಂ ಕಳುಹಿಸಿ ನಿಮ್ಮಣ್ಣನಂ ಸಂಹರಿಸಿದನೆಂದು ತಿಳಿಯದೆ ಚಾಣಕ್ಯರಲ್ಲಿ ದ್ವೇಷವನ್ನೆಣಿಸಿ ನೀನು ಹೊರಟು ಬಂದುದಕ್ಕೆ ಅವರು ಬಹು ಖಿನ್ನರಾಗಿ ನನ್ನಂ ಕರೆದು—ಲೋಕದವರು ಮೂಲಾನುಮೂಲಮಂ ತಿಳಿಯದೆ ಮನಸ್ಸಿಗೆ ಬಂದಂತೆ ನನ್ನಂ ಆಡಿಕೊಂಡಾರು. ಈ ಅಪವಾದವು ತಪಸ್ವಿಯಾದ ನನಗೆ ಯಾಕೆ ಬೇಕು? ನಾನು ಹೇಳಿದ ರೀತಿಗೆ ತಪ್ಪದೆ ಮೊದಲು ಆ ಪರ್ವತೇಶ್ವರನ ತಮ್ಮನಿಗಾದರೂ ಅರ್ಧರಾಜ್ಯಾಭಿಷೇಕಮಂ ಮಾಡಿಸುವೆನೆಂದು ಲಗ್ನಮಂ ನಿಶ್ಚಯಿಸಿ ನೀನು ಹೋಗಿ ವಿರೋಚನನಂ ಕರೆದುತಾರೆಂದು ನನ್ನಂ ಕಳುಹಿಸಿದರು. ನಿನಗೆ ಅಭಿಷೇಕಮಂ ಮಾಡಿಸುವುದು ನಿಶ್ಚಯವು. ಇದಕ್ಕೆ ನನ್ನ ಸುಕೃತವೇ ಸಾಕ್ಷಿ. ನಡೆ ಎಂದು ಹೇಳಲು ; ಆ ಮಾತಿಗೆ ವಿರೋಚನನು ಒಡಂಬಟ್ಟು ಹೊರಟು ಬಂದು ಚಾಣಕ್ಯನಂ ಕಂಡು ವಂದಿಸಲು ;

ಎಲೈ ವಿರೋಚನನೇ, ಜನಾಪವಾದಕ್ಕೆ ನನ್ನಂ ಗುರಿಮಾಡಿ ನಿಮ್ಮಣ್ಣನ ಮಗನಂತೆ ವಿಚಾರಿಸದೆ ನೀನೂ ಹೋಗಬಹುದೇ? ಬುಧವಾರದ ದಿವಸ ಲಗ್ನನಿಶ್ಚಯವಾಗಿದೆ. ಅರ್ಧರಾಜ್ಯಾಭಿಷೇಕವು ನಿನಗೆ ಮೊದಲೇ ಆಗಲಿ. ಉಳಿದುದು ಆ ಬಳಿಕ ಆಗಲಿ ಎಂದು ಹೇಳಿ ಸೌಮ್ಯವಾಸರದ ಅರ್ಧರಾತ್ರಿಯಲ್ಲಿ ಮುಹೂರ್ತಮಂ ನೆಲೆಗೊಳಿಸಿ ವಿರೋಚನ ಸಹಿತವಾಗಿ ತಾವೆಲ್ಲರೂ ಪಾಟಲೀಪುರಕ್ಕೆ

ಹೋಗಿ ರೂಪವಂತನಾದ ಆ ಪರ್ವತರಾಜನ ತಮ್ಮನಿಗೆ ಚಂದ್ರಗುಪ್ತನ ಆಭರ
ಣಂಗಳಂ ಧರಿಸಿ ರತ್ನಖಚಿತವಾದ ಕವಚಮಂ ತೊಡಿಸಿ ದಿವ್ಯದುಕೂಲಮಂ
ಹೊದಿಸಿ ಚಂದ್ರಗುಪ್ತನ ಪರಿವಾರಸಮೇತವಾಗಿ ಅವನಂ ಕರತಂದು ಸಿಂಹಪೀಠ
ದಲ್ಲಿ ಕುಳ್ಳಿರಿಸಿ ನಾನಾವಿಧಪುಷ್ಪಜಲಗಳಿಂದಭಿಷೇಕಮಂ ಮಾಡಿಸಿದಮೇಲೆ ವಂದಿ
ಮಾಗಧರಿಂದ ಜಯಜಯವೆಂದು ಹೊಗಳಿಸುತ್ತಿರಲು; ಮೊದಲು ಸಾರಿಸಿದ
ಮೇರೆಗೆ ಪುರದ ಜನರೆಲ್ಲರೂ ಚಂದ್ರಗುಪ್ತನಿಗೆ ಪಟ್ಟಾಭಿಷೇಕವೆಂದು ಹೇಳಿಕೊ
ಳ್ಳುತ್ತ ಬಂದು ಗುಂಪುಗುಂಪಾಗಿ ನೆರೆಯುತ್ತಿರಲು; ಅನಂತರದಲ್ಲಿ ನಂದರೇರುವ
ಪಟ್ಟದಾನೆಯನ್ನಲಂಕರಿಸಿ ಅದರ ಮೇಲೆ ವಿರೋಚನನಂ ಕುಳ್ಳಿರಿಸಿ ಚಂದ್ರಗುಪ್ತನ
ಪರಿವಾರವೆಲ್ಲಮಂ ಸಂಗಡ ಕಳುಹಿಸಿ ಸಕಲವಿಭವದಿಂದ ಹೊರಟು ಶೃಂಗರಿಸಿರುವ
ರಾಜದ್ವಾರದೆಡೆಗೆ ಬರುತ್ತಿರಲು; ಆಗ ಕಾಲುನಡೆಯಿಂದ ಹಿಂದೈತರುತ್ತಿರುವ
ಚಂದ್ರಗುಪ್ತನಂ ಕುರಿತು ಚಾಣಕ್ಯನು—

ಎಲೈ ಕುಮಾರಕನೇ, ಈ ಹೆಬ್ಬಾಗಿಲಲ್ಲಿ ಏನೋ! ಒಂದು ವಿಶೇಷವು
ನಡೆಯುತ್ತಿದೆ. ನೀನು ಹಿಂದೆ ನಿಂತು ನೋಡುವವನಾಗು ಎಂದು ಹೇಳುತ್ತಿರಲು;
ಅಷ್ಟರಲ್ಲಿಯೇ ಆ ಪಟ್ಟದಾನೆಯು ಅದರ ಸಮೀಪಕ್ಕೆ ಬಂದಿತು. ಆ ಬಳಿಯಲ್ಲಿ
ವಾದ್ಯಸಮೇತವಾಗಿ ವಿಚಿತ್ರನಾಟ್ಯಂಗಳಂ ಮಾಡುತ್ತಿರುವ ಬೊಂಬೆಗಳ ಸಾಲು
ಗಳನ್ನೂ ನಾನಾವಿಧ ಶಿಲ್ಪಗಳನ್ನೂ ನೋಡುತ್ತ ಕರಿಯಂ ಮೆಲ್ಲಮೆಲ್ಲನೆ ನಡೆಯಿ
ಸುತ್ತ ರಾಜದ್ವಾರದಲ್ಲಿ ಬರುತ್ತಿರಲು; ಮೊದಲು ರಾಕ್ಷಸನಿಂ ಪ್ರೇರಿತನಾಗಿದ್ದ
ದಾರುವರ್ಮನು ಮೇಲಿನ ಭಾಗದಲ್ಲಿ ಕಾಣದಂತೆ ಅಡಗಿದ್ದು ಗಜಾರೂಢನಾಗಿ
ಬರುವವನೇ ಚಂದ್ರಗುಪ್ತನೆಂದು ನಿಶ್ಚಯಿಸಿ ಅವನ ಶಿರಸ್ಸಿಗೆ ಸರಿಯಾಗಿ ನೋಡಿ
ತಾನು ಮಾಡಿದ್ದ ಕೀಲನ್ನು ತನ್ನ ಕೈಯ್ಯಲ್ಲಿದ್ದ ಕೊಡತಿಯಿಂದ ಬಡಿಯಲು;
ಅಷ್ಟರಲ್ಲಿಯೇ ಮೊದಲು ರಾಕ್ಷಸನಿಂದ ನೇಮಿಸಲ್ಪಟ್ಟಿದ್ದ ಬರ್ಬರಕನೆಂಬ ಮಾ
ವುತನು—ಹಿಂದೆ ಕುಳಿತಿರುವವನೇ ಚಂದ್ರಗುಪ್ತನು; ಇವನಂ ಸಂಹರಿಸುವುದಕ್ಕೆ
ಇದೇ ಸಮಯವೆಂದು ನೆನಸಿ ತನ್ನ ಕೈಯ್ಯಲ್ಲಿರುವ ಸುವರ್ಣದಂಡದಲ್ಲಿ ಹುದ
ಗಿಸಿರುವ ಶಸ್ತ್ರಮಂ ನಿಜಕರದಿಂ ಗ್ರಹಿಸಲು; ಅದಂ ತಿಳಿದು ಆ ದ್ವಿರದವು ತನ್ನಂ
ಪ್ರಹರಿಸುವನೆಂದು ಭೀತಿಯಿಂದ ಒಂದೆರಡು ಹೆಜ್ಜೆಗಳಂ ಹಿಮ್ಮೆಟ್ಟಿ ನಿಲ್ಲಲು;
ಆಗ ದಾರುವರ್ಮನು ಸಡಿಲಿಸಿದ ಮಹಾಭಾರದ ತೊಲೆಯು ಆ ಮಾವುತನ
ಶಿರಸ್ಸಿನ ಮೇಲೆ ಬಿದ್ದುದರಿಂದ ಅವನು ಹತನಾಗಲು; ಅದಂ ನೋಡಿ ದಾರುವ
ರ್ಮನು—ತಾನು ಮಾಡಿದ ಯತ್ನವು ಮಾವುತನಂ ಸಂಹರಿಸಿ ಚಂದ್ರಗುಪ್ತನನ್ನು

ಳುಹಿಸಿತು. ತಾನು ಈಗ ಸುಮ್ಮನೇ ಇದ್ದರೆ ತನಗೆ ಪ್ರಾಣಾಪತ್ತು ತಪ್ಪದೆ ಬರುವುದು. ಎಂತೂ ಮೃತನಾಗುವ ನಾನು ನನ್ನ ಒಡೆಯನಾಗಿಯೂ ಪರಮಹಿತೈಷಿಯಾಗಿಯೂ ಇರುವ ರಾಕ್ಷಸನ ಶತ್ರುವನ್ನಾದರೂ ಸಂಹರಿಸಿ ಜೀವಮಂ ಬಿಟ್ಟರೆ ಪರಮಕೃತಜ್ಞನಾದ ಅಮಾತ್ಯರಾಕ್ಷಸನು ನನ್ನ ಹೆಂಡರು ಮಕ್ಕಳಂ ತನ್ನ ಮಕ್ಕಳಿಗಿಂತ ಹೆಚ್ಚಾಗಿ ಸಂರಕ್ಷಣೆ ಮಾಡುವನು. ಹಾಗಲ್ಲದೆ ಯಿದ್ದಲ್ಲಿ ಈ ಜೀವವು ನಿಷ್ಪ್ರಯೋಜನವಾಗಿ ಹೋಗುವುದು ಎಂದು ನಿಶ್ಚಯಿಸಿ ತನ್ನ ಕೈಯ್ಯಲ್ಲಿದ್ದ ಕಬ್ಬಿಣದ ಕೊಡತಿಯನ್ನೆತ್ತಿ ವಿರೋಚನನ ಶಿರಸ್ಸಿನ ಮೇಲೆ ಪ್ರಹರಿಸಲು; ಅದರಿಂದ ತಲೆಯೊಡೆದು ಪರ್ವತರಾಜನ ತಮ್ಮನು ಕಾಲಾಧೀನನಾದನು. ಅದಂ ನೋಡಿ ಜನರೆಲ್ಲರೂ ಚದರಿ ಓಡಲು; ಆ ಅವಾಂತರಕ್ಕೆ ವಾರಣವು ಬೆದರಿ ಉರುಕುತ್ತಿರಲು; ಆ ಬಳಿಕ ಮೈಗಾವಲಾಗಿ ಬಂದಿದ್ದ ಭಲ್ಲೆಯದವರು ಆ ದಾರುವರ್ಮನಂ ತಿವಿದು ಕೆಡಹಿದರು. ಆಗ ಚಾಣಕ್ಯನು ಚಂದ್ರಗುಪ್ತನ ಮುಖಮಂ ನೋಡಿ ಈ ವಿರೋಚನನ ಅದೃಷ್ಟವೂ ಸಹ ರಾಕ್ಷಸನ ಕಾಪಟ್ಯಕ್ಕೆ ಬಳಗಾಯಿತು. ಇದಕ್ಕೆ ನಾವು ಮಾಡುವುದೇನು ? ಎಂದು ಹೇಳಿ ಈ ಸ್ಥಳಮಂ ಶುದ್ಧಿ ಮಾಡಿರೆಂದು ದೂತರಿಗೆ ನೇಮಿಸಿ ಇನ್ನು ಚಂದ್ರಗುಪ್ತನು ವಾಸಮಂ ಮಾಡುವ ಸ್ಥಾನಗಳಂ ಶೋಧಿಸಬೇಕೆಂದು ನಿಶ್ಚಯಿಸಿ ಆತನಿಗೆ ಬಿಡಾರವಾಗಿ ಶೃಂಗರಿಸಿದ್ದ ಕುಮಾರಭವನಕ್ಕೆ ಹೋಗಿ ಅದೆಲ್ಲಮಂ ನೋಡಿ ಇಲ್ಲಿ ಯಾರೋ ತಿಳಿಯದವನು ಉಷಃಕಾಲದಲ್ಲಿ ಮಾಡುವ ದೇವತಾದರ್ಶನದ ಚಿತ್ರಪಟವನ್ನು ಎಡಗಡೆಯಲ್ಲಿ ಕಟ್ಟಿದ್ದಾನೆ. ಅದನ್ನು ತೆಗೆದು ಬಲಭಾಗದಲ್ಲಿ ಕಟ್ಟಿರಿ ಎಂದು ದೂತರಿಗೆ ನೇಮಿಸಲು; ಅವರು ಅದನ್ನು ಹಾಗೆಯೇ ತೆಗೆಯಲಾಗಿ ಅದರ ಹಿಂದೆ ಮಾಡಿರುವ ದೊಡ್ಡ ಗೂಡಿನಲ್ಲಿ ಒಬ್ಬ ಪುರುಷನು ಅಡಗುವಹಾಗೆ ಸ್ಥಳವಿರಲು; ಅದರಲ್ಲಿ ಹೊಸದಾಗಿ ಸಾಣೆ ಹಿಡಿದಿದ್ದ ಶಸ್ತ್ರವಿದ್ದುದಂ ಕಂಡು ಅದಂ ತರಿಸಿ ನೋಡಿ ಒಬ್ಬ ದೂತನ ಕೈಯ್ಯಲ್ಲಿ ಕೊಟ್ಟು ಹೀಗೆ ಇನ್ನೇನು ವಿಶೇಷವಿರುವುದೋ ಶೋಧಿಸಬೇಕೆಂದು ಬರುತ್ತ ನಿಲಗನ್ನಡಿಯ ರಂಧ್ರದಿಂದ ಇರುವೆಗಳು ಅನ್ನದಗುಳಂ ಕಚ್ಚಿಕೊಂಡು ಸಾಲಿಟ್ಟು ಹರಿದು ಬರುವುದಂ ಕಂಡು ಈ ಭಿತ್ತಿಯ ಹಿಂದುಗಡೆಯಲ್ಲಿ ಯಾರೋ ಪುರುಷನಿರಬೇಕು. ಆದರ್ಶಮಂ ತೆಗೆಯಿರಿ ಎನಲು; ಅದಂ ಸಡಿಲಿಸಿ ನೋಡಲಾಗಿ ಅದರ ಹಿಂದೆ ಮನುಷ್ಯ ಬರುವಂತೆ ಕನ್ನವಿರುವುದಂ ದೃಷ್ಟಿಸಿ ಅಲ್ಲಿಂದ ಆಚೆ ಪರೀಕ್ಷಿಸಿರಿ ಎನಲು; ಆ ಮಾತಂ ಕೇಳಿ ರಾಕ್ಷಸನ ಕಡೆಯ ಭವನಪಾಲಕನು ನೇಮಿಸಿದ್ದ ಶಸ್ತ್ರಪಾಣಿಗಳಾದ ಚೋರರು ಸುರಂಗ

ಮಾರ್ಗದಿಂದ ಭೀತರಾಗಿ ಒಳಗೆ ಹೋಗುತ್ತಿರಲು ; ಆ ಬಿಲಕ್ಕೆ ತೃಣ ಕಾಷ್ಠಂ
ಗಳಂ ತುಂಬಿ ಬೆಂಕಿಯಂ ಮುಟ್ಟಿಸಿ ಈ ಕುಹರದ ಆ ಪಾರ್ಶ್ವದಲ್ಲಿ ಏನಿರು
ವುದು? ಎಂದು ಬೆಸಗೊಳ್ಳಲು ; ರಾಕ್ಷಸನ ಲಾಯವಿದೆ ಎನ್ನಲಾಗಿ ಆ ಮಂದು
ರೆಗೆ ಅಗ್ನಿಯಂ ಮುಟ್ಟಿಸೆಂದು ನೇಮಿಸಲು; ಅವರು ಹಾಗೆಯೇ ಮಾಡಿದರು. ಆಗ
ಇತ್ತಂಡದ ಹೊಗೆಯೂ ಅಡರಿ ಬಿಲದಲ್ಲಿ ಮೃತವಾಗುವ ಹೆಗ್ಗಣಗಳಂತೆ ಅಲ್ಲಿ
ಅಡಗಿದ್ದ ಚೋರರು ನಾಶವಾಗಲು ; ಅದೆಲ್ಲಮಂ ಶೋಧಿಸಿ ಪರಿಶುದ್ಧಮಾಡಿರಿ
ಎಂದು ವಿಧಿಸಿ ಪಟದ ಮರೆಯಲ್ಲಿರಿಸಿದ್ದ ಹೊಸಸಾಣೆಯ ಶಸ್ತ್ರಮಂ ತರಿಸಿ
ನೋಡಿ ಇಲ್ಲಿ ಬರುವ ಜನರೆಲ್ಲರಂ ಕರಸಿರೆಂದು ಚಾಣಕ್ಯರು ದೂತರಿಗಾಜ್ಞಾಪಿ
ಸಲು; ಅವರು ಹಾಗೆಯೇ ಬಂದ ಜನರೆಲ್ಲರಂ ಕುರಿತು—ಈ ಖಡ್ಗವು ಯಾರದೆಂದು
ಕೇಳಲಾಗಿ ಅವರು ನಮ್ಮೊಬ್ಬರದೂ ಅಲ್ಲವೆಂದರು. ಆಗ ಅವರಲ್ಲಿ ಹೆಚ್ಚು
ಬೆಲೆಯ ವಸ್ತ್ರಮಂ ಧರಿಸಿರುವ ಒಬ್ಬ ಪುರುಷನನ್ನೀಕ್ಷಿಸಿ ಇದು ಯಾರದು ಎಂದು
ಅವನಿಗೆ ಪ್ರಶ್ನೆಮಾಡಲು ; ಅವನು—ನನ್ನದಲ್ಲ ಮತ್ತಾರದೋ! ಎಂದನು. ಇವ
ನಿಗೆ ಸಂಬಳವೇನು? ಎಂಬುದಾಗಿ ಮರಳಿ ಪೃಚ್ಛೆಯಂಗೆಯ್ಯಲು; ಬುದ್ಧೀ, ಎಲ್ಲ
ರಂತೆ ಇವನಿಗೂ ಐದು ವರಹ ಸಂಬಳವು. ಈ ವರೆಗೂ ಈತನ ಮನೆಯಲ್ಲಿದ್ದ
ಜನರು ನಾಲ್ವರು. ಈಗ ನಾಲ್ವತ್ತು ಜನ ಸೇವಕರಿದ್ದಾರೆ. ನಾಲ್ಕಾರು ವರಹಗಳಂ
ನಟವಿಟರಿಗಾಗಿ ಕೊಡುತ್ತಿದ್ದಾನೆ. ಪಣ್ಯಾಂಗನೆಯರಿಗೆ ನೂರಾರು ವರಹಗಳಂ
ವ್ಯಯ ಮಾಡುತ್ತಾನೆ ಎಂದು ಆತನ ಸಂಗಡ ಇರುವವರು ಹೇಳಲು : ಏನೋ
ನಿನಗಿಷ್ಟು ಧನವೆಲ್ಲಿಂದ ಬಂದಿತು? ಎಂದು ಆಕ್ಷೇಪಿಸಿದುದಕ್ಕೆ—ಪ್ರಭುಕಟಾಕ್ಷಕ್ಕೆ
ಪಾತ್ರರಾಗಿದ್ದ ಜನರಿಗೆ ವೆಚ್ಚದ ಮಟ್ಟಿಗೆ ಧನ ದೊರಕದೇ? ಎಂದನು. ಆಗ
ಚಾಣಕ್ಯನು—ಶಸ್ತ್ರದ ಸಾಣೆಗಾರರೆಲ್ಲರಂ ಕರೆದು ಕೊಂಡು ಬನ್ನಿರಿ ಎಂದು
ದೂತರಿಗೆ ಅಪ್ಪಣೆಯಂ ಕೊಡಲು; ಅವರು ಹೋಗಿ ಹಾಗೇ ಕರತಂದಂಥ ಸಾಣೆಗಾ
ರರಿಗೆ ಆ ಶಸ್ತ್ರಮಂ ತೋರಿಸಿ ಇದಕ್ಕೆ ಸಾಣೆಯಂ ಮಾಡಿದವನು ಯಾರು?
ಎನಲು; ಅವರಲ್ಲಿ ಒಬ್ಬನು—ಬುದ್ಧೀ, ನಾನು ಇದನ್ನು ಕೂಲಿಗೆ ಮಾಡಿದೆನು
ಎಂದನು. ಹಾಗಾದರೆ ಇಲ್ಲಿರುವವರಲ್ಲಿ ಯಾರಿಗಾದರು ಮಾಡಿ ಕೊಟ್ಟೆಯೋ?
ಅಥವಾ ಮತ್ತಾರಿಗೆ? ಅವನಂ ತೋರಿಸು ಎನಲು; ಆ ಸಾಣೆಗಾರನು ಅಲ್ಲಿ
ಇಲ್ಲಿ ನೋಡಿ ವಿಶೇಷವಾಗಿ ವಸ್ತ್ರದಿಂದ ಭೂಷಿತನಾಗಿದ್ದ ಕರ್ಕಟಕನಂ ನೋಡಿ
ಈತನಿಗೆಂದು ತೋರಿಸಲು: ಅವನನ್ನವಲೋಕಿಸಿ—ಎಲೈ ದುಷ್ಟನೇ ಶಸ್ತ್ರವು
ನನ್ನದಲ್ಲವೆಂದು ಮೊದಲು ಹೇಳಿದೆಯಷ್ಟೆ? ಈಗ ಅದು ಯಾರದು? ಎನಲು; ಆಗ

ಅವನು ಗಡಗಡನೆ ನಡುಗುತ್ತ—ಬುದ್ಧೀ, ನಾನು ರಾಕ್ಷಸನ ಕಡೆಯ ಭವನಪಾಲಕನು. ಮೊದಲು ರಾಕ್ಷಸನು ನನಗೆ ಬಹುದ್ರವ್ಯಮಂ ಕೊಟ್ಟು ಆ ಗೂಡಿನಲ್ಲಿ ಇದ್ದುಕೊಂಡು ನಿದ್ರೆಗೆಯ್ವ ಚಂದ್ರಗುಪ್ತನಂ ಈ ಶಸ್ತ್ರದಿಂ ಸಂಹರಿಸೆಂದು ನೇಮಿಸಿದುದರಿಂದ ಆಯುಧವನ್ನು ಮೊದಲೇ ಅಲ್ಲಿರಿಸಿ ಹೋಗುವುದಕ್ಕೆ ಅವಕಾಶ ದೊರೆಯದೆ ಇದ್ದೆನೆನಲು; ಚಾಣಕ್ಯನು ಅವನಿಗೆ ಚಿತ್ರಹಿಂಸೆಯಂ ಮಾಡಿಸಿ ಆ ಭವನಪಾಲಕನಂ ಕರೆತರುವಂತೆ ಉತ್ತರವೀಯಲು; ಚರರು ಹೋಗಿ ಹುಡುಕಲು; ಅವನು ಸಿಕ್ಕದೆ ಓಡಿಹೋದುದಂ ತಿಳಿದು ಬಂದು ಹೇಳುತ್ತಿರುವಷ್ಟರಲ್ಲಿಯೇ ಸೂರ್ಯನುದಯಿಸಲು; ಚಾಣಕ್ಯನು ಆ ಭವನಾಧಿಕಾರಿ ಎಲ್ಲಿದ್ದರೂ ಕರೆತರುವಂತೆ ಭಟರಿಗೆ ಕಟ್ಟುಮಾಡಿ ಚಂದ್ರಗುಪ್ತನನ್ನು ಕುಮಾರಭವನದಲ್ಲೇ ಇರುವಂತೆ ಉಸುರಿ ಅಲ್ಲಿ ಬೇಕಾದ ಆಪ್ತಜನರಂ ಸೇವಾರ್ಥವಾಗಿ ನಿಲ್ಲಿಸಿ ತಾನು ಬಂದು ಪರ್ಣಶಾಲೆಯಂ ನಿರ್ಮಿಸಿಕೊಂಡು ಶಿಷ್ಯಸಮೇತನಾಗಿ ಅಲ್ಲಿ ವಾಸಿಸುತ್ತಿರಲು: ಆಗ ರಾಜವೈದ್ಯನೊಬ್ಬನು ಬಂದು ಚಾಣಕ್ಯರಂ ಕಂಡು ಕೈಮುಗಿದು—

ಸ್ವಾಮಿಾ, ನಾನು ಬಹುದಿವಸಗಳಿಂದ ರಾಜಾಶ್ರಿತನಾದ ವೈದ್ಯನು. ನಿಮ್ಮಂ ಕಂಡು ನಿಮ್ಮಗಳ ಆಶ್ರಿತನಾಗಬೇಕೆಂದು ಬಂದೆನೆಂಬುದಾಗಿ ಹೇಳಿ ಅಹೋರಾತ್ರಿಯಲ್ಲೂ ಎಡೆಬಿಡದೆ ಚಾಣಕ್ಯ ಚಂದ್ರಗುಪ್ತರ ಬಳಿಯಲ್ಲೇ ಇರುವವನಾಗಿ ನಯವಿನಯಾದಿಗುಣಗಳಿಂದ ಅವರಲ್ಲಿ ದಿನೇದಿನೇ ನಂಬಿಕೆಯನ್ನುಂಟುಮಾಡಿಕೊಳ್ಳುತ್ತ ವಿಶೇಷವಾಗಿ ಕಾದಿರುವಲ್ಲಿ ಚಾಣಕ್ಯನು ತನ್ನ ಮನಸ್ಸಿನಲ್ಲಿ—ರಾಜವೈದ್ಯರು ಹೀಗೆ ಬಹುಜನರು ಇರುವಲ್ಲಿ ಈತನೊಬ್ಬನು ಮಾತ್ರ ಇಲ್ಲಿಗೆ ಬಂದು ವಿಶೇಷವಾಗಿ ಅರಸನನ್ನನುವರ್ತಿಸುವುದಕ್ಕೆ ನಿಮಿತ್ತವೇನು ? ಆಗಲಿ; ಪರೀಕ್ಷಿಸಿದಲ್ಲಿ ದೋಷವಿಲ್ಲದಿದ್ದರೆ ಇವನಂ ಪರಿಗ್ರಹಿಸಬಹುದೆಂದು ನಿಶ್ಚಯಿಸಿ—

ಎಲೈ ವೈದ್ಯರೇ, ಹದಿನೈದು ದಿವಸಗಳಾರಭ್ಯ ಚಂದ್ರಗುಪ್ತನ ಶರೀರದಲ್ಲಿ ಉಷ್ಣವು ವೆಗ್ಗಳವಾಗಿ ಜ್ವರ ಬಂದಂತಾಗಿ ಅನ್ನದ ಅರೋಚಕೆಯಿಂದ ಕಂಗೆಡುತ್ತಿದ್ದಾನೆ. ಆತನ ಹಸ್ತಮಂ ಪಿಡಿದು ನಾಡಿಯ ಗತಿಗಳಂ ನೋಡಿ ಒಳ್ಳೆಯ ಔಷಧಮಂ ಪ್ರಯೋಗಿಸಿ ಆರೋಗ್ಯವಾಗುವಂತೆ ಮಾಡಿರಿ ಎಂದು ಹೇಳಿ ಮೌರ್ಯಪುತ್ರನಂ ನೋಡಿ—ಅಯ್ಯಾ ಅರಸೇ, ಈ ವೈದ್ಯರು ಸಂಪ್ರದಾಯಸ್ಥರು. ನಿನ್ನ ಶರೀರದ ಆರ್ತಿಯನ್ನು ಸಮಾಧಾನಂಗೆಯ್ವರು. ಹಸ್ತಮಂ ತೋರಿಸಿ ಔಷಧಮಂ ತೆಗದುಕೋ ಎನಲು; ಆ ಭಿಷಜನು ಚಂದ್ರಗುಪ್ತನ ಹಸ್ತಮಂ ಪಿಡಿದು ನೋಡಿ—ಪಿತ್ತಾಧಿಕ್ಯದಿಂದ ಅಗ್ನಿದೀಪನವು ತಪ್ಪಿ ಅರುಚಿಯುಂಟಾಗಿದೆ. ಇದ

ಕ್ಕಾಗಿ ವಿಶೇಷಪ್ರಬಲಮಾತ್ರೆಗಳಂ ಪ್ರಯೋಗಿಸಕೂಡದು. ಕಲ್ಕಮಂ ಕೊಟ್ಟು ಸಮಾಧಾನಮಂ ಮಾಡುವೆನೆಂದು ಹೇಳಿ ಯೋಗಚೂರ್ಣಮಂ ತೆಗೆಯಲು ; ಆಗ ಚಾಣಕ್ಯನು ತನ್ನ ಶಿಷ್ಯನಂ ಕರೆದು—ನಮ್ಮ ಕಂಥೆಯಲ್ಲಿ ಸಂಗ್ರಹಿಸಿರುವ ಬಟ್ಟಲಂ ತೆಗೆದು ತಾರೆಂದು ಕಳುಹಿಸಲು ; ಆಗಲವಂ ಹೋಗಿ ವಿಷಚುಂಬಿನಿ ಎಂಬ ಶಿಲೆಯಿಂ ನಿರ್ಮಿತವಾದ ಬಟ್ಟಲಂ ತಂದಿರಿಸಲು ; ಆ ಭಿಷಕ್ಕು ಅದಂ ತಿಳಿಯದೆ ಆ ಪಾತ್ರೆಗೆ ತನ್ನ ಬಳಿಯಣ ಚೂರ್ಣಮಂ ಹಾಕಿ ಜಲಮಂ ಬಿಡಲು ; ಆ ಪುಡಿಯು ಶಿಲಾಸ್ಪರ್ಶದಿಂದ ವಿವರ್ಣವಾಗಿ ನೊರೆಗಟ್ಟಿ ಕುದಿದು ಸುತ್ತುತ್ತಿರಲು ; ಚಾಣಕ್ಯನು ಆ ಬಟ್ಟಲಂ ತಲೆಕೆಳಗಾಗುವಂತೆ ಮಗುಚಿ ನೋಡಿದಾಗ ಒಂದು ಬೊಟ್ಟಾದರೂ ಕೆಳಗೆ ಬೀಳದಿರಲು ; ಆಗ—ಎಲೈ ಪಂಡಿತನೇ, ಈ ಔಷಧವು ಶೀಘ್ರವಾಗಿ ಉಪದ್ರವನ್ನು ಶಮನ ಮಾಡುವಂತೆ ತೋರುತ್ತಿದೆ. ಹಾಗಾದರೂ ವೈದ್ಯರನ್ನೂ ಪಾಚಕರನ್ನೂ ಪರೀಕ್ಷಿಸದೆ ಪ್ರಭುವಾದವನು ಪರಿಗ್ರಹಿಸಕೂಡದು. ಅದುಕಾರಣ ಈ ಕಲ್ಕಮಂ ಈಗ ನೀನೇ ಸೇವಿಸು ನಿನ್ನ ಶರೀರಕ್ಕೆ ಅನುಗುಣವಾದುದಂ ನೋಡಿ ನಾಳೆ ಅರಸು ತೆಗೆದುಕೊಂಡಾನು ಎಂದು ನೇಮಿಸಲು ; ಆ ಪಂಡಿತನು ಆ ಮಾತಂ ಮೀರಲಾರದೆ ಆ ಔಷಧಮಂ ಪಾನಮಾಡಲು ; ಅವನಂ ಮನೆಗೆ ಕಳುಹಿಸಿ ಹಿಂದುಗಡೆಯಲ್ಲಿ ಭೃತ್ಯನನ್ನಟ್ಟಿ ಅತನ ಮನೆಯ ಬಾಗಿಲಿನಲ್ಲಿ ಮುಹೂರ್ತಕಾಲವಿದ್ದು ಅಲ್ಲಿನ ವರ್ತಮಾನಮಂ ತಿಳಿದು ಬಂದು ಹೇಳು ಎನಲು ; ಆ ದೂತನು ಅದೇಮೇರೆಗೆ ಹೋಗಿ ಬಂದು ಆ ವೈದ್ಯನು ಮೃತನಾದನು ಎಂದು ಚಾಣಕ್ಯನಿಗೆ ಹೇಳಿದನು. ಹೀಗೆ ರಾಕ್ಷಸನು ಚಂದ್ರಗುಪ್ತನಿಗೆ ಮಾಡಿದ್ದ ಕಪಟಗಳಿಗೆಲ್ಲ ಚಾಣಕ್ಯನು ಪ್ರತೀಕಾರಮಂ ಮಾಡಿದುದನ್ನು ಜನರೆಲ್ಲ ತಿಳಿದು ಚಾಣಕ್ಯನ ಶೋಧನಶಕ್ತಿಗಾಗಿ ಆಶ್ಚರ್ಯಪಡುತ್ತಿದ್ದರು.

ಮತ್ತೊಂದು ದಿವಸದಲ್ಲಿ ಚಾಣಕ್ಯನು ತನಗೆ ಆಪ್ತರಾದ ಗೂಢಚಾರರಂ ಕರೆದು—ಎಲೈ ಚಾರರುಗಳಿರಾ, ನೀವೆಲ್ಲರೂ ಸಮಯೋಚಿತವಾದ ವೇಷಭಾಷೆಗಳಂ ವಹಿಸಿ ಈ ಪುರದಲ್ಲಿ ರಾಕ್ಷಸನ ಕಡೆಯವರು ಯಾರು ಯಾರು ಇದ್ದಾರೆ? ಅವರು ಯಾರಲ್ಲಿಗೆ ಹೋಗಿ ಬರುವರು. ಚಂದ್ರಗುಪ್ತನಿಗೆ ದ್ವೇಷಿಗಳಾರು? ಶ್ರೇಯಶ್ಚಿಂತಕರಾರು? ರಾಕ್ಷಸನ ಹೆಂಗಸರು ಮಕ್ಕಳು ಯಾರಲ್ಲಿರುವರು! ಆ ಅಮಾತ್ಯನು ಯಾವ ದೇಶದಲ್ಲಿರುವನು? ಏನು ಮಾಡುವನು? ಇದೆಲ್ಲವಂ ತಿಳಿದು ಬಂದು ಹೇಳಿರಿ ಎಂದು ಅವರಂ ಕಳುಹಿಸಿ ಚಂದ್ರಗುಪ್ತನ ಬಳಿಗೆ ಬಂದು—ಎಲೈ ಕುಮಾರಕನೆ, ಸುಮ್ಮನಿರಬಾರದು. ನೀನು ಹೋಗಿ ವೃದ್ಧನಾದ ನಿಮ್ಮ

ಪಿತಾಮಹನಂ ಕಂಡು ಬಾ ಎನಲು ; ಹಾಗೆ ಆಗಲಿ ಎಂದು ಚಂದ್ರಗುಪ್ತನು ಹೋಗಿ—ತಾನು ಬಂದು ಇದ್ದೇನೆಂದು ಕಂಚುಕಿಗಳ ಮುಖದಿಂದ ವೃದ್ಧರಾಜನ ಬಳಿಗೆ ಹೇಳಿ ಕಳುಹಿಸಲು ; ಆಮೇಲೆ ಆತನ ಅಪ್ಪಣೆಯಿಂದ ಹೋಗಿ ತಮ್ಮ ಮುತ್ತಜ್ಜನಿಗೆ ದಂಡವತ್ಪ್ರಣಾಮಂಗೆಯ್ದು ತಲೆವಾಗಿ ನಿಂತಿರಲು ; ಆತನು ಚಂದ್ರಗುಪ್ತನಂ ನೋಡಿ ಕಂಬನಿಗಳಂ ತಂದು—

ಎಲೈ ಬಾಲಕನೇ, ನೀನಾದರೂ ಆಯುಷ್ಮಂತನಾಗಿ ನಮ್ಮ ಯಶಸ್ಸಂ ನಡಸುವವನಾಗು. ನಿನ್ನಂ ನೋಡಲು ನನ್ನ ಪುತ್ರನಾದ ಮೌರ್ಯನಂ ಕಂಡಂತಾಯಿತು. ನಿನಗೆ ದ್ರೋಹವನ್ನೆಸಗಿದವರು ತಮ್ಮ ಗತಿಗೆ ಸಂದರು. ಅದೆಲ್ಲಮಂ ಸ್ವಪ್ನದರ್ಶನದಂತೆ ಸ್ಮರಿಸದೆ ಬಿಟ್ಟೆನು. ನಿನಗೆ ನಾನು ದ್ರೋಹವನ್ನೆಸಗಿದವನಲ್ಲ. ಅದಂ ಕಿವಿಯಿಂದಲಾದರೂ ಕೇಳಿದವನಲ್ಲ. ಇನ್ನೂ ಅಂತಃಪುರದಲ್ಲಿ ಅನೇಕ ಯುವತೀಜನರಿರುವರು. ಅವರಂ ನಿನ್ನ ಒಡಹುಟ್ಟಿದವರಂ ಕಂಡಂತೆ ಪಾಲಿಸುತ್ತಿರುವವನಾಗು. ನಾನು ಮನಸ್ಸು ಬಂದರೆ ಇಲ್ಲಿರುವೆನು. ಇಲ್ಲದಿದ್ದರೆ ತಪೋವನವನ್ನೈದುವೆನು ಎಂದು ಹೇಳುತ್ತಿದ್ದನು. ಅನಂತರದಲ್ಲಿ ರಾಯನ ವಾಕ್ಯಮಂ ಕೇಳಿ ಚಂದ್ರಗುಪ್ತನು—

ಹೆತ್ತಪ್ಪಾಜಿಯವರೇ, ಇಂದು ನಿಮ್ಮ ಪಾದದರ್ಶನವಾದುದರಿಂದ ನನ್ನ ಪಿತೃಸೋದರರ ಮರಣದಿಂದುಂಟಾದ ದುಃಖವನ್ನೆಲ್ಲ ಮರೆತೆನು. ಈಗ ಇರುವುದೆಲ್ಲವೂ ನಿಮ್ಮ ಭುಜಾರ್ಜಿತವಲ್ಲವೆ? ಅದರಲ್ಲಿ ಮತ್ತೊಬ್ಬರಿಗೆ ಬಾಧ್ಯತೆ ಎಂತುಂಟಾಗುವುದು? ತಮ್ಮ ಆಜ್ಞಾನುಸಾರವಾಗಿ ನಡೆಯುವುದಕ್ಕೆ ನಾನು ಪಾತ್ರನಲ್ಲವೆ? ನೀವು ನನಗೆ ಶ್ರೇಯಸ್ಸಂ ಚಿಂತಿಸುತ್ತ ಬುದ್ಧಿಮತಿಗಳಂ ಹೇಳುತ್ತ ಇರಬೇಕಲ್ಲದೆ ನನಗೆ ಅಪಖ್ಯಾತಿಯನ್ನುಂಟುಮಾಡುವಂತೆ ನೀವು ಸಹ ತಪೋವನಕ್ಕಭಿಮುಖರಾಗಿ ಹೊರಟು ಹೋದರೆ ನಿಮ್ಮ ಸನ್ನಿಧಿಯಂ ಬಿಟ್ಟು ನಾನು ಇಲ್ಲಿದ್ದು ಫಲವೇನು? ನಾನೂ ಸಂಗಡಲೇ ಬರುವೆನು ಎಂದು ಹೇಳಿ ವೃದ್ಧರಾಜನಂ ಒಡಂಬಡಿಸಿ ತಾನಿದ್ದೆಡೆಗೆ ಬರುತ್ತಿದ್ದನು.

ಅತ್ತಲಾಗಿ ತನ್ನ ದೇಶಮಂ ಕುರಿತು ತೆರಳುತ್ತಿದ್ದ ಮಲಯಕೇತುವಂ ಆತನ ಚಾರನೊಬ್ಬನು ಕಂಡು ವಿರೋಚನನು ಹತವಾದುದಂ ತಿಳುಹಿಸಲು ; ರಾಜಪುತ್ರನು ಮಹಾದುಃಖಿತನಾಗಿ ಸಂಗಡವೇ ಬರುತ್ತಿರುವ ಬಾಗುರಾಯಣನಂ ನೋಡಿ—ಎಲೈ ಮಿತ್ರನೇ, ಖಡ್ಗದ ಗಾಯದಲ್ಲಿ ಬಾಣ ಬಂದು ನೆಟ್ಟುಕೊಂಡಂತೆ ನಮಗೆ ಬಂದ ದುಃಖಪರಂಪರೆಯನ್ನು ನೋಡಿದೆಯಾ? ಕಾಶೀರಾಜನ ಸಿಮಿ

ತ್ತಮಂ ಮಾಡಿ ನಂದರಂ ಸಂಹರಿಸಿ ವಿಷಕನ್ಯಾಮುಖದಿಂದ ತಮ್ಮ ಅಣ್ಣನಾದ ಪರ್ವತರಾಜನುಂ ಕೊಂದನೆಂದು ತಿಳಿದು ಭೀತನಾಗಿ ಓಡಿ ಬಂದವನಾದರೂ ನಮ್ಮ ಚಿಕ್ಕಪ್ಪನಾದ ವಿರೋಚನನು ಪುನಃ ಚಾಣಕ್ಯನ ಕಪಟವಾಕ್ಯಕ್ಕೆ ಒಳಗಾಗಿ ಅಸುವಂ ಬಿಟ್ಟನೆಂಬುವುದು ದೈವಸಂಕಲ್ಪವೇ ಹೊರತು ಮನುಷ್ಯಯತ್ನಮುಂಟೇ? ಹೀಗೆ ಸ್ವಜನನಾಶವಾದ ಬಳಿಕ ಇನ್ನು ನನಗೆ ರಾಜ್ಯಸುಖವೆಂದರೇನು? ಇದಲ್ಲದೆ ಆಪ್ತಮಂತ್ರಿಯಾದ ಶಬರವರ್ಮನೂ ಶೌರ್ಯಮಂ ತೋರಿಸಿ ನಂದನಿಂದ ಹತನಾದನು. ಅಂತಃಪುರದ ಜನಗಳೊಳಗೆ ಯಾರು ಯಾರಿಗೆ ಏನೆಂದು ಹೇಳಲಿ? ಎನ್ನುತ್ತ ದುಃಖಿಸುತ್ತಿರಲು; ಆಗ ಭಾಗುರಾಯಣನು ಸಮಯೋಚಿತವಾಕ್ಯಗಳಿಂದ ಮಲಯಕೇತುವಿಗೆ ಶೋಕಶಮನಮಂ ಮಾಡುತ್ತ ಆತನಂ ಪುರಕ್ಕೆ ಕರತರುತ್ತಿದ್ದನು.

ಇತ್ತ ಒಬ್ಬ ಗೂಢಚಾರನು ಬಂದು ಪಾಟಲೀಪುರದಲ್ಲಿರುವ ಚಾಣಕ್ಯರಿಗೆ ಕೈ ಮುಗಿದು—ಸ್ವಾಮಿಾ, ಚಂದ್ರಗುಪ್ತನಿಗೆ ಶಯನಗೃಹದಲ್ಲಿ ಕಪಟಮಂ ರಚಿಸಿದ್ದ ಭವನಪಾಲಕನೆಂಬುವನು ಮುನವಳ್ಳಿಯ ತೋಟದಲ್ಲಿ ಜೀತಗಾರರಂತೆ ವೇಷವಂ ಧರಿಸಿ ಅಲ್ಲಿನ ಆಳುಗಳ ಸಂಗಡ ಗಿಡಗಳಿಗೆ ನೀರನ್ನು ಎತ್ತುತ್ತಿದ್ದಾನೆ ಎನಲು; ಅದಂ ಕೇಳಿ ಅವನಂ ಕರತನ್ನಿರಿ ಎಂದು ಭಟರಂ ಕಳುಹಿಸಲು; ಅವರು ಹೋಗಿ ಆ ಭವನಪಾಲಕನಂ ಹಿಡಿದು ಕಟ್ಟಿ ತಂದು ಚಾಣಕ್ಯರ ಮುಂದೆ ನಿಲ್ಲಿಸಿದರು. ಆಗ ಚಾಣಕ್ಯನು ಅವನಂ ನೋಡಿ—

ಎಲೈ ದುರ್ಬುದ್ಧಿಯುಳ್ಳ ಭವನಪಾಲನೇ, ಚಂದ್ರಗುಪ್ತನಿಗೆ ಮಾಡಿದ ದ್ರೋಹಮಂ ಇದ್ದುದನ್ನು ಇದ್ದಂತೆ ಹೇಳಿದರೆ ಪ್ರಾಣಸಮೇತವಾಗಿ ಉಳಿಯುವೆ ಎನಲು; ಅವನು ಗಡಗಡನೆ ನಡುಗುತ್ತ—

ಸ್ವಾಮಿಾ. ನನಗೆ ಚಂದ್ರಗುಪ್ತನಲ್ಲಿ ದ್ವೇಷವೆಂಬುವುದು ಲೇಶವೂ ಇಲ್ಲ. ಅನ್ನವಸ್ತ್ರಮಂ ಕೊಟ್ಟು ಪೋಷಿಸುತ್ತಿದ್ದ ರಾಕ್ಷಸನು ನೇಮಿಸಿದಂತೆ ಶಯನಗೃಹದಲ್ಲಿ ಕಪಟಮಂ ರಚಿಸಿದ್ದುದುಂಟು. ಚಿತ್ತಕ್ಕೆ ಬಂದಂತೆ ಮಾಡಬಹುದು ಎನಲು;

ಹಾಗಾದರೆ ರಾಜಗೃಹದ ರಹಸ್ಯವು ನಿನಗೆ ಚೆನ್ನಾಗಿ ತಿಳಿದಿರುವುದಷ್ಟೆ? ರಾಕ್ಷಸನು ಇಲ್ಲಿಂದ ಜನಗಳಿಗೆ ತಿಳಿಯದಂತೆ ಯಾವ ಮಾರ್ಗದಿಂ ಹೋದನು? ಅದಂ ಹೇಳಿದರೆ ನಿನ್ನ ಅಪರಾಧಮಂ ಕ್ಷಮಿಸುವೆನು ಎನಲು; ಅವನು ರಹಸ್ಯದಲ್ಲಿ—

ಸ್ವಾಮೀ, ಅಂತಃಪುರದ ಸುರಂಗದಿಂದ ಹೊರಗಣ ಉದ್ಯಾನದ ಸೀಗೆಯ ಬೇಲಿಗೆ ಹೋಗುವ ಮಾರ್ಗದ ಬಾಗಿಲಿನಿಂದ ಹೊರಟು ನಡೆದನು. ಇದು ಸತ್ಯವು ಎನಲು ; ಆ ಭವನಪಾಲಕನಂ ಬಿಟ್ಟು ಕಳುಹಿಸಿ ರಹಸ್ಯದಲ್ಲಿ ಕಳ್ಳಬಂಟರಂ ಕರೆಯಿಸಿ—

ಎಲೈ ಚೋರರುಗಳಿರಾ, ಉದ್ಯಾನದ ಸೀಗೆಯ ಬೇಲಿಯಲ್ಲಿ ಸುರಂಗದ ಬಾಗಿಲಿರುವುದು. ಆ ಬಳಿಯಲ್ಲಿ ನೀವು ಅಡಗಿದ್ದು ಯಾರಾದರೂ ಬಳಗಣಿಂದ ಬಂದರೆ ಅವರು ಎಲ್ಲಿಗೆ ಹೋಗುವರು ? ತಿಳಿದು ಬಂದು ಹೇಳಿರಿ ಎಂದು ನೇಮಿಸಿ ಕಳುಹಿಸಿದನು. ಅವರು ಹೋಗಿ ಅದೇ ಪ್ರಕಾರವಿರಲು ; ಆ ಮೇಲೆ ಚಾಣಕ್ಯನು ಆಸ್ಥಾನಕ್ಕೆ ಹೋಗಿ ರಾಜಸನ್ನಧಿಯಲ್ಲಿ ಹೊಗಳುವ ವಂದಿಮಾಗಧರಂ ಕರೆದು—

ಎಲೈ ಭಟರುಗಳಿರಾ, ಈ ದಿವಸ ಚಂದ್ರಗುಪ್ತನ ಶೌರ್ಯವನ್ನೇ ಅಧಿಕವಾಗಿ ಹೊಗಳಿರಿ ಎಂದು ಆಜ್ಞಾಪಿಸಿ ಕಳುಹಿಸಲು ; ಅವರು ರಾಜಗೃಹಸಮೀಪದ ಹಜಾರದಲ್ಲಿ ಕುಳಿತು ಸಾಮಂತನರಪತಿಗಳು ಕಳುಹಿಸಿದ ಪಗದಿಗಳಂ ವಿಚಾರಿಸುತ್ತ ಇರುವ ಚಂದ್ರಗುಪ್ತನ ಮುಂದೆ ನಿಂತು ಸ್ತುತಿಪದ್ಯಗಳಿಂದ ಕೈಗಳಂ ನೀಡಿ ಹೀಗೆ ಹೊಗಳುತ್ತಿದ್ದರು.

ಜಯ ! ವೀರವೈರಿದಲ್ಲಣನೇ ! ರಾಜಚೂಡಾಮಣಿಯೇ ! ನಂದನಿತಂಬಿನೀ ಸೌಮಾಂಗಲ್ಯವಂ ಸೂರೆಗೊಂಡವನೇ ಜಯ ! ಎಂದು ಒಬ್ಬ ಮಾಗಧನೂ, ಕೌರುವಂಶಾಬ್ಧಿಚಂದ್ರನೇ ! ನಂದಗಜಕಂಠೀರವನೇ ಜಯ ! ಚಂದ್ರಗುಪ್ತಮಹಾರಾಜನೇ ಜಯ ! ಎಂದು ಒಬ್ಬ ವೈತಾಳಿಕನೂ, ಮೌರ್ಯಕುಲತಿಲಕನೇ ! ನಂದಕುಲವನದಾವಾನಲನೇ ಜಯ ! ಎಂದು ಒಬ್ಬ ವಂದಿಯೂ, ಹೊಗಳುತ್ತಿರಲು ; ಆ ಧ್ವನಿಯಂ ಕೇಳಿ ಸರ್ವಾರ್ಥಸಿದ್ಧಿರಾಜನು ಮನದಲ್ಲಿ ಮಹಾವ್ಯಸನಂಗೊಂಡು ತನ್ನ ಪತ್ನಿಯಾದ ಸುನಂದಾದೇವಿಯಂ ಕುರಿತು—

ಎಲೈ ರಾಣಿಯೇ, ನಾನು ಈ ವರೆಗೂ ಸಕಲರಾಜರಿಗೂ ಮೇಲಾಗಿ ಬದುಕಿ ಈಗ ಶೂರರಾದ ಪುತ್ರರಂ ಹೋಗಲಾಡಿಸಿಕೊಂಡು ಈ ನೀಚನ ಕೈಕೆಳಗೆ ಬಾಯ್ದೆರೆದು ದೀನನಾಗಿ ಈ ಪರುಷವಾಕ್ಯವಂ ಕೇಳುತ್ತ ಉಕ್ಕಿಬರುವ ಕ್ಲೇಶವನ್ನನುಭವಿಸುತ್ತ ನಾಯಿಗಳ ಹಿಂಡಿಗೆ ಸಿಕ್ಕಿ ಹಲ್ಲು ಕಿರಿಯುತ್ತಿರುವ ವಾನರನಂತೆ ಇಲ್ಲಿ ಇರುವುದಕ್ಕಿಂತಲೂ ಗಂಗಾತರಂಗಶೀಕರಂಗಳಿಂ ಸಂಗತವಾಗಿ ಮಹಾಮುನಿಜನ ಚರಣಾರವಿಂದ ರೇಣುಗಳಿಂ ಪವಿತ್ರತಮವಾದ ತಪೋವನದಲ್ಲಿ

ವಾಸಮಂ ಮಾಡುತ್ತ ಅಲ್ಲಿನ ಕಂದಮೂಲಾದ್ಯಶನದಿಂ ತೃಪ್ತನಾಗುತ್ತ ತಪೋ
ಧನರ ದರ್ಶನದಿಂ ಸಕಲಕ್ಲೇಶಮಂ ಮರೆಯುತ್ತ ಈ ಜನ್ಮಮಂ ಕಳೆವರೆ
ನನಗೆ ಅದೇ ಪುರುಷಾರ್ಥವು. ಇಲ್ಲಿಂದ ತಪೋವನಕ್ಕೆ ಹೋಗುವೆನು. ನೀನು
ಚಂದ್ರಗುಪ್ತನನ್ನನುವರ್ತಿಸಿಕೊಂಡು ಜೀವಿಸುತ್ತ ಇರುವವಳಾಗು. ಎಲ್ಲ
ದುಃಖಕ್ಕಿಂತಲೂ ಶೀತೋಷ್ಣಸಹನದುಃಖವು ದುಸ್ಸಹವಾಗಿರುವುದು. ಅರಣ್ಯದಲ್ಲಿ
ಮತ್ತೂ ಅನಿರ್ವಾಹವಾಗಿರುವುದರಿಂ ನಿನ್ನಿಂದ ತಾಳಲಶಕ್ಯವು ಎಂದು ಹೇಳಲು;
ರಾಣಿಯು ಈ ರೀತಿಯಾದ ಪತಿಯ ವಾಕ್ಯಮಂ ಕೇಳಿ—

ರಾಜಾಧಿರಾಜನೇ, ಶ್ರೀಮಂತನಾದ ನಿನಗೇ ವನವಾಸದುಃಖವು ಸಹನವಾದ
ಬಳಿಕ ಪಾಪಿಷ್ಠವಾದ ಈ ಸ್ತ್ರೀಜನ್ಮಕ್ಕೆ ಅಸಹನವೆಂತಾಗುವುದು? ಚಂದ್ರನಂ
ಚಂದ್ರಿಕೆ ಹೊಂದುವಂತೆ ನಾನೂ ನಿನ್ನ ಸಂಗಡವೇ ಬರುವೆನಲ್ಲದೆ ಈ ದುಃಖಮ
ಯಕೂಪದಲ್ಲಿ ಎಂತು ವಾಸಮಂ ಮಾಡುವೆನು? ನಿಮ್ಮ ಚರಣಸೇವೆಯಂ ಮಾ
ಡುತ್ತ ಮುನಿಪತ್ನಿಯರ ಪುಣ್ಯಕಥೆಗಳಂ ಕೇಳುವುದರಿಂದ ಸಕಲವಿಧಕ್ಲೇಶಮಂ
ಮರೆಯುತ್ತ ಈ ಜನ್ಮಮಂ ಉತ್ತರಿಸುವೆನಲ್ಲದೆ ಸರ್ವಥಾ ಇಲ್ಲಿ ಇರತಕ್ಕವ
ಳಲ್ಲ ಎಂದು ಉಸುರಿದಳು. ಆ ಮಾತಿಗೆ ರಾಯನು—ನಿನ್ನ ಮನಸ್ಸಿಗೆ ಬಂದಂತೆ
ಮಾಡು ಎಂದು ಹೇಳಿದನು. ಆಗ ಆ ದೇವಿಯ ಚೇಟಿಯೊಬ್ಬಳು ಬಂದು ದೂರ
ದಲ್ಲಿ ನಮಸ್ಕರಿಸಿ ನಿಂತು—ಅಮ್ಮಣ್ಣಿಯವರೇ, ಬಾಲ್ಯಾದಿಯಾಗಿ ಇಂದಿನ ವರೆಗೂ
ನಿಮೇಷಕಾಲವಾದರೂ ನಾನು ನಿಮ್ಮನ್ನಗಲಿ ಇದ್ದವಳಲ್ಲ. ನಿಮ್ಮ ಪಾದ
ಸೇವೆಯಂ ಮಾಡಿಕೊಂಡು ಫಲಪರ್ಣಗಳಿಂ ಜೀವಿಸುತ್ತ ನಿಮ್ಮ ಸನ್ನಿಧಿಯ
ಲ್ಲಿಯೇ ಸುಖದಿಂದಿರುವೆನಲ್ಲದೆ ಅನಾಥಳಾಗಿ ಎಲ್ಲಿ ಹೋಗಲಿ? ಸಂಗಡಲೇ
ಬರುವುದಕ್ಕೆ ಅಪ್ಪಣೆಯಾಗಬೇಕು ಎನಲು; ಆಕೆಯು ಹಾಗೇ ಆಗಲಿ ಎಂದಳು.
ಅಷ್ಟರಲ್ಲಿಯೇ ಬೀಸಣಿಗೆಯಂ ಬೀಸುವ ಭೃತ್ಯನೊಬ್ಬನು ಬಂದು ರಾಯನಿಗೆ
ಅಡ್ಡಬಿದ್ದು ಕೈಮುಗಿದು—ಬುದ್ಧೀ, ಸೂತಿಕಾಗೃಹದಲ್ಲಿ ಮಾತೃವಿಮುಕ್ತನಾದ
ನನ್ನಂ ತದಾರಭ್ಯ ಪೋಷಣೆಗೆಯ್ದಿ ಇಷ್ಟು ದಿವಸಗಳವರೆಗೂ ಪಾದಸೇವೆಯಲ್ಲೇ
ಇಟ್ಟುಕೊಂಡಿದ್ದು ಈಗ ನನ್ನಂ ಬಿಟ್ಟು ತಪೋವನಕ್ಕೆ ದಯಮಾಡಿದರೆ ತಮ್ಮ
ವಿಯೋಗ ಸಂಜನಿತ ಕ್ಲೇಶವನ್ನು ನಾನು ಅನುಭವಿಸುತ್ತ ದೀನನಾಗಿ ಮತ್ತೊಬ್ಬರ
ಸೇವೆಯಂ ಏನೆಂದು ಮಾಡಲಿ? ಸ್ವಾಮಿಯ ಸಂಗಡಲೇ ಬರುತ್ತ ಸಕಾಲಕ್ಕೆ
ಕಂದಮೂಲಾದಿಗಳಂ ಒದಗಿಸುತ್ತ ಹಗಲಿರುಳುಗಳಲ್ಲಿ ಮೃಗಾದಿಬಾಧೆ ಇಲ್ಲದಂತೆ
ಜಾಗರೂಕತೆಯಿಂದ ಶಸ್ತ್ರಮಂ ಪಿಡಿದು ಕಾವಲಾಗಿರುತ್ತ ಪರ್ಣಶಾಲೆಯಂ
ರಚಿಸುತ್ತ ತಮ್ಮ ಸನ್ನಿಧಿಯಲ್ಲಿಯೇ ಇರುವೆನಲ್ಲದೆ ಮತ್ತೊಬ್ಬರಂ ಹೊಂದು

ವವನಲ್ಲವೆಂದು ಹೇಳುತ್ತಿರಲು; ಸೇವೆಗೆ ಒಬ್ಬನಿರಬೇಕೆಂಬುದಾಗಿ ಆ ರಾಯನು ಅವನಿಗೆ—ಹಾಗೆಯೇ ಆಗಲಿ ಎಂದು ನೇಮಿಸಿದನು. ಅಷ್ಟರಲ್ಲಿಯೇ ಅರುಣೋದಯವಾಗಲು; ಸುನಂದಾದೇವಿಯು ತಾನು ಪೂಜಿಸುವ ಗೌರೀಭಾವನಾಮಯವಾದ ವಿಗ್ರಹಮಂ ತೆಗೆದುಕೊಂಡು ನೂತನವಾದ ವಸ್ತ್ರಮಂ ಸರ್ವಾಂಗಕ್ಕೂ ಮುಸುಗಿಟ್ಟು ಯಾರಿಗೂ ತಿಳಿಯದಂತೆ ಚೇಟಿಸಮೇತಳಾಗಿ ಪ್ರಯಾಣಕ್ಕೆ ಸಿದ್ಧವಾಗಿ ಬಂದು ನಿಲ್ಲಲು; ಆಗ ರಾಯನು—ತನ್ನ ಖಡ್ಗಧನುಸ್ಸುಗಳನ್ನು ಆ ಭೃತ್ಯನ ಕೈಯ್ಯಲ್ಲಿ ಕೊಟ್ಟು ತಾನು ನಿತ್ಯವೂ ಪೂಜೆಗೆಯ್ವ ಶಿವಲಿಂಗಸಂಪುಟವಮಂ ಕೈಯ್ಯಲ್ಲಿ ತೆಗೆದುಕೊಂಡು ನಿಶ್ಚಿಂತೆಯಿಂದ ಅಂತಃಪುರದ ಸುರಂಗಮಾರ್ಗದಿಂದ ಪತ್ನೀಸಮೇತನಾಗಿ ಹೊರಟು ರಾಜಮಾರ್ಗಮಂ ಬಿಟ್ಟು ಪಥವಿಲ್ಲದ ಅರಣ್ಯದಲ್ಲಿ ಹೋಗುತ್ತಿದ್ದನು. ಆ ಸಮಯದಲ್ಲಿ ಮೊದಲು ಚಾಣಕ್ಯರ ಅಜ್ಞಾಪ್ರಕಾರ ಆ ಸುರಂಗದ ಬಳಿಯಲ್ಲಿ ಅಡಗಿದ್ದ ಚೋರರು ಈ ನಾಲ್ವರೂ ಅರಣ್ಯಕ್ಕೆ ತೆರಳುವುದಂ ನೋಡಿ ಬಂದು ಚಾಣಕ್ಯರಂ ಕಂಡು ಕೈಮುಗಿದು—

ಸ್ವಾಮಿಾ ಈ ದಿವಸದ ಅರುಣೋದಯಸಮಯದಲ್ಲಿ ಎಲ್ಲಿಂದಲೋ ಉದ್ಯಾನದ ಬೇಲಿಯೊಳಗೆ ಇರುವ ಸುರಂಗಮಾರ್ಗದ ಬಾಗಿಲಿಂದ ಒಬ್ಬ ವೃದ್ಧನೂ ಒಬ್ಬ ಚೇಟಿಯೂ ಒಬ್ಬ ಸ್ತ್ರೀಯೂ ಆಯುಧಸಮೇತನಾದ ಒಬ್ಬ ಬೀಸಣಿಗೆಯವನೂ ಈ ನಾಲ್ವರು ಹೊರಟು ರಾಜಮಾರ್ಗಮಂ ಬಿಟ್ಟು ಅರಣ್ಯದಲ್ಲಿ ನಡೆಯುತ್ತ ನೈಮಿಶಾರಣ್ಯಮುಖವಾಗಿ ಹೋಗುತ್ತಿದ್ದಾರೆ. ಚಿತ್ತಕ್ಕೆ ತಿಳಿದಿರಬೇಕೆಂದು ಬಿನ್ನವಿಸಿದೆವೆನಲು; ಅದಂ ಕೇಳಿ ಚಾಣಕ್ಯನು ಮನಸ್ಸಿನಲ್ಲಿ—ಈಗ ಸರ್ವಾರ್ಥಸಿದ್ಧಿಯು ಕ್ಲೇಶಯುಕ್ತನಾಗಿ ಇಲ್ಲಿ ನಿಲ್ಲಲಾರದೆ ಪತ್ನೀಸಮೇತನಾಗಿ ತಪೋವನಮಂ ಹೊಂದುವನು. ಈ ವೃತ್ತಾಂತಮಂ ರಾಕ್ಷಸಂ ಕೇಳಿದರೆ ಆ ವೃದ್ಧನೆಡೆಗೆ ಹೋಗಿ ಅವನಿಗೆ ಬೋಧಿಸಿ ಕುಲೀನರಾದ ಅರಸುಗಳಲ್ಲಿ ಒಂದು ಶಿಶುವನ್ನಾದರೂ ತಂದು ಮುದುಕನಿಗೆ ದತ್ತಪುತ್ರನನ್ನಾಗಿ ಮಾಡಿ ಆ ಬಳಿಕ ನಮ್ಮಂತೆ ಯಾವ ಅರಸನನ್ನಾದರೂ ಆಶ್ರಯಿಸಿ ದಂಡೆತ್ತಿ ಬಂದು ಚಂದ್ರಗುಪ್ತನಲ್ಲಿರುವ ದ್ವೇಷಮಂ ಸಾಧಿಸಿ ನಂದವಂಶವು ಪುನಃ ಅಂಕುರಿಸಿತೆಂದು ಹೇಳುತ್ತ ಆ ಸ್ವೀಕೃತಪುತ್ರನಿಗಾದರೂ ರಾಜ್ಯಾಧಿಪತ್ಯವನ್ನುಂಟುಮಾಡುವನಲ್ಲದೆ ಸುಮ್ಮನಿರನು. ಆದುದರಿಂದ ಚಂದ್ರಗುಪ್ತನ ರಾಜ್ಯವು ನಿಷ್ಕಂಟಕವಾಗುವುದಕ್ಕಾಗಿ ಈಗಲೇ ಈ ವೃದ್ಧರಾಜನನ್ನು ಆ ತಪೋವನದಲ್ಲಿ ಸಂಹಾರಮಂ ಗೆಯ್ಯಬೇಕೆಂದು ನಿಶ್ಚಯಿಸಿ ದೂತನ ಮುಖಮಂ ನೋಡಿ—

ಎಲೈ, ಚಂದ್ರಗುಪ್ತನು ದರ್ಶನಕ್ಕೆ ಬರುವನು. ವೃದ್ಧರಾಜದಂಪತಿಗಳ ಸಮಯವೇನೆಂದು ಅಂತಃಪುರದ ಕಂಚುಕಿಯಂ ಕೇಳಿ ಬಾರೆನಲು ; ಬುದ್ಧೀ ಎಂದು ಆ ದೂತನು ಹೋಗಿ ಅದೇ ರೀತಿಯಲ್ಲಿ ಕೇಳಲು ; ಅಲ್ಲಿದ್ದ ವೃದ್ಧ ಕಂಚುಕಿಯು ಅಂತಃಪುರಕ್ಕೆ ಹೋಗಿ ಎಲ್ಲಕಡೆಯೂ ಹುಡುಕಿ ಆ ಬಳಿಕ ರಾಜದಂಪತಿಗಳು ಇಲ್ಲದುದನ್ನು ತಿಳಿದು ನಾನೇ ಬಂದು ತಿಳಿಸುವೆನೆಂದು ಅವನು ಚಾಣಕ್ಯರ ಬಳಿಗೈತಂದು ಕೈ ಮುಗಿದು ನಿಂತು—

ಸ್ವಾಮೀ, ಅಪ್ಪಣೆಯಾದ ಮೇರೆಗೆ ಅಂತಃಪುರದಲ್ಲಿ ಗೋಪ್ಯಾದಗಲ ಉಳಿಯದಂತೆ ಹುಡುಕಿದೆನು. ರಾಜದಂಪತಿಗಳು ಅಲ್ಲಿ ಸರ್ವಥಾ ಇಲ್ಲ. ಒಬ್ಬ ಚೇಟಿಯೂ ಇಲ್ಲ. ಒಬ್ಬ ಬೀಸಣಿಗೆಯವನನ್ನೂ ಕಾಣೆನು. ಇವರು ಬಾಗಿಲಲ್ಲಿ ಬಂದುದೇ ಇಲ್ಲ. ಈ ಯರ್ಥವಂ ತಿಳಿದು ಅಂತಃಪುರದ ಸ್ತ್ರೀಜನರು ಮತ್ತೂ ದುಃಖಪಡುತ್ತಿದ್ದಾರೆ. ಏನು ವಿಚಿತ್ರವೋ ! ಸ್ವಾಮಿಯ ಚಿತ್ತಕ್ಕೇ ವೇದ್ಯವಾಗ ಬೇಕೆಂದು ಹೇಳುತ್ತಿರಲು ; ಚಾಣಕ್ಯನು ವೃದ್ಧರಾಜದಂಪತಿಗಳು ಅಂತಃಪುರದಲ್ಲಿ ಇಲ್ಲದಿದ್ದ ಬಳಿಕ ಚೋರರು ಹೇಳಿದ ವಾಕ್ಯವು ಅಸತ್ಯವಲ್ಲವೆಂದು ಮನಸ್ಸಿನಲ್ಲಿ ನಿಶ್ಚಯಿಸಿ—

ಎಲೈ ವೃದ್ಧಕಂಚುಕಿಯೇ, ಅಂತಃಪುರದ ಕಾವಲಿನಲ್ಲಿ ಎಂದಿನಂತೆ ಇರುವವನಾಗು. ನಾವು ವಿಚಾರಿಸುತ್ತಿದ್ದೇವೆ ಎಂದು ಹೇಳಿ ಅವನಂ ಕಳುಹಿಸಿ ಆಗ ರಹಸ್ಯದಲ್ಲಿ ಮೊದಲು ಹೇಳಿದ್ದ ಚಂಡಾಲರಂ ಕರೆಯಿಸಿ—ಎಲೈ ಚೋರರುಗಳಿರಾ, ಆಶ್ರಮಮಾರ್ಗದಲ್ಲಿ ನೀವು ನೋಡಿದವನೇ ಮುದುಕನಾದ ಸರ್ವಾರ್ಥಸಿದ್ಧಿಯು. ನೀವು ಆತನಿರುವಲ್ಲಿಗೆ ಹೋಗಿ ಕಾಣದಂತೆ ವಾಸವಂ ಮಾಡಿಕೊಂಡಿದ್ದು ಶಸ್ತ್ರರಹಿತನಾಗಿ ಏಕಾಂಗಿಯಾಗಿರುವ ಸಮಯಮಂ ನಿರೀಕ್ಷಿಸಿ ಆತನಂ ಸಂಹರಿಸಿ ಬಂದು ನಮಗೆ ಹೇಳಿರಿ ಎಂದು ನೇಮಿಸಿ ಅವರಂ ಕಳುಹಿಸಲು; ಆ ತಸ್ಕರರು ನೈಮಿಶಾರಣ್ಯಮಾರ್ಗವಂ ಹಿಡಿದು ವೃದ್ಧರಾಜನಂ ಹುಡುಕುತ್ತ ಬರುತ್ತಿದ್ದರು.

ಹೀಗಿರುತ್ತಿರಲು ಮತ್ತೆ ಕೆಲವು ದಿವಸಗಳ ಮೇಲೆ ಆ ದೊರೆಯು ಆ ಪುಣ್ಯಾರಣ್ಯಮಂ ಕುರಿತು ತೆರಳುತ್ತ ಗಂಗಾನದಿಯಂ ಸುತ್ತುವರಿದು ಅತಿ ನೀಲವಾಗಿ ಸೂರ್ಯಪ್ರಭೆಗೆ ಅವಕಾಶಗೊಡದಂಥ ನಿಶಾಸಮಯದಂತೆ ನಿಬಿಡವಾದ ವೃಕ್ಷಛಾಯೆಯಿಂ ಕಂಗೊಳಿಸುವ ಮುನಿವನಮಂ ದೂರದಿಂದಲೇ ನೋಡಿ—
ಎಲೈ ರಾಣಿಯೇ, ಇದೋ ! ಮಹಾಮುನಿಗಳ ಆಶ್ರಮವು ಕಾಣಿಸುತ್ತಿದೆ. ಜನರ

ಭಯಮಂ ಬಿಟ್ಟು ಹರಿಣಂಗಳ ಸಮೂಹಗಳು ಪೂರ್ವಪರಿಚಯಮುಳ್ಳವುಗಳಂತೆ ಸಮೀಪಕ್ಕೆ ಬರುತ್ತಿರುವುವು. ಇದೋ! ನದಿಯಿಂದ ಆಶ್ರಮಮಂ ಹೊಂದಿದ ಋಷಿಗಳ ವಲ್ಕಲಾಂಚಲಗಳಿಂ ನಿಸ್ರುತವಾದ ಜಲಧಾರೆಗಳಿಂದ ನೆನೆದಿರುವ ಮಾರ್ಗವು ಇದೇ ಆಶ್ರಮವು ಎಂದು ತೋರಿಸುವಂತೆ ಕಂಗೊಳಿಸುವುದು. ಬಹು ಕುಸುಮಫಲ ಸಮೃದ್ಧವಾದ ತಮಾಲ ಕೃತಮಾಲ ತಾಲ ಹಿಂತಾಲ ವಕುಳ ಪುನ್ನಾಗ ಚಂಪಕ ಸಾಲ ಲೋಧ್ರ ಲವಂಗ ಚಂದನ ಪೂಗ ನಾಳಿಕೇರ ಕರ್ಕಂಧೂ ಕಪಿತ್ಥ ಪ್ರಿಯಂಗು ಪನಸ ಕದಳೀ ದಾಡಿಮ ಮುಖ್ಯವಾದ ವೃಕ್ಷ ಸಮೂಹದ ನಮ್ರವಾದ ಶಿಖಾಗ್ರಂಗಳು ತಮ್ಮ ಛಾಯೆಯನ್ನಾಶ್ರಯಿಸಿ ಅಜಗರವೃತ್ತಿಯನ್ನ ವಲಂಬಿಸಿ ಶಯನಮಂ ಮಾಡಿರುವ ಪರಮಹಂಸರ ವದನಂಗಳಿಗೆ ಫಲವನ್ನರ್ಪಿಸುತ್ತ ಪಲ್ಲವಾಂಜಲಿಗಳಿಂ ಪುಷ್ಪನಿಕರವನ್ನರ್ಪಿಸುವಂತೆಯೂ ಉನ್ಮದಶುಕ ಪಿಕ ಶಾರಿಕಾಮಧುರರವಕೋಲಾಹಲಂಗಳಿಂ ತಮ್ಮ ಜಡಜನ್ಮಮಂ ಪರಿಹರಿಸಬೇಕೆಂದು ಬೇಡಿಕೊಳ್ಳುವ ಮುಮುಕ್ಷುಗಳಂತೆಯೂ ಕಂಗೊಳಿಸುವುವು. ಎಂದು ಮುಂದೆ ತೆರಳುತ್ತ ಇದೋ! ವೇದಗಳೇ ತೇಜೋಮಯಮೂರ್ತಿಗಳಾಗಿ ಸಂಚರಿಸುವಂತೆ ಅವಿಚ್ಛಿನ್ನಸ್ವಾಧ್ಯಯನದಿಂ ಮುಖರಿತವಾಗಿ ಫಲಪುಷ್ಪ ಸಮಿತ್ಕುಶಂಗಳಂ ಪಿಡಿದು ಅನುಸರಿಸಿ ಬರುವ ಹರಿಣಶಿಶುಗಳಿಂ ಕೂಡಿ ತೆರಳುತ್ತಿರುವ ಋಷಿಪುತ್ರನಿಕರವು ನೇತ್ರಜಾಡ್ಯಮಂ ಪರಿಹರಿಸುವುದು. ಕ್ರತುಶಾಲೆಯಿಂದ ಪ್ರಾರಂಭವಾಗಿ ಹೊರಹೊಮ್ಮುತ್ತ ಆಜ್ಯಾಹುತಿಪರಿಮಳದಿಂ ಕೂಡಿದ ಹೋಮಧೂಮವ್ರಜಗಳು ಅಂತರಿಕ್ಷವನ್ನಡರಿ ಸ್ವರ್ಗಮಾರ್ಗಸೋಪಾನದ ಪರಂಪರೆಯೋ ಎಂಬಂತೆ ನೋಡುವವರ ದುರಿತಮಂ ಪರಿಹರಿಸುವುವು. ಮತ್ತೊಂದು ಕಡೆಯೊಳು ಅಮೃತ ಚರುಗಂಧಮಂ ದೂರದಿಂದಾಘ್ರಾಣಿಸುತ್ತ ಅರ್ಘಪಕ್ವ ಪುರೋಡಾಶಪರಿಮಳದಿಂ ಪ್ರಮುದಿತಗಳಾದ ಅತಿಥಿ ವರ್ಗಂಗಳು ಗುಂಪುಗುಂಪಾಗಿ ಪರ್ಣಶಾಲೆಗಳಂ ಪ್ರವೇಶಿಸುತ್ತಿರುವುವು. ಇನ್ನೊಂದಡೆಯಲ್ಲಿ ತಮ್ಮ ಶೃಂಗಂಗಳಿಂ ಭೂಮಿಯಂ ಕೆದಕಿ ಕಂದ ಮೂಲಂಗಳಂ ಋಷಿ ವಟುಗಳಿಗೆ ಕೊಡುತ್ತಿರುವ ಹರಿಣಗಳನ್ನೂ ಹೇಳಿದಂತೆ ಜಲಗಳಂ ಗ್ರಹಿಸಿ ಪುಷ್ಕರಾಗ್ರದಿಂ ಪುಷ್ಪಲತೆಗಳಿಗೆ ಸೇಚನಂಗೆಯ್ವ ಕರಿಕಳಭಗಳನ್ನೂ ಮುನಿ ಕುಮಾರರಿಂ ಪ್ರಾರ್ಥಿತವಾಗಿ ವೃಕ್ಷಮೂಲಂಗಳಿಗೆ ತಮ್ಮ ಮುಖದಿಂದ ಅಗಿತೆಯಂ ಮಾಡುವ ವನವರಾಹಗಳನ್ನೂ ಅಪರಿಮಿತವಾದ ಋಷಿಸಂಘದ ಹೋಮಾಗ್ನಿಗಳಂ ತಮ್ಮ ಪಕ್ಷಮಾರುತಗಳಿಂ ಪ್ರಜ್ವಲನಂಗೆಯ್ವ ಮಯೂರನಿಕರಗಳನ್ನೂ ಅವಿರತ

ಶ್ರವಣ ಗೃಹೀತ ವಷಟ್ಕಾರರವ ಮನೋಹರಮಾದ ಶುಕಸಂಕುಲಗಳನ್ನೂ ಅನೇಕ
ಶಾರಿಕೋದ್ಘುಷ್ಯಮಾಣ ರಥಂತರಸಾಮಮಂ ಕಲಿಯಲಿಚ್ಛೈಸುತ್ತಿರುವ ಪಕ್ಷಿ
ವಿಶೇಷಗಳನ್ನೂ ಮೃಗೀಜಿಹ್ವಾಪಲ್ಲವದಿಂ ನೆಕ್ಕಲ್ಪಡುವ ಋಷಿಶಾಬಕಂಗಳನ್ನೂ
ಮಹಾಮುನಿ ಜನ ಸಾನ್ನಿಧ್ಯದಿಂ ಸ್ವಾಭಾವಿಕವೈರಮಂ ಬಿಟ್ಟು ಇಂದೀವರಗಳಂ
ತಿರುವ ಮಯೂರಬರ್ಹಗಳಂ ನೋಡಿ ದೂರ್ವಾಸಮೂಹಭ್ರಾಂತಿಯಿಂದ
ಹೋಗುವ ಪನ್ನಗಂಗಳನ್ನೂ ವ್ಯಾಘ್ರಶಿಶುಗಳೊಡನಾಡುವ ಗೋವತ್ಸಗಳನ್ನೂ
ಮೃಣಾಳಮೂಲವೆಂದು ಕೇಸರಿಯ ಪುಚ್ಛಮಂ ಸೆಳೆಯುತ್ತಿರುವ ಕರಿಕಲಭಂಗ
ಳನ್ನೂ ಅವುಗಳಂ ನೋಡಿ ಸುಮ್ಮನಿರುವ ಸಿಂಹಕದಂಬವನ್ನೂ ಮತ್ತೊಂದೆಡೆ
ಯೊಳು ವಾಯು ಸಹಾಯವಿಲ್ಲದೆ ತೂಗುತ್ತಿರುವ ವನದೇವತಾಯೋಗ್ಯಗಳಾದ
ಡೋಲಾಲತೆಗಳನ್ನೂ ಚಮರೀವಾಲ ಸಮೂಹದಂತೆ ಅತಿ ಧವಳತೆಯಿಂ ಭೂಮಿ
ಯಲ್ಲಿ ಮಂಡಲಾಕಾರವಾಗಿ ಜೋಲುತ್ತಿರುವ ಮುನಿಜಟಾಭಾರದಲ್ಲಿ ಗೂಡುಗ
ಳಂ ಕಟ್ಟಿ ವಿಹರಿಪ ಟಿಟ್ಟಿಭಮಿಥುನಂಗಳನ್ನೂ ನೋಡು. ಈ ಮಹಾತ್ಮರಿಂದಲೇ
ಭೂಮಿಯು ಚಲಿಸದೆ ಇರುವುದು. ವಾಯುವು ಮಿತವಾಗಿ ಬೀಸುವುದು. ಸಮುದ್ರ
ವು ಮೇರೆದಪ್ಪದು. ಕಾಲ ಚಕ್ರವು ನಿಲ್ಲದೆ ತಿರುಗುತ್ತಿರುವುದು. ಇವರು ಧರ್ಮ
ಗಳಿಗೆ ಆಶ್ರಯರಾಗಿರುವರು. ಮತ್ತು ಕರುಣಾರಸಕ್ಕೆ ಸಾಗರರೂ ಸಂಸಾರಾಂ
ಬುಧಿಗೆ ಸಂತರಣ ಸೇತುಗಳೂ ಉಪಶಾಂತಿವೃಕ್ಷಕ್ಕೆ ಮೂಲಭೂತರೂ ಲೋಭಾ
ರ್ಣವಕ್ಕೆ ಬಡಬಾನಲರೂ ಶಾಸ್ತ್ರರತ್ನಕ್ಕೆ ನಿಕಷೋಪಲರೂ ಇವರೇ. ಈ ಮಹಾ
ಮುನಿ ಜನ ಚರಣಾರವಿಂದಸಂಪರ್ಕದಿಂದೀ ಯಾಶ್ರಮವು ಕಲಿಕಲ್ಮಷದಿಂದೆಂದಿಗೂ
ಲಿಪ್ತಮಾಗದು. ಅನೃತವು ಇಟ್ಟಣಿಕಿ ನೋಡಲಮ್ಮದು. ಮದ ಮತ್ಸರಂಗಳು ಹೆಜ್ಜೆ
ಯನ್ನೂರವು. ಕಾಮವಿಲಾಸವು ಕಣ್ದೆರೆದೀಕ್ಷಿಸದು. ಮತ್ತು ಕಮಲಯೋನಿಯಂ
ತೆ ತ್ರಿಭುವನವಂದಿತಮಾಗಿಯೂ ವಿಷ್ಣುವಿನಂತೆ ಪ್ರಕಟಿತಹರಿವರಾಹ ರೂಪಮು
ಳ್ಳುದಾಗಿಯೂ ಸಾಂಖ್ಯದಂತೆ ಕಪಿಲಾಧಿಷ್ಠಿತವಾಗಿಯೂ ಇದ್ದುಕೊಂಡು ಉಪಶಾಂ
ತರಿಗೆ ವಾಸ ಯೋಗ್ಯವಾದ ಬ್ರಹ್ಮಲೋಕವೇ ಆಶ್ರಮರೂಪಮಂ ಧರಿಸಿರುವಂತೆ
ಕಂಗೊಳಿಸುವ ಈ ನೈಮಿಶಕ್ಷೇತ್ರದಲ್ಲಿ ಪಕ್ಷಪಾತವು ವನಕುಕ್ಕುಟಂಗಳಲ್ಲಿಯೂ
ಭ್ರಾಂತಿ ಎಂಬುವುದು ಅಗ್ನಿಪ್ರದಕ್ಷಿಣೆಯಲ್ಲಿಯೂ ಮಾಲಿನ್ಯವೆಂಬುದು ಹೋಮಾ
ಗ್ನಿಧೂಮರೇಖೆಯಲ್ಲಿಯೂ ಮುಖರಾಗವು ಶುಕಂಗಳಲ್ಲಿಯೂ ತೀಕ್ಷ್ಣತೆಯು
ದರ್ಭಾಗ್ರದಲ್ಲಿಯೂ ಚಾಂಚಲ್ಯವು ಕದಳೀವನದಲ್ಲಿಯೂ ನೇತ್ರರಾಗವು ಕೋಕಿ
ಲೆಗಳಲ್ಲಿಯೂ ಕಂಠಗ್ರಹಣವೆಂಬುದು ಕಮಂಡಲುಗಳಲ್ಲಿಯೂ ಸ್ತನಸ್ಪರ್ಶವು

ಗೋದೋಹನದಲ್ಲಿಯೂ ರಾಮಾನುರಾಗವು ರಾಮಾಯಣದಲ್ಲಿಯೂ ಶಕುನಿವಧೆ
ಯು ಮಹಾಭಾರತದಲ್ಲಿಯೂ ದ್ವಿಜಪತನವು ವೃಕ್ಷಗಳಲ್ಲಿಯೂ ಗೀತವ್ಯಸನವು
ಹರಿಣಂಗಳಲ್ಲಿಯೂ ಶ್ರೀಫಲಾಭಿಲಾಷೆಯು ಕಪಿಗಳಲ್ಲಿಯೂ ಭೋಗಾಭಿಲಾಷೆಯು
ಭುಜಂಗಗಳಲ್ಲಿಯೂ ನೃತ್ತಕ್ರಮವು ಮಯೂರಂಗಳಲ್ಲಿಯೂ ಅಧೋಗತಿಯು
ವೃಕ್ಷಮೂಲಗಳಲ್ಲಿಯೂ ಅಲ್ಲದೆ ಅನ್ಯಥಾ ಇಲ್ಲವು. ಮತ್ತೊಂದು ಪ್ರದೇಶದಲ್ಲಿ
ವಾಪೀಹಂಸಂಗಳಿಂ ಭುಂಜಿಸಲ್ಪಡುವ ನೀವಾರಬಲಿಯನ್ನೂ ಒಂದೆಡೆಯೊಳು ವಾಚಿ
ಸುವ ಶ್ರಾದ್ಧಕಲ್ಪಂಗಳನ್ನೂ ಪಠಿಸುವ ಉಪನಿಷತ್ತುಗಳನ್ನೂ ಘೋಷಿಸುವ ಶತ
ರುದ್ರೀಯಂಗಳನ್ನೂ ಜಪಿಸುವ ಮಹಾಮಂತ್ರಗಳನ್ನೂ ಉಚ್ಚರಿಸುವ ಸಾಮಗಾ
ನಂಗಳನ್ನೂ ಕಥನಂಗೆಯ್ವ ದಿವ್ಯಕಥೆಗಳನ್ನೂ ಸ್ತುತಿಸಲ್ಪಡುವ ಹರಿಹರಪಿತಾಮ
ಹಸ್ತೋತ್ರಂಗಳನ್ನೂ ಶ್ರವಣಂಗೆಯ್ವವಳಾಗು. ಉಪದೇಶಿಸುತ್ತಿರುವ ಸಾಂಖ್ಯರ
ಹಸ್ಯವನ್ನೂ ಪ್ರಕಟಂಗೆಯ್ವ ಯೋಗಸಾಧನೆಗಳನ್ನೂ ವ್ಯವಹರಿಸುವ ನಾನಾ
ಶಾಸ್ತ್ರಾರ್ಥಂಗಳನ್ನೂ ನಿಷೇಧಿಸಲ್ಪಡುವ ಪಾಷಂಡಮಂತ್ರಕ್ರಿಯೆಗಳನ್ನೂ
ಸಿದ್ಧಾಂತಂಗೆಯ್ವ ವೇದಮಾರ್ಗಂಗಳನ್ನೂ ಆಲಿಸುವವಳಾಗು. ಈ ಪರಿಯಲ್ಲಿ
ಧರ್ಮಸಂಸ್ಥಾಪನಮಂ ಮಾಡುವ ಮಹಾಮುನಿಗಳಿಗೆ ವಾಸಯೋಗ್ಯವಾದ ಈ
ಆಶ್ರಮದಲ್ಲಿ ವಾಸಿಸುತ್ತಿರುವ ಜನಗಳಿಗೆ ಲಬ್ಧವಾಗುವ ಆನಂದಾಬ್ಧಿಯೊಳಗೆ
ಲೇಶವನ್ನಾದರೂ ನಮ್ಮ ಸಾಮ್ರಾಜ್ಯಸುಖವು ಹೋಲಲಾರದು. ಇದರಿಂ ಕೈವಲ್ಯ
ವು ಕರಗತವಾಗುವುದು. ಇವರಿಂದನುಗ್ರಹಿಸಲ್ಪಟ್ಟವರಿಗೆ ಸಾಲೋಕ್ಯಾದಿಮು
ಕ್ತಿಗಳು ಉಂಟಾಗುವುವು. ಬಹು ಜನ್ಮ ಸುಕೃತದಿಂದೀ ಯಾಶ್ರಮವು ನಮಗೆ
ಗೋಚರವಾಯಿತಲ್ಲದೆ ಸಾಧಾರಣ ಜನಗಳಿಗೆ ಮಹಾ ಭಯಂಕರಾರಣ್ಯವಾಗಿ
ಕಾಣಿಸುವುದು. ಇಂದು ನಮ್ಮ ಜನ್ಮಂ ಸಫಲವಾಯಿತು ಎಂದು ಹೇಳುತ್ತ ಅಲ್ಲಿನ
ಮುನಿಸಂಘಕ್ಕೆ ನಮಸ್ಕರಿಸುತ್ತ ಸಶರೀರನಾಗಿ ಸ್ವರ್ಗವನ್ನೈದಿದವನಂತೆ ಆನಂದ
ಭರಿತನಾಗಿ ಸತಿಯೊಡನೆ ಅಡಿ ಇಡುತ್ತಿರುವ ನರಪಾಲನಂ ನೋಡಿ—ಈತನಾರೋ !
ರಾಜೋತ್ತಮನು ವಿರಕ್ತಿಯಿಂ ವಾನಪ್ರಸ್ಥನಾಗಿ ಬಂದಿರಬೇಕು ಎಂದು ಮಹಾ
ಮುನಿಯೊಬ್ಬನು ತನ್ನ ಶಿಷ್ಯ ಮುಖದಿಂ ರಾಯನಂ ಕರೆಯಿಸಲು ; ಆ ನೃಪ
ದಂಪತಿಗಳು ಅಶೋಕವೃಕ್ಷಛಾಯೆಯಲ್ಲಿ ಶಿಷ್ಯವರ್ಗಸಮೇತನಾಗಿ ಕುಳಿತಿರುವ
ಮಹರ್ಷಿಯ ಸನ್ನಿಧಿಗೆ ಬರುತ್ತಿರಲು ; ಮಧ್ಯಾಹ್ನಮಾರ್ತಾಂಡನಂತೆ ಪ್ರಜ್ವ
ಲಿಸುತ್ತಿರುವ ಆ ತಪಸ್ವಿ ಶ್ರೇಷ್ಠನ ತೇಜೋಮಂಡಲದತ್ತಣಿಂ ಹೊರಹೊ
ಮ್ಮುವ ಕಿರಣಂಗಳಿಂ ವಿಹ್ವಲವಾದ ನೇತ್ರಯುಗ್ಮಮುಳ್ಳವನಾಗಿ ಆತನಡಿದಾವ

ರೆಗಳಿಗಭಿವಂದಿಸಿ ಭಯಭಕ್ತಿಯಿಂದ ಅಂಜಲಿಬದ್ಧನಾಗಿ ಸತಿಯೊಡನೆ ನಿಂತಿರುವ ಆ ರಾಯನಂ ನೋಡಿ ಉಚಿತಾಸನದಲ್ಲಿ ಕುಳ್ಳಿರಿಸಿ ಆ ಯತಿಯು ಕುಶಲ ಪ್ರಶ್ನೆಗಳಂ ಮಾಡಲು; ಆ ಪೃಥ್ವೀವಲ್ಲಭನು—ತಾನು ಬಂದಿರುವುದಂ ಆನುಪೂರ್ವಕವಾಗಿ ವಿಜ್ಞಾಪಿಸಿ ಅನುಗ್ರಹಿಸಬೇಕೆಂದು ಪ್ರಾರ್ಥಿಸಲು; ಆ ಮಾತಿಗೆ ಸಮ್ಮತನಾದ ಮುನಿಯು ಮುಕ್ತಿದಾಯಕವಾದ ಜ್ಞಾನಯೋಗರಹಸ್ಯವನ್ನು ಉಪದೇಶಂಗೆಯ್ದು ಇದರಿಂ ನೀನು ಕೃತಾರ್ಥನಾಗುವೆ ಎಂದು ಅನುಗ್ರಹಿಸಿ ಆತನಿಗೆ ಕಂದಮೂಲಫಲಂಗಳಂ ತರಿಸಿಕೊಟ್ಟು ಅಪ್ಪಣೆಯಂ ಕೊಡಲು; ಆ ವಸುಧೇಶನು—ನಾನು ಧನ್ಯನಾದೆನೆಂದು ಗುರುಪಾದಂಗಳಿಗಭಿವಂದಿಸಿ ಹೊರಟು ಬಂದು ಒಂದು ಮನೋಹರವಾದ ಪ್ರದೇಶದೊಳ್ ತನ್ನನುಚರನಿಂ ರಚಿಸಲ್ಪಟ್ಟ ಪರ್ಣಶಾಲೆಯಲ್ಲಿ ವಾಸಮಂ ಮಾಡುತ್ತ ತ್ರಿಷವಣ ಸ್ನಾನಂಗೆಯ್ಯುತ್ತ ಶಿವಾರ್ಚನೆಯನೆಸಗುತ್ತ ಯೋಗಾರೂಢನಾಗಿ ಧ್ಯಾನಮಂ ಮಾಡುತ್ತ ಕಂದಮೂಲ ಫಲಂಗಳಂ ಕ್ಷುತ್ಪಿಪಾಸೆಗಳಂ ಶಮನಗೊಳಿಸುತ್ತ ಅಡಿಗಡಿಗೆ ಗುರುಪಾದಮಂ ಸ್ಮರಿಸುತ್ತಿರಲು; ಸುನಂದಾದೇವಿಯೂ ಮುನಿಗಳಿಗಭಿವಂದಿಸುತ್ತ ಪುಣ್ಯಶಾಲಿಗಳಾದ ಋಷಿಪತ್ನೀಕಥಿತದಿವ್ಯಕಥಾಶ್ರವಣದಿಂ ಕಾಲಹರಣಮಂ ಮಾಡುತ್ತ ಅಡಿಗಡಿಗೆ ಗೌರಿಯಂ ಪೂಜಿಸುತ್ತ ಪತಿಯು ಮಾಡುವ ದೇವತಾ ಪೂಜೆಗೆ ಪತ್ರಪುಷ್ಪಫಲೋದಕಂಗಳನ್ನೊದಗಿಸಿ ಕೊಡುತ್ತ ಗಡ್ಡೆ ಗೆಣಸುಗಳಿಂದುದರ ಭರಣಮಂ ಮಾಡಿಕೊಳ್ಳುತ್ತ ಮನಸ್ಸಿನ ದುಃಖಮಂ ಮರೆತು ತಾನೂ ಮುನಿಸ್ತ್ರೀಯಂತೆ ಇರುತ್ತಿರಲು; ಮೊದಲು ಚಾಣಕ್ಯನಿಂದ ನೇಮಿಸಲ್ಪಟ್ಟ ಚೋರರು ಆಶ್ರಮವೆಲ್ಲಮಂ ಹುಡುಕಿ ಮತ್ತೊಂದು ದಿವಸ ಸ್ನಾನಮಂ ಮಾಡಿ ಪರ್ಣಶಾಲೆಗೆ ಹೋಗುತ್ತಿರುವ ರಾಯನಂ ನೋಡಿ ಈಗ ಸಾಧ್ಯವಾಗದೆಂದು ತಿಳಿದು ಪ್ರಚ್ಛನ್ನರಾಗಿ ಸಮಯಮಂ ನೋಡುತ್ತಿರಲು; ಆ ಬೆಸಣಿಗೆಯವನು ಕಂದಮೂಲಂಗಳಂ ತಂದು ಒದಗಿಸುತ್ತ ಆಯುಧಪಾಣಿಯಾಗಿ ಆ ದೊರೆಯನ್ನೆಡೆಬಿಡದೆ ಕಾದಿರಲು; ಬೇರೊಂದು ದಿನ ಆ ವೃದ್ಧರಾಜನು ಗಂಗೆಯಲ್ಲಿ ಸ್ನಾನಮಂ ಮಾಡಿ ಸೂರ್ಯದರ್ಶನಂಗೆಯ್ವ ಸಮಯದಲ್ಲಿ ಅಂತರಿಕ್ಷದೊಳ್ ಸೋಪಾನಪಙ್ಕ್ತಿಯು ಕಾಣಿಸಿ ಅದರಲ್ಲಿ ಸುವರ್ಣವೃಕ್ಷ ಸಮೂಹವು ಗೋಚರವಾಗಲು; ಅದಂ ನೋಡಿ ಭೂಪನು—ತನಗೆ ಆಯುಃಕಲೆಯು ತೀರಿತೆಂದು ತಿಳಿದು ಬೇಗ ನಿತ್ಯಕರ್ಮಮಂ ನೆರವೇರಿಸಿ ಗಂಗಾತೀರದೊಳ್ ಮತ್ತೊಂದು ಲತಾಗೃಹದಲ್ಲಿ ದರ್ಭಾಸನಮಂ ಹಾಕಿ ಕುಳಿತು ವಿಭೂತಿರುದ್ರಾಕ್ಷಂಗಳಂ ಧರಿಸಿ ತನ್ನ ಸಮೀಪದಲ್ಲಿರುವ ವ್ಯಜನಧಾರಿಯಂ ಕುರಿತು—

ಎಲೈ ಕ್ಷಾಮಕನೇ, ಈ ತಪೋವನದಲ್ಲಿಯೂ ಕೂಡ ನನ್ನ ಸೇವೆಯಂ ಮಾಡಿ ಶ್ರಮಪಡುತ್ತಿರುವೆ. ಇನ್ನು ನನ್ನ ಶರೀರವು ನಿಲ್ಲಲಾರದು. ಎಲ್ಲಮಂ ಬಿಟ್ಟು ಈ ರತ್ನದುಂಗುರಮಂ ಮಾತ್ರ ತಂದೆನು. ಇದು ವಿರಕ್ತನಾದ ನನ್ನ ಕೈಯ್ಯಲ್ಲಿದ್ದು ಫಲವೇನು ? ಇದು ನಿನಗಿರಲಿ ಎಂದು ಆ ಅಂಗುಲೀಯಕಮಂ ಅವನಿಗೆ ಕೊಟ್ಟು ಎಂದಿನಂತೆ ಕಂದಮೂಲಫಲಂಗಳಂ ತಂದು ಸುನಂದಾದೇವಿಗೆ ಒಪ್ಪಿಸುವವನಾಗು ಎಂಬುದಾಗಿ ಹೇಳಿ ಆ ದೂತನಂ ಕಳುಹಿಸಿ ಶುದ್ಧಾಚಮನಮಂ ಮಾಡಿ ತನಗೆ ಗುರುಗಳು ಉಪದೇಶಿಸಿದ ಯೋಗರಹಸ್ಯಮಂ ನೆನೆದು ಮನಸ್ಸಿನಲ್ಲಿ ಆಚಾರ್ಯ ಚರಣಗಳಿಗಭಿವಂದಿಸಿ ಸ್ಥಿರಾಸನಮಂ ಬಲಿದು ಶ್ವಾಸಮಂ ನಿರೋಧಿಸಿ ನಿಶ್ಚಲಚಿತ್ತದಿಂ ಯೋಗಾರೂಢನಾಗಿ ಸುಷುಮ್ನಾಮಾರ್ಗದಿಂ ಶ್ವಾಸಧಾರಣಮಂ ಮಾಡಿ ನಿರ್ವಿಕಲ್ಪ ಬ್ರಹ್ಮದಲ್ಲಿ ಚಿತ್ತವೇಕರಸವಾಗಿ ಪ್ರಾಣವಾಯುವು ತನ್ನಾಡೀಪಥದಿಂದೂರ್ಧ್ವಕ್ಕೆ ನಡೆದು ನೆತ್ತಿಯಂ ಭೇದಿಸಿಕೊಂಡು ಬ್ರಹ್ಮದಲ್ಲಿ ಲೀನವಾಗಲು; ಪುನಃ ಭವಕ್ಕೆ ಬಾರದಂತೆ ಆ ವೃದ್ಧರಾಜನು ಮುಕ್ತಿಯಂ ಹೊಂದಿದನು. ಆತನು ಬಲಿದಿದ್ದ ಆಸನಬಲದಿಂ ಆ ಶರೀರವು ಕುಳಿತಿದ್ದಂತೇ ಇರಲು; ಆ ಸಮಯದಲ್ಲಿ ಛಿದ್ರಮಂ ನೋಡುತ್ತಿದ್ದ ಘಾತುಕರು ಇದೇ ಸಮಯವೆಂದು ಬಂದು ಜಪಮಂ ಮಾಡುವವನಂತೆ ಕಣ್ಣಂ ಮುಚ್ಚಿ ಕುಳಿತಿರುವ ಅರಸನಂ ನೋಡಿ ಖಡ್ಗದ ಮೊನೆಯಿಂದ ಸೋಂಕಿಸಿದ ಮಾತ್ರದಲ್ಲೇ ಆ ದೇಹವು ಉರುಳಿ ಬೀಳಲು; ಹೋ ! ವೃದ್ಧನು ಮೃತನಾದನು. ಇನ್ನು ಈ ಶರೀರಮಂ ಭೇದಿಸಿದುದರಿಂದ ಫಲವೇನು ? ಎಂದು ಹೇಳಿಕೊಳ್ಳುತ್ತ ಸಡಿಲಿ ಬಿದ್ದಿರುವ ಆತನ ಜಪಮಾಲೆಯಂ ಗುರುತಿಗೆ ತೆಗೆದುಕೊಂಡು ಚಾಣಕ್ಯರಿಗೆ ಒಪ್ಪಿಸಬೇಕೆಂದು ಹೊರಟು ಹೋದರು. ಆ ಬಳಿಕ ರಾಜನ ದೂತನು ಎಂದಿನಂತೆ ಕಂದಮೂಲಂಗಳಂ ತಂದು ಸುನಂದಾದೇವಿಗೆ ಒಪ್ಪಿಸಿ ಪೃಥ್ವೀಶನಿದ್ದೆಡೆಗೆ ಬಂದು ಜೋಗವಟ್ಟೆ ಸಹಿತ ಉರುಳಿ ಗತಪ್ರಾಣನಾಗಿದ್ದ ಜನಪನಂ ಕಂಡು—ಹೋ ! ಎಂದು ಹಂಬಲಿಸುತ್ತ ತ್ವರಿತದಿಂದೈದಿ ಸುನಂದಾದೇವಿಗೆ ತಿಳುಹಿಸಲು; ಅದಂ ಕೇಳಿ ಮೂರ್ಛಿತಳಾಗಿ ನೆಲಕ್ಕೆ ಬಿದ್ದು ಸ್ವಲ್ಪ ಹೊತ್ತಿನ ಮೇಲೆ ಎಚ್ಚರಂಗೊಂಡು ರೋದನಂಗೆಯ್ಯುತ್ತ ಪತಿಯಿದ್ದೆಡೆಗೆ ಬಂದು ಆತನ ಕಳೇಬರಮಂ ನೋಡಿ ಮನಸ್ಸಿಗೆ ಬಂದಂತೆ ಹಲುಬಿದ ಬಳಿಕ ವಿವೇಕಮಂ ತಂದುಕೊಂಡು ಇನ್ನು ಹಂಬಲಿಸಿ ಫಲವೇನು ? ಇಂದಿಗೆ ಸಕಲದುಃಖವೂ ಶಾಂತವಾಯಿತೆಂದು ಧೈರ್ಯವನ್ನವಲಂಬಿಸಿ ದೂತನಂ ಕರೆದು—ಗಂಗಾಜಲಸಮೀಪದಲ್ಲಿ ವಿಸ್ತಾರವಾಗಿ ಚಿತೆಯಂ ರಚಿಸೆಂದು ನೇಮಿಸಿ ಭಾಗೀರಥಿಯಲ್ಲಿ ಸ್ನಾನಮಂ ಮಾಡಿ

ಗೌರೀದೇವಿಯಂ ಮನಸ್ಸು ಬಂದಂತೆ ಪೂಜಿಸಿ ಆ ರತ್ನ ಸಂಪುಟಮಂ ಋಷಿಪತ್ನಿಯ ಕೈಯ್ಯಲ್ಲಿ ಕೊಟ್ಟು ಮಣಿತಾಟಂಕಂಗಳಂ ಗುರುಪತ್ನಿಗಿತ್ತು ಅನರ್ಘ್ಯ ಮುಕ್ತಾಹಾರಮಂ ನೀವೆಲ್ಲರೂ ತೆಗೆದುಕೊಳ್ಳಿರೆಂದು ಮುನಿವಧುಗಳಿಗೆ ಸಮರ್ಪಿಸಿ ಪತಿಯ ಕಳೇಬರಮಂ ಗಂಗಾಜಲದೊಳ್ ಕ್ಷಾಳನಂಗೆಯ್ದು ಅದಂ ಚಿತೆಯ ಮೇಲಿರಿಸಿ ಋಷಿಗಳ ಅನುಮತಿಯಿಂದ ಪತಿಯ ಔಪಾಸನಾಗ್ನಿಯಿಂದಲೇ ಅದಂ ಹೊತ್ತಿಸಿ ಮುನಿಸಂಘಕ್ಕಭಿನಮಿಸಿ ಸುನಂದಾದೇವಿಯು ಹರಿಹರ ಮೂರ್ತಿಗಳಂ ನೆನೆದು ಮಹಾಪ್ರಭೆಯಿಂ ಕೂಡಿ ಪ್ರಜ್ವಲಿಸುತ್ತಿರುವ ಚಿತಾಗ್ನಿಯಂ ಪ್ರವೇಶಿಸಿ ಮೇಘದಲ್ಲಿ ತೋರಿದ ಮಿಂಚು ಮರೆಯಾಗುವಂತೆ ವಹ್ನಿಯಲ್ಲಿ ಲೀನವಾಗಿ ಪುಣ್ಯಲೋಕವನ್ನೈದಿದಳು. ಆ ಮರುದಿವಸ ಆಕಸ್ಮಿಕ ವೃಷ್ಟಿಯುಂಟಾಗಿ ಗಂಗಾಜಲವು ಹೆಚ್ಚಿ ಬಂದು ಆ ಭಸ್ಮರಾಶಿಯಂ ಕದಡುವುದಂ ನೋಡಿ ರಾಜದಂಪತಿಗಳು ಸುಕೃತಶಾಲಿಗಳು. ವೃದ್ಧರಾಜನು ರಾಜಯೋಗದಿಂ ಮುಕ್ತಿಯಂ ಹೊಂದಿದನು ; ಅತನ ಪತ್ನಿಯು ತವುರು ಮನೆಗೆ ಹೋಗುವ ಕನ್ನೆಯಂತೆ ನಿರಾತಂಕಳಾಗಿ ಪತಿಯೊಡನೆ ಅನುಗಮನಮಂ ಮಾಡಿ ಗೌರೀದೇವಿಯರ ಪಾದಕಮಲ ಸನ್ನಿಧಿಯನ್ನು ಸಂದಳು ಎಂದು ಹೇಳಿಕೊಳ್ಳುವ ತಪೋಧನರ ವಾಕ್ಯಮಂ ಕೇಳಿ ಬೀಸಣಿಗೆಯವನು—ಇನ್ನು ನಾನು ಅನಾಥನಾಗಿ ವಿರಕ್ತನಲ್ಲದೆ ಇಲ್ಲಿ ಇದ್ದು ಫಲವೇನು ? ಪುರವನ್ನಾದರೂ ಸೇರುವೆನೆಂದು ಬರುತ್ತ ಶೋಕಮಂ ಗೆಯ್ವ ಚೇಟಿಯಂ ಕಂಡು—

ಎಲೈ ಕುಸುಮರೇಖೆಯೇ, ನಾನು ಪಟ್ಟಣಕ್ಕೆ ಹೋಗುವೆನು. ಇಲ್ಲಿದ್ದುದರಿಂ ಪ್ರಯೋಜನವೇನು? ಸಂಗಡವೇ ಬಾರೆಂದು ಹೇಳಲು; ಅವಳು ಅವನಂ ಕುರಿತು—

ಎಲೈ ಕ್ಷಾಮಕನೇ, ಯಾರ ನಿಮಿತ್ತ ನಾನು ಪುರಕ್ಕೆ ಬರಲಿ? ಇಲ್ಲಿ ಮಹಾಮುನಿಗಳು ಸಂಚರಿಸುವ ಮಾರ್ಗಮಂ ಗುಡಿಸುತ್ತ ಅವರ ಪುಷ್ಪವಾಟಿಗಳಿಗೆ ಜಲಮಂ ತಂದು ಹಾಕುತ್ತ ಋಷಿಪತ್ನಿಯರು ತೋರಿದ ಕಾರ್ಯಮಂ ಮಾಡಿಕೊಡುತ್ತ ಅವರ ಭೋಜನ ಶೇಷದ ಕಂದಮೂಲಂಗಳಿಂ ಪ್ರಾಣಧಾರಣೆಯಂ ಮಾಡಿ ಜನ್ಮಮಂ ಸಫಲಂಗೆಯ್ದುಕೊಂಡು ಇಲ್ಲಿಯೇ ಇರುವೆನು. ನೀನು ನಿನ್ನ ಪತ್ನೀಪುತ್ರರ ಬಳಿಗೆ ಹೋಗುವವನಾಗು ಎಂದು ಹೇಳಲು ; ನಿನ್ನ ಮನಸ್ಸು ಬಂದಂತೆ ಮಾಡೆಂದು ಚೇಟಿಗೆ ಹೇಳಿ ಬೀಸಣಿಗೆಯವನು ಆ ಯಾಶ್ರಮಮಂ ಬಿಟ್ಟು ಪೊಳಲಂ ಕುರಿತು ಬರುತ್ತಿದ್ದನೆಂಬಲ್ಲಿಗೆ ಮುದ್ರಾಮಂಜೂಷವೆಂಬ ಗ್ರಂಥದಲ್ಲಿ ಸರ್ವಾರ್ಥಸಿದ್ಧಿರಾಜನ ಪಂಚತ್ವಕಥನಾತ್ಮಕಮಾದ ಏಕಾದಶಾಶಯವು ಸಮಾಪ್ತಮಾದುದು.

---

## ದ್ವಾದಶಕಳಶಯು ಪ್ರಾರಂಭವು.

### ಮಲಯಕೇತು ರಾಕ್ಷಸರ ಸಖ್ಯವು.

ಅನಂತರದಲ್ಲಿ ಬೀಸಣಿಗೆಯವನು—ತನಗೆ ಒಡೆಯನಾದ ಸರ್ವಾರ್ಥಸಿದ್ಧಿ ರಾಜನು ಮುಕ್ತನಾದುದಂ ನೆನೆನೆನೆದು ಕ್ಲೇಶಪಡುತ್ತ ನಗರಾಭಿಮುಖನಾಗಿ ಬರುತ್ತಿರಲು ; ಆ ಮಾರ್ಗಮಧ್ಯದಲ್ಲಿ ಮೊದಲು ರಾಕ್ಷಸನಿಂದ ನೇಮಿಸಲ್ಪಟ್ಟಿದ್ದ ವಾಸಕನೆಂಬ ಗೂಢಚಾರನು ಪರ್ವತರಾಜನ ಸೇನೆಯಲ್ಲಿ ನಡೆದ ವಿಶೇಷವರ್ತಮಾನಮಂ ತಿಳಿದು ಅಮಾತ್ಯನಿಗೆ ಅರುಹಬೇಕೆಂದು ಬರುತ್ತ ವ್ಯಜನಧಾರಿಯಂ ಕಂಡು—ಎಲೈ ಕ್ಷಾಮಕನೇ, ರಾಜಸನ್ನಿಧಿಯ ಸೇವಕನಾಗಿದ್ದ ನೀನು ಎಲ್ಲಿಗೆ ಹೋಗುವೆ? ನಿನ್ನ ಮುಖದಲ್ಲಿ ಜಾರಿದ ಬಾಷ್ಪಗಳ ಕೋಡಿಗಳೇನು ? ಎನಲು ;

ಎಲೈ ವಾಸಕನೇ, ನಮ್ಮ ಒಡೆಯನಾದ ವೃದ್ಧರಾಜನು ತಪೋವನದಲ್ಲಿಯೇ ಲಯವಾದನು. ಇನ್ನು ಮೇಲೆ ನನಗೆ ಅಲ್ಲಿ ಯಾವ ಕೆಲಸವೂ ಇಲ್ಲದುದರಿಂದ ಎಲ್ಲಿಗಾದರೂ ಹೋಗಬೇಕೆಂದು ಬಂದೆನು ಎನಲು ; ವಾಸಕನು—

ಎಲೈ ಕ್ಷಾಮಕನೇ, ಇದೋ ! ಈ ವನದಲ್ಲಿ ಅಮಾತ್ಯರಾಕ್ಷಸನಿದ್ದಾನೆ. ಈ ಯರ್ಥಮಂ ಆತನಿಗೆ ತಿಳುಹಿಸಿದರೆ ನಿನ್ನ ದುಃಖ ಶಮನವಾಗುವುದು ಎಂದು ಹೇಳಿ ಅವನಂ ಕರೆದುಕೊಂಡು ಬಂದು ರಾಕ್ಷಸನಂ ಕಂಡು—

ಸ್ವಾಮಿಾ, ಈ ಬೀಸಣಿಗೆಯವನು ವಿಶೇಷ ವರ್ತಮಾನಮಂ ಹೇಳುವನು ಪರಾಮರ್ಶಿಸಬಹುದು. ನಾನು ತಿಳಿದುದಂ ಆ ಬಳಿಕ ವಿಜ್ಞಾಪಿಸುವೆನೆಂದು ಹೇಳಲು ; ಅಮಾತ್ಯನು ಕ್ಷಾಮಕನಂ ನೋಡಿ—

ಎಲೈ ವ್ಯಜನಧಾರಿಯೇ, ನೀನು ಎಲ್ಲಿಂದ ಬಂದೆ? ವೃದ್ಧರಾಜದಂಪತಿಗಳು ಕ್ಷೇಮದಲ್ಲಿ ಇದ್ದಾರೆಯೇ? ಚಂದ್ರಗುಪ್ತನು ಅವರಂ ಭಕ್ತಿಯಿಂ ಭಾವಿಸುವನೇ? ಏನು ಹೇಳಿ ಕಳುಹಿಸಿದರು? ಎನಲು ; ಆ ಮಾತಿಗೆ ಕ್ಷಾಮಕನು ರೋದನಮಂ ಮಾಡುತ್ತ—

ಸ್ವಾಮಿಾ, ವೃದ್ಧ ರಾಜದಂಪತಿಗಳ ಕ್ಷೇಮವನ್ನಿನ್ನೇಕೆ ಕೇಳುವಿರಿ? ಎಂದು ಅವರು ಪಟ್ಟಣದಿಂದ ಸುರಂಗಮಾರ್ಗದಲ್ಲಿ ಹೊರಟು ಮುಕ್ತಿಯಂ ಹೊಂದಿದ ವರೆಗೂ ಯಾವದ್ವೃತ್ತಾಂತಮಂ ತಿಳುಹಿಸಲು ; ಆ ವಾಕ್ಯಮಂ ಕೇಳಿ ರಾಕ್ಷಸನು ಮನದಲ್ಲಿ ಕ್ಲೇಶಪಡುತ್ತ—ಹಾ ! ವೃದ್ಧರಾಜನೇ ! ಹಾ ! ಸುನಂದಾದೇ

ವಿಯೇ ! ಕಾಲಾಧೀನರಾದಿರಾ ! ನಾನು ಮನಸ್ಸಿನಲ್ಲಿ ಮಾಡಿದ್ದ ಯತ್ನವು ಇಂದಿಗೆ ನಿಷ್ಫಲವಾಯಿತು. ಇನ್ನು ನಂದವಂಶವಾರ್ತೆಯೆಂದರೇನು ? ಎಂದು ಹಂಬಲಿಸುತ್ತ ಸ್ನಾನಮಂ ಮಾಡಿ ಬಂದು ನಿದ್ರಾಶನಗಳು ರುಚಿಸದೆ ಚಿಂತಿಸುತ್ತ ವಾಸಕನೆಂಬ ಗೂಢಚಾರನಂ ಕುರಿತು—

ಎಲೈ ಚಾರನೇ, ವೃದ್ಧರಾಜದಂಪತಿಗಳ ದಶೆ ಈ ರೀತಿಯಾಯಿತು. ಪಾಟಲೀಪುರಸಮೀಪದಲ್ಲಿ ಇಳಿದಿದ್ದ ಪರ್ವತರಾಜನ ದಂಡಿನ ವರ್ತಮಾನವೇನು? ಎನಲು; ಆ ಗೂಢ ಪುರುಷನು ಅಲ್ಲಿನ ವೃತ್ತಾಂತಮಂ ಹೇಳುವುದಕ್ಕೆ ಉಪಕ್ರಮಿಸಿದನು ಅದೆಂತೆಂದೊಡೆ—

ಸ್ವಾಮೀ ಅಮಾತ್ಯರೇ, ನೀವು ಪುರಮಂ ಬಿಟ್ಟು ಬಂದ ಬಳಿಕ ಜೀವಸಿದ್ಧಿಯೆಂಬ ಕ್ಷಪಣಕನು ಒಬ್ಬ ಸ್ತ್ರೀಯಂ ಕರತಂದು ಚಂದ್ರಗುಪ್ತನಿಗೆ ಒಪ್ಪಿಸಲು; ಆಗ ಚಾಣಕ್ಯನು ಅವಳಂ ನೋಡಿ ಏನೋ ಮನಸ್ಸಿನಲ್ಲಿ ಯೋಚಿಸಿಕೊಂಡು—ಎಲೈ ಜೀವಸಿದ್ಧಿಯೇ, ಈ ಕನ್ನೆಯು ಪರ್ವತರಾಜನಿಗೆ ಸಲ್ಲತಕ್ಕವಳು. ಇವಳನ್ನು ಅವನಿಗೆ ಒಪ್ಪಿಸು ಎನಲು; ಆತನ ಮಾತಂ ಮೀರಲಾರದೆ ಆ ಕ್ಷಪಣಕನು ಅವಳಂ ಕರತಂದು ಪರ್ವತೇಶ್ವರನಿಗೆ ಒಪ್ಪಿಸಲು; ಕಾಮುಕನಾದ ಆ ರಾಯನು ಆ ಸ್ತ್ರೀಯ ಸಂಗದಿಂದ ನಂಜು ತಟ್ಟಿ ಮೃತನಾದನು. ಆ ಸಮಯದಲ್ಲಿ ಸನ್ನದ್ಧರಾಗಿ ಬರುತ್ತಿರುವ ಚಂದ್ರಗುಪ್ತನ ಸೇನಾಜನರಂ ಕಂಡು ಮಲಯಕೇತುವು ಭೀತನಾಗಿ ಓಡಿ ಹೋದನು. ಹೀಗಿರುವಲ್ಲಿ ಚಾಣಕ್ಯನು ಅರ್ಧರಾಜ್ಯಮಂ ಬಯಸಿ ಬಂದ ಪರ್ವತಪತಿಯಂ ದುಷ್ಟ ಕನ್ಯಾಮುಖದಿಂದ ಸಂಹಾರಂ ಗೆಯ್ಸಿದನಾದರೂ ಲೋಕಾಪವಾದಮಂ ಮತ್ತೊಬ್ಬರ ಮೇಲೆ ಉಂಟು ಮಾಡುವುದರಲ್ಲಿ ಸಮರ್ಥನೆಂದು ತಿಳಿಯುತ್ತಿದೆ ಎನಲು; ಅದಂ ಕೇಳಿ ರಾಕ್ಷಸನು ಬಹು ಖಿನ್ನನಾಗಿ—ಓಹೋ ! ನಾನು ಮಾಡಿದ ಮಹಾಪ್ರಯತ್ನವು ವಿಫಲವಾಯಿತು; ಕರ್ಣನು ಅರ್ಜುನನ ಸಂಹಾರಕ್ಕೋಸ್ಕರ ಇಂದ್ರನ ದೆಸೆಯಿಂದ ಸಂಪಾದಿಸಿದ ಶಕ್ತ್ಯಾಯುಧಕ್ಕೆ ಘಟೋತ್ಕಚನಂ ಗುರಿ ಮಾಡಿಸಿ ವಾಸುದೇವನು ಪಾರ್ಥನಂ ಸಂರಕ್ಷಿಸಿದ ತೆರದಲ್ಲಿ ನಾನು ಚಂದ್ರಗುಪ್ತವಧಾರ್ಥವಾಗಿ ಕಳುಹಿಸಿದ ವಿಷಕನ್ಯೆಯಿಂದ ಪರ್ವತರಾಜನಂ ಸಂಹಾರಂಗೆಯ್ಸಿ ಚಾಣಕ್ಯನು ಚಂದ್ರಗುಪ್ತನಂ ಸಂರಕ್ಷಿಸಿದನು. ನಾನು ಮಾಡಿದ ಮಹಾಪ್ರಯತ್ನವೇ ಈ ಗತಿಯಾದರೆ ಕಡಮೆ ಅಲ್ಪ ಪ್ರಯತ್ನಗಳು ಚಾಣಕ್ಯನ ಉಪಾಯಮಂ ಮೀರಿ ಚಂದ್ರಗುಪ್ತನನ್ನೇನು ಮಾಡಿಯಾವು ? ಎಂದು ಚಿಂತಿಸುತ್ತ

ಪ್ರಭುಗಳಾದ ನಂದರು ಕಾಲವಶರಾದಾಗ್ಯೂ ನನಗೆ ಪೌರುಷವು ಕ್ಷೀಣವಾಗದೇ ಇರುವುದರಿಂದ ಈ ವೇಳೆಯಲ್ಲಿ ನಾನು ಇನ್ನೂ ಸಾಹಸಮಂ ಮಾಡಿ ಪಿತೃವಿಯೋಗದಿಂ ಖಿನ್ನನಾಗಿ ತನ್ನ ಪುರಕ್ಕೆ ಬಂದಿರುವ ಚಂದ್ರಗುಪ್ತವೈರಿಯಾದ ಮಲಯಕೇತುವಂ ಸೇರಿ ಅವನಂ ಪ್ರೋತ್ಸಾಹಿಸಿ ಅವನ ಸೇನೆಯಂ ಕರತಂದು ಪಾಟಲೀಪುರಮಂ ಮುತ್ತಿ ಚಂದ್ರಗುಪ್ತ ಚಾಣಕ್ಯರ ಗರ್ವಮಂ ಮುರಿದು ನಂದರಾಜ್ಯವಮಂ ಅವನಿಗೆ ಕೊಟ್ಟು ಲೋಕಾಂತರಸ್ಥರಾದ ನಮ್ಮ ಪ್ರಭುಗಳಿಗೆ ಸಂತೋಷಮುಂಟಾಗುವಂತೆ ಮಾಡುವೆನಲ್ಲದೆ ಚಂದ್ರಗುಪ್ತನ ಅಭ್ಯುದಯಮಂ ನೋಡಿ ಸಹಿಂಸುವವನಲ್ಲವೆಂದು ನಿಶ್ಚಯಿಸಿ ಪುನಃ ಆ ಚಾರನಂ ಕುರಿತು—

ಎಲೈ ವಾಸಕನೇ, ಪರ್ವತರಾಜನು ಕಾಲಾಧೀನನಾಗಿ ಎಷ್ಟು ದಿವಸಗಳಾದುವು? ಮಲಯಕೇತು ತನ್ನ ಪುರವನ್ನು ತಲುಪಿರುವನೋ? ಎಂದು ಕೇಳಲು;

ಸ್ವಾಮಿಾ, ಪರ್ವತೇಶ್ವರನು ಮೃತಿಯನ್ನು ಹೊಂದಿ ಎರಡು ತಿಂಗಳಾಯಿತು ಮಲಯಕೇತು ಇಷ್ಟರಲ್ಲಿ ಪುರಮಂ ತಲುಪಿ ಇದ್ದಾನು. ಈ ವರ್ತಮಾನಮಂ ತಮಗೆ ತಿಳುಹಬೇಕೆಂದು ಅರಸುತ್ತ ನಿಮ್ಮಿಂದ ಆಜ್ಞಪ್ತನಾಗಿ ಪಾಟಲೀಪುರಕ್ಕೆ ಹೋಗುತ್ತಿರುವ ವಿರಾಧಗುಪ್ತನೆಂಬ ಚಾರನ ಮುಖದಿಂ ಕೇಳಿ ತಮ್ಮ ಸನ್ನಿಧಿಯಂ ಗೊತ್ತುಮಾಡಿಕೊಂಡು ಬಂದೆನು ಎನಲು; ಆಗ ರಾಕ್ಷಸನು—ನಮ್ಮ ಸಂಗಡವೇ ಇರುವುದೆಂದು ಆ ಚಾರನಿಗೆ ನೇಮಿಸಿ ಅಲ್ಲಿಂದ ಹೊರಟು ಪರ್ವತದೇಶಾಭಿಮುಖನಾಗಿ ಹೋಗುತ್ತಿರಲು; ಆಗ ಆತನ ಪರಿವಾರವು ಕೆಲವು ಬಂದು ಸೇರಲು; ಆ ಅಮಾತ್ಯನು ಪರ್ವತರಾಜ್ಯದ ರಮಣೀಯತೆಯಂ ನೋಡುತ್ತ ಶಾಹುರೀನಗರದ ಉದ್ಯಾನದಲ್ಲಿ ಇಳಿಯುತ್ತಿದ್ದನು.

ಅತ್ತಲಾ ಪಾಟಲೀಪುರದ ರಾಜಭವನದಲ್ಲಿ ವೃದ್ಧರಾಜ ದಂಪತಿಗಳು ಇಲ್ಲದೆ ಇರುವುದಂ ಕೇಳಿ ಚಂದ್ರಗುಪ್ತನು ಅತ್ಯಂತ ವ್ಯಸನಂಗೊಂಡು ತಾನೇ ಬಂದು ರಾಜಭವನದಲ್ಲೆಲ್ಲ ಹುಡುಕಿ ಕಾಣದೆ ಅಂತಃಪುರದಲ್ಲಿರುವ ಸುರಂಗದ ಬಾಗಿಲು ತೆರೆದು ಇರುವುದಂ ಕಂಡು ವೃದ್ಧರಾಜ ದಂಪತಿಗಳು ಪುತ್ರಶೋಕಮಂ ಸಹಿಸಲಾರದೆ ತಪೋವನಕ್ಕೆ ಹೋಗಿರಬೇಕಲ್ಲದೆ ನನ್ನಿಂದ ಅಪರಾಧವೆಳ್ಳಷ್ಟು ಇಲ್ಲ. ಈ ಯರ್ಥವು ಸರ್ವಜನಕ್ಕೂ ವಿದಿತವಾಗಿರುವುದು. ಆದರೂ ಅವರಿರುವ ನೆಲೆಯಂ ತಿಳಿದು ನಾನೇ ಹೋಗಿ ಸರ್ವಪ್ರಕಾರದಲ್ಲೂ ಕರತರುವುದೇ ಯುಕ್ತವೆಂದು ನಿಶ್ಚಯಿಸಿ ವೃದ್ಧನಾದ ವಕ್ರನಾಸನೆಂಬ ಮಂತ್ರಿಯಂ ಕರೆಯಿಸಿ ರಾಜದಂಪತಿಗಳು ಪುಣ್ಯಾರಣ್ಯಕ್ಕೆ ಹೋದುದಂ ತಿಳುಹಿ ನಂದರ ಅಂತಃಪುರದಲ್ಲಿ

ರುವ ಅವರ ಭೋಗಿನಿಯರುಗಳಿಗೆ ಅವಶ್ಯಕವಾದುದಂ ಒದಗಿಸುತ್ತ ವ್ಯತ್ಯಾಸಂ ಬಾರದಂತೆ ಜಾಗರೂಕನಾಗಿರುವುದೆಂದು ನೇಮಿಸಿ ಸುರಂಗದ ಬಾಗಿಲಂ ಮುಚ್ಚ ಬೇಕೆಂದು ಕಟ್ಟು ಮಾಡಿ ಚಾರರಂ ಕರೆದು—ನಮ್ಮ ಪಿತಾಮಹರಾದ ರಾಜದಂಪತಿಗಳು ನಮಗೆ ತಿಳಿಯದಂತೆ ತಪೋವನಕ್ಕೆ ಹೋಗಿರುವುದರಿಂದ ನೈಮಿಶಾರಣ್ಯದ ಋಷ್ಯಾಶ್ರಮಂಗಳಲ್ಲಿ ಅರಸಿ ತಿಳಿದು ಬಂದು ನಮಗೆ ಹೇಳುವವರಾಗಿರಿ ಎಂದು ನೇಮಿಸಿ ಕಳುಹಿಸಿ ತಾನಿದ್ದೆಡೆಗೆ ಬರುತ್ತಿರಲು ; ಅಷ್ಟರಲ್ಲಿಯೇ ಮೊದಲು ಚಾಣಕ್ಯರಿಂದ ಆಜ್ಞಪ್ತರಾಗಿದ್ದ ಚೋರರು ಬಂದು ರಹಸ್ಯದಲ್ಲಿ ಅವನಂ ಕಂಡು—

ಸ್ವಾಮಿ, ತಮ್ಮಪ್ಪಣೆಯ ಪ್ರಕಾರವಾಗಿ ವೃದ್ಧರಾಜನಂ ಸಂಹರಿಸಿದೆವು. ಅವನ ಕೈಯ್ಯ ಜಪಮಾಲೆಯು ಇದೆಂದು ತೋರಿಸಲು ; ಅದಂ ನೋಡಿ ಅವರಂ ಅಚೆಗೆ ಕಳುಹಿಸಿ ಚಂದ್ರಗುಪ್ತನ ಆಧಿಪತ್ಯವು ನಿಷ್ಕಂಟಕವಾಯಿತೆಂದು ಹೇಳಿಕೊಂಡು ಚಾಣಕ್ಯನು ಸ್ನಾನಕ್ಕೆ ಹೋಗುತ್ತಿದ್ದನು.

ಮತ್ತು ಕೆಲವು ದಿನಗಳ ಮೇಲೆ ಚಂದ್ರಗುಪ್ತನಿಂದ ಆಜ್ಞಪ್ತರಾದ ಚಾರರು ಗಂಗಾತೀರದ ಆಶ್ರಮಂಗಳಲ್ಲಿ ಹುಡುಕಿ ವೃದ್ಧರಾಜನಂ ಕಾಣದೆ ಅಲ್ಲಿರುವ ಚೇಷ್ಟೀಮೂಲಕದಿಂದ ಆ ದಂಪತಿಗಳ ಯಾವದ್ವೃತ್ತಾಂತಮಂ ತಿಳಿದು ಬಂದು ತಮ್ಮ ರಾಯನಿಗೆ ವಿಜ್ಞಾಪಿಸಲು ; ಅದಕ್ಕಾತನು ಬಹಳವಾಗಿ ವ್ಯಸನಪಡುತ್ತ ಪಿತಾಮಹನೊಬ್ಬನಾದರೂ ಜೀವಿಸಿದ್ದರೆ ಬಹುಸೇವೆಯಂ ಮಾಡಿ ನಾನು ಸುಕೃತಕ್ಕೆ ಪಾತ್ರನಾಗಬೇಕೆಂದು ಎಣಿಸಿದ್ದೆನು. ದೈವಸಂಕಲ್ಪವು ಹೀಗೆ ಪರಿಣಮಿಸಿತು ಎಂದು ವ್ಯಸನಪಡುತ್ತ ಇರುವಲ್ಲಿ ಆತನಂ ಸಮಯೋಚಿತವಾಕ್ಯಗಳಿಂದ ಚಾಣಕ್ಯನು ಸಮಾಧಾನಂಗೊಳಿಸಿ ಆ ರಾಜಪುತ್ರನ ಮನಸ್ಸು ಬರುವಂತೆ ಆತನ ಕೈಯ್ಯಿಂದಲೇ ಪಿತೃಕೃತ್ಯವಂ ಮಾಡಿಸಿ ಬ್ರಾಹ್ಮಣರಿಗೆ ಬಹು ದ್ರವ್ಯ ದಕ್ಷಿಣೆಗಳಂ ಕೊಡಿಸುತ್ತಿದ್ದನು.

ಅತ್ತಲಾ ಪರ್ವತರಾಜನ ಉಪವನದಲ್ಲಿ ರಾಕ್ಷಸನು ಬಂದು ಇಳಿದಿರುವುದಂ ಬಾಗುರಾಯಣನು ಚಾರಮುಖದಿಂ ತಿಳಿದು ತನ್ನ ಮನಸ್ಸಿನಲ್ಲಿ ಮಲಯಕೇತುವನ್ನೋಡಿಸುವುದಕ್ಕೆ ಚಾಣಕ್ಯರು ನನಗೆ ಸಿದ್ಧಾರ್ಥಕನ ಕೈಯ್ಯಲ್ಲಿ ಕಳುಹಿಸಿದ್ದ ಕಾಗದದ ರೀತಿಗೆ ರಾಕ್ಷಸನು ಮಲಯಕೇತುವನ್ನನುವರ್ತಿಸಿ ಚಂದ್ರಗುಪ್ತನ ಮೇಲೆ ರಾಜಕಾರ್ಯಮಂ ನಡಿಸುವುದಕ್ಕೆ ಬಂದಿದ್ದಾನು. ಚಾಣಕ್ಯರು ಹೇಳಿದ ರೀತಿಗೆ ಈಗಲೇ ರಾಕ್ಷಸನಲ್ಲಿ ಇಲ್ಲದ ದೋಷಾರೋಪಣವನ್ನೇನಾದರೂ ಮಾಡಿ

ಮಲಯಕೇತುವಿನಲ್ಲಿ ಬಂದು ಆಶ್ರಯಿಸದಂತೆ ನಿರಾಕರಿಸಿದರೆ ಖ್ಯಾತಿವಂತನಾದ ರಾಕ್ಷಸನು ಮತ್ತಾವ ಅರಸಿನ ಬಳಿಗಾದರೂ ಅನುಸರಿಸಬೇಕೆಂದು ಹೋದಲ್ಲಿ ಇವನು ಮಹಾ ಕಾರ್ಯದಕ್ಷನಾದುದರಿಂದ ಆ ರಾಯನು ಶತ್ರುವಾದರೂ ಮಿತ್ರನಾದಾನು. ಮಿತ್ರನೇ ಆಗಿದ್ದವನಂ ಕೇಳತಕ್ಕುದೇನು ? ಹೀಗೆ ಕೆಲವು ದೇಶಾಧಿಪತಿಗಳಂ ಒಡಂಬಡಿಸಿ ರಾಕ್ಷಸನು ಚಂದ್ರಗುಪ್ತನ ಮೇಲೆ ಕಾರ್ಯಭಾಗಕ್ಕೆ ಯತ್ನಮಂ ಮಾಡಿದರೆ ಮೌರ್ಯಪುತ್ರನ ಯೋಗಕ್ಷೇಮವು ಎಂತಾಗುವುದೋ ? ಅದರಿಂದ ಚಾಣಕ್ಯರ ಮನೋಗತವು ವ್ಯರ್ಥವಾದೀತು. ನಾನು ಮಲಯಕೇತುವಿನ ಸಮೀಪದಲ್ಲಿರುವುದೂ ಸಾರ್ಥಕವಲ್ಲದೆ ಹೋಗುವುದು. ಅದುಕಾರಣದಿಂ ಮಲಯಕೇತುವಿಗೆ ರಾಕ್ಷಸನಲ್ಲಿ ಉಪೇಕ್ಷೆ ಬರುವಂತೆ ಮಾಡಿದರೆ ಸಮಯೋಚಿತವಾಗಲಾರದು ಎಂದು ಆಲೋಚಿಸಿ ರಾಕ್ಷಸನು ಮಲಯಕೇತುವಂ ಒಡಂಬಡಿಸಿ ಸೇನೆಯಂ ಕರಕೊಂಡು ಚಂದ್ರಗುಪ್ತನ ಮೇಲೆ ಕಾರ್ಯಭಾಗಕ್ಕೆ ಪಾಟಲೀಪುರಮಂ ಕುರಿತು ಹೋಗಲಿ. ಚಾಣಕ್ಯನ ಗೂಢಚಾರರು ಯಾರಾದರೂ ರಾಕ್ಷಸನಲ್ಲಿ ಬಂದು ಅನುವರ್ತಿಸಿದ ಬಳಿಕ ದುಷ್ಟಮಾರ್ಜಾಲಮಂ ನಯದಿಂದ ಸಮೀಪಕ್ಕೆ ಕರೆದು ಉಷ್ಣೋದಕವನ್ನೆರಚಿ ಅಟ್ಟುವಂತೆ ರಾಕ್ಷಸನಲ್ಲಿ ಮಲಯಕೇತುವಿಗೆ ಕೋಪಬರುವಂತೆ ಮಾಡಿ ಇಲ್ಲಿಂದ ಹೊರಡಿಸಬೇಕೆಂದು ನಿಶ್ಚಯಿಸಿ ಪರ್ವತೇಶ್ವರಪುತ್ರನ ಸಮೀಪಕ್ಕೆ ಬರುತ್ತಿರಲು ; ಪುರದ ಉದ್ಯಾನದಲ್ಲಿ ಇಳಿದಿದ್ದ ರಾಕ್ಷಸನು—ತಮ್ಮಂ ಕಾಣುವುದಕ್ಕೆ ನಾನು ಬಂದು ಇದ್ದೇನೆಂದು ಅರಸಾದ ಮಲಯಕೇತುವಿಗೆ ತಿಳುಹಿಸಿ ಬನ್ನಿರೆಂಬುದಾಗಿ ತನ್ನ ದೂತರಿಗೆ ನೇಮಿಸಿ ಕಳುಹಿಸಲು ; ಅವರು ಬಂದು ಓಲಗದಲ್ಲಿ ಕುಳಿತಿದ್ದ ಅರಸುಮಗನಂ ಕಂಡು ಕೈಮುಗಿದು—ಬುದ್ಧೀ, ಪಾಟಲೀಪುರದ ಅಮಾತ್ಯರಾಕ್ಷಸರು ಬಂದು ಪುರದ ಉದ್ಯಾನದಲ್ಲಿ ಇಳಿದಿದ್ದಾರೆ. ತಮ್ಮ ದರ್ಶನವಾಗಬೇಕೆಂದು ವಿಜ್ಞಾಪಿಸಿ ಬನ್ನಿರೆಂದು ನಮ್ಮಂ ಕಳುಹಿಸಿದರು ಎನಲು ; ಆ ವಾಕ್ಯಮಂ ಕೇಳಿ ಮಲಯಕೇತುವು ತನ್ನೊಳಗೆ—ನಂದರಿಗೆ ಮಂತ್ರಿಯಾದ ರಾಕ್ಷಸನು ಚಂದ್ರಗುಪ್ತನ ದೆಸೆಯಿಂದ ಭೀತನಾಗಿ ಆ ರಾಜ್ಯದಲ್ಲಿ ನಿಲ್ಲಲಶಕ್ಯವಾದ ಕಾರಣ ಅಲ್ಲಿಗೆ ಬಂದನೋ ! ಅಥವಾ ಚಂದ್ರಗುಪ್ತನಿಗೂ ನಮಗೂ ಉಂಟಾಗಿರುವ ವೈರಮಂ ತಿಳಿದು ಇದೇ ಸಮಯದಲ್ಲಿ ನಮ್ಮ ಸಹಾಯದಿಂದ ಹೋಗಿ ಚಂದ್ರಗುಪ್ತನಲ್ಲಿ ದ್ವೇಷಮಂ ಸಾಧಿಸುವುದಕ್ಕೆ ಬಂದನೋ ! ತಿಳಿಯಬೇಕು. ಈ ರಾಕ್ಷಸನು ನಂದರಿಗೆ ಸಚಿವನಾಗಿದ್ದುದರಿಂದಲೇ ಅನೇಕ ರಾಜಮಂಡಲವು ಅವರನ್ನನುವರ್ತಿಸಿಕೊಂಡಿತು.

ನಮ್ಮ ತಂದೆಯು ಈ ಅಮಾತ್ಯನ ಪ್ರಶಂಸೆಯಂ ಬಹುವಾಗಿ ಮಾಡುತ್ತಿದ್ದನು. ಕಾರ್ಯದಕ್ಷನೂ ಬುದ್ಧಿಶಾಲಿಯೂ ಸತ್ಯವಂತನೂ ಪ್ರಜಾರಕ್ಷಕನೂ ಆಗಿರುವ ಈ ರಾಕ್ಷಸನು ನಾವು ಅಪೇಕ್ಷಿಸುವುದಕ್ಕೆ ಮುಂಚಿತವಾಗಿ ತಾನಾಗಿಯೇ ನಮ್ಮ ಬಳಿಗೆ ಬಂದು ಚಂದ್ರಗುಪ್ತನ ಮೇಲೆ ದ್ವೇಷಮಂ ಸಾಧಿಸಬೇಕೆಂದು ಹೇಳಿಕೊಂಡರೆ ನಮ್ಮ ಬಳಿಯಣ ಸರ್ವಾಧಿಕಾರಮಂ ಈತನಿಗೆ ನೇಮಿಸಿ ಇವನ ಮುಖದಿಂದಲೇ ಶತ್ರುಗಳಾದ ಚಂದ್ರಗುಪ್ತ ಚಾಣಕ್ಯರಂ ನಿಗ್ರಹಿಸಬೇಕೆಂದು ಆಲೋಚಿಸಿ ದೃಢೀಕರಿಸಿ ಆಗ ಸಮೀಪಕ್ಕೈತಂದ ಬಾಗುರಾಯಣನಂ ನೋಡಿ—

ಅಯ್ಯಾ, ನಂದರಿಗೆ ಮಂತ್ರಿಯಾದ ರಾಕ್ಷಸನು ಬಂದು ನಮ್ಮ ಪುರದ ಉಪವನದಲ್ಲಿ ಇಳಿದು ನಮ್ಮಂ ಕಾಣಬೇಕೆಂದು ತನ್ನ ದೂತರಂ ಕಳುಹಿಸಿ ಇದ್ದಾನೆ. ಈತನು ಚಂದ್ರಗುಪ್ತನಿಗೆ ಶತ್ರುವಾದುದರಿಂದ ನಮಗೆ ಮಿತ್ರನಾದಾನು. ಕಾರ್ಯದಕ್ಷನೂ ಸತ್ಯವಂತನೂ ದೂರದರ್ಶಿಯೂ ಖ್ಯಾತಿವಂತನೂ ಆದ ಈ ರಾಕ್ಷಸನು ಚಂದ್ರಗುಪ್ತನಿಗೆ ಭಯಪಟ್ಟು ಬಂದವನಾದರೂ ಈತನ ಮುಖದಿಂದ ಪಾಟಲೀಪುರಮಂ ಸಾಧಿಸಬೇಕು. ನಮ್ಮನ್ನವಲಂಬಿಸಿ ತನಗೆ ಚಂದ್ರಗುಪ್ತನಲ್ಲಿರುವ ದ್ವೇಷಮಂ ಸಾಧಿಸಬೇಕೆಂದು ಹೇಳಿಕೊಂಡರೆ ರಾಕ್ಷಸನಂ ನಾವಾಗಿ ಕರೆಯ ಕಳುಹಿಸಿದಂತಾಯಿತು ಎಂದು ಹೇಳಲು ;

ಅಯ್ಯಾ ರಾಜಕುಮಾರಕನೇ, ರಾಕ್ಷಸನ ವಿಚಾರವಾಗಿ ನೀನು ನುಡಿದುದೆಲ್ಲವೂ ಸಹಜವೇ ಸರಿ. ಆತನು ಬಂದರಲ್ಲಿಯೂ ಕಳೆಯುತಕ್ಕವನಲ್ಲ. ಚಂದ್ರಗುಪ್ತನಲ್ಲಿ ವಿರೋಧಮಂ ಸಾಧಿಸಲೋಸುಗ ಬಂದು ಇರುವುದೇ ನಿಶ್ಚಯವಾದರೆ ನಿನ್ನ ಮನೋರಥವೆಲ್ಲವೂ ಕೈವಶವಾಯಿತು ಎಂದು ತಿಳಿಯುವವನಾಗು ಎನಲು;

ಅಯ್ಯಾ ಮಿತ್ರನೇ, ರಾಕ್ಷಸನಿಂದ ನನ್ನ ಮನೋರಥವು ಸಫಲಪ್ರಾಯವೆಂದು ಹೇಳಿದೆಯಲ್ಲವೇ ? ಮೊದಲು ಅತನು ಮಾಡಿದ ಸಾಹಸವೆಲ್ಲವೂ ಚಾಣಕ್ಯನಲ್ಲಿ ಏನು ಸಾಗಿತು ? ಎನಲು ;

ಅಯ್ಯಾ ರಾಜಕುಮಾರಕನೇ, ಹಾಗಾದರೂ ದುರಹಂಕಾರಿಯೂ ಧೂರ್ತನೂ ನಿಷ್ಠುರಹೃದಯನೂ ಆದ ಚಾಣಕ್ಯನಿಗೂ ಸರಳಹೃದಯನೂ ರಾಜನೀತಿಜ್ಞನೂ ಪ್ರಭುವೂ ಆದ ಚಂದ್ರಗುಪ್ತನಿಗೂ ದೈವಯೋಗದಿಂ ನಡೆದು ಬರುವ ಮಿತ್ರತ್ವವು ತಪ್ಪಿ ಅವರೀರ್ವರಿಗೂ ಮನಸ್ತಾಪಮುಂಟಾದ ಸಮಯದಲ್ಲಿ ರಾಕ್ಷಸನ ಮುಖದಿಂದಲೇ ನಿನ್ನ ಕಾರ್ಯವೆಲ್ಲವೂ ಕೈಗೂಡಿ ಬಂದೀತು ಎನಲು ;

ಅಯ್ಯಾ ಬಾಗುರಾಯಣನೇ, ನಮ್ಮ ಪರಿವಾರವೆಲ್ಲಮಂ ತೆಗೆದುಕೊಂಡು ನೀನೇ ಹೋಗಿ ರಾಕ್ಷಸನಂ ಕಂಡು ಉಚಿತಪ್ರಕಾರದಿಂ ಕರತರುವವನಾಗು ಎಂದು ಹೇಳಿದ ಮಲಯಕೇತುವಿನ ಮಾತಿಗೆ—ಅಲ್ಲಿ ಮಂತ್ರಿ ಪರಿವಾರಸಮೇತ ನಾಗಿ ಬಾಗುರಾಯಣನು ಪುರದ ಉದ್ಯಾನವನಕ್ಕೆ ಹೋಗಿ ಉಚಿತ ಪ್ರಕಾರದಿಂ ದೆಲ್ಲರೂ ರಾಕ್ಷಸನಿಗೆ ನಮಸ್ಕರಿಸಿ ಕುಳ್ಳಿರಲು ; ಎಲ್ಲರ ಕ್ಷೇಮಮಂ ಕೇಳಿ ಅಮಾತ್ಯನು ಬಾಗುರಾಯಣನಂ ಕುರಿತು—

ಏನಯ್ಯಾ ಸೇನಾಪತಿಯೇ, ನೀನು ಮಲಯಕೇತುವಿನ ಬಳಿಗೆ ಬರುವು ದಕ್ಕೆ ನಿಮಿತ್ತವೇನು ? ಎನಲು ;

ಸ್ವಾಮಿಾ, ನಂದರು ಕಾಲವಾದ ಬಳಿಕ ಚಂದ್ರಗುಪ್ತನು ರಾಜ್ಯಕ್ಕೆ ಯೋಗ್ಯ ನಲ್ಲವೆಂಬ ಬುದ್ಧಿಯಿಂದ ಅವನಂ ಅನುವರ್ತಿಸುವುದಕ್ಕೆ ಮನಸ್ಸು ಒಡಂಬಡದೆ ನಂದರಾಜ್ಯದಲ್ಲಿ ಅರ್ಧಕ್ಕೆ ಕರ್ತೃವಾಗುವ ಪರ್ವತರಾಜನಂ ಅನುಸರಿಸಬೇಕೆಂಬ ಇಚ್ಛೆಯಿಂದ ಚಂದ್ರಗುಪ್ತನಂ ಕಾಣಿಸಿಕೊಳ್ಳದೆ ಉದಾಸೀನನಾಗಿ ಇದ್ದುದಕ್ಕೆ ಸಭೆಯಲ್ಲಿ ನನ್ನಂ ಕರೆಯ ಕಳುಹಿಸಿ ಅಪಮಾನಂಗೊಳಿಸಬೇಕೆಂಬ ಚಾಣಕ್ಯನ ಆಲೋಚನೆಯಂ ಆಪ್ತಮುಖದಿಂ ತಿಳಿದಿರಲು ; ಅಷ್ಟರಲ್ಲಿ ಆ ರಾತ್ರಿಯೇ ಚಂದ್ರಗುಪ್ತನ ದೂತರು ಬಂದು ನಿಮ್ಮ ಸೇನೆಗಳು ಈಗಲೇ ಯುದ್ಧಸನ್ನದ್ಧ ವಾಗಿ ಮಲಯಕೇತುವಿನ ಗೂಡಾರಕ್ಕೆ ಪಶ್ಚಿಮದಿಕ್ಕಿನಲ್ಲಿ ನಿಂತು ಅಪ್ಪಣೆ ಬಂದ ಮೇರೆಗೆ ನಡೆದುಕೊಳ್ಳುವುದು ಎಂದು ಪ್ರಭುಗಳ ಆಜ್ಞೆಯಾಗಿದೆ ಎಂಬುದಾಗಿ ಪಡೆಯಂ ಹೊರಡಿಸುತ್ತಿರಲು ; ಇದೇನೋ ಚಾಣಕ್ಯನು ಪುತ್ರಸಮೇತನಾದ ಪರ್ವತರಾಜನಿಗೆ ದ್ರೋಹವನ್ನೆಣಿಸಿರುವವನಾಗಿದ್ದಾನೆ. ಈ ಯರ್ಥಮಂ ತಿಳಿಯ ಬೇಕೆಂದು ನಿಶ್ಚಯಿಸಿ ತ್ವರಿತದಿಂ ಪರ್ವತೇಶ್ವರನ ಗೂಡಾರದ ಸಮೀಪಕ್ಕೆ ನಾನು ಬರುವಷ್ಟರಲ್ಲಿಯೇ ಚಾಣಕ್ಯನು ಕಳುಹಿಸಿದ ವಿಷಕನ್ಯೆಯಿಂದ ಪರ್ವತರಾಜನು ಮೃತನಾಗಿ ಚಂದ್ರಗುಪ್ತನ ಸೈನ್ಯವು ಮಲಯಕೇತುವಿನ ಮೇಲೆ ಬರುವುದಂ ತಿಳಿದು ಮನಮರುಗಿ ರಾಜಪುತ್ರನಿಗೆ ಈ ಯರ್ಥಮಂ ಬೇಗ ತಿಳುಹಿಸಿ ಅವನಂ ಅರಿಬಲಕ್ಕೆ ಸಿಕ್ಕದಂತೆ ತಪ್ಪಿಸಿ ದೂರವಾಗಿ ಕರತಂದು ಬಿಡಲು ; ತನಗೆ ಉಪಕಾ ರಮಂ ಮಾಡಿದನೆಂಬ ಪ್ರೀತಿಯಿಂದ ನನ್ನಂ ಪುರಕ್ಕೆ ಹೋಗಲೀಸದೆ ತನ್ನ ಸಂಗ ಡವೇ ಕರತಂದನು. ಇನ್ನು ನೀವು ಮಲಯಕೇತುವಿನಲ್ಲಿ ಅನುಗ್ರಹಮಂ ಮಾಡಿ ಬಂದ ಬಳಿಕ ಆತನು ಬಯಸಿದುದೆಲ್ಲವೂ ಸಫಲವಾಗುವುದು. ಈಗ

ದಯಮಾಡಬಹುದು ಎಂದು ಬಾಗುರಾಯಣನು ಹೇಳಿದ ಮಾತಿಗೆ ರಾಕ್ಷಸನು ಎದ್ದು ಪರಿಜನಸಮೇತನಾಗಿ ರಾಜಸಭೆಗೆ ಬರುತ್ತಿರಲು; ಅದಂ ಕಂಡು ಮಲಯ ಕೇತು ಪೀಠದಿಂದೆದ್ದು ಬಂದು ರಾಕ್ಷಸನಿಗೆ ನಮಸ್ಕರಿಸಲು; ಆತನು ನೃಪತನಯನಂ ತಕ್ಕೈಸಿ ಜಯಶೀಲನಾಗು ! ಎಂದು ಹರಸಿ ಅವರೀರ್ವರೂ ಉಚಿತಪ್ರಕಾರದಿಂ ಕುಳಿತು—ಅಮಾತ್ಯ ಶ್ರೇಷ್ಠರೇ, ನೀವು ಕ್ಷೇಮಿಗಳೇ ? ಎನಲು;

ಅಯ್ಯಾ ಕುಮಾರಕನೇ, ನೀನು ಶ್ರೇಯೋವಂತನಾಗಿರುವುದಂ ಕೇಳಿ ನಾವು ಕ್ಷೇಮಿಗಳಾಗಿದ್ದೇವೆ. ಪ್ರಜಾಪರಿವಾರಸಮೇತನಾದ ನಿನಗೆ ಕುಶಲವೇ ? ನಾನು ನಿಮ್ಮ ತಂದೆಗೆ ಮಿತ್ರನಾದ ಸಲಿಗೆಯಿಂದ ನಿನ್ನಂ ಕುಮಾರನೆಂದು ಸಂಬೋಧಿಸಬೇಕಾಯಿತು. ನಮ್ಮಿಬ್ಬರಿಗೆ ಉಂಟಾಗಿದ್ದ ಮಿತ್ರತ್ವಮಂ ನಿಮ್ಮ ವೃದ್ಧ ಮಂತ್ರಿಗಳಂ ಕೇಳಿದರೆ ತಿಳಿಯಬಂದೀತು. ಅದಂತಿರಲಿ ! ವಂಚಕನಾದ ಚಾಣಕ್ಯನ ಕಾಪಟ್ಯಮಂ ನಿಶ್ಚಯಮೆಂದೆಣಿಸಿ ಮಾಡಿದ ಯತ್ನಗಳು ಪ್ರಯೋಜನಕ್ಕೆ ಬಾರದೆ ಪರ್ವತರಾಜನು ಮಹಾವಿಪತ್ತಿಗೆ ತಗುಲಿದನು. ನೀನು ಪಿತೃಕ್ಲೇಶದಿಂದ ಖಿನ್ನನಾಗಿ ಬಹುಪ್ರಜಾನಿಕರಕ್ಕೆ ಆಧಾರವಾದ ಪರ್ವತರಾಜ್ಯವಿಚಾರದಲ್ಲಿ ಉಪೇಕ್ಷಾವಂತನಾಗಿದ್ದೀಯೆಂದು ತಿಳಿದು ನಿನ್ನಂ ನೋಡಬಂದೆನು ಎನಲು;

ಅಯ್ಯಾ ಅಮಾತ್ಯಶ್ರೇಷ್ಠರೇ, ನಿಗ್ರಹಿಸಲೆಣಿಸಿದ ದೈವವು ವಂಚಕರಂ ಆಪ್ತರನ್ನಾಗಿ ಮಾಡಿ ತೋರಿಸಿ ಅವರ ಮುಖದಿಂ ಪುರುಷನಂ ಸಂಹಾರಗೊಳಿಸುವುದಲ್ಲದೆ ಪ್ರತ್ಯಕ್ಷವಾಗಿ ಬಂದು ನಿಗ್ರಹಿಸುವುದುಂಟೇ ? ಮೊದಲಿನಂತೆ ಎಂದು ಭಾವಿಸದೆ ಈಗ ನನ್ನಲ್ಲಿ ಪುತ್ರವಾತ್ಸಲ್ಯವನ್ನಿಟ್ಟು ತಾವು ಸಕಲಭಾಗದಲ್ಲೂ ನನಗೆ ಸಹಾಯಕರಾಗಿರಬೇಕು. ಬಹಳ ಕೃಪೆಯಿಂದ ಬಾಲಕನಂ ನೋಡಬೇಕೆಂದು ಬಂದುದರಿಂದ ನನ್ನ ಪಿತೃಕ್ಲೇಶವು ನಿವೃತ್ತಿಯಾಯಿತು. ವಿಶ್ರಮಿಸಿಕೊಳ್ಳಬಹುದೆಂದು ರಾಕ್ಷಸನಿಗೆ ಹೇಳಿ ಸಕಲ ಸಾಮಗ್ರೀಸಮೇತವಾಗಿ ರಾಜಯೋಗ್ಯವಾದ ಬೀಡಾರಮಂ ಮಾಡಿಸಿ ರಾಕ್ಷಸನಂ ಅಲ್ಲಿಗೆ ಕಳುಹಿಸಿ ಮಲಯಕೇತುವು ಮಜ್ಜನಗೃಹಾಭಿಮುಖನಾಗುತ್ತಿದ್ದನು.

ಆ ಮೂರನೆಯ ದಿವಸ ರಾಕ್ಷಸನಂ ಕರೆಯಕಳುಹಿಸುವ ಕುತೂಹಲದಿಂದ ಅಮಾತ್ಯರ ಸಮಯವೇನು ? ನೋಡಿ ಬಾರೆಂದು ಅರಸುಮಗನು ದೂತರಂ ಕಳುಹಿಸಲು; ಅವರು ಬಂದು ರಾಕ್ಷಸನಿಗೆ ಕೈಮುಗಿದು—ತಮ್ಮ ಸಮಯವೇನೆಂದು ತಿಳಿದು ಬರಹೇಳಿ ನಮ್ಮ ದೊರೆಯವರು ಕಳುಹಿಸಿದರು ಎನಲು; ಅದಂ ಕೇಳಿ ರಾಕ್ಷಸನು—ನಾವೇ ಬರುತ್ತಿದ್ದೇವೆ ಎಂದು ಎದ್ದು ಆಸ್ಥಾನಕ್ಕೆ ಹೋಗಿ

ಮಲಯಕೇತುವಂ ಕಂಡು ಉಚಿತಪ್ರಕಾರವಾಗಿ ಕುಳ್ಳಿರಲು; ಆ ರಾಜಸೂನು ವಿಂತೆಂದನು—

ಅಮಾತ್ಯಶ್ರೇಷ್ಠರೇ! ಪಾಟಲೀಪುರಮಂ ಬಿಟ್ಟು ಬಂದ ಬಳಿಕ ಇಷ್ಟು ದಿವಸ ನಿಮಗೆ ವಾಸವೆಲ್ಲಿ? ಮುಂದಣ ಕಾರ್ಯವು ನೆರವೇರುವುದಕ್ಕೆ ಏನು ಸಂಕಲ್ಪಿಸಿದ್ದೀರಿ? ಕರ್ತವ್ಯಕಾರ್ಯವು ಅವಶ್ಯಕವಾಗಿರುವಲ್ಲಿ ಲೋಕದವರಂತೆ ಸುಮ್ಮನಿರತಕ್ಕವರಲ್ಲವೆಂದು ಕೇಳಿರುವೆನು ಎನಲು;

ಅಯ್ಯಾ, ಕುಮಾರಕನೇ, ಎಂದು ರಾಕ್ಷಸನು ನಾಲ್ಕುದಿಕ್ಕುಗಳಂ ನೋಡಲು; ಅಲ್ಲಿದ್ದ ಜನರೆಲ್ಲರೂ ಏಕಾಂತ ಸಮಯವೆಂಬುದಾಗಿ ತಿಳಿದು ಅಲ್ಲಲ್ಲಿ ತೆರಳುತ್ತಿರಲು—ಅಯ್ಯಾ ಮಲಯಕೇತುವೇ, ಅವಶ್ಯಕರ್ತವ್ಯರಾಜಕಾರ್ಯವೇನು ನನಗಿದ್ದರೂ ಅದು ಪ್ರಭುವಿನ ಅವಲಂಬನ ಹೊರತು ಸಿದ್ಧಿಸದು. ಅದೇನಂದರೆ—ಚಾಣಕ್ಯನೆಂಬ ಬ್ರಾಹ್ಮಣನು ನಿಮ್ಮ ತಂದೆಗೆ ಬೋಧಿಸಿ ಕರಕೊಂಡು ಹೋಗಿ ಛದ್ಮನೆಯಿಂದ ನಂದರಂ ಸಂಹರಿಸಿ ತಾನು ವಾಗ್ದಾನಮಾಡಿದ ಅರ್ಧರಾಜ್ಯಮಂ ಕೊಡಬೇಕಲ್ಲಾ! ಎಂಬ ಲೋಭಬುದ್ಧಿಯಿಂದ ವಿಷಕನ್ಯೆಯಂ ಕಳುಹಿಸಿ ನಿನ್ನ ಜನಕನಾದ ಪರ್ವತರಾಜನಂ ಕೊಲ್ಲಿಸಿ ಈಗಲೂ ಆ ಅರ್ಧರಾಷ್ಟ್ರಮಂ ನಿನಗೂ ಕೊಡದೆ ನಿನ್ನಂ ಲಕ್ಷೀಕರಿಸದೆ ಇರುವುದರಿಂದ ದ್ರೋಹಿಗಳಾದವರಂ ದಂಡಿಸಬೇಕಲ್ಲದೆ ಪ್ರಭುವಾದವನು ಸುಮ್ಮನಿರಬಾರದು. ಅವರು ಮಾಡಿದ ದ್ರೋಹಕ್ಕೆ ಏನು ಮಾಡಿದರೂ ಮಾಡಬಹುದು. ನಂದರಾಜ್ಯದಲ್ಲಿ ನನಗೆ ಪ್ರಜಾಸಮ್ಮತಿ ಇರುವಂತೆ ಅನ್ಯರಿಗಿರಲಾರದು. ಪ್ರಮುಖರಾದ ನನ್ನ ಕಡೆಯವರು ಕಪಟದಿಂ ಚಂದ್ರಗುಪ್ತನಂ ಸಂಹರಿಸಲುದ್ಯುಕ್ತರಾಗಿ ಸಮಯಮಂ ನೋಡುತ್ತಿದ್ದಾರೆ. ಈ ವೇಳೆಯಲ್ಲಿ ನೀನು ಧೈರ್ಯಮಂ ಮಾಡಿ ಪುನಃ ಫೌಜನ್ನು ಜೊತೆಗೊಳಿಸಿಕೊಂಡು ಪಾಟಲೀಪುರಮಂ ಮುತ್ತಿದರೆ ನಿನ್ನ ಅವಲಂಬನದಿಂದ ಯಾವ ಉಪಾಯದಲ್ಲಿಯಾದರೂ ಚಂದ್ರಗುಪ್ತನಂ ವಧಿಸಿ ನಂದರಾಜ್ಯಾಧಿಪತ್ಯವನ್ನು ಸಹ ನಿನಗೆ ಉಂಟುಮಾಡಿ ಶತ್ರುಕ್ಷಯವಾಗುವುದರಿಂದ ಲೋಕಾಂತರಸ್ಥರಾದ ನಮ್ಮ ಪ್ರಭುಗಳಿಗೆ ಸಂತೋಷವನ್ನುಂಟುಮಾಡುವೆನಲ್ಲದೆ ನಾನು ಭೋಗಾಸಕ್ತನಾಗಿ ರಾಜ್ಯಮಂ ಸಾಧಿಸಬೇಕೆಂದು ಬಂದವನಲ್ಲ. ಸ್ವಾಮಿಭಕ್ತಿಯಂ ನೆರವೇರಿಸಿ ಕೀರ್ತಿಯನ್ನಾದರೂ ಸಂಪಾದಿಸುವೆನು ಎಂದು ರಾಕ್ಷಸನು ಮಲಯಕೇತುವಿಗೆ ಹೇಳುತ್ತಿರಲು;

ಅಯ್ಯಾ ಅಮಾತ್ಯಶ್ರೇಷ್ಠರೇ, ನಾನು ಬಯಸಿದರ್ಥವನ್ನೇ ನೀವು ಇಚ್ಛೈಸಿರುವಿರಿ. ನೀವು ಬೇಕೆಂದು ಸಾಹಸಮಂ ಮಾಡಿದರೆ ಚಂದ್ರಗುಪ್ತನಂ ವಧಿಸಿ

ರುವ ಚಾಣಕ್ಯನ ಕಪಟೋಪಾಯವೆಷ್ಟು ಮಾತ್ರವು ! ಚಂದ್ರಗುಪ್ತನಂ ಸಂಹರಿಸಿದಲ್ಲದೆ ಪಿತೃಕಾರ್ಯಗಳಂ ನೆರವೇರಿಸಿ ಗಂಧಮಾಲಿಕೆಗಳಂ ಸ್ವೀಕರಿಸುವುದಿಲ್ಲವೆಂಬ ವೀರವ್ರತ ಸಫಲವಾಗುವುದಕ್ಕಾಗಿ ನೀವು ಈ ಬಳಿಗೆ ಬಂದಿರಿ. ಮೊದಲಿನಂತೆ ವಾಹಿನಿಯಂ ಜೊತೆಗೊಳಿಸುವೆನು. ನನ್ನ ರಾಜ್ಯದ ಸರ್ವಾಧಿಕಾರಮಂ ಬುದ್ಧಿಸಂಪನ್ನರಾದ ನಿಮಗೆ ಕೊಟ್ಟು ನೀವು ಹೇಳಿದಂತೆ ನಡೆದುಕೊಳ್ಳುತ್ತಿರುವೆನು. ನನ್ನ ಪ್ರಜಾಪರಿವಾರಗಳಿಗೆ ನಮ್ಮ ತಂದೆಯಾದ ಪರ್ವತರಾಜನಿಗಿಂತಲೂ ಅಧಿಕವಾಗಿ ಸಂತೋಷಮಂ ಉಂಟುಮಾಡುತ್ತ ನಮ್ಮ ಶತ್ರುಗಳಂ ನಿಗ್ರಹಿಸಿ ನನ್ನಂ ಸಕಲರಾಜ್ಯಾಧಿಪತಿಯೆಂದೆನಿಸಿ ಇನ್ನೂ ಖ್ಯಾತಿವಂತರಾಗಿರಿ ಎಂದು ರಾಕ್ಷಸನಿಗೆ ಹೇಳಿ ಅವನಿಗೆ ಕರ್ಪೂರ ವೀಳೆಯವನಿತ್ತು ಬೀಡಾರಕ್ಕೆ ಕಳುಹಿಸುತ್ತಿದ್ದನು.

ಮತ್ತೊಂದು ದಿವಸ ಸಕಲವಾದ ಅಧಿಕಾರಿಗಳಿಂದಲೂ ಶೇಖರಮುಖ್ಯರಾದ ಸೇನಾಪತಿಗಳಿಂದಲೂ ಚಿತ್ರವರ್ಮಮುಖ್ಯರಾದ ಅರಸುಗಳಿಂದಲೂ ಶೋಭಿಸುತ್ತ ಇಂದ್ರಸಭೆಯಂತೆ ಬುದ್ಧಿ ಸಂಪನ್ನರಾದ ಮಂತ್ರಿಗಳಿಂದ ಯುಕ್ತವಾಗಿರುವ ರಾಜಾಸ್ಥಾನಕ್ಕೆ ಮಲಯಕೇತು ಬಂದು ಕುಳಿತು ರಾಕ್ಷಸನಂ ಕರೆಯಕಳುಹಿಸಿ ಕುಳ್ಳಿರಿಸಿಕೊಂಡು ಸಚಿವಾದ್ಯುದ್ಯೋಗಸ್ಥರಂ ಕುರಿತು—

ಅಯ್ಯಾ ಅಧಿಕಾರಿಗಳಿರಾ, ಕಾರ್ಯದಕ್ಷರೂ ಬುದ್ಧಿಸಂಪನ್ನರೂ ಆಗಿ ನಮ್ಮ ತಂದೆಗಳಿಗೆ ಮಿತ್ರಭಾವದಿಂದಿರುತ್ತಿದ್ದ ಅಮಾತ್ಯರಾಕ್ಷಸರು ನಮ್ಮ ಶ್ರೇಯೋಲಾಭಕ್ಕೆ ಅನುಕೂಲರಾಗಿರುವುದರಿಂದ ನಮ್ಮ ಬಳಿಯಣ ಸರ್ವಾಧಿಕಾರಮಂ ವಿಚಾರಿಸುವಂತೆ ನಾವು ಅವರಂ ಒಡಂಬಡಿಸಿ ಇದ್ದೇವೆಯಾಗಿ ಇವರು ಹೇಳಿದ ರೀತಿಗೆ ರಾಜಕಾರ್ಯಮಂ ಮಾಡುತ್ತಿರುವವರಾಗಿರಿ ಎಂದು ಅವರುಗಳಿಗೆ ನೇಮಿಸಿ ಶೇಖರ ಮುಖ್ಯರಾದ ಸೇನಾಪತಿಗಳನ್ನೂ ಚಿತ್ರವರ್ಮ ಮೊದಲಾದ ಅರಸುಗಳನ್ನೂ ಕುರಿತು—ಅಯ್ಯಾ ನಮಗೆ ಪರಮಪ್ರಿಯರಾದ ಅರಸುಗಳಿರಾ, ಈಗ ಪುನಃ ಪಾಟಲೀಪುರಕ್ಕೆ ರಾಜಕಾರ್ಯಾರ್ಥವಾಗಿ ಪಡೆಯು ತೆರಳಬೇಕಾಗಿದೆ. ಅಮಾತ್ಯ ರಾಕ್ಷಸರು ಹೇಳಿದ ಮೇರಿಗೆ ಮೊದಲಿನಂತೆ ನಿಮ್ಮ ಫೌಜುಗಳಂ ಸಜ್ಜು ಮಾಡಿಕೊಂಡು ಹೊರಡುವ ಸಮಯಕ್ಕೆ ನೀವು ಸಿದ್ಧವಾಗಿ ಕಾದಿರತಕ್ಕದು ಎಂದು ನೇಮಿಸಿ ಆಗ ಬೊಕ್ಕಸದಿಂದ ಅನರ್ಘ್ಯ ವಸ್ತ್ರಾಭರಣಂಗಳಂ ತರಿಸಿ ರಾಕ್ಷಸನ ಮುಂದೆ ಇರಿಸಲು ; ಆತನು ಅದಂ ನೋಡಿ—ಏನೈ ಕುಮಾರಕನೇ, ವಿಶೇಷ ಪ್ರಯತ್ನವು ಎನಲು ; ಸ್ವೀಕರಿಸಬೇಕೆಂದು ಮಲಯಕೇತುವು ಹೇಳಲು ;

ಅಯ್ಯಾ ಕುಮಾರಕನೇ, ಭೂಷಣ ಧಾರಣಕ್ಕೆ ಸಮಯ ಬೇರೆಯುಂಟು. ನೀನು ಕೊಟ್ಟ ಆಭರಣಮಂ ಧರಿಸಬೇಕಾದರೆ ನಿನಗೆ ಶತ್ರುವಾದ ಚಂದ್ರಗುಪ್ತನನ್ನು ನಿನ್ನಿಂದ ಸಂಹಾರಂಗೆಯ್ಸಿ, ಸಕಲ ನರಪತಿ ಮುಕುಟಮಣಿ ಪ್ರಭಾಸೀರಾಜಿತವಾದ ಪಾದ ಪ್ರಾಂತದಿಂ ಶೋಭಿಸುವ ನಂದರ ಸಿಂಹಾಸನದಲ್ಲಿ ನಿನ್ನಂ ಕುಳ್ಳರಿಸಿ ಸಕಲ ರಾಜ್ಯಾಭಿಷೇಕಮಂ ಮಾಡಿಸಿ ವಂದಿಮಾಗಧರು ಜಯ ಜಯವೆಂದು ಹೊಗಳುತ್ತಿರಲು ; ಸಕಲ ನೃಪಮಂಡಲವೂ ಕಪ್ಪಗಳನ್ನೊಪ್ಪಿಸುತ್ತಿರಲು; ಆಗ ನಾನು ಕೃತಕೃತ್ಯನಾಗಿ ನೀನು ಕೊಟ್ಟ ಭೂಷಣಮಂ ಸ್ವೀಕರಿಸುವೆನಲ್ಲದೆ ಪ್ರಭುಗಳಾದ ನಂದರನ್ನಗಲಿ ಅರಿಗಳಂ ನಿಗ್ರಹಿಸದೆ ತ್ಯಜಿಸಿದ ನೈಪಥ್ಯಂಗಳಂ ಯಾವ ಮಹೋತ್ಸವಕ್ಕೋಸುಗ ಅಂಗೀಕರಿಸುವೆನು ಎಂದು ರಾಕ್ಷಸನು ಹೇಳುತ್ತಿರಲು; ಮಲಯಕೇತುವು ನಿರ್ಬಂಧ ಪಡಿಸುವುದಕ್ಕೆ ಲಜ್ಜಿತನಾಗಿ ಸಮೀಪದಲ್ಲಿದ್ದ ಉಲೂಕನೆಂಬ ವೃದ್ಧಮಂತ್ರಿಯ ಮುಖಮಂ ನೋಡಲು ; ಪ್ರಭುವಿನ ಮನೋಗತಮಂ ತಿಳಿದು ಆ ಸಚಿವನಿಂತೆಂದನು—

ಸ್ವಾಮಿ ಅಮಾತ್ಯರೇ, ನೀವು ಮಲಯಕೇತುವಿನ ಆಸ್ಥಾನಮಂ ಪ್ರವೇಶಿಸಿದಾಗಲೇ ಶತ್ರುಸಂಹಾರವಾಗಿ ನಂದರಾಜ್ಯವು ಪರ್ವತರಾಜಪುತ್ರನ ವಶವಾಯಿತು ಎಂದು ಜನರೆಲ್ಲರೂ ತಿಳಿದೇ ಇದ್ದಾರೆ. ಕಾರ್ಯದಕ್ಷರಾದ ನೀವು ಸಂಕಲ್ಪಿಸಿದರ್ಥವು ಅನ್ಯಥಾ ಆಗುವುದಂಟೇ? ನೀವು ಆಭರಣರಹಿತರಾಗಿರುವುದಂ ನೋಡಿ ಪ್ರಭುವಿನ ಚಿತ್ತಕ್ಕೆ ಸಮಾಧಾನವಿಲ್ಲ. ತಾವು ಭೂಷಣಭೂಷಿತರಾಗಿದ್ದರೆ ಸಭೆಯೆಲ್ಲವೂ ಅಲಂಕೃತವಾಗಿ ತೋರುವುದು. ಪ್ರಭುವಿನ ಮನಸ್ಸಿಗೆ ಸಂತೋಷವನ್ನುಂಟು ಮಾಡುವುದೇ ನಿಶ್ಚಯವಾದರೆ ಪ್ರಥಮದಲ್ಲಿ ಶುಭಸೂಚಕವಾಗಿ ನೀವೇ ಧರಿಸಬೇಕೆಂದು ಪ್ರೀತಿಯಿಂದ ಕೊಟ್ಟ ತೊಡವುಗಳನ್ನು ಅಂಗೀಕರಿಸಬೇಕು. ನಿಮಗಿಂತಲೂ ಸಮಯೋಚಿತಜ್ಞರುಂಟೇ? ಎಂದು ಹೇಳಲು ; ಅದಕ್ಕೆ ರಾಕ್ಷಸನು ವಿಹಿತಮೆಂಬುದಾಗಿ ತಿಳಿದು—ನಿಮ್ಮ ಬಳಿಗೆ ಬಂದ ಬಳಿಕ ನಾನು ನಿಮ್ಮಾಧೀನನು. ನಿಮ್ಮ ಚಿತ್ತಕ್ಕೆ ಬಂದಂತಾಗಲಿ ಎಂದು ಹೇಳಲು ; ಆಗ ಶೇಖರಸೆದ್ದು ಬಂದು ರಾಕ್ಷಸನಿಗೆ ದಿವ್ಯಗಂಧಲೇಪನಮಂ ಮಾಡಿ ಪುಷ್ಪಮಾಲ್ಯಂಗಳಿಂದಲಂಕರಿಸಿ ವಜ್ರದ ತುರಾಯಿನಿಂದ ಶೋಭಿಸುವ ಉಷ್ಣೀಷಮಂ ಧರಿಸಿ ದಿವ್ಯ ಮುಕ್ತಾಹಾರಮಂ ಕಂಠಕ್ಕಲಂಕರಿಸಿ ರತ್ನ ಕಟಕಗಳಂ ತೊಡಿಸಿ ನವರತ್ನದಂಗುಲೀಯಕಗಳಂ ಬೆರಳುಗಳಿಗಲಂಕರಿಸಿ ದಿವ್ಯ ವಸ್ತ್ರಧಾರಣಮಂ ಮಾಡಿಸಿ ಕರ್ಪೂರ ವೀಳೆಯಮಂ ತಂದು ಇರಿಸಲು ; ಅದಂ

ಸ್ವೀಕರಿಸಿ ರಾಕ್ಷಸನೆದ್ದು ಬಂದು ಮಲಯಕೇತುವಿಗೆ—ಜಯಶೀಲನಾಗೆಂದು ಹರಸಿ ಕುಳ್ಳಿರಲು ; ಆ ರಾಜಪುತ್ರನು ರಾಕ್ಷಸನಂ ನೋಡಿ ಸಂತೋಷಪಡುತ್ತ—

ಅಯ್ಯಾ ಅಮಾತ್ಯರೇ, ಅಧಿಕಾರಿಗಳೆಲ್ಲರಿಗೂ ನೀವೇ ಅಪ್ಪಣೆ ಕೊಟ್ಟು ಕಳುಹಿಸಿರಿ ಎನಲು ; ರಾಕ್ಷಸನು ಕ್ರಮವಾಗಿ ಉದ್ಯೋಗಸ್ಥರೆಲ್ಲರಂ ತನ್ನ ಬಳಿಗೆ ಕರೆದು ಅವರಿಗೆ ಪ್ರಕೃತೋಚಿತಕಾರ್ಯಮಂ ನೇಮಿಸುತ್ತ ಶೇಖರ ಮುಖ್ಯರಾದ ಅರಸುಗಳಂ ಬರಿಸಿ ಎಲ್ಲರಿಗೂ ಉಚಿತಪ್ರಕಾರವಾಗಿ ಗಂಧ ಮಾಲ್ಯ ಕರ್ಪೂರ ವೀಳೆಯಂಗಳಿಂದುಪಚರಿಸುತ್ತಿರುವಲ್ಲಿ ಮಧ್ಯಾಹ್ನ ಸೂಚಕ ವಾದ ಶಂಖ ಭೇರೀ ವಾದ್ಯಂಗಳು ಭೋರಿಡಲು ; ಮಲಯಕೇತುವು ಆಸ್ಥಾನದಿಂ ದೆದ್ದು ಸ್ನೇಹಿತರಾದ ನೃಪತನಯರೊಡನೆ ಸಲ್ಲಾಪಮಂ ಗೆಯ್ಯುತ್ತ ರಾಜಭವ ನಮಂ ಪ್ರವೇಶಿಸಿದನು. ರಾಕ್ಷಸನು ಶೇಖರಾದಿಸೇನಾಪತಿಗಳೊಡಗೂಡಿ ತನ್ನ ಬೀಡಾರಕ್ಕೆ ಬಂದು ಅಂದು ಮೊದಲ್ಗೊಂಡು ಪರ್ವತರಾಜ್ಯದಲ್ಲಿ ಪೂರ್ವದಿಂ ನಡೆದು ಬಂದ ಆಯಕಟ್ಟುಗಳಂ ಚೆನ್ನಾಗಿ ವಿಚಾರಿಸಿ ತಿಳಿದು ಆ ದೇಶಮರ್ಯಾ ದಾನುಗುಣವಾಗಿಯೇ ನಡೆದು ಬರುವುದರಲ್ಲಿ ಪ್ರಜೆಗಳು ಕೊಡುವ ಈ ತೆರಿಗೆ ಯಿಂದ ಅವರಿಗೆ ಸೌಖ್ಯವೂ ರಾಜಭಂಡಾರಕ್ಕೆ ಆದಾಯವೂ ಕಾಣಿಸಲಿಲ್ಲ. ಇದಂ ತಪ್ಪಿಸಿ ಈ ರೀತಿಯಿಂದ ಪ್ರಜೆಗಳೆಲ್ಲರೂ ತೆತ್ತುಕೊಂಡು ಬರುವಂತೆ ಮಾಡಿದರೆ ಒಕ್ಕಲಿಗೆ ಸುಖಮುಂಟಾಗಿ ರಾಜಕೋಶವು ಸಮೃದ್ಧವಾಗುವುದು ಎಂದು ನಿಶ್ಚಯಿಸಿ ಆಸ್ಥಾನಕ್ಕೆ ಬಂದು ಕುಳಿತು ಕಟ್ಟುಕರಣಿಕರಂ ಕರಿಸಿ ತಾನು ಮಾಡಿದ ಆಯಕಟ್ಟುಗಳಂ ಬರೆಯಿಸಿ ರಾಯಸದವರಂ ಕರೆದು ಗಡಿಗಳ ಅಧಿಕಾರಿಗಳೆಲ್ಲರಿಗೂ ಆ ರೀತಿಯಲ್ಲಿ ನಡೆದುಕೊಳ್ಳುವಂತೆ ಉತ್ತರಗಳಂ ಬರೆಯಿಸಿ ಅವುಗಳಂ ಬೇಹಿನ ಚಾವಡಿಯ ಗೊತ್ತುಗಾರನ ವಶಕ್ಕೆ ಕೊಡಲು ; ಅವನು ಕಳುಹಿದ ನಿರೂಪದ ರೀತಿಗೆ ಗಡಿಗಳ ಅಧಿಕಾರಿಗಳನ್ನೂ ದೇಶದ ಪ್ರಜೆ ಗಳನ್ನೂ ಕರೆಯ ಕಳುಹಿಸಿ ಈ ರೀತಿಯಲ್ಲಿ ನೀವು ನಡೆದುಕೊಳ್ಳುವಂತೆ ಅಮಾ ತ್ಯರಾಕ್ಷಸರೆಂಬ ಸರ್ವಾಧಿಕಾರಿಗಳ ಅಪ್ಪಣೆಯಾಗಿದೆ ಎನಲು ; ಕೇಳಿ ಸಂತುಷ್ಟ ರಾದ ನಿವಾಸಿಗಳೆಲ್ಲರೂ ಅದೇ ಮೇರೆಗೆ ಹಣಗಳಂ ಕೊಡುತ್ತಿರಲು ; ಮೊದಲಿ ಗಿಂತ ಇಮ್ಮಡಿಯಾಗಿ ಪ್ರಜೆಗಳಿಂದ ದ್ರವ್ಯಗಳು ರಾಜಕೋಶಕ್ಕೆ ಬರುತ್ತಿರಲು; ಅದಂ ನೋಡಿ ಅಧಿಕಾರಿಗಳೆಲ್ಲರೂ ರಾಕ್ಷಸನು ಮಾಡುವ ರಾಜತಂತ್ರವಿಚಾರ ಕೌಶಲ್ಯವನ್ನೂ ಆತನ ಆಜ್ಞಾಶಕ್ತಿಯನ್ನೂ ಪದೇಪದೇ ಶ್ಲಾಘಿಸುತ್ತಿದ್ದರೆಂಬಲ್ಲಿಗೆ ಮುದ್ರಾಮಂಜೂಷವೆಂಬ ಗ್ರಂಥದಲ್ಲಿ ಮಲಯಕೇತುವಿಗೂ ರಾಕ್ಷಸನಿಗೂ ಸಖ್ಯವೆಂಬ ದ್ವಾದಶಾಶಯವು ಸಮಾಪ್ತವಾದುದು.

## ತ್ರಯೋದಶಾಶಯ ಪ್ರಾರಂಭವು.

---

### ರಾಕ್ಷಸಮುದ್ರಿಕಾಗ್ರಹಣವು.

ಅನಂತರದಲ್ಲಿ ಮೊದಲು ಪಾಟಲೀಪುರಮಂ ಬಿಟ್ಟು ಹೋಗಿರುವ ರಾಕ್ಷಸನ ವರ್ತಮಾನಮಂ ತಿಳಿಯಲೋಸುಗ ಚಾಣಕ್ಯರಿಂದ ನೇಮಿಸಲ್ಪಟ್ಟ ಗೂಢಚಾರರೊಳಗೆ ಸಮಿದ್ಧಕನೆಂಬ ಒಬ್ಬ ಚರನು ಅಲ್ಲಲ್ಲಿ ಅಮಾತ್ಯನಿರುವಿಕೆಯಂ ಹುಡುಕುತ್ತ ಎಲ್ಲಿಯೂ ಗೊತ್ತಾಗದಿರಲು ; ಕಡೆಗೆ ಪರ್ವತರಾಜನ ಪಟ್ಟಣಕ್ಕೆ ಬಂದು ಮಲಯಕೇತುವು ರಾಕ್ಷಸನಂ ಸನ್ಮಾನಗೊಳಿಸಿ ಆತನಿಗೆ ತನ್ನ ಬಳಿಯಣ ಸರ್ವಾಧಿಕಾರಮಂ ಕೊಟ್ಟು ಚಿತ್ರವರ್ಮ ಮುಖ್ಯರಾದ ಅರಸುಗಳಿಗೆ ಆತನ ಅಪ್ಪಣೆಯ ಮೇರೆಗೆ ನಡೆಯುವಂತೆ ಕಟ್ಟುಮಾಡಿ ಚಂದ್ರಗುಪ್ತನ ಮೇಲೆ ಕಾರ್ಯಭಾಗಕ್ಕೆ ಪಾಟಲೀಪುರಮಂ ಮುತ್ತುವುದಕ್ಕೋಸ್ಕರ ಮೊದಲಿನಂತೆ ಸೇನೆಗಳು ಸಿದ್ಧವಾಗಲೆಂದು ಆಸ್ಥಾನದಲ್ಲಿ ಹೇಳಿದ ವೃತ್ತಾಂತಮಂ ತಿಳಿದುಕೊಂಡು ಹಿಂದಿರುಗಿ ಕುಸುಮಪುರಕ್ಕೆ ಬಂದು ಚಾಣಕ್ಯರಂ ಕಂಡು ಕೈಮುಗಿದು—ಸ್ವಾಮಿಯವರ ಅಪ್ಪಣೆಯ ಮೇರೆಗೆ ರಾಕ್ಷಸನ ವೃತ್ತಾಂತಮಂ ತಿಳಿಯುವುದಕ್ಕೆ ಹೋಗಿದ್ದ ಸಮಿದ್ಧಕನೆಂಬ ಗೂಢಪುರುಷನು ನಾನು. ಅಪ್ಪಣೆಯಾದರೆ ವಿಜ್ಞಾಪಿಸುವೆನು ಎನಲು; ಆಗ ಚಾಣಕ್ಯನು ರಹಸ್ಯದಲ್ಲಿ ಕುಳಿತು ಮತ್ತೇನಯ್ಯಾ? ಎನಲು; ಆ ಸಮಿದ್ಧಕನು ತಾನು ತಿಳಿದು ಬಂದಿದ್ದ ರಾಕ್ಷಸನ ವರ್ತಮಾನವೆಲ್ಲಮಂ ಉಸುರಲು; ಅದಂ ಕೇಳಿ ಚಾಣಕ್ಯನು ತನ್ನ ಮನಸ್ಸಿನಲ್ಲಿ—ಈ ರಾಕ್ಷಸನು ತಾನು ಚಂದ್ರಗುಪ್ತನಿಗೆ ಮಾಡಿದ ಕಪಟೋಪಾಯಂಗಳೆಲ್ಲವೂ ಭಗ್ನವಾಗುತ್ತಿರಲು ; ಮತ್ತೂ ದ್ವೇಷಮಂ ಸಾಧಿಸುವೆನೆಂದು ಪರ್ವತರಾಜಸೂನುವನ್ನಾಶ್ರಯಿಸಿ ಅವನಂ ಒಡಂಬಡಿಸಿ ಮೌರ್ಯಪುತ್ರನ ಮೇಲೆ ದಂಡೆತ್ತಿ ಬರುತ್ತಿದ್ದಾನೆ. ಹಾಗಾದರೂ ನಾನು ಅವನ ಯತ್ನಮಂ ಸಾಗಿಸುವವನಲ್ಲ. ಈ ಭಾಗದಲ್ಲಿ ಇನ್ನೂ ಮಾಡಬೇಕಾದ ವ್ಯವಸಾಯಗಳೆಲ್ಲಮಂ ಮಾಡಲಿ. ಪಾಟಲೀಪುರದ ಸಮೀಪಕ್ಕೆ ಬರಲಿ. ಮಲಯಕೇತುವಂ ನಿರಾಕರಿಸಿ ಅರಣ್ಯದಲ್ಲಿರುವ ಗಜಮಂ ದಾಪಿನಾನೆಗಳಿಂದ ವಂಚನೆಗೆಯ್ದು ಹಿಡಿತಂದು ಪಟ್ಟದಾನೆಯಂ ಮಾಡುವಂತೆ ನಾನು ವಿರಚಿಸುವ ಉಪಾಯಕೌಶಲ್ಯವು ಅವನಂ ತಾನಾಗಿ ಇಲ್ಲಿಗೆ ಬರುವಂತೆ ಮಾಡೀತು ಎಂದು ನಿಶ್ಚಯಿಸಿ ಪುನಃ ಅದೇ ಗುಪ್ತಚರನಂ ಕುರಿತು—

ಎಲೈ ಸಮಿದ್ಧಕನೇ, ನೀನು ಆ ರಾಕ್ಷಸನಿಗೆ ತಿಳಿಯದಂತೆ ಅಲ್ಲಿಯೇ ಇದ್ದು ಕೊಂಡು ಆ ಬಳಿಯಲ್ಲಿ ನಡೆದ ವಿಶೇಷವರ್ತಮಾನಗಳನ್ನು ಅರಿತು ಬಂದು ತಿಳುಹಿ ಸುವವನಾಗು ಎಂದು ಹೇಳಿ ತಿರಿಗಿ ಅವನಂ ಅಲ್ಲಿಗೇ ಕಳುಹಿಸಿ ಆಸ್ಥಾನಕ್ಕೈತಂದು ಕುಳ್ಳಿರಲು ; ಆ ಸಮಯದಲ್ಲಿ ದೂತರು ಬಂದು ಚಾಣಕ್ಯರಿಗೆ ಕೈಮುಗಿದು—

ಸ್ವಾಮಿಾ, ಮೊದಲು ಅಪ್ಪಣೆಯಾಗಿದ್ದ ಮೇರೆಗೆ ಸೇನೆಗಳೆಲ್ಲವೂ ಗಣಿತಿ ಯಾಗಿ ಇಂದಿನವರೆಗೆ ಸಂಬಳಗಳು ಸಂದು ಇವೆ. ಎಂದನಂತೆ ಬಾಗುರಾಯಣಾದಿ ಸೇನಾನಾಯಕರು ವೇತನಗಳಂ ಪರಿವಾರಜನಕ್ಕೆ ಕೊಡಿಸುವುದಕ್ಕೆ ಈ ವರೆಗೂ ಅವರೊಬ್ಬರೂ ಬಂದುದಿಲ್ಲ. ಅವರ ಜೀತಗಳು ಕಟ್ಟಿ ಇರಿಸಲ್ಪಟ್ಟಿವೆ. ಇದಕ್ಕೆ ಅಪ್ಪಣೆ ಏನು ? ಎನಲು ; ಅದಂ ಕೇಳಿ ಚಾಣಕ್ಯನು ಕೋಪಿಸಿಕೊಂಡವನಂತೆ ಕಪಟಕ್ರೋಧಮಂ ನಟಿಸಿ ಅಲ್ಲಿರುವ ಅಧಿಕಾರಿಗಳ ಮುಖಮಂ ನೋಡಿ—

ಎಲೈ ಉದ್ಯೋಗಸ್ಥರುಗಳಿರಾ, ಈ ದೂತರು ಹೇಳಿದ ಮಾತುಗಳಂ ಕೇಳಿದಿರಾ? ಈ ಪುರವು ಚಂದ್ರಗುಪ್ತನ ಸ್ವಾಧೀನವಾದುದು ಮೊದಲು ಗೊಂಡು ಇಂದಿನವರೆಗೂ ಬಾಗುರಾಯಣ ಭದ್ರಭಟಾದಿ ಚಮೂಪತಿಗಳು ಬಂದು ರಾಜದರ್ಶನಮಂ ಮಾಡಿದುದಿಲ್ಲ. ಅವರೆಲ್ಲರೂ ಮನಸ್ಸಿನಲ್ಲಿ ಏನೋ ಯೋಚಿಸಿಕೊಂಡು ನಮ್ಮನ್ನು ಲಕ್ಷ್ಯೀಕರಿಸದೆ ಇದ್ದಾರೆ. ಚಂದ್ರಗುಪ್ತನ ಅಭ್ಯು ದಯವು ಇವರಿಗೆ ಸಮ್ಮತವಿಲ್ಲದಂತೆ ತೋರುತ್ತಿದೆ. ಮತ್ತರಾದ ಈ ಜನರಿಂದ ಆಗುವ ಕಾರ್ಯಭಾಗವೇನಿದ್ದಾಗ್ಯೂ ನಾವು ನೋಡಿಕೊಳ್ಳುತ್ತಿದ್ದೇವೆ. ಈ ಸೇನಾಪತಿಗಳ ಅಧಿಕಾರಗಳನ್ನು ತೆಗೆದು ಬಿಡಿರಿ ಎಂದು ಪಡೆಯ ಕರಣಿಕರಿಗೆ ಆಜ್ಞಾಪಿಸಿ ಆಗ ದೂತರ ಮುಖಮಂ ನೋಡಿ—ಎಲೈ ಭೃತ್ಯರುಗಳಿರಾ, ನೀವು ಬಾಗುರಾಯಣಾದಿಗಳ ಬಳಿಗೆ ಹೋಗಿ ಚಂದ್ರಗುಪ್ತನ ಅಪ್ಪಣೆಯಾಗಿದೆ. ನೀವು ಇಲ್ಲಿ ಇರಕೆಲಸವಿಲ್ಲ. ಈ ಕ್ಷಣವೇ ಈ ದೇಶಮಂ ಬಿಟ್ಟು ಹೋಗ ತಕ್ಕುದು. ಇಲ್ಲದಿದ್ದರೆ ರಾಜಕೋಪಕ್ಕೆ ಪಾತ್ರರಾದೀರೆಂದು ಹೇಳಿ ಬನ್ನಿರಿ ಎಂಬು ದಾಗಿ ನೇಮಿಸಿ ಚಾಣಕ್ಯನು ತನ್ನ ಮನೆಗೆ ಬಂದು ಸಿದ್ಧಾರ್ಥಕನಂ ಕರೆದು ಈ ರೀತಿಯಲ್ಲಿ ಮಾಡೆಂದು ಅವನ ಕಿವಿಯಲ್ಲಿ ಸೂಚಿಸಿ ಕಳುಹಿಸಲು ; ಅದೇ ರೀತಿಗೆ ಅವನು ಹೋಗಿ ಬೊಕ್ಕಸದ ಅಧಿಕಾರಿಯಾದ ರುಕ್ಮನಂ ಕಂಡು ಚಾಣ ಕ್ಯರು ತನಗೆ ರಹಸ್ಯವಾಗಿ ಹೇಳಿದ ಮೇರೆಗೆ ಹನ್ನೆರು ಲಕ್ಷ ಮೊಹರಿಗಳನ್ನು ಭದ್ರಭಟಾದಿಸೇನಾನಾಯಕರಿಗೆ ಕೊಡುವಂತೆ ದೇಶಾಂತರಸ್ಥರಾದ ವರ್ತಕರಿಗೆ ಕೋಶರಕ್ಷಕನ ಕೈಯ್ಯಿಂದ ಹುಂಡಿಯ ಕಾಗದಮಂ ಬರೆಸಿ ಅದಂ ತೆಗೆದು

ಕೊಂಡು ಗುಪ್ತವಾಗಿ ಭದ್ರಭಟಾದಿಗಳ ಸಮೀಪಕ್ಕೆ ಹೋಗಿ ಚಾಣಕ್ಯರು ಉಸುರಿದ ರಹಸ್ಯವಾಕ್ಯಮಂ ತಿಳಿಸಿ ಆ ಹುಂಡಿಯ ಕಾಗದಮಂ ಅವರ ಕೈಯ್ಯಲ್ಲಿ ಕೊಟ್ಟು ಅವರು ಶಿರಸಾವಹಿಸಿ ಈ ಕೆಲಸಮಂ ನಿರ್ವಹಿಸುತ್ತಿದ್ದೇವೆ ಎಂದು ಹೇಳಿ ಸ್ವಹಸ್ತಾಕ್ಷರದಿಂದ ಚಂದ್ರಗುಪ್ತನ ಸನ್ನಿಧಿಗೆ ಬರೆದು ಕೊಟ್ಟ ಕಾಗದಮಂ ಗ್ರಹಿಸಿ—ಅಯ್ಯಾ ಭದ್ರಭಟಾದಿ ಸೇನಾನಾಯಕರುಗಳಿರಾ, ನೀವು ಹೋಗಿ ಮಲಯಕೇತುವಂ ಸೇರಿ ಅಲ್ಲಿರುವ ಬಾಗುರಾಯಣಂ ಹೇಳಿದಂತೆ ಬಳಸಮೇತರಾಗಿ ಇದ್ದುಕೊಂಡು ಪ್ರಕೃತ ಬಂದಲ್ಲಿ ಚಂದ್ರಗುಪ್ತನ ಕಾರ್ಯದೊಳ್ ಅನುಕೂಲರಾಗಿರತಕ್ಕದು. ಈಗಲೇ ಪ್ರಸ್ಥಾನಮಂ ಮಾಡಿರೆಂದು ಅವರಿಗೆ ಹೇಳಿ ರಹಸ್ಯವಾಗಿ ಚಾಣಕ್ಯರ ಬಳಿಗೆ ಬಂದು ಆ ಚಕ್ರರಕ್ಷಕರು ಚಂದ್ರಗುಪ್ತನಿಗೆ ಬರೆದುಕೊಟ್ಟ ಕೈಕಾಗದಮಂ ಕೊಡಲು ; ಆಗ ಆಸ್ಥಾನದಲ್ಲಿ ನೇಮಿಸಿದ್ದ ದೂತರೈತಂದು ಬಾಗುರಾಯಣಾದಿಗಳ ಮನೆಯ ಬಾಗಿಲಿನಲ್ಲಿ ನಿಂತು ಚಂದ್ರಗುಪ್ತಮಹಾರಾಜರ ಅಪ್ಪಣೆಯಾಗಿದೆ. ನೀವೆಲ್ಲರೂ ಈಗಲೇ ಈ ದೇಶವಂ ಬಿಟ್ಟು ಹೋಗತಕ್ಕದು. ಅಲ್ಲದಿದ್ದರೆ ರಾಜಾಗ್ರಹಕ್ಕೆ ಪಾತ್ರರಾದೀರೆಂದು ಭದ್ರಭಟಾದಿಗಳಂ ಕುರಿತು ಹೇಳುತ್ತಿರಲು ; ಅವರು ರಾಜಾಪರಾಧವಂ ಮಾಡಿದವರಂತೆ ಭೀತರಾಗುತ್ತ ತಮಗೆ ಬೇಕಾದಷ್ಟು ಸೇನೆಗಳಂ ಕರೆದುಕೊಂಡು ಪಾಟಲೀಪುರವಂ ಬಿಟ್ಟು ಹೊರಟು ಕೆಲವು ದಿನಗಳ ಮೇಲೆ ಪರ್ವತರಾಜ್ಯವಂ ಸೇರಿ ಮತ್ತೊಂದು ದಿವಸದಲ್ಲಿ ಬಾಗುರಾಯಣ ಶೇಖರರಿಗೆ ಹೇಳಿಕಳುಹಿಸಿ ಅವರ ಸಮ್ಮತಿಯಿಂದ ಆಸ್ಥಾನದಲ್ಲಿ ಕುಳಿತಿದ್ದ ಮಲಯಕೇತುವಂ ಕಂಡು ಕೈಗಾಣಿಕೆಗಳಂ ಕೊಟ್ಟು ಮುಕುಳಿತ ಹಸ್ತರಾಗಿ ವಿಜ್ಞಾಪಿಸುತ್ತಿದ್ದರು.

ಮಹಾರಾಜಪುತ್ರರಾದ ಮಲಯಕೇತುಭೂಪಾಲರೇ, ನಾವು ನಂದವಾಹಿನಿಯ ನಾಯಕರು. ಭದ್ರಭಟಾದಿಗಳೆಂಬವರು. ಪಾಟಲೀಪುರವು ಚಂದ್ರಗುಪ್ತನ ಅಧೀನವಾಗಲು ; ಬಂದೊಂದು ಉಪಾಧಿಯಿಂದ ನಾವು ಆ ದೊರೆಯಂ ಕಾಣಿಸಿಕೊಳ್ಳುವುದಕ್ಕೆ ಅವಕಾಶವಿಲ್ಲದೆ ನಮ್ಮ ಕಡೆಯುವರಂ ಸಲಾಮಿಗೆ ಕಳುಹಿಸಿ ಇನ್ನೊಂದು ವೇಳೆ ಕಾಣಬಹುದೆಂದು ಕಾರ್ಯಗೌರವದಿಂದ ನಾವು ಹೋಗದೇ ಇರಲು ; ಚಾಣಕ್ಯರು—ಕೆಲವು ದಿನಗಳ ಮೇಲೆ ಬಾಗುರಾಯಣ ಮುಖ್ಯರಾದ ಚಮೂಪತಿಗಳು ಇನ್ನೂ ವಂದನೆಗೆ ಬಾರದೆ ಇರುವುದಕ್ಕೆ ಕಾರಣವೇನು ? ಎಂದು ದೂತರಂ ಕೇಳಲು; ಆ ಭೃತ್ಯರು ತಿಳಿದು ಬಂದು—ಬುದ್ಧೀ, ಬಾಗುರಾಯಣನು ಪರ್ವತರಾಜ್ಯಕ್ಕೆ ಅಂದೇ ಹೊರಟು ಹೋದನಂತೆ ಎಂದರು. ಹಾಗಾ

ವರೆ ಮಲಯಕೇತುವನ್ನಾಶ್ರಯಿಸಿ ಇನ್ನೂ ಅಧಿಕನಾಗಬೇಕೆಂದು ಹೋಗಿರ
ಬಹುದು ಅದಂತಿರಲಿ. ಭದ್ರಭಟನಂ ಕರತನ್ನಿರಿ ಎನಲು; ಮೂರ್ಖನಾದ ಭಾವ
ಮೈದುನನಿಗೆ ಕೊಟ್ಟಿದ್ದ ತಂಗಿಯ ಮುಖವಂ ನೋಡುವುದಕ್ಕೆ ಅವಕಾಶ
ವಿಲ್ಲದೆ ಹನ್ನೆರಡು ವರುಷ ಕಳೆದು ಮುಖತೋರೆನು ಹೋಗುವುದಲ್ಲಾ ಎಂಬ
ವ್ಯಸನದಿಂದ ಭದ್ರಭಟನು ಹೋಗಿ ಎಂಟು ದಿವಸಗಳಾದುವು. ಬರುವುದಕ್ಕೆ
ಇನ್ನೂ ನಾಲ್ಕಾರು ದಿವಸಗಳಾಗಬೇಕು ಎಂದರು. ಹಾಗಾದರೆ ಡಿಂಗಿರಾತನನ್ನಾದರೂ
ಕರತನ್ನಿರಿ ಎಂದು ಹೇಳಿದ ಚಾಣಕ್ಯನ ಮಾತಂ ಕೇಳಿ ಸೇವಕರು ಹೋಗಿ ತಿಳಿದು
ಬಂದು—ಬುದ್ಧೀ, ರಾಜೇಕವು ಆದುದರಿಂದ ಪಂಜೇನ ಕಳ್ಳರು ಕೀಟಕ ದೇಶವಂ
ಹೊಕ್ಕು ರಾತ್ರಿವೇಳೆಯಲ್ಲಿ ಕೆಲವು ಹಳ್ಳಿಗಳಂ ಕೊಳ್ಳೆ ಮಾಡಿ ಡಿಂಗಿರಾತನ
ಮುಖಾಶೀಗ್ರಾಮವನ್ನೂ ಸಹ ಸೂರೆಗೆಯ್ದು ಅದಕ್ಕೆ ಬೆಂಕಿ ಹೊತ್ತಿಸಿದುದ
ರಿಂದ ಅಲ್ಲಿನ ಪ್ರಜೆಗಳು ಓಡಿ ಹೋಗಲು; ಆ ಚೋರರಂ ನಿಗ್ರಹಿಸಿ ರೈತರಂ
ಸಮಾಧಾನಪಡಿಸುವುದಕ್ಕೆ ಆತನು ಹೋಗಿದ್ದಾನೆ ಎಂದರು. ಹಾಗಾದರೆ ಬಲಗು
ಪ್ತನಂ ಕರತನ್ನಿರಿ ಎಂದುದಕ್ಕೆ ಆಳುಗಳು ಹೋಗಿ ಅರಿತು ಬಂದು—ಬುದ್ಧೀ,
ಪರ್ವತರಾಜನ ಸೇನೆಗೂ ನಮ್ಮ ಪಡೆಗೂ ಯುದ್ಧವಾಗುವಾಗ ದಂಡಿನಿಂದ ತಪ್ಪಿಸಿ
ಕೊಂಡು ಹೋದ ತನ್ನ ಕುಮಾರಕನ ವಾರ್ತೆ ತಿಳಿಯದೆ ಏಕಪುತ್ರಯುಕ್ತನಾದ
ಬಲಗುಪ್ತನು ತನ್ನ ಮಗನು ಅತಂತ್ರವಾದರೆ ಈ ಸಂಸಾರವು ತನಗೇಕೆನ್ನುತ್ತ
ಅವನಂ ಹುಡುಕುವುದಕ್ಕೆ ಆತನೇ ಹೋಗಿದ್ದಾನಂತೆ ಎಂದರು. ಆದರೆ ವಿಜಯ
ವರ್ಮನಂ ಕರತನ್ನಿರಿ ಎನಲು; ದಾಸರು ಹೋಗಿ ತಿಳಿದು ಬಂದು—ಬುದ್ಧೀ, ಆತನು
ರೋಗೋಪದ್ರವದಿಂದ ತಪ್ತನಾಗಿರುವುದರಿಂದ ಆರೋಗ್ಯಸ್ನಾನವಾದ ಬಳಿಕ
ಪ್ರಭುಗಳ ಸಮೀಪಕ್ಕೆ ಬರುತ್ತಲಿದ್ದೇನೆಂದು ಆತನು ಹೇಳುತ್ತಿದ್ದಾನೆ ಎಂದರು.
ಪುರುಷದತ್ತನಂ ಕರತನ್ನಿರಿ ಎಂದುದಕ್ಕೆ ಅನುಚರರು ಹೋಗಿ ಕೇಳಿ ಬಂದು—
ತನಗೆ ಸಂಭವಿಸಿರುವ ಕ್ಷಯಸೂಚಕ ನಿವೃತ್ತಿಯಾದ ಬಳಿಕ ಪ್ರಭುಗಳಂ
ಕಾಣುವುದಕ್ಕೆ ಬರುತ್ತಲಿದ್ದೇನೆಂದು ಪುರುಷದತ್ತನು ವಿಜ್ಞಾಪಿಸುತ್ತಾನೆ ಎಂದರು.
ಬಳ್ಳಿಯದು ರಾಜಸೇನನಂ ಕರತನ್ನಿರಿ ಎಂದು ಹೇಳುತ್ತಲೇ ದೂತರು ಹೋಗಿ
ತಿಳಿದು ಬಂದು—ಸ್ವಾಮಿ, ರಾಜಸೇನನ ಮಾತೃವಿಗೆ ಪ್ರಾಣೋತ್ಕ್ರಮಣಸಮಯ
ವಾದುದರಿಂದ ಬ್ರಾಹ್ಮಣರ ಮುಖದಿಂ ಸರ್ವಪ್ರಾಯಶ್ಚಿತ್ತಮಂ ಮಾಡಿಸುತ್ತಿದ್ದಾನೆ.
ಈ ಯರ್ಥಮಂ ಪ್ರಭುಗಳ ಸನ್ನಿಧಿಯಲ್ಲಿ ಅರಿಕೆ ಮಾಡಿರೆಂದು ಹೇಳಿದನು ಎಂದರು.
ಲೋಹಿತಾಕ್ಷನಂ ಕರತನ್ನಿರಿ ಎನಲು; ಅವರು ಆತನಂ ಕಂಡು ಬಂದು—ಬುದ್ಧೀ,

ಲೋಹಿತಾಕ್ಷನು—ಉಳಿದ ದಳಪತಿಗಳೊಬ್ಬರೂ ಪ್ರಭುಗಳ ಪ್ರಥಮದರ್ಶನಕ್ಕೆ
ಬರುವುದಕ್ಕಿಲ್ಲದ ಬಳಿಕ ನಾನೊಬ್ಬನೇ ಬಂದು ಕಾಣಿಸಿಕೊಳ್ಳುವ ರೀತಿ ಎಂತಿ
ರುವುದೋ ! ನಮಗೆ ಯಜಮಾನನಾದ ಭದ್ರಭಟನು ಇಂದು ನಾಳೆ ಬರುವವನಾ
ಗಿದ್ದಾನೆ. ಅವನ ಸಂಗಡವೇ ನಾನೂ ಬಂದು ಪ್ರಭುಗಳಂ ಕಾಣಿಸಿಕೊಳ್ಳುತ್ತೇನೆ.
ವಿಶೇಷ ಅರಿಕೆ ಮಾಡುವುದಕ್ಕೆ ಶಕ್ತನಲ್ಲ. ಹಾಗಲ್ಲವೆಂದರೆ ಸಿದ್ಧವಾಗಿದ್ದೇನೆ
ಎಂದು ಸನ್ನಿಧಿಗೆ ವಿಜ್ಞಾಪಿಸಿಕೊಳ್ಳುತ್ತಾನೆ ಎನಲು; ಆ ದೂತರು ಹೇಳುವ ವಾಕ್ಯ
ಮಂ ಚಾಣಕ್ಯನು ಕೇಳಿ ಈ ಭದ್ರಭಟಾದಿಗಳು ಪುರಮಂ ಬಿಟ್ಟು ಹೋಗುವ
ರಾಕ್ಷಸನು ಎರಚಿದ ಮಂಕುಬೂದಿಗೆ ಮರುಳಾಗಿ ನಮ್ಮಂ ಲಕ್ಷ್ಯೀಕರಿಸದೆ
ಮತ್ತಾವ ದೇಶಾಧಿಪತಿಯಲ್ಲೋ ಮನಸ್ಸುಮಾಡಿ ವ್ಯಾಜಾಂತರದಿಂದ ಮುಖಮಂ
ತಪ್ಪಿಸಿಕೊಂಡಿದ್ದಾರೆ. ಇವರಿಂದ ಆಗುವುದಂ ನೋಡಿಕೊಳ್ಳುವೆನು. ಈ ಸೈನ್ಯ
ನಾಯಕರ ಕೈಕೆಳಗಣ ಸರದಾರರಂ ಕರೆದುಕೊಂಡು ಬನ್ನಿರಿ ಎಂದು ದೂತರಿಗೆ
ನೇಮಿಸಲು; ಅವರು—ನಮ್ಮ ಬಳಿಯಣ ಲಕ್ಷಲಕ್ಷ ಸೇನೆಗಳಿಗೆ ಅಧಿಪತಿಗಳಾಗಿ
ನಾವು ನೇಮಿಸಿದಂತೆ ಕೇಳುತ್ತಿರುವ ಬಿಮ್ಮನೋಜಿ ವಿಜಯಸಿಂಗು ಯಶವಂತ
ರಾವ್ ತುಲುಜಾಖಂಡು ಪತ್ತೇಬಹದರ್ ಮುಕುಂದಗೋಸಾವಿ ಹಿಮ್ಮತ್‌ಖಾನ್
ಪುರುಷೋತ್ತಮಲಾಲಾ ಸಿಂಧೂಕಾಕರ ಮಹತಾಪ್‌ಜಂಗ್ ಕಿಶೋರ್ ಘೋರ
ಪಡೆ ರಾವಮಾಜಿವಾಘ್ಯಾರ್ ಎಂಬ ಸರದಾರರನ್ನೂ ಪಂಪೇರ್ನ್‌ಬಾಬು ಅಲ್ಲೀನ
ಬಾಬರೆಂಬ ಅಕ್ಷೋಹಿಣೀಪತಿಗಳನ್ನೂ ಕರತಂದು ನಿಲ್ಲಿಸಿದರು. ಅವರಂ ನೋಡಿ
ಚಾಣಕ್ಯನು—ಎಲೈ ಸರದಾರರುಗಳಿರಾ, ಭದ್ರಭಟಾದಿಗಳ ಕಡೆಯಿಂದ ತೆಗೆದು
ಮತ್ತೊಂದು ಕಡೆಯಲ್ಲಿ ನಿಮಗೆಲ್ಲರಿಗೂ ಉದ್ಯೋಗಮಂ ನೇಮಿಸಿ ಅಧಿಕ
ಸನ್ಮಾನಗಳಂ ಮಾಡುತ್ತಿದ್ದೇವೆ. ನೀವು ಭದ್ರಭಟಾದಿಗಳಂ ಬಿಟ್ಟು ನಿಮ್ಮ
ನಿಮ್ಮ ಬಳಿಯಣ ಫೌಜುಗಳಂ ಕರೆದುಕೊಂಡು ಬನ್ನಿರಿ ಎನಲು; ಆ ಮಾತಿಗೆ ಆ
ಸರದಾರರು—ಸ್ವಾಮಿಾ, ಬಹುಕಾಲದಿಂದ ನಮ್ಮಂ ರಕ್ಷಿಸಿ ವ್ಯಸನಾಭ್ಯುದಯ
ಗಳಲ್ಲಿ ನಮಗೆ ಅಭಯಮಂ ಕೊಟ್ಟು ತಮ್ಮ ವಾಕ್ಯಗಳಂ ಮಿಾರದಂತೆ ನಮ್ಮ
ಆಯುಧಂಗಳಂ ಮುಟ್ಟಿಸಿಕೊಂಡಿರುವ ಭದ್ರಭಟಾದಿಗಳನ್ನಗಲಿ ನಾವು ಬರುವು
ದಿಲ್ಲ. ಅವರಿಗೆ ಮಾಡಿದ ಸನ್ಮಾನವೇ ನಮ್ಮೆಲ್ಲರದು ಎಂದು ಹೇಳಿಕೊಂಡು
ದಕ್ಕೆ ಚಾಣಕ್ಯನು—ಇವರೆಲ್ಲರೂ ಕೃತಸಂಕೇತರಾಗಿ ತಮ್ಮಿಂದಲ್ಲದೆ ರಾಜ
ಕಾರ್ಯನಿರ್ವಾಹವಾಗದೆಂಬ ಗರ್ವದಿಂದ ಯಾವ ತೆರದಲ್ಲಿಯೂ ನಮ್ಮನ್ನೇ
ಬಡಂಬಡಿಸುವರು. ದುರಹಂಕಾರಿಗಳಾಗಿ ಮತ್ತರಾದ ಈ ಭದ್ರಭಟಾದಿಗಳ

ಉದ್ಯೋಗಂಗಳಂ ತೆಗೆಯಿರಿ ಎಂದು ಕರಣಿಕರಿಗೆ ನೇಮಿಸಿ ತನ್ನ ಬಳಿಯಣ ಭೃತ್ಯರಂ ಕರೆದು—ಎಲೈ ದೂತರುಗಳಿರಾ, ಈ ಭದ್ರಭಟಾದಿಗಳನ್ನು ಈ ದೇಶ ಪುರಗಳಲ್ಲಿ ಇರಲೀಸದೆ ಹೊರಡಿಸಿ ಬಂದು ಆ ಬಳಿಕ ಭದ್ರಭಟಾದಿಗಳು ಪ್ರಭುವಂ ಲಕ್ಷೀಕರಿಸದೆ ಪುಂಡುಪಾಳ್ಯಗಾರರಾಗಿ ಇದ್ದುದರಿಂದ ಅವರಂ ಈ ರಾಷ್ಟ್ರದಿಂ ಹೊರಡಿಸಿದ್ದೇವೆ ಎಂದು ಡಂಗುರವಂ ಹಾಕಿ ಸಾರಿಸಿ ಬಿಡಿರಿ ಎನಲು; ಆ ಚಾಣಕ್ಯಂ ಹೇಳಿದ ರೀತಿಗೆ ಭಟರು ನಾವಿದ್ದ ಬಳಿಗೆ ಬಂದು ಈ ಕ್ಷಣವೇ ನೀವು ಈ ಸೀಮೆಯಂ ಬಿಟ್ಟು ಹೋಗಿರಿ ಎಂದು ನಿರ್ಬಂಧಪಡಿಸಿ ಹೊರಡಿಸಿಬಿಟ್ಟರು. ಹೀಗೆ ನಮ್ಮ ಕಾರ್ಯಗೌರವವು ಸತ್ಯವೋ ಅಲ್ಲವೋ ಎಂದು ವಿಚಾರಿಸದೆ ಅಪಮಾನವಾಕ್ಯಪೂರ್ವಕವಾಗಿ ಚಾಣಕ್ಯನು ನಮ್ಮಂ ಹೊರಡಿಸುವವನಾದರೂ ಪುನಃ ಆತನ ಮೇಲೆ ಪ್ರತಿಭಟಿಸಿದರೆ ಭದ್ರಭಟಾದಿಗಳು ತಾವೇ ಪ್ರಭುತ್ವವನ್ನಪೇಕ್ಷಿಸಿ ದುಡುಕಿದರು ಎಂಬ ಲೋಕಾಪವಾದಕ್ಕೆ ಭೀತರಾಗಿ ಅನ್ಯದೇಶಾಧಿಪತಿಗಳಿಗೆ ನಾವು ಯಾರೋ ಗೃಹಸ್ಥರೆಂದು ಹೇಳಿಕೊಂಡು ನೀವು ಆ ದೇಶವಂ ಬಿಟ್ಟು ಬಂದು ಯಶೋವಂತರಾಗಿರುವುದಂ ಕೇಳಿ ನಿಮ್ಮಂ ಕಂಡರೆ ನೀವು ಸಂರಕ್ಷಿಸುವಿರೆಂದೂ ತಿಳಿದು ಬಹುಕಾಲದಿಂದ ನಮ್ಮಂ ನಂಬಿರುವ ಸೈನ್ಯಗಳಂ ಜೊತೆಯಲ್ಲಿ ಕರೆದುಕೊಂಡು ಸೇವಿಸುವುದಕ್ಕೆ ಬಂದು ಇದ್ದೇವೆ. ಪ್ರಭುಗಳ ಅವಲಂಬನವಿಲ್ಲದೆ ಈ ಪರಿವಾರವಂ ಇಟ್ಟುಕೊಂಡು ಸಂರಕ್ಷಿಸುವುದಕ್ಕೆ ನಮಗೆ ಶಕ್ಯವಲ್ಲ. ನಿಮ್ಮಲ್ಲಿ ಉದ್ಯೋಗವಿದ್ದರೆ ಇರುತ್ತೇವೆ. ಇಲ್ಲದಿದ್ದರೆ ಮುಂದಕ್ಕೆ ಅಪ್ಪಣೆಯಂ ಕೊಡಿಸತಕ್ಕುದು ಎಂದು ಭದ್ರಭಟಾದಿಗಳು ಮಲಯಕೇತುವಿಗೆ ಹೇಳಿಕೊಳ್ಳುತ್ತಿರಲು; ಆ ವಾಕ್ಯಮಂ ಕೇಳಿ ಅರಸುಮಗನು ಬಾಗುರಾಯಣನ ವದನಮಂ ನಿರೀಕ್ಷಿಸಲು; ಆತನು ಮಲಯಕೇತುವಂ ಕುರಿತು—

ಅಯ್ಯಾ ರಾಜಕುಮಾರಕನೇ, ಇವರು ಹೇಳಿಕೊಂಡುದು ನಿನ್ನ ಚಿತ್ತಕ್ಕೆ ವೇದ್ಯವಾಯಿತಷ್ಟೆ? ಈ ಭದ್ರಭಟಾದಿಗಳಿಗೆ ಚಂದ್ರಗುಪ್ತನು ಅಪಮಾನಪಡಿಸಿ ಅಧಿಕಾರವಂ ತೆಗೆದು ಹೊರಡಿಸಿದುದೇ ನಿಶ್ಚಯವಾದರೆ ಎಂದು ಮಲಯಕೇತುವಿನ ಬಳಿಯಲ್ಲಿದ್ದ ಜನಗಳ ಮುಖವಂ ನೋಡಲು; ಆ ಒಡನೆ ಅವರೆಲ್ಲರೂ ದೂರದಲ್ಲಿ ನಿಂತ ಮೇಲೆ—ಚಂದ್ರಗುಪ್ತನು ನಿನ್ನ ಕೈವಶನಾದನೆಂದು ತಿಳಿಯಬೇಕು. ನಾವಾಗಿ ಚಂದ್ರಗುಪ್ತನಿಗೂ ಈ ಸೇನಾಪತಿಗಳಿಗೂ ಭೇದೋಪಾಯಮಂ ಉಂಟುಮಾಡಿ ಒಡಂಬಡಿಸಿ ಕರೆಯಕಳುಹಿಸುವುದಕ್ಕಿಂತ ಮೊದಲೇ

ಇವರು ತಾವಾಗಿ ಚಂದ್ರಗುಪ್ತನಲ್ಲಿ ವಿರೋಧಮಂ ಸಂಪಾದಿಸಿ ನಿನ್ನನ್ನಾಶ್ರಯಿಸುವುದಕ್ಕೆ ಬಂದುದು ನಿನ್ನ ಕಾರ್ಯಕ್ಕೆ ಅನುಕೂಲವಾದಂತಾಯಿತು. ಈ ಪ್ರಮುಖನಾದ ಭದ್ರಭಟನೂ ಶೂರನಾದ ಪುರುಷದತ್ತನೂ ಕಾರ್ಯದಕ್ಷನಾದ ಡಿಂಗಿರಾತನೂ ಸಾಹಸಿಯಾದ ಬಲಗುಪ್ತನೂ ಸೇನಾರಂಜಕನಾದ ರಾಜಸೇನನೂ ಸಮರದಲ್ಲಿ ಹಿಮ್ಮೆಟ್ಟದ ಲೋಹಿತಾಕ್ಷನೂ ಶತ್ರುಗಳಂ ತೃಣದಂತೆ ಕಾಣುವ ವಿಜಯವರ್ಮನೂ ಎಂಬ ಈ ಬಲನಾಯಕರು ಪಾಟಲೀಪುರವಂ ಬಿಟ್ಟು ಬಂದ ಬಳಿಕ ಚಂದ್ರಗುಪ್ತನಲ್ಲಿ ಕಾರ್ಯನಿರ್ವಾಹಿಗಳು ಬೇರೆ ಯಾರು ಇದ್ದಾರು? ಆದುದರಿಂದ ಮುಂದಣ ರಾಜತಂತ್ರವು ಸುಲಭವಾಗಿ ಅನುಕೂಲವಾದೀತು ಎಂದು ಹೇಳಲು; ಅದಂ ಕೇಳಿ ಮಲಯಕೇತುವು ತನ್ನ ಮನಸ್ಸಿನಲ್ಲಿ ಪೂರ್ವದೊಳ್ ನಡೆದ ವೃತ್ತಾಂತವಂ ಸ್ಮರಿಸಿಕೊಂಡು ಆದಿಯಲ್ಲಿ ಚಾಣಕ್ಯನು ಕೊಟ್ಟಿದ್ದ ಕಾಗದವಂ ತೆಗೆದುಕೊಟ್ಟರೆ ಈತನು ಅದಕ್ಕೆ ಏನು ಉತ್ತರವಂ ಹೇಳುವನೋ ತಿಳಿಯಬೇಕೆಂದು ನಿಶ್ಚಯಿಸಿ ಆ ಪತ್ರಿಕೆಯಂ ಭಾಗುರಾಯಣನ ಕೈಯ್ಯಲ್ಲಿ ಕೊಟ್ಟು—

ಅಯ್ಯಾ ಮಿತ್ರನೇ, ಈ ಕಾಗದವಂ ನೋಡಿಕೊಳ್ಳುವವನಾಗು. ಇದರಲ್ಲಿ ಚಂದ್ರಗುಪ್ತನ ಅಭಿಮತವು ನಮಗೆ ಸಮ್ಮತವೆಂದು ನಿಮ್ಮೆಲ್ಲರ ಅಕ್ಷರಗಳಂ ಬರೆದು ಇದೆ. ಇದಂ ಮೊದಲು ಚಂದ್ರಗುಪ್ತನು ನಮ್ಮ ತಂದೆಯ ವಶಕ್ಕೆ ಕೊಟ್ಟು ಇದರ ಭರವಸವಂ ತೋರಿಸಿ ನಮ್ಮೆಲ್ಲರಂ ಕರೆದುಕೊಂಡು ನಂದರ ಮೇಲೆ ಕಾರ್ಯಭಾಗಕ್ಕೆ ನಡೆದನು. ಈ ಸೇನಾಪತಿಗಳೇ ಹಿಂದೆ ಚಂದ್ರಗುಪ್ತನ ಕಾರ್ಯಕ್ಕನುಕೂಲರಾಗಿ ಸ್ವಹಸ್ತಾಕ್ಷರ ಸಮ್ಮತಿಗಳಂ ಬರೆದು ಕೊಟ್ಟು ಈ ಸಮಯದಲ್ಲಿ ಆತನ ಸಂಗಡ ವಿರೋಧವಂ ಉಂಟುಮಾಡಿಕೊಂಡು ನಮ್ಮಲ್ಲಿ ಉದ್ಯೋಗವನ್ನಪೇಕ್ಷಿಸಿ ಬಂದಿರುವುದಂ ನೋಡಿದರೆ ಬಹಳ ಆಶ್ಚರ್ಯವಾಗಿ ತೋರುತ್ತಿದೆ. ನೀನಾದರೋ ನಮಗೆ ಬಂದು ಒದಗಿದ ಆಪತ್ಕಾಲದಲ್ಲಿ ಪ್ರಾಣವಂ ರಕ್ಷಿಸಿ ಇಲ್ಲಿಗೆ ಕರತಂದವನಾದುದರಿಂದ ನಿನ್ನಂ ಪರಮಾಪ್ತನೆಂದು ತಿಳಿದಿರುವೆನೆಂಬುದಾಗಿ ಹೇಳುತ್ತಿರಲು; ಭಾಗುರಾಯಣನು ಕಾಗದವಂ ನೋಡಿಕೊಂಡು ತಮ್ಮ ಅಕ್ಷರ ಹೌದು ಎಂದು ನಿಶ್ಚಯಿಸಿ ಅದರ ಸಂಗತಿಯಂ ತಿಳಿದು ಉಂಟಾದುದಂ ಹೇಳಿ ಈತನ ಮನಸ್ಸಿನ ಸಂಶಯವಂ ಬಿಡಿಸುವೆನೆಂದು ಬಗೆದು—

ಅಯ್ಯಾ ರಾಜಕುಮಾರನೇ, ಈ ಪತ್ರದಲ್ಲಿರುವ ಸಮ್ಮತಿಗಳು ನಮ್ಮೆಲ್ಲರ ಅಕ್ಷರಗಳಲ್ಲಿರುವುದು ನಿಜ. ಈ ವಿಷಯವಾಗಿ ನೀನು ಕೇಳುವುದು ವಿಹಿತವೇ ಸರಿ. ಇದರ ವಿವರವಂ ತಿಳುಹಿಸುವೆನು. ಚಿತ್ತದಲ್ಲಿ ತರುವವನಾಗು. ಮೊದಲು ಚಂದ್ರ

ಗುಪ್ತನು ಅನ್ನಸತ್ರಮಂ ಬಿಟ್ಟು ಹೋಗಬೇಕೆಂಬ ಸಮಯದಲ್ಲಿ ನಮ್ಮ ಬಳಿಗೆ ಬಂದು ತಮ್ಮ ತಂದೆಯು ಕಾಶೀಪಟ್ಟಣದಲ್ಲಿ ಮಾಡಿಸಿರುವ ಶಿವಾಲಯದ ಗೋಪುರಪ್ರಾಕಾರಂಗಳಂ ರಚಿಸುವುದಕ್ಕಾಗಿ ಕೇಶವದಾಸನೆಂಬ ವರ್ತಕನಲ್ಲಿ ಕೆಲವು ದ್ರವ್ಯಗಳನ್ನಿಟ್ಟು ಕಾಲವಾದ ಬಳಿಕ ಆ ಕಟ್ಟಡಮಂ ಪೂರಯಿಸುವುದಕ್ಕೆ ನಾನು ಬಾಲಕನಾಗಿರುವುದರಿಂ ತನ್ನ ಮೇಲೆ ಮಾತು ಬಂದೀತೆನ್ನುವುದರಲ್ಲಿ ಭೀತನಾಗಿ ನಿಮ್ಮೆಲ್ಲರ ಸಮ್ಮತಿಯಾದರೆ ಆತನು ದೇವಾಲಯದ ಕಾರ್ಯಮಂ ಪೂರಯಿಸುತ್ತಿದ್ದಾನೆ ಎಂದು ನಮ್ಮೆಲ್ಲರಂ ಒಡಂಬಡಿಸಿ ಆ ಕೆಲಸಮಂ ಮಾಡುವಂತೆ ಕೇಶವದಾಸನಿಗೆ ಅಖಂಡವಾದ ಕಾಗದಮಂ ಬರೆದು ಮೊದಲು ತಮ್ಮ ಸಮ್ಮತಿಯಂ ಹಾಕಿ ಅದರಲ್ಲಿ ನಮ್ಮ ಸಮ್ಮತಿಗಳಂ ಬರೆಸಿಕೊಂಡು ಹೋದ ಬಳಿಕ ಪಾರ್ವತೇಯ ಸೇನಾಸಮೇತನಾಗಿ ಬಂದಾಗಲೇ ಆತನಂ ಕಂಡೆವಲ್ಲದೆ ಈ ಮಧ್ಯದಲ್ಲಿ ಅವನ ಹೆಸರನ್ನಾದರೂ ಕೇಳಿದವರಲ್ಲ. ಅಖಂಡವಾಗಿ ಆಗ ಬರೆದಿದ್ದ ಪತ್ರಿಕೆಯಲ್ಲಿ ಉಪಯುಕ್ತವಾದ ಮಟ್ಟಿಗೆ ನಿಲ್ಲಿಸಿಕೊಂಡು ಶೇಷವು ಛೇದಿತವಾಗಿರುವುದರಿಂದ ಇದೆಲ್ಲವೂ ಚಾಣಕ್ಯನ ಕಪಟೋಪಾಯವು. ಇದು ಹೌದೋ ಅಲ್ಲವೋ ? ನೀನೇ ನೋಡಿ ತಿಳಿಯುವವನಾಗು ಎಂದು ಭಾಗುರಾಯಣನು ಹೇಳಲು ; ಚಾಣಕ್ಯನು ಮಹಾಕಪಟಿಯಾದುದರಿಂದ ಹೀಗೆ ಛದ್ಮನೆಯಂ ಮಾಡಿದ್ದಾನೆಂದು ಮಲಯಕೇತುವು ನಿರ್ಣಯಿಸಿ—

ಅಯ್ಯಾ, ನೀನು ಹೇಳಿದ ಬಳಿಕ ಭದ್ರಭಟಾದಿಗಳು ಇಲ್ಲೇ ಇರಲಿ. ಇವರ ಸೇನೆಗಳಿಗೆ ಸಂಬಳಗಳನ್ನೂ ಸೇವೆಗಳನ್ನೂ ನೇಮಿಸುವೆವು ಎಂದು ಭಾಗುರಾಯಣನಿಗೆ ಉಸುರುತ್ತಿರಲು ; ಆಗ ರಾಕ್ಷಸನೈತಂದು ಈ ಭದ್ರಭಟಾದಿಗಳು ಬಂದು ಮಲಯಕೇತುವಂ ಕಂಡು ವಿನೀತರಾಗಿ ನಿಂತಿರುವುದಂ ನೋಡಿ ತನ್ನ ಮನಸ್ಸಿನಲ್ಲಿ—ನಾವು ಪಾಟಲೀಪುರದಲ್ಲಿ ಈ ಭದ್ರಭಟಾದಿಗಳಿಗೆ ನಿಯಾಮಕರಾಗಿದ್ದು ಈಗ ಮಲಯಕೇತುವಿನ ಬಳಿಯಲ್ಲಿ ಸರ್ವಾಧಿಕಾರಮಂ ಮಾಡುತ್ತಿರುವುದಂ ತಿಳಿದು ನಮ್ಮಂ ಕಂಡು ಮಾತನಾಡದೆ ಭಾಗುರಾಯಣ ಶೇಖರರ ಮುಖದಿಂದಲೇ ಅರಸನಂ ಕಂಡು ಇಲ್ಲಿಯೂ ಸೇನಾಪತಿತ್ವಕ್ಕೆ ಯತ್ನಮಂ ಮಾಡುವುದರಿಂದ ಚಂದ್ರಗುಪ್ತನಲ್ಲಿ ಉಪೇಕ್ಷೆಯಿಂದ ಬಂದು ಇದ್ದಾರೋ? ಚಾಣಕ್ಯನಿಂ ಪ್ರೇರಿತರಾಗಿ ಕಪಟಮಂ ಎಣಿಸಿ ಬಂದು ಇದ್ದಾರೋ? ತಿಳಿಯಕೂಡದು. ಇವರಿಗೆ ಇಲ್ಲಿ ಆಶ್ರಯವಾಗದಂತೆ ಮಲಯಕೇತುವಿಗೆ ಹೇಳಿ ಹಿಂದಕ್ಕೆ ಕಳುಹಿಸೋಣವೆಂದರೆ ಇವರ ಬಹುವಾಹಿನಿಯು ಪಾಟಲೀಪುರಮಂ ಬಿಟ್ಟು ಬಂದುದು ನಾವು ಮಾಡುವ

ರಾಜಕಾರ್ಯಕ್ಕೆ ಅನುಕೂಲವಾಯಿತು. ಇವರಂ ಇಲ್ಲಿಯೂ ಇರದಂತೆ ಕಳುಹಿಸಿವರೆ ಮತ್ತಾವ ದೇಶಾಧಿಪತಿಯನ್ನಾಗಲಿ ಆಶ್ರಯಿಸಿ ಮುಂದೆ ನಮಗೆ ಶತ್ರುಗಳಾದರೂ ಆಗಬಹುದು. ಹಾಗಲ್ಲದೆ ಪುನಃ ಲಜ್ಜಾರಹಿತರಾಗಿ ಸ್ಥಳದಲ್ಲಿರುವ ಸ್ತ್ರೀಪುತ್ರರ ಮೇಲಣ ಆಶೆಯಿಂದ ಚಂದ್ರಗುಪ್ತನಿಗೆ ಶರಣಾಗತರಾದರೆ ಹನಿಗೂಡಿ ಹಳ್ಳವಾಗಿ ಆ ಮೇಲೆ ನದಿಯಾಗಿ ಹರಿಯುವ ರೀತಿಗೆ ಕಳದು ಹೋದ ಪಡೆಯು ಪುನಃ ಒಟ್ಟುಗೂಡಲು; ನಾವು ಮಹಾಪ್ರಯತ್ನಮಂ ಮಾಡಬೇಕಾದೀತು. ಸುಲಭದಲ್ಲಿ ತೀರದು. ಆದುದರಿಂದ ಈ ಭದ್ರಭಟಾದಿಗಳಂ ಅನ್ಯತ್ರ ಕಳುಹಿಸದೆ ಪಾಟಲೀಪುರಕ್ಕೂ ಹೋಗಲೀಸದೆ ಇಲ್ಲಿಯೂ ವಿಶೇಷಸ್ವಾತಂತ್ರ್ಯವು ಇಲ್ಲದಂತೆ ಕಾರ್ಯಮಂ ನೇಮಿಸಿ ಇರಿಸಿಕೊಳ್ಳುವೆನೆಂದು ಯೋಚಿಸುತ್ತಿರಲು; ಆಗ ಮಲಯಕೇತು ಆತನಂ ಕುರಿತು—

ಅಮಾತ್ಯರೇ, ನಂದ ಸೇನಾನಾಯಕರಾದ ಭದ್ರಭಟಾದಿಗಳು ಚಂದ್ರಗುಪ್ತನನ್ನುಪೇಕ್ಷಿಸಿ ನಮ್ಮನ್ನಾಶ್ರಯಿಸಲೋಸುಗ ಬಂದು ಇದ್ದಾರೆ. ಇವರು ದೊಡ್ಡ ಮನುಷ್ಯರಂತೆ. ಮೌರ್ಯಪುತ್ರನು ಇವರಿಗೆ ಅಪಮಾನಮಂ ಮಾಡಿದನಂತೆ. ನೀವು ವಿಚಾರಿಸಿ ಇವರೆ ನಿರ್ವಾಹಾನುಗುಣ್ಯವಾಗಿ ಕಾರ್ಯಗಳನ್ನೂ ಸಂಬಳಗಳನ್ನೂ ಸನ್ಮಾನಗಳನ್ನೂ ನೇಮಿಸುವವರಾಗಿರಿ ಎಂದು ಹೇಳಲು;

ಅಯ್ಯಾ ಕುಮಾರಕನೇ, ಭದ್ರಭಟಾದಿಗಳು ದೊಡ್ಡ ಮನುಷ್ಯರಹುದು. ಇವರು ಪಾಟಲೀಪುರಮಂ ಬಿಟ್ಟು ಬಂದುದು ನಮ್ಮ ಕಾರ್ಯಗಳಿಗನುಕೂಲವಾಯಿತು. ಇವರಿಗೆ ತಕ್ಕ ಉದ್ಯೋಗಗಳಂ ನೇಮಿಸುವೆನೆಂದು ಹೇಳುತ್ತಿರುವಷ್ಟರಲ್ಲಿಯೇ ಮಧ್ಯಾಹ್ನಸೂಚಕವಾದ ವಾದ್ಯ ಧ್ವನಿಗಳಾಗಲು; ಎಂದಿನಂತೆ ಎಲ್ಲರೂ ಎದ್ದು ತಮ್ಮ ತಮ್ಮ ವಾಸಗೃಹವನ್ನೈದಿದರು. ಆ ಮಾರನೆಯ ದಿವಸ ರಾಕ್ಷಸನು ಮಲಯಕೇತುವಿನ ಓಲಗದ ಹಜಾರಕ್ಕೆ ಬರುವುದಂ ತಿಳಿದು ಭದ್ರಭಟಾದಿಗಳು ಬಂದು ರಾಕ್ಷಸನಂ ಕಾಣಿಸಿಕೊಳ್ಳುತ್ತಿರಲು; ಅವರಂ ಉಚಿತ ಪ್ರಕಾರವಾಗಿ ಕುಳ್ಳಿರಿಸಿಕೊಂಡು ರಾಕ್ಷಸನು ಆ ಚಮೂಪತಿಗಳಿಗೆ ಅಧಿಕಾರಮಂ ನೇಮಿಸುತ್ತಿದ್ದನು. ಎಂತೆಂದರೆ—

ಅಯ್ಯಾ ಭದ್ರಭಟ ಡಿಂಗಿರಾತರುಗಳಿರಾ, ರಾಜಕಾರ್ಯಾರ್ಥವಾಗಿ ಮಲಯಕೇತುವಿನ ಧ್ವಜಿನಿಯು ಪಾಟಲೀಪುರಕ್ಕೆ ಪುನಃ ಹೋಗುವುದರಿಂದ ಸೇನೆಗಳಿಗೆ ಆಧಾರವಾಗಿ ಧನಧಾನ್ಯಗಳು ಬರುವಲ್ಲಿ ಅದಕ್ಕೆ ಶತ್ರುಬಾಧೆ ತಗುಲದಂತೆ ನೀವು ಚತುರಂಗಬಲ ಸಮೇತರಾಗಿ ಎಚ್ಚರಿಕೆಯಿಂದ ಕಾದುಕೊಂಡು ಇರುವವರಾಗಿರಿ ಎಂದು ಅವರಿಗೆ ನೇಮಿಸಿ—

ಅಯ್ಯಾ ಬಲಗುಪ್ತನೇ, ಮಹಾನದಿಗಳಂ ದಾಟ ಪಡೆಗಳು ಹೋಗುವಲ್ಲಿ ಮೊದಲೇ ಸಿದ್ಧವಾಗಿರುವ ನಾವೆಗಳನ್ನು ಅರಿಗಳು ಬಂದು ಆಕ್ರಮಿಸದಂತೆ ನದೀ ತೀರಗಳಲ್ಲಿ ಕಾದಿರುವವನಾಗು ಎಂದು ಕಟ್ಟುಮಾಡಿ—

ಅಯ್ಯಾ ಪುರುಷದತ್ತನೇ, ಮಲಯಕೇತುಮಹಾರಾಜನು ವಿತರಣಶಾಲಿ ಯಲ್ಲವೆಂದು ಜನರು ಹೇಳಿಕೊಳ್ಳದಂತೆ ವಾಹಿನಿಯ ಸಂಗಡ ಬರುವ ದೀನಾನಾಥ ವಿಪನ್ನರಿಗೆ ಅನ್ನೋದಕಂಗಳಂ ಕೊಡುತ್ತ ಹಾಹಾಕಾರವಿಲ್ಲದಂತೆ ಮಾಡುತ್ತಿರು ವವನಾಗು ಎಂದು ಆಜ್ಞಾಪಿಸಿ—

ಅಯ್ಯಾ ವಿಜಯವರ್ಮನೆ, ಸೈನ್ಯವು ಪ್ರಯಾಣದಲ್ಲಿ ಆಯಾಸವಿಲ್ಲದೆ ಸುಲಭವಾಗಿ ತೆರಳುವಂತೆ ಮಾರ್ಗದ ಹಳ್ಳತಿಟ್ಟುಗಳಂ ಸಮಗೆಯ್ಯುತ್ತ ಸೃತ ನಾನಿವೇಶದ ಭೂಮಿಯಂ ಪರಿಶೋಧಿಸುತ್ತ ಬರುವವನಾಗು ಎಂದು ನಿರೂಪಿಸಿ—

ಅಯ್ಯಾ ರಾಜಸೇನನೇ, ದಂಡು ತೆರಳುವಲ್ಲಿ ವೈರಿಗಳ ಆಗಮನಮಂ ತಿಳಿಯುತ್ತ ಅವರಂ ಮುಂದೆ ಬರಲೀಸದೆ ತಡೆದು ನಿಲ್ಲಿಸುತ್ತ ಗೂಢಚಾರರಂ ಶೋಧಿಸುತ್ತ ಜಾಗ್ರತೆಯಿಂದ ಇರುವವನಾಗು ಎಂದು ವಿಧಿಸಿ—

ಅಯ್ಯಾ ರಾಜಸೇನನೇ, ಮಲಯಕೇತುವಿನ ಫೌಜುಗಳು ರಿಪುಗಳ ದುರ್ಗ ಗಳನ್ನಾಕ್ರಮಿಸುವಲ್ಲಿ ಬಲಸಮೇತನಾಗಿ ಸಹಾಯಮಂ ಮಾಡುತ್ತಿರುವವನಾಗು ಎಂದು ಅಪ್ಪಣೆಮಾಡಿದನು. ಈ ಪ್ರಕಾರವಾಗಿ ರಾಕ್ಷಸನು ತಮಗೆ ಅನುಕೂಲ ಮಲ್ಲದ ಉದ್ಯೋಗಂಗಳಂ ನೇಮಿಸುತ್ತಿರುವುದಂ ಕೇಳಿ ಆ ಭದ್ರಭಟಾದಿಗಳು ತಮ್ಮ ಮನಸ್ಸಿಗೆ ಸಮ್ಮತವಿಲ್ಲದಿದ್ದರೂ ತಾವು ಯೋಚಿಸಿ ಬಂದ ಕಾರ್ಯಮಂ ಸಾಧಿಸಲೋಸುಗ ಕಾಲಹರಣ ನಿಮಿತ್ತವಾಗಿ ಆ ಸರ್ವಾಧಿಕಾರಿಯು ಅಪ್ಪಣೆ ಕೊಟ್ಟ ಮೇರೆಗೆ ಒಪ್ಪಿಕೊಳ್ಳುತ್ತಿರಲು ; ರಾಕ್ಷಸನು ಅವರೆಲ್ಲರಿಗೂ ಕರ್ಪೂರ ವೀಳೆಯಂಗಳಂ ತರಿಸಿಕೊಟ್ಟು ಸ್ವಸ್ಥಾನಕ್ಕೆ ಕಳುಹಿಸಿ ತಾನಿದ್ದೆಡೆಗೆ ಬರುತ್ತಿದ್ದನು.

ಹೀಗಿರಲು ; ಇತ್ತ ಭದ್ರಭಟಾದಿ ಸೇನಾನಾಯಕರು ಚಾಣಕ್ಯರ ಮನೋ ನುಸಾರವಾಗಿ ಮಲಯಕೇತುವಿನ ಬಳಿಗೆಯ್ದಿ ಆತನಂ ಕಂಡು ಭಾಗುರಾಯಣನ ವಾಕ್ಯದಿಂದ ತಮಗೆ ಅಧಿಕಾರಂಗಳಂ ನೇಮಿಸುವಂತೆ ಆ ರಾಜಪುತ್ರನ ಅಪ್ಪ ಣೆಯಂ ರಾಕ್ಷಸನಿಗೆ ಮಾಡಿಸಲು ; ಆ ಅಮಾತ್ಯನು ಈ ಸೇನಾಪತಿಗಳಲ್ಲಿ ಸಂಶಯ ಬುದ್ಧಿಯಿಂ ಅವರ ಗೌರವಕ್ಕೆ ಯೋಗ್ಯಮಲ್ಲದ ಕಾರ್ಯಗಳಂ ನೇಮಿಸಿ ಮಲಯಕೇತುವಿನ ಸಮೀಪದಲ್ಲಿ ವಿಶೇಷ ಸ್ವಾತಂತ್ರ್ಯಮಿಲ್ಲದಂತೆ ಮಾಡಿ ಸಂಬ ಳಗಳಂ ನಿಗದಿಗೆಯ್ಯದೆ ಅಲ್ಲಿಂದ ಮತ್ತೊಂದು ಕಡೆಗೂ ಹೋಗಲೀಸದೆ ಪ್ರತ್ಯಾ

ಕೆಯಂ ತೋರಿಸುತ್ತ ಅವರ ಕೈಯ್ಯ ದ್ರವ್ಯಗಳಂ ವ್ಯಯಮಾಡಿಸುತ್ತ ಅವರ ಮನೋಭಾವಮಂ ತಿಳಿಯಬೇಕೆಂದು ನಿರೀಕ್ಷಿಸುತ್ತಿರುವ ಅಭಿಪ್ರಾಯಮಂ ಸಮಿದ್ಧಕನೆಂಬ ಗೂಢಚಾರನ ಮುಖದಿಂ ತಿಳಿದು ಚಾಣಕ್ಯನು ಅಮಾತ್ಯನ ಬುದ್ಧಿಗೆ ಸಂತೋಷಪಟ್ಟು ತನ್ನ ಪ್ರಿಯಶಿಷ್ಯನಂ ಕುರಿತು—

ಎಲೈ ಶಾರ್ಙ್ಗರವನೇ, ನಾನು ಮಾಡಿದ ಪ್ರತಿಜ್ಞೆಗನುಸಾರವಾಗಿ ನಂದರೆಲ್ಲರಂ ಮೂಲೋತ್ಪಾಟನಂಗೆಯ್ದು ಧ್ರುವಜಲದಲ್ಲಿ ತಾವರೆಯಂ ನೆಟ್ಟಂತೆ ಚಂದ್ರಗುಪ್ತನಲ್ಲಿ ರಾಜ್ಯಲಕ್ಷ್ಮಿಯಂ ನಿಲ್ಲಿಸಿದೆನು. ಈ ರಾಜ್ಯರಮೆಯು ಸ್ಥಿರವಾಗಿರುವುದಕ್ಕೆ ನಾನು ಪ್ರಾಧಾನ್ಯ ಶಸ್ತ್ರಮಂ ಸ್ವೀಕರಿಸಿದವನಾದರೂ ತಪೋವನವನೆಯ್ದುವಲ್ಲಿ ಈ ಪ್ರಾಧಾನ್ಯ ಶಸ್ತ್ರಗ್ರಹಣಕ್ಕೆ ರಾಕ್ಷಸನೊಬ್ಬ ಹೊರತು ಇತರರು ಯಾರೂ ಯೋಗ್ಯರಾಗಿ ಕಾಣಿಸುವುದಿಲ್ಲ. ಅವನ ಗುಣಗಳೂ ಸ್ವಾಮಿಭಕ್ತಿಯೂ ಬುದ್ಧಿಕೌಶಲ್ಯವೂ ಕಾರ್ಯದಕ್ಷತೆಯೂ ಸತ್ಯಸಂಧತೆಯೂ ಧೀರತ್ವವೂ ಒಂದಕ್ಕಿಂತ ಮತ್ತೊಂದು ಅನ್ಯಾದೃಶವಾಗಿರುವುವು. ಲೋಕದಲ್ಲಿ ಜನರು ಅರ್ಥಾರ್ಥಿಗಳಾಗಿ ಪ್ರಭುಗಳನ್ನನುವರ್ತಿಸುತ್ತ ದೈವಯೋಗದಿಂ ಆ ಅರಸುಗಳಿಗೆ ಕಷ್ಟ ಮುಂಟಾದ ಸಮಯದಲ್ಲಿ ಅವರಂ ಬಿಡದೆ ಪುನಃ ಅವರ ಶ್ರೇಯಸ್ಸಂ ಚಿಂತಿಸುತ್ತ ಇರುವುದಂ ಕಂಡುಂಟು. ರಾಕ್ಷಸನೆಂದರೋ! ತನಗೆ ಪ್ರಭುಗಳಾದ ನಂದರು ನಿಶ್ಶೇಷವಾಗಿ ಹತರಾದುದಂ ಕಂಡು ತಾನು ಭೋಗಾಸಕ್ತಿಯಂ ಬಿಟ್ಟು ಪರಲೋಕದಲ್ಲಿರುವ ನಂದರಿಗೆ ಸಂತೋಷಮಂ ಮಾಡುವೆನೆಂದು ಸ್ವಾಮಿಭಕ್ತಿಯನ್ನವಲಂಬಿಸಿ ನಂದರಿಗೆ ವಿರೋಧಿಯಾದ ಚಂದ್ರಗುಪ್ತನಂ ಜಯಿಸುವನೆಂಬುದಾಗಿ ಸಾಹಸಮಂ ಮಾಡುತ್ತ ಈಗ ಸರ್ವಾರ್ಥಸಿದ್ಧಿಯು ಕಾಲಾಧೀನನಾದುದಂ ತಿಳಿದಿರುವವನಾದರೂ ತಾನು ಸಂಕಲ್ಪಿಸಿದ ಕಾರ್ಯಮಂ ನೆರವೇರಿಸುವೆನೆನ್ನುತ್ತ ಮಲಯಕೇತುವನ್ನಾಶ್ರಯಿಸಿ ದಂಡೆತ್ತಿಬರುವವನಾಗಿದ್ದಾನೆ. ಈಯರ್ಥಮಂ ನಾನು ಮೊದಲೇ ತಿಳಿದು ಅದಕ್ಕೆ ಪ್ರತೀಕಾರೋಪಾಯಮಂ ತಿಳುಹಿ ಭದ್ರಭಟಾದಿಗಳಂ ಕಳುಹಿಸಿರುವೆನು. ಇದರಿಂದ ಮಲಯಕೇತುವಿನ ಆಶ್ರಯವು ತಪ್ಪಿ ಅಮಾತ್ಯನು ತಾನಾಗಿ ಅಲ್ಲಿಗೆ ಬರುವಂತೆ ಆದೀತು. ಚಂದ್ರಗುಪ್ತನು ಈ ಭಾರವೆಲ್ಲಮಂ ನನ್ನಲ್ಲಿ ನಿಲಿಸಿ ನಾನು ಮಾಡುವ ಕಾರ್ಯಮಂ ನೋಡುತ್ತ ತಾನು ತಟಸ್ಥನಾಗಿ ಇದ್ದಾನೆ. ಲೋಕದಲ್ಲಿ ಅರಸುಗಳು ಬಹು ದ್ರವ್ಯಗಳಂ ಸಂಪಾದಿಸಿ ಸೇನೆಗಳಂ ಕಟ್ಟಿ ಶತ್ರುಗಳಂ ನಿಗ್ರಹಿಸಿದವರಾದರೂ ಬಹು ಪ್ರಯತ್ನದಿಂ ರಾಜ್ಯವನ್ನಾಳುವರು. ಈ ನಮ್ಮ ಮೌರ್ಯತನಯನು ಅನಾಯಾಸ

ದಿಂದ ರಾಜ್ಯಮಂ ಸಂಪಾದಿಸಿ ಸುಖಿಸುವಂತೆ ಉಳಿದ ಅರಸುಗಳಿಗೆ ಅದು ಲಭಿಸ ಲಾರದು. ಈಗ ರಾಕ್ಷಸನು ಸಹ ಕೈವಶನಾದರೆ ಚಂದ್ರಗುಪ್ತನ ಅದೃಷ್ಟಕ್ಕೆ ಎಣೆಯೇ ಇಲ್ಲವೆಂದು ಹೇಳುತ್ತಿರುವ ಸಮಯದಲ್ಲಿ—ಮೊದಲು ಅಮಾತ್ಯನ ಮನೆಯ ಜನರಿರುವ ಸ್ಥಳಮಂ ತಿಳಿದು ಬಂದು ಹೇಳುವಂತೆ ನೇಮಿಸಲ್ಪಟ್ಟಿದ್ದ ಗೂಢಚಾರರೊಳಗೆ ಮರಾಳನೆಂಬವನು ಚಿತ್ರಪಟಗಳಂ ತೆಗೆದುಕೊಂಡು ತದನುಗುಣವೇಷಮಂ ಧರಿಸಿ ತಾಳಲಯಗಳಿಂದ ಗಾನಮಂ ಮಾಡುತ್ತ ಅಲ್ಲಲ್ಲಿ ಗುಂಪುಕೂಡಿ ನೋಡುವುದಕ್ಕಾಗಿ ಬಂದ ಜನಕ್ಕೆ ತನ್ನ ಚಿತ್ರಪಟಗಳಂ ತೋರಿಸಿ ಇದು ಸ್ವರ್ಗವು! ಸುಕೃತಿಗಳಿಗೆ ಪ್ರಾಪ್ಯಸ್ಥಾನವು. ಇದಕ್ಕೆ ನಿಯಾಮಕನು ಧರ್ಮಮೂರ್ತಿಯು. ಇದು ನರಕವು! ಈ ನರಕಸ್ಥಾನದಲ್ಲಿ ಪಾಪಿಗಳಂ ದಂಡಿ ಸುವ ಭಟರುಗಳಿರುವರು. ಇದಕ್ಕೆ ನಿಯಾಮಕನು ಯಮಮೂರ್ತಿಯು. ಇದು ಸತ್ಯವು! ಆದುದರಿಂದ ನೀವೆಲ್ಲರೂ ಧರ್ಮವನ್ನಾಚರಿಸಿ ಸದ್ಗತಿಗೆ ಪಾತ್ರ ರಾಗಿರಿ. ಪಾಪವನ್ನಾಚರಿಸಬೇಡಿರಿ ಎಂದು ಅಲ್ಲಲ್ಲಿ ಹೇಳುತ್ತ ಪ್ರತಿಗೃಹಂಗಳಂ ಹೊಕ್ಕು ಗೀತಮಂ ಪಾಡಿ ಯಾಚಿಸುತ್ತ ಆ ಬಳಿಕ ಚಂದನದಾಸನ ಮನೆಗೆ ಬಂದು ಅಲ್ಲಿಯೂ ಗೀತಮಂ ಪಾಡಿ ಚಿತ್ರಪಟಗಳಂ ತೋರಿಸುತ್ತ ಅಲ್ಲಿ ನಡೆದ ವಿದ್ಯಮಾನಮಂ ಚೆನ್ನಾಗಿ ನೋಡಿ ತಿಳಿದು ಮಾರ್ಗಂಗೊಂಡು ಚಾಣಕ್ಯನ ಪರ್ಣ ಶಾಲಾ ಸಮೀಪಕ್ಕೈತಂದು ಬಾಗಿಲಲ್ಲಿ ನಿಂತಿರುವ ಶಿಷ್ಯನಂ ಕುರಿತು—

ಅಯ್ಯಾ ಬ್ರಾಹ್ಮಣನೇ, ಬ್ರಹ್ಮಲೋಕದಲ್ಲಿರುವ ಮರಾಳಪಕ್ಷಿಯ ಭಾವ ಚಿತ್ರವು ನನ್ನಲ್ಲಿರುವುದು. ಇದಂ ನೋಡಿ ಇದರ ಅಭಿಪ್ರಾಯಮಂ ತಿಳಿದು ಹೇಳುವ ಪ್ರಾಜ್ಞರುಂಟೋ? ಎಂದು ಕೇಳಲು;

ಎಲೈ ಚಿತ್ರಪಟಧಾರಿಯೇ, ಈ ಯರ್ಥಮಂ ನಮ್ಮ ಗುರುಗಳಿಗೆ ವಿಜ್ಞಾ ಪಿಸಿ ಬರುವೆನು. ಸ್ವಲ್ಪಕಾಲ ನಿಲ್ಲು ಎಂದು ಹೇಳಿ ಒಳಹೊಕ್ಕು ಚಾಣಕ್ಯರಿಗೆ ಆ ಯರ್ಥಮಂ ತಿಳುಹಿಸಲು; ಚಾಣಕ್ಯರು ಮರಾಳನೆಂಬ ನಮ್ಮ ಗೂಢಚಾರನಾ ಗಿರಬೇಕೆಂದು ತಿಳಿದು ಒಳಗೆ ಬರಲಿ ಎಂದು ಹೇಳಲು; ಆ ಮಾತಿಗೆ ಶಿಷ್ಯನು ಚಿತ್ರ ಪಟದವನಂ ಪರ್ಣಕುಟೀರಮಂ ಹೊಗಿಸಲು; ಅವನಂ ನೋಡಿ ಚಾಣಕ್ಯನು—

ಎಲೈ ಮರಾಳನೇ, ಇಷ್ಟು ದಿವಸಗಳ ವರೆಗೂ ಯಾವ ಕಾರ್ಯಮಂ ನೋಡುತ್ತಿದ್ದೆ? ಚಂದ್ರಗುಪ್ತನಲ್ಲಿ ಯಾರಿಗೆ ಅನುರಾಗವಿರುವುದು? ಯಾರಿಗೆ ಅಸಹನ ಮುಂಟಾಗಿರುವುದು? ಎನಲು;

ಸ್ವಾಮಿಾ, ಈ ಪುರದಲ್ಲಿ ಮೂವರು ಹೊರತು ಉಳಿದ ಪ್ರಜೆಗಳೆಲ್ಲರೂ ಚಂದ್ರಗುಪ್ತನಲ್ಲಿ ಅನುರಕ್ತರಾಗಿರುವರು ಎಂದನು. ಆ ಮಾತಿಗೆ—

ಆ ಮೂವರಾರು ? ಎಂದು ಮರಳಿ ಚಾಣಕ್ಯನು ಕೇಳಲು; ಮರಾಳನು—

ಸ್ವಾಮಿಾ, ರಾಕ್ಷಸನಿಗೆ ಮಿತ್ರನಾಗಿ ಚಂದ್ರಗುಪ್ತನ ಅಭ್ಯುದಯಮಂ ನೋಡಿ ಸಹಿಸಲಾರದೆ ಹಿಂದೆ ಮುಂದೆ ಆಡಿಕೊಳ್ಳುತ್ತಿರುವ ಜೀವಸಿದ್ಧಿಯೊಬ್ಬನು. ಅಮಾತ್ಯನಿಗೆ ಅತ್ಯಂತ ಪ್ರಿಯನಾಗಿರುವ ಲೋಕಾಯತ ಮತಸ್ಥನಾದ ಶಕಟ ದಾಸನೊಬ್ಬನು. ಸಚಿವನಿಗೆ ಪರಮ ಮಿತ್ರನಾಗಿ ಬುದ್ಧಮತಸ್ಥನಾದ ಚಂದನ ದಾಸನೆಂಬ ವರ್ತಕನೊಬ್ಬನು. ರಾಕ್ಷಸನು ಈ ಪುರಮಂ ಬಿಟ್ಟು ಹೋಗುವಲ್ಲಿ ತನ್ನ ಪತ್ನೀಪುತ್ರರಂ ಆ ಚಂದನದಾಸನ ಮನೆಯಲ್ಲಿ ಇಟ್ಟಿರುವಂತೆ ತಿಳಿದು ಇದೆ ಎಂದನು. ಚಾಣಕ್ಯನು ಕೇಳಿ—

ಎಲೈ ಮರಾಳನೇ, ಈ ಯರ್ಥವು ನಿನಗೆ ತಿಳಿದ ಪರಿ ಹೇಗೆ? ಎನಲು; ಮರಾಳನು—

ಸ್ವಾಮಿಾ, ನಾನು ಈ ಚಿತ್ರಪಟಗಳಂ ತೆಗೆದುಕೊಂಡು ಶ್ರುತಿ ಲಯಗಳಿಂ ಗಾನಮಂ ಮಾಡುತ್ತ ಪ್ರತಿಗೃಹಗಳಲ್ಲಿಯೂ ಪಟಮಂ ತೋರಿಸುತ್ತ ಅವರು ಕೊಟ್ಟುದಂ ಸ್ವೀಕರಿಸುತ್ತ ಹಾಗೇ ಚಂದನದಾಸನ ಮನೆಯಲ್ಲಿಯೂ ತೋರಿಸು ತ್ತಿರುವಲ್ಲಿ ಐದು ವರುಷದವನಾಗಿಯೂ ಅಮಾತ್ಯರಾಕ್ಷಸನ ಹೋಲಿಕೆಯುಳ್ಳ ರೂಪವಂತನಾಗಿಯೂ ಇರುವ ಹುಡುಗನು ಈ ನನ್ನ ಸಂಗೀತಮಂ ಕೇಳಿ ಬಾಲ ಸ್ವಭಾವದಿಂದ ಅಂತರ್ಗೃಹದಿಂ ಓಡಿಬಂದು ನನ್ನ ಪಟದ ಸಮಿಾಪದಲ್ಲಿ ನಿಂತನು. ಆ ಮಗುವಂ ನೋಡಿ ಮನಸ್ಸಿಗೆ ಸಂಶಯ ತೋರಿ ಅದನ್ನೇ ನಾನು ನಿರೀಕ್ಷಿಸು ತ್ತಿರುವ ಸಮಯದಲ್ಲಿ ಆ ಹುಡುಗನು ಓಡಿ ಬಂದ ಬಳಿಮನೆಯಲ್ಲಿ ಸ್ತ್ರೀ ಜನದ ಭೀತಿಗೆ ಅನುಗುಣವಾದ ಕಂಕಣರವದಿಂ ಮುಖರಿತವಾದ ಕೈ ಚಪ್ಪಾ ಳೆಯ ಧ್ವನಿಯೂ ಮಗು ಓಡಿ ಹೋದುದಕ್ಕೆ ಭಯದಿಂದ ತಾನೇ ಹೇಳಿಕೊಳ್ಳುವ ಹೆಂಗಸಿನ ವಚನವೂ ಸಹ ಕೇಳಬಂದುದರಿಂದ ಇದೇನೋ ವಿಶೇಷವಿಲ್ಲಿರುವುದು. ತಿಳಿಯಬೇಕೆಂದು ನಂದರ ಭಾವಚಿತ್ರಪಟಂಗಳಂ ಹರಡಿಕೊಂಡು ಅವುಗಳಲ್ಲಿ ಅಮಾತ್ಯರಾಕ್ಷಸನ ಭಾವಚಿತ್ರಮಂ ತೆಗೆದು ತೋರಿಸುತ್ತ ಗಾನಮಂ ಮಾಡಿ ಅವರ ಯಶಸ್ಸಂ ಹೊಗಳುತ್ತ ಸಾವಕಾಶಂಗೆಯ್ಯುತ್ತಿರಲು; ಆ ಸ್ತ್ರೀಯು ಆ ಅಂತರ್ಗೃಹದ ಬಾಗಿಲಲ್ಲಿ ಬಂದು ನಿಂತು ಸನ್ನೆಯಂ ಮಾಡಿ ಕರೆದಾಗ್ಯೂ ಆ ಮಗುವು ಹೋಗದೆ ಪಟದ ಬಳಿಯಲ್ಲೇ ನಿಂತಿದ್ದ ಕಾರಣದಿಂದ ಆಕೆಯು ತ್ವರೆ

ಯಿಂದ ಬಂದು ಬಾಲನಂ ಜರೆದು ಆದರ ಭುಜವಂ ಪಿಡಿದು ಸೆಳೆಯಲು ; ಆ ಅರ್ಭಕನು ಹೋರುತ್ತ ಪಟವಂ ಬಿಟ್ಟು ಹೋಗದಿರಲು ; ಆಕೆಯು ಸಮೀಪ ದಲ್ಲಿ ನಿಲ್ಲಿಸಿದ್ದ ನಂದರ ಮತ್ತು ಅಮಾತ್ಯರಾಕ್ಷಸನ ಭಾವ ಚಿತ್ರಗಳಂ ನೋಡಿ ಖಿನ್ನಳಾಗಿ ಕಂಬನಿಯಂ ತುಂಬುತ್ತ ಸೆರಗಿನಿಂ ಕಣ್ಣೀರ್ಗಳನ್ನೊರಸಿಕೊಳ್ಳುತ್ತ ಮಗುವಂ ಒಂದು ಕೈಯ್ಯಲ್ಲಿ ಸೆಳೆದುಕೊಂಡು ಹೋಗುತ್ತಿರಲು ; ಆ ಸ್ತ್ರೀಯ ಬೆರಳಿನಲ್ಲಿ ಪುರುಷನು ಧರಿಸತಕ್ಕ ವ್ಯಕ್ತವಾದ ಅಕ್ಷರದಿಂ ಯುಕ್ತವಾದ ಅಷ್ಟ ಕೋಣದ ಒಂದು ಮೋಹರವಂ ಕಂಡೆನು. ಪೂರ್ಣಗರ್ಭವಂ ಧರಿಸಿ ಮೆಲ್ಲ ಮೆಲ್ಲನೆ ತೆರಳಿದುದರಿಂದ ಆ ಮಾನಿನಿಯ ಸೌಂದರ್ಯ ಲಕ್ಷಣಗಳು ಸಾವಕಾಶ ವಾಗಿ ತಿಳಿಯಬಂದುವು. ಇದೆಲ್ಲವಂ ಭಾವಿಸಿ ನೋಡಿದರೆ ರಾಕ್ಷಸನ ಪತ್ನೀ ಪುತ್ರರು ಚಂದನದಾಸನ ಮನೆಯಲ್ಲಿ ಪ್ರಚ್ಛನ್ನರಾಗಿ ಇದ್ದಾರೆಂಬುವುದು ನಿಶ್ಚ ಯವಾಗಿ ತೋರುತ್ತದೆ ಎನಲು ; ಅದಂ ಕೇಳಿ ಚಾಣಕ್ಯನು ತನ್ನ ಮನದಲ್ಲಿ— ಇವನು ಹೇಳಿದುದೆಲ್ಲ ನಿಶ್ಚಿತವಾಗಿ ಕಾಣುತ್ತದೆ. ಅವಳ ಕೈಯ್ಯಲ್ಲಿದ್ದ ಮೋಹ ರವು ರಾಕ್ಷಸನದಾಗಿದ್ದೀತು. ಅದು ನಮ್ಮ ಕರಗತವಾದರೆ ಬಹು ಕಾರ್ಯಕ್ಕೆ ಉಪಯುಕ್ತವಾಗಬಹುದು ಎಂದು ನಿಶ್ಚಯಿಸಿ ಅದಂ ಸಂಗ್ರಹಿಸುವ ಉಪಾ ಯಮಂ ಯೋಚಿಸಿ—

ಎಲೈ ಮರಾಳಕನೇ, ನೀನು ಹೇಳಿದರ್ಥವು ತಿಳಿಯಬಂದಿತು. ಚಂದ್ರಗು ಪ್ತಾಭ್ಯುದಯ ನಿರೀಕ್ಷಣೆಯಲ್ಲಿ ಅಸಹನಭಾವಮುಳ್ಳ ಕ್ಷಪಣಕನೇ ಮೊದಲಾದ ಮೂವರಿಗೆ ತಕ್ಕುದಂ ಮಾಡಿಸುವೆವು. ನಿನ್ನ ಕೆಲಸದ ಮೇಲೆ ಇರುವವನಾಗು ಎಂದು ಅವನಂ ಕಳುಹಿಸಿ ಸಿದ್ಧಾರ್ಥಕನಂ ಕರಿಸಿ—

ಎಲೈ, ಚಂದನದಾಸನೆಂಬ ವರ್ತಕನ ಮನೆಯಲ್ಲಿ ರಾಕ್ಷಸನ ಹೆಂಡಿರು ಮಕ್ಕಳುಗಳಿರುವರು. ಆತನ ಪತ್ನಿಯ ಕೈಯ್ಯಲ್ಲಿ ರಾಕ್ಷಸನ ಮುದ್ರೆಯುಂಗು ರವಿರುವುದು. ಈ ರೀತಿಯಿಂದ ಆ ಮೋಹರವಂ ತರಿಸು ಎಂದು ನೇಮಿಸಿ ರಾಯಸದವರ ಬಳಿಯಲ್ಲಿರುವ ರಾಕ್ಷಸನ ಮುದ್ರೆಯ ಕಾಗದವಂ ತರಿಸಿ ಅದಂ ಸಿದ್ಧಾರ್ಥಕನ ಕೈಯ್ಯಲ್ಲಿ ಕೊಟ್ಟು ಕಳುಹಿಸಲು ; ಚಾಣಕ್ಯರು ಆಜ್ಞಾಪಿಸಿದ ರೀತಿಗೆ ಸಿದ್ಧಾರ್ಥಕನು ಆ ಕಾಗದದಲ್ಲಿ ಒತ್ತಿರುವ ಮೋಹರದ ಪ್ರಕಾರ ಸುವರ್ಣದಿಂ ಮುದ್ರೆಯಂ ಮಾಡಿಸಿ ಹೇಳಿದ ಕಾರ್ಯವಂ ನಿರ್ವ ಹಿಸುವುದರಲ್ಲಿ ನಿಪುಣೆಯಾದ ಓರ್ವಸೂಳಗಿತ್ತಿಯಂ ಏಕಾಂತದಲ್ಲಿ ಕರೆದು ಅವಳಿಗೆ ಸನ್ಮಾನವಾಗಿ ಆ ಮೋಹರವಂ ಅವಳ ಕೈಯ್ಯಲ್ಲಿ ಕೊಟ್ಟು ಈ

ರೀತಿಯಿಂದ ಅಮಾತ್ಯರಾಕ್ಷಸನ ಉಂಗುರಮಂ ತಂದು ಕೊಡುವವಳಾಗು ಎಂದು ನೇಮಿಸಿ ಆ ಮಂತ್ರಸಾನಿಯಂ ಕಳುಹಿಸಿ ಪುರದ ತಳವಾರನಂ ಬರಿಸಿ—ಎಲೈ, ನೀನು ಹೇಳುವ ಪ್ರಕಾರದಿಂದ ಈ ದಿನ ಪಟ್ಟಣದೊಳ್ ನಡೆದ ವೃತ್ತಾಂತಮಂ ತಿಳಿಸುವಲ್ಲಿ ವಿಶೇಷವಾಗಿ ಇದೊಂದು ವರ್ತಮಾನಮಂ ವಿಜ್ಞಾಪಿಸುವವನಾಗು ಎಂದು ಹೇಳಿ ಕಳುಹಿಸಲು ; ಅದೇ ರೀತಿಗೆ ಆ ತಳವಾರನು ತನ್ನ ವೇಳೆಯಲ್ಲಿ ಹೋಗಿ ಆಸ್ಥಾನದಲ್ಲಿ ಕುಳಿತಿದ್ದ ಚಾಣಕ್ಯರಿಗೆ ಕೈ ಮುಗಿದು ಆ ದಿನದಲ್ಲಿ ನಡೆದ ಪುರದ ವಾರ್ತೆಯಂ ಹೇಳುತ್ತಿರುವುದರಲ್ಲಿ—ಸ್ವಾಮಿಾ, ಈ ದಿವಸ ಒಬ್ಬ ಬ್ರಾಹ್ಮಣ ಸ್ತ್ರೀಯ ಪ್ರಸವ ಸಮಯದಲ್ಲಿ ಒಬ್ಬ ಸೂಲಗಿತ್ತಿಯು ಏನೋ ಮತ್ಸರದಿಂದ ಆ ಶಿಶುವಂ ಘಾತಿಸಿ ವಂಚಿಸಿ ಓಡಿಹೋದಳು ಎಂದು ಹೇಳಿದ ಮಾತಿಗೆ ಚಾಣಕ್ಯನು ಅತಿಕ್ರುದ್ಧನಾದವನಂತೆ ಕೋಪಿಸಿಕೊಂಡು—ಎಲೈ, ಈ ಪುರದಲ್ಲಿ ಇಂಥ ಕಾರ್ಯವು ಎಷ್ಟು ನಡೆದಿರುವುದೋ ? ಈ ನಗರದ ಮಂತ್ರಸಾನಿಯರೆಲ್ಲರಂ ಹಿಡಿತಂದು ವಿಚಾರಿಸಿ ದಂಡಿಸಿರಿ. ಮುಂದೆ ಈ ಕೃತ್ಯವು ನಡೆಯದಂತೆ ಮಾಡುವವನಾಗು ಎಂದು ನೇಮಿಸಿ ಕಳುಹಿಸಲು ; ಅದೇ ರೀತಿಗೆ ತಳವಾರರು ಬೀದಿ ಬೀದಿಗಳಂ ಹುಡುಕಿ ಸೂಲಗಿತ್ತಿಯರುಗಳಂ ಹಿಡಿದುಕೊಂಡು ಹೋಗುತ್ತಿರಲು ; ಆ ವೇಳೆಯಲ್ಲಿ ಸಿದ್ಧಾರ್ಥಕನಿಂದ ನೇಮಿಸಿದ್ದ ಸೂಲಗಿತ್ತಿಯು ತ್ವರಿತದಿಂ ಹೋಗಿ ಚಂದನದಾಸನ ಗೃಹದ ನಡುವೆಯ ಬಾಗಿಲಿನ ಮರೆಯಲ್ಲಿ ಅತಿ ಭೀತಿಯಿಂ ನಡುಗುವವಳಂತೆ ನಿಂತಿರಲಾಗಿ ಅವಳಂ ಕಂಡು ಆ ಮನೆಯ ಜನರು—ನೀನು ಯಾರು ? ಯಾಕೆ ಬಂದೆ ? ಎನಲು ; ಅವಳು ಎಲ್ಲರ ಕಾಲುಗಳಂ ಕಟ್ಟಿಕೊಳ್ಳುತ್ತ—ಅಕ್ಕಂದಿರಾ, ಅರಮನೆಯವರು ಈ ಪೊಳಲ ಮಂತ್ರಸಾನಿಯರೆಲ್ಲರನ್ನೂ ಹಿಡಿದು ಎಲ್ಲೋ ದೇಶಾಂತರಕ್ಕೆ ಕಳುಹಿಸುವರಂತೆ. ನಾನು ನಾಲ್ಕು ಮಕ್ಕಳುಳ್ಳವಳು. ಈ ಅವಾಂತರ ನಿಲ್ಲುವ ವರೆಗೂ ನಾಲ್ಕು ದಿನಸ ಎಲ್ಲಿಯಾದರೂ ಕಣ್ಣಿಗೆ ಮರೆಯಾಗಿರಬೇಕು ಎನಲು ; ಅದಂ ಕೇಳಿ ಚಂದನದಾಸನ ಸತಿಯು—ನಮ್ಮ ಅಮಾತ್ಯರ ಪತ್ನಿಗೆ ಪ್ರಸವಕಾಲ ಸನ್ನಿತಮಾಗಿರುವುದಷ್ಟೆ. ಆ ಸಮಯಕ್ಕೆ ಸೂಲಗಿತ್ತಿಯರು ದೊರಕುವರೋ ದೊರಕುವುದಿಲ್ಲವೋ ಆದುದರಿಂದ ಇವಳು ಇಲ್ಲಿ ಇರಬೇಕು ಎಂದು ಬಗೆದು—

ಎಲೈ ಮಂತ್ರಸಾನಿಯೇ, ನಿನ್ನಿಂದ ನಮಗೆ ಕೆಲಸಮುಂಟು. ಅನ್ಯತ್ರ ಹೋಗಬೇಡ. ನಮ್ಮ ಮನೆಯಲ್ಲೇ ಇರುವವಳಾಗು ಎನಲು ; ಅವಳು—ನಮ್ಮವ್ವಾ ! ನಾನು ಬದುಕಿದೆನು. ಹಾಗೇ ಆಗಲಿ ಎಂದು ಅಲ್ಲೇ ಇರುತ್ತಿದ್ದಳು.

ಮತ್ತೊಂದು ದಿವಸ ರಾಕ್ಷಸನ ಭಾರ್ಯೆಗೆ ಪ್ರಸವವೇದನೆ ತೋರಲು; ಆ ಸೂಲಗಿತ್ತಿಯಂ ಸೂತಿಕಾಗೃಹಕ್ಕೆ ಕಳುಹಿಸಿದರು. ಅವಳು ಲೋಕದ ಸೂಲ ಗಿತ್ತಿಯರೆಲ್ಲರಿಗಿಂತಲೂ ಅತಿಶಯವಾಗಿ ರಾಕ್ಷಸನ ಪತ್ನಿಯಂ ಸಂತೈಸುತ್ತಿರಲು; ಆಕೆ ಸ್ತ್ರೀಯರುಗಳ ಕಟ್ಟಳೆಯ ಮೇರೆಗೆ ಆಭರಣಂಗಳಂ ಸಡಿಲಿಸಿ ಮಂತ್ರ ಸಾಸಿಯ ವಶಮಂ ಮಾಡಿ ಉಟ್ಟಿದ್ದ ಸೀರೆಯಂ ಬಿಚ್ಚಿ ಮತ್ತೊಂದು ಅರಿವೆ ಯನ್ನುಟ್ಟು ಪ್ರಸವವೇದನೆಯನ್ನನುಭವಿಸುತ್ತ ಶಿಶುವಂ ಹಡೆಯುತ್ತಿರಲು; ಇವಳು ಆ ವೇಳೆಯೊಳ್ ಭೂಷಣಂಗಳ ಜೊತೆಯಲ್ಲಿದ್ದ ರಾಕ್ಷಸನ ಮೋಹ ರಮಂ ತೆಗೆದುಕೊಂಡು ಸಿದ್ಧಾರ್ಥಕನು ಕೊಟ್ಟಿದ್ದ ಮುದ್ರೆಯ ಉಂಗುರಮಂ ಆ ತೊಡವುಗಳ ಜೊತೆಯಲ್ಲಿರಿಸಿ ಅಲ್ಲಿನ ಕಾರ್ಯಮಂ ನೆರವೇರಿಸಿ ಆಕೆಯ ಒಡವೆಗಳಂ ಮುಂದುಗಡೆಯಲ್ಲಿ ಲೆಕ್ಕಮಂ ಮಾಡಿ ಅವಳಿಗೆ ಒಪ್ಪಿಸಿ ಬಂದು ಚಂದನದಾಸನ ಪತ್ನಿಯನ್ನಪ್ಪಣೆಯಂ ಕೇಳಲು; ಆಕೆಯು ಸೂಲಗಿತ್ತಿಗೆ ಸನ್ಮಾ ನಮಂ ಮಾಡಿ ವೀಳೆಯಂಗೊಟ್ಟು ಕಳುಹಿಸಿದಳು. ಆ ಬಳಿಕ ಅವಳು ಬಂದು ಆ ಮೋಹರವನ್ನು ಸಿದ್ಧಾರ್ಥಕನ ಕೈಗೆ ಒಪ್ಪಿಸಲು; ಅವನು ಅದನ್ನು ತೆಗೆದು ಕೊಂಡು ಚಾಣಕ್ಯರ ವಶಕ್ಕೆ ಕೊಟ್ಟನು. ಅದಂ ಚಾಣಕ್ಯನು ನೋಡಿ ಮರಾಳಕನು ಹೇಳಿದ ಮೇರೆ ಅಷ್ಟಕೋಣವಾಗಿಯೂ ರಾಕ್ಷಸನ ಹೆಸರುಳ್ಳು ದಾಗಿಯೂ ಪುರಾತನವಾಗಿಯೂ ಇರುವುದರಿಂದ ಈ ಯಂಗುಳೀಯಕವು ರಾಕ್ಷಸನದೇ ಹೌದು ಎಂದು ನಿರ್ಣಯಿಸಿ ತನ್ನ ಮನಸ್ಸಿನಲ್ಲಿ—ಈ ಮುದ್ರೆಯು ದೊರಕಿದ ಕಾರಣದಿಂದ ಮಲಯಕೇತುವನ್ನನುವರ್ತಿಸಿರುವ ರಾಕ್ಷಸನಿಗೆ ಆ ರಾಜಪುತ್ರನಿಂದಲೇ ತಿರಸ್ಕಾರಮುಂಟಾಗಿ ಆತನು ತಾನಾಗಿ ನಮ್ಮಲ್ಲಿಗೆ ಬರು ವಂತೆ ಮಾಡುವೆನೆಂದು ನಿಶ್ಚಯಿಸಿ ತನ್ನ ಬಳಿಗೆ ಅಮಾತ್ಯನು ಬರುವ ಪರಿಯಂ ತರವೂ ಮಾಡತಕ್ಕ ಪ್ರಯತ್ನಮಂ ಯೋಚಿಸಿ ಇಂಥವರ ಬಳಿಯಿಂದ ಇಂಥ ವರ ಬಳಿಗೆಂಬುದಾಗಿ ಬ್ಬರ ಹೆಸರನ್ನೂ ಕಾಣಿಸದೆ ಒಂದು ಕಾಗದದಲ್ಲಿ ಪ್ರಕೃತೋಚಿತವಾದ ಸಂಗತಿಗಳಂ ಬರೆದು ಸಿದ್ಧಾರ್ಥಕನಂ ರಹಸ್ಯದಲ್ಲಿ ಕುಳ್ಳಿ ರಿಸಿಕೊಂಡು—

ಎಲೈ ಆಪ್ತನೇ, ಒಂದು ಕಾರ್ಯಾರ್ಥವಾಗಿ ಬರೆದಿರುವ ಈ ಪತ್ರಿಕೆ ಯಲ್ಲಿನ ಅಕ್ಷರಗಳು ವೈದಿಕ ಲಿಪಿಯಾದುದರಿಂದ ನಿನಗೆ ಪರಿಚಿತನಾಗಿರುವ ಶಕಟ ದಾಸನ ಅಕ್ಷರದಲ್ಲಿ ಸ್ಫುಟವಾಗಿ ಬೇರೆ ಪತ್ರಿಕೆಯನ್ನು ಬರೆಸಿಕೊಂಡು ಬರು ವವನಾಗು ಎಂದು ಪತ್ರಮಂ ಅವನ ಕೈಯ್ಯಲ್ಲಿ ಕೊಡಲು; ಮಹಾಪ್ರಸಾದ

ಮೆಂದು ಸಿದ್ಧಾರ್ಥಕನು ಅದಂ ತೆಗೆದುಕೊಂಡು ಶಕಟದಾಸನ ಬಳಿಗೆ ಹೋಗಿ ಆ ಕಾಗದಮಂ ತಾನು ಮೊದಲು ನೋಡಿಕೊಂಡು ಚಾಣಕ್ಯರು ಏನೋ ಮಹತ್ಕಾರ್ಯಮಂ ಯೋಚಿಸಿ ಅನ್ಯರಿಗೆ ತಿಳಿಯದಂತೆ ಈ ಪತ್ರಿಕೆಯಂ ಲೇಖನಗೊಳಿಸಿದ್ದಾರೆ. ಇದರ ಫಲಮಂ ಪರ್ಯವಸಾನದಲ್ಲಿಯೇ ಹೊರತು ಈಗ ತಿಳಿಯಕೂಡದೆಂದು ಬಗೆದು ಶಕಟದಾಸನ ಸಂಗಡ ಪ್ರಕೃತೋಚಿತವಾಗಿ ಮಾತಾಡುತ್ತಾ ಕೆಲವು ಹೊತ್ತಿನ ಮೇಲೆ ತನ್ನ ಬಳಿಯಲ್ಲಿದ್ದ ಕಾಗದಮಂ ಆತನ ಕೈಯ್ಯಲ್ಲಿ ಕೊಟ್ಟು—

ಅಯ್ಯಾ ಶಕಟದಾಸನೇ, ಈ ಪತ್ರದಲ್ಲಿ ಒಂದು ಕೌತುಕಮುಂಟು. ಇದು ಪ್ರಾಕೃತವಾಕ್ಯದಿಂದ ಬರೆದಿರುವುದಾದರೂ ಇದರ ಅಕ್ಷರಗಳಂ ವ್ಯತ್ಯಸ್ತವಾಗಿ ಪ್ರಯೋಗಿಸಿದರೆ ಸಂಸ್ಕೃತಶ್ಲೋಕಗಳಾಗುತ್ತಿವೆ. ಆ ಶ್ಲೋಕಂಗಳಂ ಪ್ರತಿಲೋಮವಾಗಿ ಬರೆದರೆ ಚಿತ್ರಬಂಧಗಳು ಆಗುತ್ತಿವೆ. ಅದುಕಾರಣ ಸ್ಫುಟವಾಗಿ ಇನ್ನೊಂದು ಪ್ರತಿಯಂ ಬರೆಯುವವನಾಗು. ಈ ಲಿಪಿಗಳು ಸಂದಿಗ್ಧವಾಗಿವೆ. ಒಬ್ಬ ಕವೀಶ್ವರನು ಬರೆದು ಇದರ ಪದ್ಧತಿಯಂ ಹೇಳಿದನು ಎನಲು; ಆಗ ಶಕಟದಾಸನು ತನ್ನ ಕೈ ಬರಹದಿಂದ ಬೇರೆ ಪ್ರತಿಯಂ ಬರೆದು ಸಿದ್ಧಾರ್ಥಕನ ಕೈಯ್ಯಲ್ಲಿ ಕೊಟ್ಟು—ಇದರ ಪದ್ಧತಿ ಏನು ? ಎಂದು ಕೇಳಲು; ಸಿದ್ಧಾರ್ಥಕನು ಸ್ವಲ್ಪ ಹೊತ್ತು ಯೋಚಿಸುವವನಂತೆ ಇದ್ದುನೋಡಿ—ಅಯ್ಯಾ ಶಕಟದಾಸನೇ, ಕವೀಶ್ವರನು ಹೇಳಿದ ಕ್ರಮವು ಸ್ವಲ್ಪ ವಿಸ್ಮೃತವಾದಂತೆ ಇದೆ. ಇದನ್ನು ಇನ್ನೊಂದು ವೇಳೆ ಕೇಳಿ ತಿಳಿದು ಹೇಳುವೆನೆಂಬುದಾಗಿ ಉಸುರಿ ಅಲ್ಲಿಂದ ಹೊರಟು ಆ ಕಾಗದಮಂ ಚಾಣಕ್ಯರ ಕೈಯ್ಯಲ್ಲಿ ಕೊಡಲು; ಆತನು ಅದಂ ನೋಡಿಕೊಂಡು ಆ ಪತ್ರಮಂ ಮಡಿಸಿ ತನ್ನ ಬಳಿಯಲ್ಲಿದ್ದ ರಾಕ್ಷಸನ ಮುದ್ರೆಯುಂಗುರದಿಂದ ಅದಕ್ಕೆ ಮೋಹರಮಂ ಮಾಡಿ ಆ ಬಳಿಕ ಸಿದ್ಧಾರ್ಥಕನಂ ಕರೆದು—

ಎಲೈ ನಮಗೆ ಪ್ರಿಯನಾದ ಸಿದ್ಧಾರ್ಥಕನೇ, ಈಗಿನ ವರೆಗೆ ಚಂದ್ರಗುಪ್ತನ ಕೆಲಸವು ನಿನ್ನಿಂದ ಬಹಳವಾಗಿ ಅನುಕೂಲಿಸಿತು. ಕಾರ್ಯಘಟನೆಯಲ್ಲಿ ಸಮರ್ಥನಾದುದರಿಂದ ನಿನಗೆ ಇನ್ನೊಂದು ಕೆಲಸಮಂ ಹೇಳುವೆನು. ಅದಂ ಉಸುರಿದ ರೀತಿಗೆ ಸಾಧಿಸುವವನಾಗು ಎಂದು ಹೇಳತಕ್ಕ ಮಾತುಗಳೆಲ್ಲಮಂ ಅವನ ಕಿವಿಯಲ್ಲಿ ಹೇಳಿ ಆ ಕಾಗದವನ್ನೂ ರಾಕ್ಷಸನ ಮೋಹರವನ್ನೂ ಸಹ ಆ ಸಿದ್ಧಾರ್ಥಕನ ಕೈಯ್ಯಲ್ಲಿ ಕೊಟ್ಟು ಹೋಗಿ ಬಾರೆಂದು ಕಳುಹಿಸಿ ಈ ಲೇಖನಕ್ಕೆ

ಅನುಕೂಲವಾಗಿ ಮೊದಲು ಬೊಕ್ಕಸದಲ್ಲಿ ಕಟ್ಟಿಸಿ ಇಡಿಸಿರುವ ಪರ್ವತ ರಾಜನ ಆಭರಣಗಳು ರಾಕ್ಷಸನಿಗೆ ಸೇರುವಂತೆ ಮಾಡಿಸಬೇಕೆಂದು ಯೋಚಿ ಸುತ್ತಿರಲು ; ಚಂದ್ರಗುಪ್ತನ ಅಪ್ಪಣೆಯಿಂದ ಅಂತಃಪುರದ ಕಂಚುಕಿಯೊಬ್ಬನು ಬಂದು ಚಾಣಕ್ಯರಂ ಕಂಡು ಕೈಮುಗಿದು—

ಸ್ವಾಮಿ, ಈ ದಿವಸ ಪರ್ವತೇಶ್ವರನಿಗೆ ಮಾಡಿಸಿದ ಪರಲೋಕಕ್ರಿಯೆಗ ಳೆಲ್ಲವೂ ಪರಿಸಮಾಪ್ತವಾದುವು. ಆತನು ಅಲಂಕರಿಸಿದ್ದ ಆಭರಣಗಳು ಬೊಕ್ಕ ಸದಲ್ಲಿ ಇಡಿಸಿ ಇವೆಯಷ್ಟೆ. ಇದಕ್ಕೆ ಅಪ್ಪಣೆ ಏನು ? ಎಂದು ಚಂದ್ರಗುಪ್ತ ಮಹಾರಾಜರು ವಿಜ್ಞಾಪಿಸಿ ಬಾರೆಂದು ನನ್ನಂ ಕಳುಹಿಸಿದರು ಎಂಬುದಾಗಿ ಅರಿಕೆ ಮಾಡಲು ; ಅದಂ ಕೇಳಿ ಚಾಣಕ್ಯನು—ನಾನು ಯೋಚಿಸಿದ್ದ ಅರ್ಥವನ್ನೇ ಚಂದ್ರಗುಪ್ತನು ಹೇಳಿ ಕಳುಹಿಸಿದನು. ಉತ್ತಮವಾಯಿತು ಎಂದು ತಿಳಿದು ಆ ಕಂಚುಕಿಯಂ ಕುರಿತು—

ಎಲೈ ಶೋಣಕನೇ, ಪರ್ವತರಾಜನ ಮಂಡನವು ಅಮೂಲ್ಯವಾದುದರಿಂದ ಅದರ ದಾನಕ್ಕೆ ಪಾತ್ರರಾದವರನ್ನು ಪರೀಕ್ಷಿಸಿ ಸಂಗ್ರಹಿಸಿದ್ದೇನೆ. ಈ ಬ್ರಾಹ್ಮ ಣರಂ ಕರೆದುಕೊಂಡು ಹೋಗಿ ನಾವು ಹೇಳಿದೆವೆಂದು ಆ ಭೂಷಣಂಗಳಂ ಇವರಿಗೆ ಕೊಡಿಸುವವನಾಗೆಂಬುದಾಗಿ ನಿರೂಪಿಸಿ ತನಗೆ ಅನುಕೂಲನಾದ ವಿಶ್ವಾವಸು ಎಂಬ ಭೂಸುರನೇ ಮುಖ್ಯರಾದ ಮೂರು ಮಂದಿ ವಿಪ್ರರಂ ಕರೆದು—

ಅಯ್ಯಾ ವಿದ್ಯಾಸಂಪನ್ನರಾದ ಬ್ರಾಹ್ಮಣರುಗಳಿರಾ, ಈ ದಿವಸ ಚಂದ್ರ ಗುಪ್ತನು ನಿಮಗೆ ಆಭರಣಂಗಳಂ ಕೊಡುವನು. ನೀವು ಅಲಂಕರಿಸಿಕೊಂಡು ಇಲ್ಲಿಗೆ ಬಂದರೆ ಸುಪ್ರೀತರಾದ ನಿಮ್ಮಂ ನೋಡಿ ಸಂತೋಷಡುವೆನು. ಈ ಕಂಚುಕಿಯ ಸಂಗಡ ಹೋಗಿರಿ ಎಂದು ಹೇಳಿ ಮತ್ತೊಂದು ಕಾರ್ಯಗೌರವಮಂ ಯೋಚಿಸಿ ಆ ಕಂಚುಕಿಯಂ ಕುರಿತು—

ಎಲೈ ಶೋಣಕನೇ, ನಾವು ಹೇಳಿದೆವೆಂದು ನಿಮ್ಮ ಅರಸಿಗೆ ಅರಿಕೆಮಾಡು ವುದೇನೆಂದರೆ—ನೀನು ಪ್ರಭುವಾಗಿ ರಾಜ್ಯವಿಚಾರಮಂ ಮಾಡುವಲ್ಲಿ ಯಾವ ದೊಂದು ವಿಷಯಕ್ಕಾದರೂ ನಮ್ಮ ಬಳಿಗೆ ಹೇಳಿಕಳುಹಿಸಿ ಕಾರ್ಯಮಂ ಮಾಡುತ್ತಿದ್ದರೆ ಇನ್ನೆಷ್ಟು ದಿವಸಕ್ಕೆ ನಿನಗೆ ರಾಜ್ಯಭಾರದಲ್ಲಿ ಬುದ್ಧಿ ಸ್ಫುರಿಸ ಬೇಕು ? ಇನ್ನು ಮೇಲೆ ಸ್ವರಾಷ್ಟ್ರವಿಚಾರವೇನಿದ್ದರೂ ವಿಮರ್ಶೆಯಿಂದೆಸ ಗುತ್ತ ಪರರಾಷ್ಟ್ರವಿಚಾರದಲ್ಲಿ ಮಾತ್ರ ನಮಗೆ ತಿಳುಹಿಸಿ ಮಾಡುವವನಾಗು.

ಈ ಪ್ರಕಾರವಾಗಿ ಚಂದ್ರಗುಪ್ತನಿಗೆ ಹೇಳುವಂತೆ ಅವನಿಗೆ ಕಟ್ಟುಮಾಡಿ ಕಳುಹಿಸಲು ; ಆ ಕಂಚುಕಿಯು ಬ್ರಾಹ್ಮಣರೊಡನೆ ಕೂಡಿದವನಾಗಿ ಬಂದು ಚಂದ್ರಗುಪ್ತನಂ ಕಂಡು ಕೈಮುಗಿದು ನಿಂತು—

ಜೀಯಾ, ಪರ್ವತರಾಜನ ಭೂಷಣದಾನಕ್ಕೆ ಉತ್ತಮಪಾತ್ರರೆಂದು ತಿಳಿದು ಚಾಣಕ್ಯರು ಇವರಂ ಕಳುಹಿಸಿದ್ದಾರೆ. ಮತ್ತು ಯಾವ ಕಾರ್ಯವಾದರೂ ಸ್ವರಾಷ್ಟ್ರವಿಷಯಕವಾಗಿದ್ದರೆ ಪ್ರಭುವಾಗಿರುವುದರಿಂದ ಅದೆಲ್ಲಮಂ ಸ್ವತಂತ್ರವಾಗಿ ತಾವೇ ನೋಡುತ್ತ ಪರರಾಷ್ಟ್ರವಿಷಯಕವಾದ ಕಾರ್ಯವೇನಿದ್ದರೂ ತಮಗೆ ತಿಳುಹಿಸಿ ಮಾಡತಕ್ಕದು ಎಂದು ಯಜಮಾನರಾದ ಚಾಣಕ್ಯರ ಅಪ್ಪಣೆಯಾಗಿದೆ ಎನಲು ; ಅದಂ ಕೇಳಿ ಚಂದ್ರಗುಪ್ತನು ಪರ್ವತರಾಜನ ಆಭರಣಂಗಳಂ ತರಿಸಿ ಆ ವಿಶ್ವಾವಸು ಮುಖ್ಯರಾದ ಬ್ರಾಹ್ಮಣರಿಗೆ ಅಲಂಕರಿಸಿ ಅವರಂ ಕಳುಹಿಸಿ ಆ ಬಳಿಕ ಚಾಣಕ್ಯರು ಹೇಳಿಕಳುಹಿಸಿದ ವಾಕ್ಯಮಂ ನೆನೆದು ಏನೋ ಒಂದು ಕಾರ್ಯಾರ್ಥವಾಗಿ ತಮ್ಮನ್ನಪೇಕ್ಷಿಸದೆ ಸ್ವದೇಶವಿಚಾರವಮಂ ಮಾಡುವಂತೆ ಯಜಮಾನರು ತನಗೆ ಹೇಳಿಕಳುಹಿಸಿದ ಬಳಿಕ ಎಂದಿನಂತೆ ನಾನು ಸುಮ್ಮನಿದ್ದರೆ ನಿಷ್ಠುರಕ್ಕೆ ಯೋಗ್ಯನಾದೇನೆಂದು ತಿಳಿದು ಸ್ವರಾಜ್ಯದ ವಿಚಾರಮಂ ಪರಾಪೇಕ್ಷೆಯಿಲ್ಲದೆ ತಾನೇ ಮಾಡುತ್ತಿದ್ದನು.

ಅನಂತರದಲ್ಲಿ ಪರ್ವತರಾಜನ ಆಭರಣಂಗಳಿಂದ ಅಲಂಕೃತರಾಗಿ ತನ್ನ ಬಳಿಗೆ ಬಂದ ವಿಶ್ವಾವಸು ಮುಖ್ಯರಾದ ದ್ವಿಜರಂ ನೋಡಿ ಚಾಣಕ್ಯನು—ಎಲೈ ಆಪ್ತರಾದ ವಿಪ್ರೋತ್ತಮರುಗಳಿರಾ, ಏನೋ ಒಂದು ಕಾರ್ಯಾರ್ಥವಾಗಿ ಆಭರಣದಾನಮಂ ನಿಮಗೆ ಕೊಡಿಸಿದೆನು. ಈಗ ಮಲಯಕೇತುವನ್ನಾಶ್ರಯಿಸಿ ಪರ್ವತರಾಜ್ಯದಲ್ಲಿರುವ ಅಮಾತ್ಯರಾಕ್ಷಸನ ಗೃಹಸಮೀಪದಲ್ಲಿ ವರ್ತಕರ ವೇಷಮಂ ಧರಿಸಿ ನೀವು ಅಲಂಕರಿಸಿರುವ ಈ ಆಭರಣಂಗಳಂ ಮೂರು ಸಂಪುಟದಲ್ಲಿರಿಸಿಕೊಂಡು ಆ ಅಮಾತ್ಯನ ಬಳಿಗೆ ಹೋಗುವ ಬರುವ ಆಪ್ತಜನರ ಮುಖದಿಂದ ಈ ಭೂಷಣಂಗಳಂ ಕ್ರಯಕ್ಕೆ ಕೊಡುವೆವು ಎಂದು ಹೇಳಿ ಕಳುಹಿಸಿ ರಾಕ್ಷಸನಲ್ಲಿ ಅಗ್ಗವಾಗಿಯಾದರೂ ಕ್ರಯಕ್ಕೆ ಹೊಂದಿಸಿ ಅದರ ಮೌಲ್ಯಧನವನ್ನು ಯಥಾರ್ಥವಾಗಿ ನೀವೇ ತೆಗೆದುಕೊಳ್ಳಿರಿ. ಎಷ್ಟು ಕಡಮೆಯಾದರೂ ಮೂರು ಲಕ್ಷ ದ್ರವ್ಯಕ್ಕೆ ಕಡಮೆಯಾಗದು. ಈ ಕಾರ್ಯಮಂ ಮಾಡಿ ಬಂದು ನಮಗೆ ತಿಳುಹಿಸಿರಿ ಎಂದು ಆ ಬ್ರಾಹ್ಮಣರಂ ಕಳುಹಿಸಿ ತನ್ನ ಬಳಿಯಣ ಶಿಷ್ಯನಂ ಕರೆದು—

ಎಲೈ ಕುಶಬುದ್ಧಿಯೇ, ಜೀವಸಿದ್ಧಿ ಎಂಬ ಕ್ಷಪಣಕನು ರಾಕ್ಷಸನಿಂದ ಪ್ರೇಷಿತನಾಗಿ ವಿಷಕನ್ಯೆಯಂ ಪರ್ವತರಾಜನಿಗೆ ಒಪ್ಪಿಸಿ ಅವನಂ ಸಂಹಾರಂಗೆಯ್ಸಿ ದುದರಿಂದ ದ್ರೋಹಿಯಾದ ಅವನನ್ನು ಚಂದ್ರಗುಪ್ತರ ಅಪ್ಪಣೆಯ ಮೇರೆಗೆ ಪುರದಿಂ ಹೊರಡಿಸುವೆನೆಂದು ಸಾರುತ್ತ ಆ ಜೀವಸಿದ್ಧಿಯಂ ಹೊರಡಿಸುವಂತೆ ನಾವು ಆಜ್ಞಾಪಿಸಿದ್ದೇವೆಂಬುದಾಗಿ ತಳವಾರನಾದ ದಂಡಕನಿಗೆ ಹೇಳಬಾರೆಂದು ಕಳುಹಿಸಲು ; ಅವನು ಹೋಗಿ ಉಸುರಿ ಬಂದು ಅಪ್ಪಣೆಯ ಪ್ರಕಾರ ಊರು ಗಾವಲವನು ಕ್ಷಪಣಕನನ್ನು ಹೊರಡಿಸಿದನೆಂದು ತಿಳುಹಿಸಿದನು.

ಆ ಬಳಿಕ ಚಾಣಕ್ಯನು ಇನ್ನೊಬ್ಬ ಶಿಷ್ಯನಂ ಕರೆದು—ಎಲೈ ಪಟುಲೋಮಕನೇ, ಅಮಾತ್ಯನಿಗೆ ಮಿತ್ರನಾದ ಶಕಟದಾಸನು ಈ ಊರಲ್ಲಿ ಇದ್ದುಕೊಂಡು ದಾರುವರ್ಮಾದಿಗಳಿಗೆ ಸಹಾಯಕನಾಗಿ ಚಂದ್ರಗುಪ್ತನಿಗೆ ದ್ರೋಹವಂ ಎಣಿಸಿದುದರಿಂದ ಆ ಪ್ರಭುವಿನ ಅಪ್ಪಣೆಯ ಮೇರೆಗೆ ಈ ಶಕಟದಾಸನಂ ಶೂಲಕ್ಕೆ ಹಾಕುವೆವೆಂದು ಸಾರಿಕೊಂಡು ಹೋಗಿ ಅವನಂ ಶೂಲಾರೋಹಣವಂ ಮಾಡಿಸುವಂತೆ ನಾವು ಹೇಳಿದುದಾಗಿ ದಂಡಪಾಶಕನಿಗೆ ತಿಳಿಸಿಬಾರೆಂದು ಉಸುರಿ ಕಿವಿಯಲ್ಲಿ ಮತ್ತೊಂದು ವಾಕ್ಯಮಂ ಸೂಚಿಸಲು ; ಅವನು ಅದೇಪ್ರಕಾರ ಹೋಗಿ ಬಂದು ಶಕಟದಾಸನಂ ಹಿಡಿತರುವುದಕ್ಕೆ ದಂಡಪಾಶಕನು ಹೋದನೆಂದು ಚಾಣಕ್ಯನಿಗೆ ಬಿನ್ನೈಸಿದನು.

ಅನಂತರ ಚಾಣಕ್ಯನು ಬೇರೊಬ್ಬ ಶಿಷ್ಯನಂ ಕರೆದು—ಎಲೈ ಶೀಘ್ರಕಾರಿಯೇ, ಬಳೆಗಾರ ಸೆಟ್ಟಿಯಾದ ಚಂದನದಾಸನಂ ಕರೆದುಕೊಂಡು ಬಾರೆಂದು ಹೇಳಲು ; ಅವನು ಹೋಗಿ ಚಾಣಕ್ಯನ ಅಪ್ಪಣೆಯನ್ನು ಚಂದನದಾಸನಿಗರುಹಿದನು. ಆ ಸೆಟ್ಟಿಯು ತನ್ನ ಮನಸ್ಸಿನಲ್ಲಿ—ಕಠಿಣಚಿತ್ತಮುಳ್ಳವನಾದ ಚಾಣಕ್ಯನಂ ಕಂಡರೆ ನಿರಪರಾಧಿಯಾದರೂ ಭೀತನಾಗುವನು. ನಾನಾದರೋ ಮಹಾಪರಾಧಿಯು. ಅವನಂ ಕಂಡ ಬಳಿಕ ನನಗೇನು ವಿಪತ್ತು ಬರುವುದೋ ! ಬಳ್ಳಿಯದು, ಮಿತ್ರಕಾರ್ಯಾರ್ಥವಾಗಿ ಬಂದರೂ ಬರಲಿ. ರಾಕ್ಷಸನ ಗೃಹಜನ ಮಾತ್ರ ಸಿಕ್ಕದಂತೆ ಮಾಡಿದರೆ ಅದೇ ನನಗೆ ಪರಮಲಾಭಮೆಂದು ನಿಶ್ಚಯಿಸಿ ಚಾಣಕ್ಯ ಶಿಷ್ಯನಂ ಕುರಿತು—

ಅಯ್ಯಾ ವಿಪ್ರೋತ್ತಮನೇ, ನಾನು ಧರಿಸಿರುವ ವಸ್ತ್ರಗಳು ಮಲಿನವಾಗಿವೆ. ದೊಡ್ಡವರಂ ಕಾಣುವುದಕ್ಕೆ ಬೇರೆ ಧೌತಾಂಬರಂಗಳನ್ನುಟ್ಟುಕೊಂಡು ಬರುವೆನು. ನೀನು ಅವರೆಗೂ ಈ ಪೀಠದ ಮೇಲೆ ಕುಳಿತಿರಬಹುದು ಎಂದು ಹೇಳಿ ತಾನು

ಬಳಿಗೆ ಹೋಗಿ ತನಗೆ ಆಪ್ತನಾದ ಧನಸೇನನಂ ಕರೆದು—ಎಲೈ, ಕ್ರೂರನಾದ ಚಾಣಕ್ಯನು ನನ್ನಂ ಕರೆಯ ಕಳುಹಿಸಿದ್ದಾನೆ. ಅವನ ಬಳಿಗೆ ಹೋದ ಬಳಿಕ ಏನಾಗುವುದೋ ತಿಳಿಯಕೂಡದು. ನೀನು ಅಮಾತ್ಯರ ಕುಟುಂಬದವರನ್ನು ಮತ್ತೊಂದು ರಹಸ್ಯಸ್ಥಾನದಲ್ಲಿ ಇರಿಸಿ ಕಾದುಕೊಂಡಿರು ಎಂದು ನೇಮಿಸಿ ತಾನು ಮಡಿಬಟ್ಟೆಗಳಂ ಹೊದೆದುಕೊಂಡು ಹೊರಟು ಬಂದು ಚಾಣಕ್ಯನಂ ಕಂಡು ಕೈಮುಗಿಯಲು ;

ಎಲೈ ಚಂದನದಾಸನೇ, ನೀನು ಕ್ಷೇಮದಲ್ಲಿ ಇದ್ದೀಯಾ? ಮಾಡುವ ವ್ಯಾಪಾರಗಳು ನಿರುಪಾಧಿಕಗಳಾಗಿ ನಡೆಯುತ್ತಿವೆಯೇ? ಕುಳ್ಳಿರು ಎಂದು ಚಾಣಕ್ಯನು ನುಡಿಯಲು ; ಆ ಮಾತಿಗೆ ಚಂದನದಾಸನು—

ಸ್ವಾಮಿ, ತಮ್ಮ ಕೃಪೆಯಿಂದ ಎಲ್ಲವೂ ನಿಷ್ಕಂಟಕವೆಂದು ಹೇಳಿ ನಮಸ್ಕರಿಸಿ ಕುಳಿತುಕೊಂಡನು.

ಬಳಿಕ ಚಾಣಕ್ಯನು—ಎಲೈ ಚಂದನದಾಸನೆ, ಪ್ರಜೆಗಳು ಚಂದ್ರಗುಪ್ತನಂ ಒಳ್ಳೆಯವನೆಂದು ಹೇಳುತ್ತಾರೆಯೋ? ನಂದರನ್ನೇ ಉತ್ತಮರೆಂದು ಹೊಗಳಿಕೊಳ್ಳುತ್ತಾರೋ? ಎನಲು ;

ಸ್ವಾಮಿ, ಶರತ್ಕಾಲದ ಚಂದ್ರನಂ ಕಂಡ ನೈದಿಲೆಗಳಂತೆ ಪ್ರಜೆಗಳು ಚಂದ್ರಗುಪ್ತಮಹಾರಾಜರನ್ನೇ ಅಪೇಕ್ಷಿಸುತ್ತಿದ್ದಾರೆ ಎಂದನು.

ಚಾಣಕ್ಯನು—ಎಲೈ ಚಂದನದಾಸನೇ, ಸಂತುಷ್ಟರಾದ ಪ್ರಜೆಗಳದೆಸೆಯಿಂದ ಅರಸುಗಳು ಪ್ರತ್ಯುಪಕಾರವನ್ನಪೇಕ್ಷಿಸುವುದು ಪೂರ್ವಮರ್ಯಾದೆ ಎನಲು ;

ಚಂದನದಾಸನು ಸ್ವಾಮಿಯವರ ಅಪ್ಪಣೆಯಾದಂತೆ ಸರ್ವರೂ ತಮ್ಮ ಶಕ್ತಿಯಂ ಮೀರಿ ನಡೆದುಕೊಂಡಾರು ಎಂದನು. ಅದಕ್ಕೆ ಚಾಣಕ್ಯನು—

ಎಲೈ ಚಂದನದಾಸನೇ, ನಿರಪರಾಧಿಗಳಾದ ರಾಷ್ಟ್ರವಾಸಿಗಳ ದೆಸೆಯಿಂದ ದಂಡಮಂ ತೆಗೆಯುವುದಕ್ಕೆ ಇದು ನಂದರ ಪ್ರಭುತ್ವಮಲ್ಲ. ನೀವೆಲ್ಲರೂ ಕ್ಷೇಮಿಗಳಾಗಿದ್ದರೆ ಅದೇ ಚಂದ್ರಗುಪ್ತನಿಗೆ ಮಹಾಭ್ಯುದಯವು ಎನಲು ;

ಚಂದನದಾಸನು—ಸ್ವಾಮಿ, ಅದೇ ಮೇರೆಗೆ ನಮ್ಮೆಲ್ಲರಂ ರಕ್ಷಿಸಬೇಕು ಎಂದನು.

ಎಲೈ ಚಂದನದಾಸನೇ, ದೊರೆಗಳಿಗೆ ಅಪ್ರಿಯಮಂ ಮಾಡದಿದ್ದರೆ ಸಂರಕ್ಷಿತರಾಗಿದ್ದೀರಿ ಎಂದು ಚಾಣಕ್ಯನು ಹೇಳಿದುದಕ್ಕೆ ಚಂದನದಾಸನು—

ಸ್ವಾಮಿ, ದುರಾತ್ಮಕನಾದವನು ಜನೇಶ್ವರರಿಗೆ ಅಪ್ರಿಯವನ್ನು ಎಸಗುವವನು ಎನಲಾಗಿ ; ಚಾಣಕ್ಯನು—

ಎಲೈ ಚಂದನದಾಸನೇ, ಮೊದಲು ನೀನೇ ರಾಜದ್ರೋಹಿಯಾಗಿದ್ದೀ ಎಂದನು. ಅದಂ ಕೇಳಿ ಚಂದನದಾಸನು—

ಬುದ್ಧೇಶ! ಬುದ್ಧೇಶ! ಎಂದು ತನ್ನ ದೇವರಂ ನೆನೆಯುತ್ತ—ಸ್ವಾಮಿ, ಅಗ್ನಿಯೊಡನೆ ತೃಣಂಗಳಿಗೆ ಕಲಹಮುಂಟೇ? ಎನಲು; ಚಾಣಕ್ಯನು—

ಎಲೈ ವರ್ತಕನೇ, ರಾಜಾಪರಾಧಿಯಾದ ರಾಕ್ಷಸನ ಗೃಹಜನಮಂ ನಿನ್ನ ಮನೆಯಲ್ಲಿ ಮರೆಮಾಡಿ ಇರಿಸಿಕೊಂಡು ಈಗಿನವರೆಗೂ ಪ್ರಭುವಿಗೆ ವಿಜ್ಞಾಪಿಸದೆ ಇರುವುದು ನಿನ್ನಲ್ಲಿ ಅಪರಾಧವೋ ಅಲ್ಲವೋ? ಎಂದನು.

ಚಂದನದಾಸನು—ಬುದ್ಧೀ, ಯಾರೋ ಅನೃತವಮಂ ಹೇಳಿರಬೇಕು. ಈ ಯರ್ಥಮಂ ನಾನು ಕಂಡವನಲ್ಲ ಎಂದನು. ಚಾಣಕ್ಯನು—

ಈ ಸಂಗತಿಯಂ ನೀನು ಕಂಡಿರುವುದುಂಟಾದರೆ ನಿನ್ನ ಸರ್ವಸ್ವವನ್ನೂ ಅರಮನೆಗೆ ತೆಗೆದುಕೊಂಡು ನಿನಗೆ ತೀಕ್ಷ್ಣವಾದ ದಂಡನೆಯಂ ಮಾಡಬಹುದೇ? ಎನಲು; ಚಂದನದಾಸನು—

ರಾಕ್ಷಸನು ಹೋಗುವ ಸಮಯದಲ್ಲಿ ತನ್ನ ಮನೆಯ ಜನರಂ ನನ್ನ ಮನೆಯಲ್ಲಿರಿಸಿದ್ದುದುಂಟು. ಆ ಬಳಿಕ ಅವರು ನನ್ನಂ ವಂಚಿಸಿ ಎಲ್ಲಿಯೋ ಹೋದುದರಿಂದ ವಿಜ್ಞಾಪಿಸುವುದಕ್ಕೆ ಭಯಪಡುತ್ತಿದ್ದೆನು ಎಂದನು. ಅದಕ್ಕೆ ಚಾಣಕ್ಯನು—

ಎಲೈ ಸೆಟ್ಟಿಯೇ, ಮೊದಲು ಕಾಣೆನೆಂದು ಹೇಳಿ ಈಗ ಕಂಡುದುಂಟು. ಎಲ್ಲಿಯೋ ಹೋದರು ಎಂದು ಎರಡು ಮಾತುಗಳಂ ಹೇಳಬಹುದೇ? ಎನಲು; ಚಂದನದಾಸನು—

ಬುದ್ಧೀ, ಭಯದಿಂದ ಬಾಯಿತಪ್ಪಿ ಹಾಗೆ ಹೇಳಿದೆನು ಎಂದನು.

ಚಾಣಕ್ಯನು ನಕ್ಕು—ಎಲೈ ವ್ಯಾಪಾರಿಯೇ, ಚಂದ್ರಗುಪ್ತನ ಪ್ರಭುತ್ವದಲ್ಲಿ ಬಾಯಿ ತಪ್ಪು ಬರಕೂಡದು. ಸುಮ್ಮನೆ ರಾಕ್ಷಸನ ದಾರಾಪುತ್ರಾದಿಗಳಂ ತಂದು ಒಪ್ಪಿಸು ಎಂದನು.

ಆ ಮಾತಿಗೆ ಚಂದನದಾಸನು ತನ್ನ ಮನಸ್ಸಿನಲ್ಲಿ—ಈಗ ಶಿರಸ್ಸಿನ ಮೇಲೆ ಸರ್ಪಬಾಧೆಯೂ ಪರ್ವತಪ್ರಾಂತ್ಯದಲ್ಲಿ ವಿಷಹರವಾದ ಔಷಧವೂ ಇದ್ದಂತಾಯಿತು. ಏನೋ ಮಹದಾಪತ್ತು ಬಂದಿತು ಎಂದು ಚಿಂತಿಸುತ್ತಿರುವಷ್ಟರಲ್ಲಿ ಹೊರಗೆ ಆಗುವ ಕಲಕಲಧ್ವನಿಯಂ ಕೇಳ್ದು ಚಾಣಕ್ಯನು—ಅದೇನು? ತಿಳಿದು ಬಾರೆಂದು ಶಿಷ್ಯನಿಗೆ ನೇಮಿಸಲು; ಆ ಶಿಷ್ಯನು ಹೋಗಿ ಬಂದು—

ಸ್ವಾಮಿಾ ಉಪಾಧ್ಯಾಯರೇ, ವಿಷಕನ್ಯಾಮುಖದಿಂದ ಪರ್ವತರಾಜನಂ ಸಂಹರಿಸಿದ ದೋಷವನ್ನುದ್ಘಾಟಿಸುತ್ತ ದೂತರು ಜೀವಿಸಿದ್ಧಿ ಎಂಬ ಕ್ಷಪಣಕನಂ ಚಂದ್ರಗುಪ್ತನ ಅಪ್ಪಣೆಯ ಪ್ರಕಾರ ಅಪಮಾನಪೂರ್ವಕವಾಗಿ ಊರದೆಸೆಯಿಂದ ಹೊರಡಿಸುತ್ತಿದ್ದಾರೆ ಎನಲು; ತಾನು ಮಾಡಿದುದಕ್ಕೆ ತಕ್ಕುದಾದ ಫಲವನ್ನನುಭವಿಸಲಿ ಎಂದು ಚಾಣಕ್ಯನು ಹೇಳುತ್ತ—

ಎಲೈ ಚಂದನದಾಸನೇ, ರಾಜಾಪರಾಧಿಗಳಿಗೆ ಈ ರೀತಿಯಾಗುವುದು ಸ್ವಭಾವವು ಆದುದರಿಂದ ವಂಚಿಸದೆ ರಾಕ್ಷಸನ ಗೃಹಜನವನ್ನು ಕರತಂದು ಒಪ್ಪಿಸುವವನಾಗು ಎನಲು;

ಚಂದನದಾಸನು--ಸ್ವಾಮಿಾ, ನಾನು ಅರಿತವನಲ್ಲ ಎಂದನು.

ಅಷ್ಟರಲ್ಲಿಯೇ ಪುನಃ ಬೀದಿಯಲ್ಲಿ ಕೋಲಾಹಲರವಂ ಕೇಳಿ ಬರುತ್ತಿರಲು; ಅದೇನು ? ನೋಡು ಎನ್ನುತ್ತ ಚಾಣಕ್ಯನು ಶಿಷ್ಯನಿಗೆ ಆಜ್ಞಾಪಿಸಲು; ಅವನು ಹೋಗಿ ನೋಡಿ ಬಂದು—

ಉಪಾಧ್ಯಾಯರೇ, ಭಟರು ರಾಜದ್ರೋಹಿಯಾದ ಶಕಟದಾಸನನ್ನು ಅರಸಿನ ಅಪ್ಪಣೆಯ ಮೇರೆಗೆ ಶೂಲಕ್ಕೆ ಹಾಕುವುದಕ್ಕೆ ಸಾರಿಕೊಂಡು ಕರದೊಯ್ಯುತ್ತಿದ್ದಾರೆ ಎನಲು; ಅವನು ಮಾಡಿದ ದ್ರೋಹಕ್ಕೆ ಅನುಗುಣವಾದ ಫಲವನ್ನನುಭವಿಸಲಿ ಎಂದು ಹೇಳುತ್ತ ಚಾಣಕ್ಯನು ಚಂದನದಾಸನಂ ಕುರಿತು—

ಎಲೈ ಸೆಟ್ಟಿಯೇ, ರಾಜಾಪರಾಧಿಗಳಿಗೆ ಹೀಗೆ ಕಠಿಣದಂಡನೆಯಾಗುತ್ತಿರುವುದಂ ಕಂಡೂ ಇನ್ನೂ ಅರಿಯೆನೆಂದು ಹೇಳುತ್ತೀಯೇ? ನಿನ್ನ ಹೆಂಗಸರುಮಕ್ಕಳಿಗೆ ಕ್ಷೇಮವಾಗಬೇಕಾದರೆ ರಾಕ್ಷಸನ ಮನೆಯವರಂ ತಂದು ಒಪ್ಪಿಸು ಎನಲು ; ಚಂದನದಾಸನು—

ಸ್ವಾಮಿಾ, ಸುಮ್ಮನೇ ನನ್ನಂ ಬೆದರಿಸುವಿರಿ. ಅಮಾತ್ಯನ ಕುಟುಂಬದವರಂ ಇದ್ದರೂ ನಾನು ಕೊಡುವವನಲ್ಲ. ಇಲ್ಲದಿರುವವರಂ ಹೇಗೆ ಒಪ್ಪಿಸಲಿ ? ಎಂದನು. ಅದಕ್ಕೆ ಚಾಣಕ್ಯನು—

ಎಲೈ ಸೆಟ್ಟಿಯೇ, ನಿನ್ನ ನಿಶ್ಚಯವು ಇದೇ ಸರಿಯೋ ? ಎನಲಾಗಿ ;

ಚಂದನದಾಸನು—ಸ್ವಾಮಿಾ, ಹೀಗೇ ಸರಿ ಎನಲು ; ಚಾಣಕ್ಯನು ತನ್ನ ಹೃದಯದಲ್ಲಿ—ಈ ಸೆಟ್ಟಿಯು ಸತ್ಯವಂತನು. ಮಿತ್ರಕಾರ್ಯಕ್ಕೋಸ್ಕರವಾಗಿ ತನ್ನ ಪ್ರಾಣವನ್ನಾದರೂ ಒಪ್ಪಿಸತಕ್ಕವನು ಎಂದು ನಿಶ್ಚಯಿಸಿ ಆ ಮೇಲೆ ಕೋಪಿಸಿಕೊಂಡವನಂತೆ ಹುಬ್ಬುಗಂಟಿಕ್ಕಿ—ಎಲೈ ದುರಾತ್ಮಕನಾದ ವರ್ತಕನೇ, ಹಾಗಾ

ದರೆ ನೀನು ಮಾಡಿದ ದ್ರೋಹಕ್ಕೆ ಸರಿಯಾದ ಫಲವನ್ನನುಭವಿಸೀಯೆ ಎನಲು ;
ಚಂದನದಾಸನು—

ಸ್ವಾಮೀ, ನಿಮ್ಮ ಸ್ವಾತಂತ್ರ್ಯಾನುಗುಣವಾಗಿ ಮಾಡುವುದಂ ಮಾಡಿರಿ. ನಾನು ಸಿದ್ಧನಾಗಿದ್ದೇನೆ ಎಂದನು.

ಆಗ ಚಾಣಕ್ಯನು ಶಿಷ್ಯನಂ ಕರೆದು—ಎಲೈ ಶೀಘ್ರಕಾರಿಯೇ, ಈ ದುಷ್ಟ ವಣಿಜನ ಮನೆಯ ಪದಾರ್ಥಮೆಲ್ಲವಂ ರಾಜಕೋಶಕ್ಕೆ ತೆಗೆದುಕೊಂಡು ಸ್ವಜನ ಸಮೇತವಾಗಿ ಇವನಂ ಕಾವಲಿನಲ್ಲಿ ಇರಿಸುವಂತೆ ದುರ್ಗಪಾಲಕನಿಗೆ ಹೇಳು. ನಾನು ಚಂದ್ರಗುಪ್ತನಿಗೆ ತಿಳಿಸಿ ಇವನಿಗೆ ಕರ್ಕಶದಂಡನೆಯಂ ಮಾಡಿಸುವೆನೆಂದು ನುಡಿದು ಚಂದನದಾಸನಂ ಕಳುಹಿಸಿ ತನ್ನ ಅಂತರಂಗದಲ್ಲಿ—ಈ ಚಂದನದಾಸನು ಸುಹೃದನಾದ ರಾಕ್ಷಸನ ನಿಮಿತ್ತವಾಗಿ ತನ್ನಸುವನ್ನಾದರೂ ಕೊಟ್ಟು ಆತನ ಪತ್ನೀಪುತ್ರರಂ ರಕ್ಷಿಸುವೆನೆಂದು ಹೇಗೆ ನಿಶ್ಚಯಿಸಿ ಇರುವನೋ ಹಾಗೆಯೇ ರಾಕ್ಷಸನೂ ತನ್ನ ನಿಮಿತ್ತವಾಗಿ ಚಂದನದಾಸನಿಗೆ ಬಂದ ವಿಪತ್ತಂ ಪರಿಹರಿಸಲೋಸುಗ ಸ್ವಂತಪ್ರಾಣವನ್ನಾದರೂ ಇತ್ತು ಈ ಚಂದನದಾಸನಂ ಬಿಡಿಸುವೆನೆಂದು ಎಳೆಗಂದಿ ಉರುವಿದ್ದೆಡೆಗೆ ಬರುವಂತೆ ತಾನು ಇಲ್ಲಿಗೆ ಬಂದಾನು. ಶಕಟದಾಸನಂ ಶೂಲಸ್ಥಾನಕ್ಕೆ ಕಳುಹಿಸಿದಂತೆ ಸಮಯವನ್ನರಿತು ಈ ಸೆಟ್ಟಿಯಂ ಅದೇ ಸ್ಥಾನಕ್ಕೆ ಕಳುಹಿಸಬೇಕೆಂದು ನಿಶ್ಚಯಿಸುತ್ತಿರಲು ; ಮೊದಲು ಚಾಣಕ್ಯರು ತನ್ನ ಕಿವಿಯಲ್ಲಿ ಉಸುರಿದ ರೀತಿಗೆ ವಧ್ಯಸ್ಥಾನಕ್ಕೆ ಚಂಡಾಲರು ಕರತರುವುದಕ್ಕೆ ಮುಂಚಿತವಾಗಿಯೇ ಸಿದ್ಧಾರ್ಥಕನು ಖಡ್ಗಪಾಣಿಯಾಗಿ ಮರೆಯಲ್ಲಿ ನಿಂತು ಆ ಶಕಟದಾಸನಂ ಶೂಲಸ್ಥಳಕ್ಕೆ ಕರತಂದು ನಿಲ್ಲಿಸುವುದಂ ನೋಡಿ ಕತ್ತಿಯಂ ಝಳುಪಿಸುತ್ತ ಆ ಘಾತುಕರಂ ಅಟ್ಟಿ ಬಂದು ಮೇಲೆ ಬಿದ್ದು ಛೇದಿಸುವವನಂತೆ ಮೊರೆಯುತ್ತ ಕಣ್ಣುಸನ್ನೆಯಂ ಮಾಡಲು ; ಆ ಕಡಿಗರು ಅವನ ರಭಸಕ್ಕೆ ಭೀತರಾದವರಂತೆ ಶಕಟದಾಸನಂ ಬಿಟ್ಟು ದಿಕ್ಕುದಿಕ್ಕಿಗೆ ಓಡಿಹೋದರು. ಆಗ ಸಿದ್ಧಾರ್ಥಕನು ಚಾಣಕ್ಯ ಚಂದ್ರಗುಪ್ತರಂ ನಿಂದಿಸುತ್ತ—

ಎಲೈ ಶಕಟದಾಸನೇ, ಭಯಪಡಬೇಡ. ಈ ಸ್ಥಳಮಂ ಬಿಟ್ಟು ಎಲ್ಲಿಯಾದರೂ ಹೋಗೋಣ ನಡೆ ಎಂದು ಅವನಂ ಕರದುಕೊಂಡು ಪರ್ವತರಾಜ್ಯಾಭಿಮುಖವಾಗಿ ಹೋಗುತ್ತಿದ್ದನು. ಆಗ ಚಾಣಕ್ಯನ ಶಿಷ್ಯನು ಈ ವರ್ತಮಾನಮಂ ತಿಳಿದು ಬಂದು—

ಸ್ವಾಮೀ ಉಪಾಧ್ಯಾಯರೇ, ಶಕಟದಾಸನಂ ಶೂಲಾರೋಹಣಮಂ ಮಾಡಿ ಸುವ ಸಮಯದಲ್ಲಿ ಸಿದ್ಧಾರ್ಥಕನೆಂಬುವನು ಖಡ್ಗಪಾಣಿಯಾಗಿ ಬಂದು ಚಂಡಾಲರಂ ಬೆದರಿಸಿ ಓಡಿಸಿ ಶಕಟದಾಸನಂ ಕರೆದುಕೊಂಡು ಎಲ್ಲಿಯೋ ಪಲಾಯನಂಗೆಯ್ದನಂತೆ ಎನಲು ; ಅದಂ ಕೇಳಿ ಚಾಣಕ್ಯನು ತನ್ನ ಚಿತ್ತದಲ್ಲಿ—ಶಕಟದಾಸ ಸಮೇತನಾಗಿ ಸಿದ್ಧಾರ್ಥಕನು ಹೋದುದು ಉತ್ತಮವಾಯಿತು. ಅಲ್ಲಿದ್ದ ಸೇನಾಪತಿಗಳಂ ಹೊರಡಿಸಿ ಕಳುಹಿಸಿದುದಕ್ಕೆ ಪುರಜನರು ಏನೆಂದು ಹೇಳಿಕೊಳ್ಳುವರೋ ಅದಂ ತಿಳಿಯಬೇಕೆಂದು ನೆನೆಸಿ ಶಿಷ್ಯನಂ ಕುರಿತು—

ಎಲೈ ಭಾಗಪ್ರಚ್ಛನೆಂಬ ವಟುಕನೇ, ಶಕಟದಾಸನೂ ಸಿದ್ಧಾರ್ಥಕನೂ ಎಲ್ಲಿ ಹೋಗಿರುವರೋ ಅವರಂ ಹಿಡಿದು ತರುವಂತೆ ಬಾಗುರಾಯಣನಿಗೆ ಹೇಳಿ ಬಾರೆಂದೆನಲು ; ಅವನು ಹೋಗಿ ತಿಳಿದು ಬಂದು—

ಉಪಾಧ್ಯಾಯರೇ, ಬಾಗುರಾಯಣನು ಅಂದೇ ಹೊರಟು ಹೋದನಂತೆ ಎನಲು ;

ಆ ವಂಚಕನಾದ ಬಾಗುರಾಯಣನು ಎಲ್ಲಿ ಹೋಗಿದ್ದಾನೋ ಹಿಡಿದು ತರುವುದು ಎಂದು ಭದ್ರಭಟಾದಿಸೇನಾನಾಯಕರಿಗೆ ಉಸುರಿ ಬಾರೆಂದೆನಲು ; ಶಿಷ್ಯನು ಹೋಗಿ ವಿಚಾರಿಸಿ ಬಂದು—

ಓಹೋ ! ಉಪಾಧ್ಯಾಯರೇ, ಮೊದಲು ನೀವು ಆಸ್ಥಾನದಲ್ಲಿ ಕುಳಿತು ಕೋಪಮಂ ಮಾಡಿದುದರಿಂದ ಭದ್ರಭಟಾದಿಚಮೂಪತಿಗಳು ನಿಮ್ಮ ಮೇಲೆ ರಾಜಕಾರ್ಯಮಂ ಮಾಡುವುದಕ್ಕಾಗಿ ಬಲಸಮೇತರಾಗಿ ಇಲ್ಲಿಂದ ಹೋಗಿ ಪರರಾಜರಂ ಕಟ್ಟಿಕೊಂಡು ದಂಡೆತ್ತಿ ಬರುವವರಾಗಿದ್ದಾರಂತೆ. ಕೆಲಸವೆಲ್ಲ ಕೆಟ್ಟು ಹೋಯಿತು. ಈ ಯರ್ಥಮಂ ಜನರು ಅಡಲಂಜಿ ಗುಸುಗುಟ್ಟುತ್ತಿದ್ದಾರೆ. ತಾವು ಮಹಾಚತುರರಾದುದರಿಂದ ಆ ಶತ್ರುಗಳ ಸೈನ್ಯಕ್ಕೆ ಸಿಕ್ಕದೆ ತಪ್ಪಿಸಿ ಕೊಂಡೀರಿ. ಅನಾಥರಾಗಿರುವ ನಮ್ಮಂ ಹಿಡಿದು ನಿಮ್ಮ ಗುರುಗಳೆಲ್ಲಿ? ಎಂದು ನಿರ್ಬಂಧಪಡಿಸಿದರೆ ಬ್ರಾಹ್ಮಣರು ಅನೃತಮಂ ಹೇಳಬಾರದಷ್ಟೆ. ನೀವು ಹೋಗತಕ್ಕ ಸ್ಥಳಮಂ ಈಗಲೇ ತಿಳಿಸಿದ್ದರೆ ಒಳ್ಳೆಯದು ಎನಲು ; ಆ ಮಾತಿಗೆ ಚಾಣಕ್ಯನು ನಸುನಗುತ್ತ—

ಎಲೈ ವಟುವೇ, ದಸ್ಯುಗಳಿಗೆ ನಮ್ಮಂ ತೋರಿಸುವೆಯಾ ? ಆದರೆ ನಾವು ರಾಮೇಶ್ವರಕ್ಕೆ ಹೋಗಿ ಅಲ್ಲಿರುವೆವು ಎಂದನು.

ಸ್ವಾಮೀ, ರಾಮೇಶ್ವರವು ಎಲ್ಲಿ ಇರುವುದು ? ಎನಲು ;

ಎಲೈ ವಟುವೇ, ರಾಮೇಶ್ವರವು ರಾಮಸೇತುವಿದ್ದಲ್ಲಿ ಇರುವುದು ಎಂದನು. ಆ ಮಾತಿಗೆ ಶಿಷ್ಯನು—

ಸ್ವಾಮಿಾ, ರಾಮದೇವರು ತನ್ನ ಪಟ್ಟಣದ ಸರಯೂನದಿಯಲ್ಲಿ ಸೇತುವಂ ರಚಿಸಿರುವನೋ? ಇಲ್ಲವೇ ಯಮುನಾನದಿಯಲ್ಲಿ ರಚಿಸಿರುವನೋ? ಎನಲು ; ಚಾಣಕ್ಯನು—

ಎಲೈ ಬ್ರಹ್ಮಚಾರಿಯೇ, ಲವಣಸಮುದ್ರಕ್ಕೆ ಎಂದನು.

ಸ್ವಾಮಿಾ, ಲವಣಖಂಡವೇ ಸಮುದ್ರವಾದರೆ ಸಂಚರಿಸುವ ಜನರ ಪಾದಗಳಿಗೆ ಕ್ಷಾರ ತಗುಲದೇ ಇರುವುದಕ್ಕಾಗಿ ಸೇತು ಬಂಧವೋ? ಎನಲು ; ಅದಂ ಕೇಳಿ ಶಾರ್ಙರವನು—

ಎಲೈ ವಟುವೇ, ಏನು ಅಸಂಬದ್ಧವಾಗಿ ಕೇಳುತ್ತಿರುವೆ? ಶತ್ರುಬಾಧೆಯುಂಟಾದರೆ ಮೊದಲೇ ನಿನ್ನಂ ದಾಟಿಸುವೆವು. ಭಯಪಡಬೇಡ ಹೋಗು. ಕಂದಮೂಲಂಗಳಂ ತೊಳೆದು ಸಿದ್ಧಮಾಡು. ಮೊದಲು ಹೋದವರೆಲ್ಲ ಹೋದರು. ಮುಂದೆ ಹೋಗಬೇಕೆಂಬವರೆಲ್ಲ ಈ ಪುರಮಂ ಬಿಟ್ಟು ಹೋಗಲಿ. ನಮ್ಮ ಗುರುಗಳ ಕಾರ್ಯೋತ್ಸವಂ ತಗ್ಗದೆ ಇದ್ದರೆ ಸಕಲವೂ ಸಾಧ್ಯವಾಗುವುದು ಎಂದು ಹೇಳಿ ಭಾಗಪ್ರಚಿಷ್ಟನಂ ಆಚೆಗೆ ಕಳುಹಿಸುತ್ತಿದ್ದನೆಂಬಲ್ಲಿಗೆ ಮುದ್ರಾಮಂಜೂಷವೆಂಬ ಗ್ರಂಥದಲ್ಲಿ ರಾಕ್ಷಸಮುದ್ರಿಕಾಗ್ರಹಣವೆಂಬ ತ್ರಯೋದಶಾಶಯವು ಸಮಾಪ್ತವಾದುದು.

---

## ಚತುರ್ದಶಾಶಯ ಪ್ರಾರಂಭವು.

---

### ಕ್ಷಪಣಕಾಪಮಾನವು.

ಹೀಗಿರುತ್ತಿರಲು ; ಚಾಣಕ್ಯರು ಹೇಳಿ ಕಳುಹಿಸಿದಂತೆ ಸ್ವತಂತ್ರವಾಗಿ ರಾಜ್ಯವಿಚಾರಮಂ ಮಾಡುತ್ತಿರುವ ಚಂದ್ರಗುಪ್ತನು ಒಂದಾನೊಂದು ಸಮಯದಲ್ಲಿ ಶರತ್ಕಾಲಚಂದ್ರಚಂದ್ರಿಕಾನಿಕರಗಳೆಂಬ ಜಲಾಸಾರಗಳಿಂದ ಆರ್ದ್ರಗಳಾಗಿ ಅತಿಶುಭ್ರಗಳಾದ ಮೇಘಪಙ್ತಿಗಳೆಂಬ ಪುಳಿನ ರಾಶಿಗಳಿಂದಲೂ ಮಧುರವಾಗಿ ಧ್ವನಿಗೆಯ್ವ ಸಾರಸಪಕ್ಷಿಗಳಿಂದಲೂ ಶೋಭಿಸುತ್ತ ನಕ್ಷತ್ರಗಳೆಂಬ ಬಿಳಿಯ ನೈದಿಲೆಗಳಿಂದ ವ್ಯಾಪ್ತವಾಗಿ ನದಿಗಳ ಚಂದದಿಂ ಪ್ರಕಾಶಿಸುವ ದಿಙ್ಮಂಡಲ ಶೋಭಾವಿಶೇಷಮಂ ನೋಡಿ—ಈ ಶರತ್ಕಾಲವು ಜನಗಳಿಗೆ ಮಹಾಸಂತೋಷ

ಜನಕವು ಈ ರಾತ್ರಿಗಳಲ್ಲಿ ಕೌಮುದೀಮಹೋತ್ಸವವು ಮಹಾರಮಣೀಯವು. ನಮಗೆ ಆಧಿಪತ್ಯವಾದ ಬಳಿಕ ಈ ಪುರದಲ್ಲಿ ವಿಶೇಷೋತ್ಸವಗಳು ಎಂದೂ ನಡೆಯದಿಲ್ಲ. ನಂದನಾಶದಿಂದ ದುಃಖಿತರಾಗಿರುವ ಪ್ರಜೆಗಳಿಗೆ ಹರ್ಷಮುಂಟಾಗುವಂತೆ ಉತ್ಸವಮಂ ಮಾಡಬೇಕೆಂದು ಈ ಶುದ್ಧ ಪೂರ್ಣಿಮೆಯ ದಿವಸ ನಮಗೆ ವರ್ಷವರ್ಧಂತಿತ್ಯುತ್ಸವವು ಆಗಬೇಕಾಗಿದೆ. ಮೊದಲು ಹುಣ್ಣಿಮೆಯ ಚಂದ್ರೋದಯದ ಸಮಯದಲ್ಲಿ ನಾನು ಜನಿಸಿದವನಾದುದರಿಂದ ನಮ್ಮ ತಂದೆಯು ನನಗೆ ಚಂದ್ರಗುಪ್ತನೆಂಬ ನಾಮಾಂಕಿತಗೆಯ್ದನು. ಆದುದರಿಂದ ಇಂದು ಮೊದಲುಗೊಂಡು ಬಹುಳ ಪಂಚಮಿಯ ವರೆಗೆ ಹದಿನೈದು ದಿವಸಗಳ ಪರಿಯಂತರವೂ ಮಹೋತ್ಸವಮಂ ಮಾಡಿಸುವೆನೆಂದು ಮನಸ್ಸಿನಲ್ಲಿ ನಿಶ್ಚಯಿಸಿ ಸಮೀಪದ ದೂತರಂ ನೋಡಿ—

ಎಲೈ, ಈ ದಿವಸ ಮೊದಲುಗೊಂಡು ಇನ್ನು ಬಹುಳಪಂಚಮಿಯ ವರೆಗೂ ಈ ಪುರದಲ್ಲಿ ಕೌಮುದೀಮಹೋತ್ಸವವಾಗಲಿ. ನಗರವೆಲ್ಲವೂ ಶೃಂಗಾರಿಸಲ್ಪಡಲಿ. ಸುಗಾಂಗಮೆಂಬ ನಮ್ಮ ಪ್ರಾಸಾದವು ಮುಕ್ತಾಮಣಿಮಯವಾದ ಮೇಲುಕಟ್ಟುಗಳಿಂದಲಂಕೃತವಾಗಲಿ. ಈ ಪಟ್ಟಣದ ಪ್ರಜೆಗಳೆಲ್ಲರೂ ತಮ್ಮ ತಮ್ಮ ಸ್ತ್ರೀಜನಸಮೇತರಾಗಿ ಸಕಲವಿಧವಸ್ತ್ರ ಭೂಷಣ ಗಂಧಮಾಲಿಕಾದ್ಯಲಂಕೃತರಾಗಿ ಸಂತೋಷದಿಂದಿರಲಿ. ದೇವಾಲಯಂಗಳಲ್ಲಿ ಉತ್ಸವಾರಾಧನಗಳು ನಡೆಯಲಿ. ಆಶ್ರಿತವಿದ್ವಜ್ಜನಗಳಿಗೂ ಅಧಿಕಾರಿಗಳಿಗೂ ನಮ್ಮ ಬೊಕ್ಕಸದಿಂದ ವಿವಿಧ ವಸ್ತ್ರಭೂಷಣಂಗಳು ಕಳುಹಿಸಲ್ಪಡಲಿ. ಸಮಸ್ತ ರಾಜವೀಧಿಗಳಲ್ಲೂ ಮಣಿಮಂಜೀರಧ್ವನಿಗಳಿಂ ಮನೋಹಾರಿಣಿಯರಾದ ವೇಶ್ಯಾಸ್ತ್ರೀಯರುಗಳ ಸಂಗೀತಗಳು ನಡೆಯುತ್ತಿರಲಿ. ಬ್ರಾಹ್ಮಣರಿಗೆ ಭೂರಿಭೋಜನಂಗಳಾಗಲಿ. ದೀನಾನಾಥರಿಗೆ ಅನ್ನವಸ್ತ್ರಂಗಳು ಕೊಡಲ್ಪಡಲಿ. ಕಾರಾಗೃಹದಲ್ಲಿರುವ ಜನರು ಬಿಡಲ್ಪಡಲಿ ಎಂದು ಚಂದ್ರಗುಪ್ತನು ದೂತರಿಗೆ ಆಜ್ಞಾಪಿಸಲಾಗಿ; ಆ ಅರಸಾಳುಗಳು ಮಹಾಪ್ರಸಾದವೆಂದು ಬಂದು ರಾಜಾಜ್ಞೆಯ ಮೇರೆಗೆ ಉತ್ಸವವು ನಡೆಯುವಂತೆ ರಾಜವೀಧಿಗಳಲ್ಲಿ ಡಂಗುರಮಂ ಹಾಕಿ ಸಾರುತ್ತ ಬರುತ್ತಿರಲು; ಆ ಧ್ವನಿಯಂ ಕೇಳಿ ಚಾಣಕ್ಯನು ಶಿಷ್ಯನಂ ಕರೆದು—

ಎಲೈ ಶೀಘ್ರಕಾರಿಯೇ, ಅದೇನು ಕೋಲಾಹಲ? ತಿಳಿದು ಬಾರೆನಲು; ಆತನು ನೋಡಿ ಬಂದು—

ಉಪಾಧ್ಯಾಯರೇ, ಕೌಮುದೀಮಹೋತ್ಸವವಾಗುವುದಕ್ಕಾಗಿ ಚಂದ್ರಗುಪ್ತನ ಆಜ್ಞೆಯ ಪ್ರಕಾರ ಪಟ್ಟಣದಲ್ಲಿ ಸಾರುತ್ತಿದಾರೆ ಎನಲು ; ಅದಂ ಕೇಳಿ ಚಾಣಕ್ಯನು ಕ್ಷಣಮಾತ್ರಯೋಚಿಸಿ ಶಿಷ್ಯನಂ ನೋಡಿ—

ಎಲೈ ಶೀಘ್ರಕಾರಿಯೇ, ಈಗ ಈ ಉತ್ಸವವನ್ನು ಮಾಡಕೆಲಸವಿಲ್ಲ. ನಿಲ್ಲಿಸತಕ್ಕದೆಂದು ಸಾರುವ ಭಟರಿಗೆ ನಾವು ಹೇಳಿದುದಾಗಿ ತಿಳಿಸಿ ಬಾರೆನಲು ; ಆ ಶಿಷ್ಯನು ಹೋಗಿ ಅವರಂ ಕುರಿತು—

ಎಲೈ ರಾಜಭೃತ್ಯರುಗಳಿರಾ, ಚಾಣಕ್ಯರ ಅಪ್ಪಣೆಯಾಗಿದೆ. ಈಗ ಈ ನಗರದಲ್ಲಿ ಕೌಮುದೀ ಮಹೋತ್ಸವಮಂ ಮಾಡಕೆಲಸವಿಲ್ಲ. ನೀವು ಹಿಂದಕ್ಕೆ ಹೋಗಿರಿ ಎನಲು ; ದೂತರು ಕೇಳಿ—ಚಾಣಕ್ಯನ ಆಜ್ಞೆಯಂ ಮೀರಿದರೆ ಅಪರಾಧಕ್ಕೆ ಪಾತ್ರರಾದೇವೆಂಬ ಭೀತಿಯಿಂದ ಸಾರುವುದಂ ಬಿಟ್ಟು ವಿಮುಖರಾಗಲು ; ಆಗ ಪುರವಾಸಿಗಳೆಲ್ಲರೂ ಅದನ್ನಾಕರ್ಣಿಸಿ—ಈಗ ರಾಜಾಜ್ಞೆಗೆ ಭಂಗಮುಂಟಾದುದರಿಂದ ಚಾಣಕ್ಯಚಂದ್ರಗುಪ್ತರಿಗೆ ಏನೋ ಮನಸ್ತಾಪಮುಂಟಾಗಿರಬೇಕೆಂದು ರಹಸ್ಯವಾಗಿ ಆಡಿಕೊಳ್ಳುತ್ತಿದ್ದರು.

ಹೀಗಿರುವಲ್ಲಿ ಮೊದಲು ರಾಕ್ಷಸನಿಂದ ನೇಮಿಸಿ ಕಳುಹಿಸಲ್ಪಟ್ಟಿದ್ದ ಒಬ್ಬ ಗೂಢಚಾರನು ಹಾವಾಡಿಗನ ವೇಷಮಂ ಧರಿಸಿ ಅಲ್ಲಲ್ಲಿ ತಿರುಗುತ್ತ ಈ ಕುಸುಮಪುರದ ವೃತ್ತಾಂತವೆಲ್ಲಮಂ ತಿಳಿದುಕೊಂಡು ತನ್ನ ಒಡೆಯನಿಗೆ ಅರುಹಬೇಕೆಂದು ನಿಶ್ಚಯಿಸಿ ಪಾಟಲೀಪುರಮಂ ಬಿಟ್ಟು ರಾಕ್ಷಸನಿದ್ದೆಡೆಗೆ ಬರುತ್ತಿದ್ದನು.

ಇತ್ತ ಕೌಮುದೀಮಹೋತ್ಸವವು ನಡೆಯ ಕೂಡದು ಎಂದು ಆಜ್ಞಾಪಿಸಿದ ಚಾಣಕ್ಯನ ವಾಕ್ಯಮಂ ಕೇಳಿ ಶಾರ್ಙರವನೆಂಬ ಆತನ ಶಿಷ್ಯನು ಚಾಣಕ್ಯನಂ ಕುರಿತು ರಹಸ್ಯದಲ್ಲಿ—ಸ್ವಾಮಿ ಉಪಾಧ್ಯಾಯರೇ, ಈ ರಾಜ್ಯವನ್ನಾಳುವ ಚಂದ್ರಗುಪ್ತನಿಗೆ ಸಮ್ಮತವಾದ ಈ ಕೌಮುದೀಮಹೋತ್ಸವಮಂ ನಿಲ್ಲಿಸಿದುದರಿಂದ ಆತನು ತನ್ನ ಆಜ್ಞೆಗೆ ಭಂಗವಾಯಿತೆಂದು ವ್ಯಸನದಿಂ ನಮ್ಮಲ್ಲಿ ಅನುರಾಗಮಂ ಬಿಟ್ಟಾನು. ಆದಲ್ಲದಿದ್ದರೆ ತಾನು ಮಾನಶಾಲಿಯಾದುದರಿಂದ ಈ ಅಧಿಪತ್ಯವನ್ನಾದರೂ ತ್ಯಜಿಸಾನು. ಜನರು ನಿಮ್ಮಲ್ಲಿ ಮಾತ್ಸರ್ಯವನ್ನಾರೋಪಿಸಾರು. ಇದುವರೆಗೆ ಮಾಡಿದ ಶ್ರಮವೆಲ್ಲವೂ ನಿರರ್ಥಕವಾದೀತು. ನಿಮ್ಮ ವಾಕ್ಯದಿಂದಲೇ ಸ್ವತಂತ್ರನಾಗಿ ರಾಜ್ಯಭಾರಮಂ ಮಾಡುವ ಚಂದ್ರಗುಪ್ತನ ಆಜ್ಞಾಭಂಗಮಂ ನೀವೇ ಮಾಡಿದುದರಿಂದ ಪರಸ್ಪರ ಕಲಹ ಮುಂಟಾಗಿ

ಜನಗಳಿಗೆ ಹಾಸ್ಯಾಸ್ಪದವಾಗಿ ಶತ್ರುಗಳಿಗೆ ಸಂತೋಷಮುಂಟಾಗುವುದು. ತಾವು ಅಭಿಜ್ಞರು. ಇದೇನು ನಿಮಿತ್ತವಾಗಿ ಈ ಮಹೋತ್ಸವಮಂ ನಿಲ್ಲಿಸಿದ್ದೀರೋ ತಿಳಿಯಕೂಡದು ಎನಲು ; ಆ ವಾಕ್ಯಮಂ ಕೇಳಿ ಚಾಣಕ್ಯನು—

ಎಲೈ ಪ್ರಿಯ ಶಿಷ್ಯನಾದ ಶಾರ್ಙ್ಗರವನೇ, ನೀನು ಹೇಳಿದುದು ವಿಹಿತವು. ನಾನು ಚಂದ್ರಗುಪ್ತನ ಕಾರ್ಯಾರ್ಥವಾಗಿಯೇ ಈ ಉತ್ಸವಮಂ ನಿಲ್ಲಿಸಿದೆನಲ್ಲದೆ ಅವನಲ್ಲಿ ನನಗೆ ಮತ್ಸರಮುಂಟೇ ? ಆದರೆ ಕೇಳು—ಲೋಕದಲ್ಲಿ ಮಂತ್ರ ರಹಸ್ಯವನ್ನು ಅಧಿಕಾರಿಯಾದ ಶಿಷ್ಯನಿಗಲ್ಲದೆ ಅನ್ಯರಿಗೆ ಹೇಗೆ ಹೇಳಕೂಡದೋ ಹಾಗೆ ತನಗಿಂತಲೂ ಬುದ್ಧಿಯಿಂದ ಅಧಿಕನೂ ನಿರ್ವಂಚಕನೂ ದಕ್ಷನೂ ಆಪ್ತನೂ ದೂರದೃಷ್ಟಿಯುಳ್ಳವನೂ ಆದವನಲ್ಲಿ ಆಲೋಚನೆಯಂ ಮಾಡಬೇಕಲ್ಲದೆ ಅಪ್ರಾಜ್ಞನೂ ಅನಾಪ್ತನೂ ವಂಚಕನೂ ಚಂಚಲನೂ ಅಶುಚಿವಂತನೂ ಆದವನಲ್ಲೂ ಮುಗ್ಧಸ್ತ್ರೀ ಜನದಲ್ಲೂ ಮಾಡಕೂಡದು. ಮಂತ್ರಾಲೋಚನೆಯಂ ಮಾಡುವುದೇನೆಂದು ಕೇಳುವೆಯಾ ? ತಾನು ಮಾಡುವ ಕಾರ್ಯದಲ್ಲಿ ಪ್ರಮಾದ ಬಂದೀತೆಂದು ಅನ್ಯರಲ್ಲಿ ಆಲೋಚಿಸಬೇಕು. ತನ್ನ ಬುದ್ಧಿಯಲ್ಲಿ ಪ್ರಮಾದವಿಲ್ಲದಿದ್ದರೆ ನಿಜ ಮನಸ್ಸಿನ ಆಲೋಚನೆಯೇ ಉತ್ತಮವು. ಯೋಗ್ಯನಾದ ನಿನಗೆ ಕುತೂಹಲವಿದ್ದರೆ ಹೇಳುವೆವು ಕೇಳು—ಈಗ ರಾಕ್ಷಸನು ಮಲಯಕೇತುವನ್ನೊಡಂಬಡಿಸಿ ಚಂದ್ರಗುಪ್ತನ ಮೇಲೆ ದಂಡೆತ್ತಿ ಬರುತ್ತಿದ್ದಾನಂತೆ. ವಾಸಗೃಹಮಂ ನೋಂಕಿದ ಅಗ್ನಿಯನ್ನು ಸ್ವಲ್ಪಮಾತ್ರವೆಂದು ಉಪೇಕ್ಷಿಸಿದರೆ ಅದು ವಾಯುಸಹಾಯದಿಂದ ಮಹಾತ್ತಾಗಿ ಮನೆಯೆಲ್ಲಮಂ ಸುಡುತ್ತ ಬರಲು ಅದಂ ಶಮನಮಂ ಮಾಡುವುದಕ್ಕೆ ಹೇಗೆ ಮಹಾಯತ್ನಮಂ ಮಾಡಬೇಕೋ ಅದೇ ರೀತಿಯಲ್ಲಿ ಬಲಿಷ್ಠನಾದ ಶತ್ರುವು ಸಮೀಪಸ್ಥನಾಗುವುದಕ್ಕಿಂತ ಮುಂಚಿತವಾಗಿಯೇ ಯಾವ ಉಪಾಯದಿಂದಾದರೂ ಅವನಂ ನಿಗ್ರಹಿಸದೆ ಉದಾಸೀನಮಾಡಿದರೆ ಮುಂದೆ ಮಹಾ ವ್ಯವಸಾಯಮಂ ಮಾಡಬೇಕಾದುದರಿಂದ ಸುಲಭದಲ್ಲಿಯೇ ಅರಿವಿಜಯಮಾಗುವಂತೆ ಆಲೋಚಿಸಿರುವೆನು. ಅದೇನೆಂನರೆ—ನಿನ್ನ ಸಿದ್ಧಾರ್ಥಕನ ಕೈಯ್ಯಲ್ಲಿ ಶಕಟದಾಸನ ಅಕ್ಷರದಿಂದ ಬರೆಸಿದ ಕಾಗದಕ್ಕೆ ರಾಕ್ಷಸನ ಮುದ್ರೆಯುಂಗುರದಲ್ಲಿ ಮೋಹರಮಂ ಮಾಡಿಸಿ ಕಳುಹಿಸಿರುವೆನಾದುದರಿಂದ ಆ ಪತ್ರವು ಸಮಯಾಂತರದೊಳ್ ಮಲಯಕೇತುವಿನ ದಂಡಿನ ಉಕ್ಕಡದಲ್ಲಿ ಸಿಕ್ಕಿ ಆ ರಾಜಪುತ್ರನ ಬಳಿಗೆ ತಲಪುವುದು. ಅದಂ ಬಿಚ್ಚಿ ಓದಿಕೊಂಡರೆ ಚಂದ್ರಗುಪ್ತನು ಬರೆದು ಕಳುಹಿಸಿದ್ದ ಕಾಗದಕ್ಕೆ ರಾಕ್ಷಸನು ಪ್ರತಿಯಾಗಿ ಲಿಖಿ

ಸಿದಂತೆ ತೋರುವುದು. ಇದರರ್ಥಮಂ ಪರಿಭಾವಿಸಲು ; ಚಂದ್ರಗುಪ್ತನೊಳ್ ರಾಕ್ಷಸನು ಮಂತ್ರಿತ್ವವನ್ನಪೇಕ್ಷಿಸಿ ಬರೆದು ಕಳುಹಿಸಿದಂತೆ ತೋರಿದ ಬಳಿಕ ಮಲಯಕೇತುವು ತನ್ನ ಬಳಿಯಲ್ಲಿ ಆಶ್ರಯಿಸಿರುವ ಅಮಾತ್ಯನನ್ನು ಕಪಟ ಮಿತ್ರನೆಂದು ತಿಳಿದು ತನ್ನನ್ನೂ ತನ್ನ ರಾಜ್ಯವನ್ನೂ ಮೌರ್ಯಪುತ್ರನ ವಶಮಂ ಮಾಡಿ ಅವನಲ್ಲಿ ಶ್ರೇಷ್ಠವಾದ ಸಚಿವಪದಮಂ ಕೋರಿ ಚಂದ್ರಗುಪ್ತನ ಬಳಿಗೆ ಈ ಕಾಗದಮಂ ರಾಕ್ಷಸನು ಬರೆದಿದ್ದಾನೆಂದು ನಿಶ್ಚಯಿಸಿ ಅವನ ಮೇಲೆ ಕೋಪಮಂ ಮಾಡಿ ಅವನಂ ಹೊರಡಿಸುವ ಸಮಯದಲ್ಲಿ ನಮಗೂ ಚಂದ್ರಗುಪ್ತನಿಗೂ ಎಂದಿನಂತೆ ಸೌಜನ್ಯವಿರುವ ಅರ್ಥವು ಲೋಕಪ್ರಸಿದ್ಧವಾಗಿದ್ದರೆ ಆಗ ಚಂದ್ರಗುಪ್ತ ಚಾಣಕ್ಯರಿಗೆ ಪರಸ್ಪರಮಿತ್ರತ್ವವಿರುವಲ್ಲಿ ರಾಕ್ಷಸನು ತನ್ನೊಳಗೆ ಕಪಟವನ್ನೆಣಿಸಿ ಮೌರ್ಯನಂದನನಿಗೆ ಕಾಗದಮಂ ಸ್ನೇಹಾರ್ಥವಾಗಿ ಬರೆಯುವುದಕ್ಕೆ ನಿಮಿತ್ತವಿಲ್ಲ. ತನಗೂ ರಾಕ್ಷಸನಿಗೂ ವಿರೋಧಮಂ ಕಲ್ಪಿಸುವುದಕ್ಕೆ ಅಮಾತ್ಯನ ದ್ವೇಷಿಗಳಾದವರು ಯಾರೋ ಬರೆದು ಇದ್ದಾರೆ ಎಂದು ಮಲಯಕೇತುವು ವಿಚಾರಿಸಿ ತಿಳಿದರೆ ನಾವು ಯೋಚಿಸಿದ ಕಾರ್ಯವು ಕೆಟ್ಟು ಪತ್ರದಿಂದ ಸಿಕ್ಕಿದ ಸಿದ್ಧಾರ್ಥಕನಿಗೂ ಏನಾದರೂ ಒಂದು ಪ್ರಾಣಾಪತ್ತು ಬಂದರೆ ತನ್ನ ಜೀವ ಸಂರಕ್ಷಣಾರ್ಥವಾಗಿ ಯಥಾರ್ಥಮಂ ಹೇಳಿದರೆ ರಾಜಕಾರ್ಯವು ಮತ್ತೂ ಹಸಗೆಡುವುದು. ಅದರಿಂದ ಆ ಕಾಗದಮಂ ಓದಿ ನಿಶ್ಚಯಿಸುವ ಸಮಯದಲ್ಲಿ ನಮಗೂ ಚಂದ್ರಗುಪ್ತನಿಗೂ ಮನಸ್ತಾಪವು ಅಧಿಕವಾಗಿದೆ ಎಂಬ ಅರ್ಥವು ಲೋಕದಲ್ಲಿ ಪ್ರಸಿದ್ಧವಾಗಿದ್ದಲ್ಲಿ ಚಾಣಕ್ಯ ಚಂದ್ರಗುಪ್ತರಿಗೆ ಮಹತ್ತಾಗಿ ವಿರೋಧಮುಂಟಾಗಿರುವುದರಿಂದ ಸಮರ್ಥನಾದ ರಾಕ್ಷಸನನ್ನು ತನ್ನ ಸಚಿವನಂ ಮಾಡಿಕೊಳ್ಳಬೇಕೆಂದು ಆತನು ಬರೆದು ಇದ್ದ ಕಾಗದಕ್ಕೆ ರಾಕ್ಷಸನು ಸಮ್ಮತನಾಗಿ ಇದೇ ಸಮಯದೊಳ್ ಚಂದ್ರಗುಪ್ತನಲ್ಲಿ ಮಂತ್ರಿತ್ವವನ್ನೊಡಂಬಟ್ಟು ಅದಕ್ಕೆ ಉತ್ತರಪತ್ರಿಕೆಯಂ ಲೇಖನಗೊಳಿಸಿ ಕಳುಹಿಸಿದ್ದಾನು ಎಂದು ಮಲಯಕೇತುವು ತನ್ನ ಮನಸ್ಸಿನಲ್ಲಿ ದೃಢೀಕರಿಸಿ ಆಪ್ತನಂತೆ ತನ್ನ ಬಳಿಯಲ್ಲಿರುವ ಭಾಗುರಾಯಣನ ಸಂಗಡ ಆಲೋಚಿಸಿ ರಾಕ್ಷಸನನ್ನು ತನ್ನ ಬಳಿಯಿಂದ ಹೊರಡಿಸಿ ಬಿಡುವನು. ಆ ಬಳಿಕ ಅಮಾತ್ಯನು ತಾನಾಗಿ ಇಲ್ಲಿಗೆ ಬರುವಂತೆ ಬೇರೆ ಪ್ರಯತ್ನಮಂ ಮಾಡುವೆನು. ಇದಲ್ಲದೆ ಆ ಕಾಗದದಿಂದ ಮಲಯಕೇತುವಿನ ಸಮೀಪದಲ್ಲಿ ಮಹಾನರ್ಥವು ನಮ್ಮ ಕಾರ್ಯಕ್ಕೆ ಉಪಯುಕ್ತವಾಗಿ ನಡೆದೀತು. ಆ ಪತ್ರಮಂ ನೋಡಿಕೊಳ್ಳುವ ಸಮಯದಲ್ಲಿ

ನನುಗೂ ಚಂದ್ರಗುಪ್ತನಿಗೂ ಅಂತಃಕಲಹಮುಂಟಾಗಿದೆ ಎಂದು ಪರಸೈನ್ಯ ದೊಳ್ ಪ್ರಸಿದ್ಧವಾಗಬೇಕೆಂದು ಈ ಕೌಮುದೀಮಹೋತ್ಸವಮಂ ನಿಲ್ಲಿಸಿ ದೆನೆಂಬುದಾಗಿ ಶಾರ್ಙರವನಿಗೆ ಹೇಳುತ್ತಿರಲು ; ಆ ವಾಕ್ಯಮಂ ಕೇಳಿ ಪ್ರಿಯ ಶಿಷ್ಯನಾದ ಆತನು—

ಸ್ವಾಮೀ ಮಹಾನುಭಾವರಾದ ಗುರುಗಳೇ, ನಿಮ್ಮ ಮನೋಭಿಪ್ರಾಯಮಂ ತಿಳಿಯುವುದು ಪಂಡಿತನಿಗಾದರೂ ಅಶಕ್ಯವು. ನಮ್ಮಂಥವರು ದಂಡನೀತಿಶಾಸ್ತ್ರ ದಲ್ಲಿ ಶುಕ್ರಾಚಾರ್ಯರೇ ಅವತರಿಸಿದ್ದಾರೆಂದು ನಿಮ್ಮಂ ತಿಳಿಯಬೇಕಲ್ಲದೆ ಇವು ಉಪಚಾರೋಕ್ತಿಗಳಲ್ಲ. ಮತ್ತೊಂದು ಸಂಶಯವಿರುವುದು—ಇಂದುಶರ್ಮನಿಗೆ ಕ್ಷಪಣಕವೇಷಮಂ ಹಾಕಿಸುವುದಕ್ಕೆ ನಿಮಿತ್ತವೇನು ?ಅವನ ಶಿಷ್ಯರಿಗೆ ಬುದ್ಧ ಮತಸ್ಥರ ವೇಷಮಂ ಧರಿಸಿಕೊಂಡು ಕಾರ್ಯಮಂ ನೋಡುವಂತೆ ನೇಮಿಸಿರುವು ದಕ್ಕೆ ಕಾರಣವಾವುದು ? ಅರಣ್ಯವಾಸಿಗಳಾದ ನಿಮಗೆ ಈ ಲೌಕಿಕವ್ಯವಹಾರ ದಿಂದ ಪ್ರಯೋಜನವೇನು ? ಆರಂಭಪರ್ಯವಸಾನಗಳಲ್ಲಿ ಲೋಕವ್ಯಾಪಾರವು ಹೇಗೆ ಇರಬೇಕೆಂಬುದು ನಿಮ್ಮ ಮನೋಗತಾರ್ಥವು? ಇದಂ ಕೇಳುವುದಕ್ಕೆ ನಾನು ಯೋಗ್ಯನಾಗಿದ್ದರೆ ಕೃಪೆ ಮಾಡಬಹುದು ಎಂದು ಬೇಡುತ್ತಿರಲು ; ಚಾಣಕ್ಯನು—

ಎಲೈ ಮುಖ್ಯಪ್ರಿಯ ಶಿಷ್ಯನೇ, ಆರಂಭ ಪರ್ಯವಸಾನದಲ್ಲಿ ಪ್ರಪಂಚಮರ್ಯಾ ದೆಯು ಹೇಗಿರಬೇಕೆಂದು ನಿಮ್ಮ ಮನೋಗತಾರ್ಥವು? ಎಂದು ಕೇಳಿದುದಕ್ಕೆ ನೀನು ಯೋಗ್ಯನಾದುದರಿಂದ ಉತ್ತರಮಂ ಹೇಳುವೆನು. ಈ ಲೌಕಿಕ ವ್ಯವಹಾರ ದಿಂದ ನನುಗೇನೂ ಪ್ರಯೋಜನವಿಲ್ಲದಿದ್ದರೂ ಅಂಗೀಕರಿಸಬೇಕಾಯಿತು. ಏಕೆಂ ದರೆ—ಯುಗಾಂತರದಲ್ಲಿ ಅಸುರ ಸಂಘವು ತಪೋಬಲದಿಂದ ಲೋಕಾಧಿಪತ್ಯಮಂ ಮಾಡುತ್ತ ಧರ್ಮಕ್ಕೆ ಆಧಾರವಾದ ವೇದ ಮಾರ್ಗಂಗಳಂ ನಷ್ಟಗೊಳಿಸುತ್ತಿರು ವುದಂ ನೋಡಿ ದೇವತೋತ್ತಮರಾದವರು ಅವತಾರಂಗಳಂ ಗೆಯ್ದು ದನುಜ ವರ್ಗ ಮಂ ನಾಶಗೊಳಿಸಿ ಧರ್ಮಸಂಸ್ಥಾಪನಮಂ ಮಾಡಿದರು. ಆಗ ನಷ್ಟರಾದ ದೈತ್ಯರು ಈ ಕಲಿಯುಗದಲ್ಲಿ ಕಾಲಾನುಗುಣವಾಗಿ ಮನುಷ್ಯರೊಳ್ ಜನಿಸಿ ಆರ್ಹತ ಬೌದ್ಧಲೋಕಾಯತಿಕಾದಿ ನಾಸ್ತಿಕ ಮತಗಳನ್ನವಲಂಬಿಸಿ "ನಾಸ್ತಿ ಪರಲೋಕಃ ನಾಸ್ತಿ ಈಶ್ವರಃ" ಎಂದು ಶಾಸ್ತ್ರವಿರುದ್ಧವಾದ ಉಕ್ತಿಗಳಿಂದ ಮೂಢರಂ ಮೋಹಗೊಳಿಸುತ್ತ ಸ್ವೇಚ್ಛಾಚಾರದಿಂ ನಡೆಯುತ್ತ ಜನಗಳಿಗೆ ಇದೇ ಅರ್ಥಮಂ ಬೋಧಿಸುತ್ತ ಭೂಲೋಕವನ್ನಾಕ್ರಮಿಸುತ್ತ ಕುಲೀನರಾದ ಅರಸುಗಳಂ ಮೋಹ

ಗೊಳಿಸಿ ಅವರಿಗೆ ಪ್ರೀತಿಪಾತ್ರರಾಗಿ ವೇದಮಾರ್ಗಮಂ ದೂಷಿಸುತ್ತ ಪ್ರಜೆಗಳಿಗೆ ಧರ್ಮದಲ್ಲಿ ಉಪೇಕ್ಷೆಯುಂಟಾಗುವಂತೆ ಮಾಡುತ್ತ ತಾವು ನರಕ ಭಾಜನರಾಗಿ ಪ್ರಪಂಚಮಂ ಕೆಡಿಸುತ್ತಿರುವುದಂ ತಿಳಿದು ನಮ್ಮ ಆಚಾರ್ಯರು ನನ್ನಂ ಕರೆದು ಇದೆಲ್ಲವನ್ನರುಹಿ ಈ ದುಷ್ಟಜನಮಂ ನಿಗ್ರಹಿಸಿ ಧರ್ಮಪ್ರಚಾರಮುಂಟಾಗುವಂತೆ ಮಾಡಿದರೆ ಇದೇ ನಮಗೆ ಗುರುದಕ್ಷಿಣೆಯು. ಇದಕ್ಕೋಸುಗವೇ ನಿನಗೆ ದಂಡನೀತಿಶಾಸ್ತ್ರರಹಸ್ಯಮಂ ಸಹ ಹೇಳಿದೆನು. ಇದಕ್ಕೆ ನೀನೇ ದಕ್ಷನು. ಪ್ರತ್ಯುತ್ತರಮಂ ಹೇಳದೆ ಈ ಕಾರ್ಯಮಂ ನಿರ್ವಹಿಸಿ ಬಾರೆಂದು ಆಜ್ಞಾಪಿಸಿದುದರಿಂದ ನಾನು ಆಶ್ರಮಮಂ ಬಿಟ್ಟು ಹೊರಟು ಈ ನಾಸ್ತಿಕ ಸಂಘವು ಇಷ್ಟು ಪ್ರಚುರವಾಗುವುದಕ್ಕೆ ಮೂಲವೇನೆಂದು ವಿಚಾರಿಸುವಲ್ಲಿ ಪಾಟಲೀಪುರದ ಅರಸುಗಳೂ ಪಾರ್ವತೇಯರೂ ಸಹ ಇದಕ್ಕೆ ಮೂಲಭೂತರೆಂದೂ ಬೌದ್ಧರ ದುರ್ಬೋಧನೆಯಿಂದಲೇ ಇಲ್ಲಿನ ರಾಜನಿಗೆ ಸರ್ವಾರ್ಥಸಿದ್ಧಿ ಎಂಬ ನಾಮಾಂಕಿತ ಮುಂಟಾದುದೆಂದೂ ತಿಳಿದು ಪ್ರಥಮದಲ್ಲಿ ಕುಸುಮನಗರಮಂ ಕುರಿತು ಬರುವಲ್ಲಿ ದೈವಯೋಗದಿಂದ ಚಂದ್ರಗುಪ್ತನು ಇದೆಲ್ಲಕ್ಕೂ ನಿಮಿತ್ತನಾಗಿ ದೊರಕಿದನು. ರಾಕ್ಷಸನೊಬ್ಬನು ಹೊರತು ಇಲ್ಲಿನ ಮುಖ್ಯಾಧಿಕಾರಿಗಳೆಲ್ಲರೂ ನಾಸ್ತಿಕರೆಂದು ತಿಳಿದು ಅವರಂ ಮೋಹಗೊಳಿಸುವುದಕ್ಕಾಗಿ ದಾಹಿನಾನೆಯಿಂದಲೇ ಮಹಾವನಗಜಮಂ ಹಿಡಿಯುವಂತೆ ಇಂದುಶರ್ಮನಿಗೆ ಬೌದ್ಧಸನ್ಯಾಸಿಯ ವೇಷಮಂ ಹಾಕಿ ಅವನ ಶಿಷ್ಯರಿಗೆ ಬುದ್ಧಮತಸ್ಥರ ರೂಪವನ್ನಳವಡಿಸಿ ಮೂಲಮಂ ಭೇದಿಸಿ ಶಾಖೋಪಶಾಖೆಗಳಂ ಬಾಗಿಸುವಂತೆ ಪಾಟಲೀಪುರದ ಅರಸುಗಳು ಅಂಕುರಿಸದ ಹಾಗೆ ಮಾಡಿ ಪಾರ್ವತೇಯಾಧಿಪತಿಯಾದ ಪರ್ವತರಾಜನಂ ಸಂಹಾರಂಗೆಯ್ಸಿದೆನು. ಕ್ಷಪಣಕವೇಷಧಾರಿಯಾದ ಇಂದುಶರ್ಮನ ವಾಕ್ಯಾನುಸಾರವಾಗಿ ಕೃಪೆಯಿಂದ ಮಲಯಕೇತುವನ್ನುಳುಹಿಸಿದೆನು. ಈಗಿನವರೆಗೆ ನೋಡಿದರೆ ನಾಸ್ತಿಕ ಮತವು ಮೂರು ಪಾಲು ಉತ್ಸನ್ನವಾದಂತಾಯಿತು. ರಾಕ್ಷಸನಂ ಕರತಂದು ಚಂದ್ರಗುಪ್ತನಲ್ಲಿ ಮಂತ್ರಿಯಂ ಮಾಡಿದರೆ ನಾಸ್ತಿಕರೆಲ್ಲರೂ ನಷ್ಟಪ್ರಾಯರಾಗುವರು. ಅದರಲ್ಲಿ ಮುಖ್ಯರಾದವರು ಮೊದಲಿನಂತೆ ಸಮುದ್ರದ ಎಡೆತಿಟ್ಟಂ ಸೇರುವರು. ಉಳಿದವರು ಕ್ಷುದ್ರ ಮತವನ್ನು ಬಿಟ್ಟು ಬ್ರಾಹ್ಮಣರು ಹೇಳುವಂತೆ ನಡೆದುಕೊಳ್ಳುವರು. ಮಲೆತು ನಡೆವವರಿಗೆ ದಂಡಧಾರಿಯಾಗಿ ಚಂದ್ರಗುಪ್ತನಿರುವನು. ಶಿಷ್ಯರು ಗುರುದಕ್ಷಿಣಾರ್ಥವಾಗಿ ಆಕಾರ್ಯಮಂ ಮಾಡಿದವರಾ

ದಾಗ್ಯೂ ಪ್ರತ್ಯವಾಯಕ್ಕೆ ಪಾತ್ರರಾಗಲಾರರು. ಮಾಡಿದ ಕೆಲಸವು ಧರ್ಮದಲ್ಲಿ ಪರ್ಯವಸನ್ನವಾಗುವುದರಿಂದ ನನಗೆ ಇಹಪರಗಳಲ್ಲಿ ಶ್ರೇಯೋಲಾಭಕ್ಕೆ ಸಂಶಯವಿಲ್ಲ. ಇದಂ ತಿಳಿಯದೆ ಮುಗ್ಧಜನರು ಮನಸ್ಸು ಬಂದಂತೆ ಆಡಿಕೊಂಡಾರು. ಬಲ್ಲವರಾದ ಮಹಾತ್ಮರು ಈ ಭಾಗದಲ್ಲಿ ಸಂತೋಷಪಡುವರು. ಆಚಾರ್ಯರ ಆಜ್ಞಾನುಸಾರವಾಗಿ ಧರ್ಮಸ್ಥಾಪನಮಂ ಗೆಯ್ಯಲೋಸುಗ ಈ ಲೌಕಿಕವ್ಯವಹಾರವನ್ನಂಗೀಕರಿಸಿದೆನು. ಇದು ನನ್ನ ಮನೋಗತಾಭಿಪ್ರಾಯವು. ನಾನು ಕೃತಕೃತ್ಯನಾಗಿ ಸ್ವಲ್ಪ ದಿವಸಗಳಲ್ಲೇ ಗುರುಸನ್ನಿಧಿಯನ್ನೆಯ್ದುವೆನು. ಈ ಕಲಿಯುಗದ ಜನರು ಎಷ್ಟು ಕಲ್ಮಷಚಿತ್ತರಾದರೂ ನಾನು ಸ್ಥಾಪಿಸಿರುವ ಧರ್ಮದಾರ್ಢ್ಯವು ಬಹು ಕಾಲದವರೆಗೂ ನಡೆದು ಬರುವುದು ಎಂದು ಹೇಳಿದನು. ಅದಂ ಕೇಳಿದ ಶಾರ್ಙ್ಗರವನು ದಂಡವತ್ಪ್ರಣಾಮಮಂ ಗೆಯ್ದು—ಮಹಾನುಭಾವರಾದ ಉಪಾಧ್ಯಾಯರೇ, ಲೋಕದಲ್ಲಿ ಧರ್ಮಸ್ಥಾಪನಮಂ ಗೆಯ್ದುದರಿಂದ ನಿಮ್ಮಂ ದೇವಾಂಶಪುರುಷರೆಂದು ಹೇಳಬೇಕು. ಇದರಿಂ ಸರ್ವದೇವತೆಗಳೂ ಸುಪ್ರೀತರಾಗುವರು. ನಿಮ್ಮ ಯಶಸ್ಸು ಆಚಂದ್ರಾರ್ಕವಾಗಿರುವುದು. ಈಗಲೇ ವರ್ಷಾಕಾಲದಲ್ಲಿ ಬಟ್ಟಾಗುವ ಮೇಘಬೃಂದಗಳು ಶರತ್ಕಾಲದಲ್ಲಿ ವಿರಳವಾಗಿ ಹೋಗುವಂತೆ ನಾಸ್ತಿಕ ಸಂಘವೆಲ್ಲವೂ ನಷ್ಟವಾದ ಹಾಗೇ ತೋರುತ್ತಿದೆ. ನಿಮ್ಮಂ ಪೊಗಳುವುದಕ್ಕೆ ನಾನು ಎಷ್ಟುಮಾತ್ರದವನು ಎಂದು ಸ್ತೋತ್ರಮಂ ಮಾಡಿದನು.

ಅತ್ತ ಮೊದಲು ರಾಕ್ಷಸನಿಂದ ನೇಮಿಸಲ್ಪಟ್ಟಿದ್ದ ದಾತ್ಯೂಹಕನೆಂಬ ಗೂಢಚಾರನು ಪಾಟಲೀಪುರದಲ್ಲಿ ವಿರೋಚನಂ ಸಂಹೃತನಾದುದು ಮೊದಲುಗೊಂಡು ಸಕಲವೃತ್ತಾಂತಮಂ ತಿಳಿದು ಕುಸುಮಪುರಮಂ ಬಿಟ್ಟು ಪರ್ವತರಾಜನ ಶಾಹುರೀನಗರಮಂ ಸೇರಿ ಪಾಟಲೀನಾಮಕಪುಟಭೇದನಕ್ಕೆ ಹೊರಡುತ್ತಿರುವ ಮಲಯಕೇತುವಿನ ಸೇನಾನಿವಹಮಂ ನೋಡಿ ತನ್ನ ಮನಸ್ಸಿನಲ್ಲಿ—ರಾಕ್ಷಸನ ಉಪಾಯಂಗಳಂ ನೋಡಿದರೆ ಚಂದ್ರಗುಪ್ತನಂ ಜಯಿಸುವುದು ಸ್ವಲ್ಪಮಾತ್ರವೆಂದು ತೋರುತ್ತಿದೆ. ಚಾಣಕ್ಯನ ಕೌಶಲ್ಯವನ್ನೀಕ್ಷಿಸಿದರೆ ರಾಕ್ಷಸನ ಪ್ರಯತ್ನವೆಲ್ಲವೂ ನಿಷ್ಫಲವಾಗುವುದೆಂದು ಕಾಣಿಸುತ್ತಿದೆ. ಹೆಣ್ಣಾನೆಯ ನಿಮಿತ್ತವಾಗಿ ಕಾದಾಡುವ ಪುನ್ನಾಗಗಳ ಮಧ್ಯದಲ್ಲಿ ತಗುಲಿರುವ ಕರೇಣುವಿನಂತೆ ಒಬ್ಬರನ್ನೊಬ್ಬರು ಜಯಿಸಲಿಚ್ಛಯಿಸಿದ ಚಾಣಕ್ಯರಾಕ್ಷಸರ ನಡುವೆ ಸಿಕ್ಕಿರುವ ರಾಜ್ಯಲಕ್ಷ್ಮಿಯು ಇವರಿಬ್ಬರಲ್ಲಿಯೂ ಸಮದೃಷ್ಟಿಯುಳ್ಳವಳಾಗಿದ್ದಾಳೆ. ಮುಂದೆ ಹೇಗಾಗುವುದೋ ಅದಂ ಈಗ ತಿಳಿಯಕೂಡದೆಂದು ಯೋಚಿಸುತ್ತ ನಾಗಸ್ವರ

ಧ್ವನಿಯಿಂದ ತಲೆಯಂ ತೂಗುತ್ತಿರುವ ಸರ್ಪಗಳನ್ನಾಡಿಸುತ್ತ ಅಮಾತ್ಯನ ಗೃಹಸಮೀಪಕ್ಕೆ ಬರುತ್ತಿರಲು; ಆ ದ್ವಾರಪಾಲಕನು ಇವನಂ ನೋಡಿ—

ಎಲೈ ಗಾರುಡಿಗನೇ, ನಿನ್ನ ಪೆಟ್ಟಿಗೆಯಲ್ಲಿರುವ ಸರ್ಪಗಳು ನಿನಗೆ ಹೇಗೆ ವಶವಾದುವು? ಎನಲು;

ಅದಂ ಹೇಳುವೆನು. ಮೊದಲು ಈ ಮನೆಯು ಯಾರದು? ಎಂದು ದಾತ್ಯೂಹಕನು ಕೇಳಿದುದಕ್ಕೆ—

ಈ ಮಂದಿರವು ಅಮಾತ್ಯರಾಕ್ಷಸನದೆಂದು ದೌವ್ವಾರಿಕನು ಹೇಳಲಾಗಿ; ಹಾವಾಡಿಗನು—

ಅಮಾತ್ಯರಾಕ್ಷಸರು ಮಂತ್ರಾಲೋಚನೆಯಿಂದ ಶತ್ರುಗಳಂ ತಮ್ಮ ವಶಮಂ ಮಾಡಿಕೊಳ್ಳುವಂತೆ ನಾವು ಮಂತ್ರೌಷಧಿಗಳಿಂ ಸರ್ಪಗಳಂ ಸ್ವಾಧೀನಂಗೆಯ್ದುಕೊಳ್ಳುವುದರಿಂದ ರಾಕ್ಷಸರಿಗೂ ನಮಗೂ ಸಮಾನವು ಎಂದು ಹೇಳಬೇಕು ಎಂದನು. ಆ ಮಾತಿಗೆ ದ್ವಾರಪಾಲಕನು—

ಎಲೈ ಮೂಢನೇ, ಉರಗಂಗಳಂ ವಶಪಡಿಸಿಕೊಂಡ ಮಾತ್ರಕ್ಕೆ ನೀನು ಅಮಾತ್ಯರಿಗೆ ಸಮಾನನೇ? ಎನಲು;

ಎಲೈ ಪ್ರತೀಹಾರಿಯೇ, ನನ್ನಂ ಮೂಢನೆಂದೆನಬೇಡ. ಇದಲ್ಲದೆ ನಾನು ಪ್ರಾಕೃತಗದ್ಯಮಂ ರಚಿಸುವ ಕವಿಯು. ನನ್ನಿಂದ ರಚಿಸಲ್ಪಟ್ಟ ಪ್ರಬಂಧಮಂ ಅಮಾತ್ಯರಿಗೆ ತೋರಿಸಿದರೆ ಇದಂ ನೋಡಿ ಅವರು ನನ್ನಂ ಪ್ರೌಢನೆಂದು ಮೆಚ್ಚುವರು. ಕವಿತ್ವಮಂ ಈ ಪತ್ರದಲ್ಲಿ ಬರೆದಿರುವೆನು. ತೋರಿಸುವವನಾಗು ಎಂದು ಅದಂ ದ್ವಾರರಕ್ಷಕನ ಕೈಯ್ಯಲ್ಲಿ ಕೊಡುತ್ತಿರಲು; ಆ ಸಮಯದೊಳ್ ಮಂದಿರಸ್ಥನಾದ ರಾಕ್ಷಸನು ತನ್ನ ಮನಸ್ಸಿನಲ್ಲಿ—

ನಾನು ಪಾಟಲೀಪುರದಿಂದ ಹೊರಟು ಬರುವ ಸಮಯದೊಳಗೆ ನನ್ನ ಗೃಹಜನಮಂ ಚಂದನದಾಸನಲ್ಲಿರಿಸಿ ಬಂದುದರಿಂದ ನಮ್ಮ ಕಡೆಯವರು ನನ್ನಂ ಚಂದ್ರಗುಪ್ತನಲ್ಲಿ ದ್ವೇಷಮಂ ಸಾಧಿಸಲೋಸುಗ ಹೊರಟು ಹೋದನೆಂದು ತಿಳಿದು ನಾನು ನೇಮಿಸಿದ್ದ ಮೇರೆಗೆ ಸಮಯವರಿತು ಕಪಟತಂತ್ರಗಳಂ ಆಚರಿಸಿದ್ದಾರು. ವಾಸಕನೆಂಬ ಗೂಢಚಾರನು ಬಂದ ಬಳಿಕ ಅಲ್ಲಿನ ವರ್ತಮಾನಗಳೊಂದೂ ತಿಳಿಯಲಿಲ್ಲವೆಂದು ಚಿಂತಿಸುತ್ತ ತನ್ನ ಬಳಿಯಣ ದೂತನಂ ನೋಡಿ—ಎಲೈ ನಮ್ಮಂ ಕಾಣಬೇಕೆಂದು ಹೊಸ ಮಾನಿಸರು ಬಂದರೆ ತಡೆಯಬೇಡಿರಿ. ಬಳಗೆ ಕರೆದುಕೊಂಡು ಬನ್ನಿರಿ ಎನಲು; ಬಳ್ಳೆಯದೆಂದು ಭೃತ್ಯನು ಹೋಗಿ ತಿಳಿದು ಬಂದು—

ಸ್ವಾಮೀ, ಬಾಗಿಲಲ್ಲಿ ಅಧಿಕಾರಿಗಳ ಸಂಘವೇ ಹೊರತು ವಿಶೇಷವಾಗಿ ಹೊಸಬರಾದ ಜನರಿಲ್ಲ. ಒಬ್ಬ ಹಾವಾಡಿಗನು ಮಾತ್ರವೇ ತಮ್ಮಂ ಕಂಡು ಸರ್ಪಗಳಂ ತೋರಿಸುವೆನು. ಈಗ ತಾನು ಮಾಡಿದ ಪ್ರಾಕೃತಕವಿತ್ವವಿದು. ಇದಂ ತೋರಿಸೆಂದು ಈ ಪತ್ರಮಂ ಕೊಟ್ಟನೆಂಬುದಾಗಿ ಆ ಚೀಟಿಂ ತಂದು ಒಪ್ಪಿಸಲು; ಅದಂ ರಾಕ್ಷಸನು ನೋಡಿಕೊಂಡು ಪರಿಭಾವಿಸಿ—ಇದರಲ್ಲಿ ಭ್ರಮರವು ಪುಷ್ಪಗಳ ಮಕರಂದ ಪಾನಮಂ ಮಾಡಿ ಮತ್ತೊಂದು ಎಡೆಯಲ್ಲಿ ಕಾರಿದರೆ ಅದು ಮಧುವೆನಿಸಿ ಜನಕ್ಕೆ ಅನುಕೂಲವಾಗಿರುವುದು ಎಂದು ಬರೆದು ಇರುವುದರಿಂದ ಇದರ ಭಾವಮಂ ನೋಡಿದರೆ ಪಾಟಲೀಪುರದಲ್ಲಿ ತಿಳಿದ ವರ್ತಮಾನಮಂ ನಿಮಗೆ ಉಪಯುಕ್ತಮಾಗಿ ಹೇಳುವೆನು ಎಂಬ ಅರ್ಥವು ತೋರುತ್ತದೆ. ಈ ಗಾರುಡಿಗನು ನಮ್ಮ ಗೂಢಚಾರನಾಗಿರಬೇಕು ಎಂದು ತಿಳಿದು ದೂತನಂ ನೋಡಿ—

ಎಲೈ ಆ ಅಹಿತುಂಡಿಕನಂ ಒಳಗೆ ಬರಹೇಳು. ಪನ್ನಗಂಗಳಂ ನೋಡಬೇಕೆಂಬ ಸಮಯದಲ್ಲಿ ತನ್ನ ಎಡಗಣ್ಣು ಹಾರುವುದಂ ತಿಳಿದು ಸರ್ಪದರ್ಶನಕ್ಕಿಂತ ಅಪಶಕುನಮಾಗಿ ವಾಮನೇತ್ರವು ಅದುರುತ್ತಿದೆ ಎಂದು ಚಿಂತಿಸಿ—ಎಲೈ, ಸರ್ಪಮಂ ಅಲ್ಲೇ ಇಟ್ಟು ವ್ಯಾಳಗ್ರಾಹಿಯನ್ನು ಮಾತ್ರ ಇಲ್ಲಿಗೆ ಬರಹೇಳು ಎನಲು; ಒಳ್ಳೆಯದು ಎಂದು ಹೋಗಿ ಆ ಹಾವಾಡಿಗನಂ ಕರತಂದು ನಿಲ್ಲಿಸಲು; ಅವನಂ ನೋಡಿ ವಿರಾಧಗುಪ್ತನೆಂದು ನಿಶ್ಚಯಿಸಿ ಏಕಾಂತದಲ್ಲಿ ಆ ಗೂಢಪುರುಷನಂ ಕರೆದು—

ಎಲೈ ಚಾರನೇ, ಸುಖದಿಂದ ಬಂದೆಯಾ? ಕುಳ್ಳಿರು. ಚಂದ್ರಗುಪ್ತನು ಪಾಟಲೀಪುರಮಂ ಪ್ರವೇಶಿಸಿದ ಬಳಿಕ ಮಲಯಕೇತು ಓಡಿ ಬಂದನಂತರದಲ್ಲಿ ಪಟ್ಟಣದೊಳಗೇನೇನು ವಿಶೇಷವು ನಡೆಯಿತು? ಎಂದು ಕೇಳಲು;

ಸ್ವಾಮೀ, ಮಲಯಕೇತುವಿನ ಚಿಕ್ಕಪ್ಪನಾದ ವಿರೋಚನನಿಗೆ ಚಾಣಕ್ಯನು ರಾಜ್ಯಾಧಿಪತ್ಯಮಂ ಕೊಡುವೆನೆಂದು ಕರೆಯಿಸಿ ಸಮರಾತ್ರಿಯಲ್ಲಿ ಪಟ್ಟಾಭಿಷೇಕಕ್ಕೆ ಲಗ್ನನಿಶ್ಚಯಮಂ ಗೆಯ್ದು ಅವನಂ ಸ್ವರ್ಣಪೀಠದಲ್ಲಿ ಕುಳ್ಳಿರಿಸಿ ಅಭಿಷೇಕಮಂ ಮಾಡಿದಂತೆ ಮಾಡಿಸಿ ನಂದರ ಪಟ್ಟದಾನೆಯ ಮೇಲೆ ಕುಳ್ಳಿರಿಸಿ ಮೆರವಣಿಗೆಯಂ ಮಾಡಿಸುವ ಸಂದರ್ಭದಲ್ಲಿ ರಾಜದ್ವಾರಮಾರ್ಗವಾಗಿ ಬರುತ್ತಿರುವ ಪರ್ವತರಾಜಾನುಜನಂ ಚಂದ್ರಗುಪ್ತನೆಂದು ತಿಳಿದು ಮೇಲಿದ್ದ ದಾರುವರ್ಮನು ಕೀಲಂ ಸಡಿಲಿಸಲು; ಆಗ ಭಾರವಾಸಿಯಾದ ತೊಲೆಯು ಬಿದ್ದು ಆನೆಯ ಮಾವುತನು ಸಂಹೃತನಾದನು. ಅದಂ ನೋಡಿ ದಾರುವರ್ಮನು ತನ್ನ ಕೈ

ಕೊಡತಿಯಿಂದ ವಿರೋಚನನಂ ವಧಿಸಲು ; ಆಗ ಅಲ್ಲಿದ್ದ ಭಲ್ಲೆಯುದವರು ಆ ಶಿಲ್ಪಿಯಂ ತಿವಿದು ಕೆಡಹಿದರು. ಆ ಬಳಿಕ ಚಾಣಕ್ಯನು ಶಯನಗೃಹದಲ್ಲಿ ಹಾಸಿಗೆಯುಾಳಗದವನು ಪಟದಗೂಡಿನಲ್ಲಿ ಇರಿಸಿದ್ದ ಶಸ್ತ್ರಮಂ ಕಂಡು ಅವನಂ ದಂಡಿಸಿ ನಿಲುಗನ್ನಡಿಯ ಹಿಂದಣ ಕನ್ನವನ್ನೀಕ್ಷಿಸಿ ಆ ಸುರಂಗಕ್ಕೆ ಅಗ್ನಿಯಂ ಮುಟ್ಟಿಸಿದುದರಿಂದ ಅಲ್ಲಿದ್ದ ಶಸ್ತ್ರಪಾಣಿಗಳಾದ ಚೋರರು ಅದರೊಳಗೇ ಮೃತರಾದರು. ವಿಷಚೂರ್ಣಪ್ರಯೋಗದಿಂದಲೇ ಆ ವೈದ್ಯನೂ ಮೃತನಾದನು. ಎಲ್ಲ ವಿಪತ್ತುಗಳೂ ಚಂದ್ರಗುಪ್ತನಂ ತಪ್ಪಿ ಆತನಿಗೆ ವೈರಿಗಳಾದ ನಮ್ಮ ಜನರನ್ನೇ ಸಂಹರಿಸಿದುವು ಎನಲು ; ಅದಂ ಕೇಳಿ ರಾಕ್ಷಸನು ತನ್ನ ಮನಸ್ಸಿನಲ್ಲಿ ಮಹಾ ವ್ಯಸನಪಡುತ್ತ ಆಶ್ಚರ್ಯದಿಂದ ತಲೆದೂಗಿ—

ಎಲೈ ದೂತನೇ, ನಾನು ಚಂದ್ರಗುಪ್ತನ ಸಂಹಾರಕ್ಕಾಗಿ ಮಾಡಿಸಿದ್ದ ಯತ್ನಗಳೆಲ್ಲ ಅವನಂ ಬಿಟ್ಟು ನಮ್ಮ ಜನವನ್ನೇ ಘಾತಿಸಿದುವು. ಆವನಿಗುಂಟಾಗಿರುವ ದೈವಬಲವಂ ನೋಡಿದೆಯಾ ? ಎಂದು ಕಂಬನಿಗಳಂ ತುಂಬುತ್ತಿರುವಲ್ಲಿ ಅಮಾತ್ಯನಂ ಕುರಿತು ಚಾರನು—

ಸ್ವಾಮಿ, ಲೋಕದಲ್ಲಿ ಅಧಮರಾದ ಪುರುಷರು ವಿಘ್ನ ಭಯದಿಂದ ಕಾರ್ಯಾರಂಭವನ್ನೇ ಮಾಡರು. ಮಧ್ಯಮಪುರುಷರು ಕಾರ್ಯಾರಂಭವಂ ಮಾಡಿ ವಿಘ್ನಭಯಮುಂಟಾದರೆ ಅದಂ ಬಿಟ್ಟು ಬಿಡುವರು. ಉತ್ತಮ ಪುರುಷರು ಕಾರ್ಯಾರಂಭಮಂ ಮಾಡಿ ಎಷ್ಟು ವಿಘ್ನಗಳು ಬಂದೊದಗಿದರೂ ಅದಂ ಪೌರುಷದಿಂದ ಪರಿಹರಿಸಿಕೊಂಡು ಕಾರ್ಯನಿರ್ವಾಹಮಂ ಮಾಡುವರು. ಆದಿಶೇಷನು ಮಹಾಭಾರವಾದರೂ ಈ ಭೂಮಿಯಂ ಪೊತ್ತು ನಿರ್ವಹಿಸುವಂತೆ ಕಾರ್ಯದಕ್ಷರಾದ ನಿಮ್ಮಂಥವರು ಯತ್ನಮಂ ಮಾಡಿದ ಬಳಿಕ ಅದಂ ಉದ್ಧರಿಸಬೇಕಲ್ಲದೆ ಸಾಧಾರಣರಂತೆ ಉಪೇಕ್ಷಿಸಬಾರದು ಎನಲು ;

ಎಲೈ ವಿರಾಧಗುಪ್ತನೇ, ಪುರುಷನು ವಿಮರ್ಶೆಯಿಂದ ಉಪಕ್ರಮಿಸಿದ ಕಾರ್ಯಕ್ಕೆ ದೈವ ಸಹಾಯಮುಂಟಾಗದ ಬಳಿಕ ವಿಘ್ನಮುಂಟಾದರೆ ಮುಂದೆ ಕಾರ್ಯಾಚರಣೆಯಲ್ಲಿ ಹೇಗೆ ಉತ್ಸಾಹವಂತನಾದಾನು ? ಅದಂತಿರಲಿ. ಆ ಚಾಣಕ್ಯನು ಚಂದ್ರಗುಪ್ತನಲ್ಲಿ ಎಂದಿನಂತೆ ಅನುರಕ್ತನಾಗಿ ರಾಜ್ಯ ವಿಚಾರಮಂ ಮಾಡುತ್ತ ಶತ್ರುಗಳು ಮಾಡುವ ಕೆಲಸಮಂ ತಿಳಿದು ಉದಾಸೀನನಾಗಿ ಇರುವನೋ ಎನಲು ;

ಸ್ವಾಮಿ, ಚಾಣಕ್ಯನು ಚಂದ್ರಗುಪ್ತನ ಕಾರ್ಯಕ್ಕೆ ವಿಘಾತುಕರಾದ ಜನರಂ ಹುಡುಕಿಸಿ ಹಿಡಿದು ನಿಗ್ರಹಿಸಿದನು. ಹೇಗೆಂದರೆ—ವಿಷಕನ್ಯಾಮುಖದಿಂದ ಪರ್ವತರಾಜನಂ ಸಂಹಾರಂಗೆಯ್ಸಿದನೆಂಬುದಾಗಿ ಜೀವಸಿದ್ಧಿ ಎಂಬ ಕ್ಷಪಣಕನಂ ಅಪಮಾನಪೂರ್ವಕವಾಗಿ ಪುರದಿಂದ ಹೊರಡಿಸಿದನು ಎನಲು; ಆ ವಾಕ್ಯಮಂ ಕೇಳಿ—

ಎಲೈ ಚಾರನೇ, ಬುದ್ಧಿವಂತನಾದ ಚಾಣಕ್ಯನು ತನ್ನ ಕೆಲಸವಂ ನಿರ್ವಹಿಸಿಕೊಂಡು ಅರ್ಧರಾಜ್ಯಕ್ಕೆ ಪಾಲುಗಾರನಾದ ಪರ್ವತರಾಜನಂ ಕೊಲ್ಲಿಸಿ ತಾನು ಆತನಿಗೆ ಮಿತ್ರನಂತೆ ಜನರಲ್ಲಿ ನಟಿಸುತ್ತ ಜೀವಸಿದ್ಧಿಯಂ ಹೊರಡಿಸಿ ನಮಗೆ ಅಪಕೀರ್ತಿಯುಂಟಾಗುವಂತೆ ಮಾಡಿದುದರಿಂದ ಆತನು ಆಚರಿಸಿದ ಒಂದೊಂದು ಕೆಲಸವೇ ಬಹುವಿಧವಾದ ಫಲವನ್ನುಂಟುಮಾಡುತ್ತಿದೆ ಎಂದು ಚಾಣಕ್ಯನ ಉಪಾಯಕ್ಕೆ ಮೆಚ್ಚುತ್ತ ಮತ್ತೇನು ವಿಶೇಷವು? ಎನಲು;

ಸ್ವಾಮಿ, ಚಾಣಕ್ಯನು ಚಂದ್ರಗುಪ್ತನ ಮೇಲೆ ದ್ರೋಹವಂ ಗೆಯ್ಯಲೆಣಿಸಿದ ದಾರುವರ್ಮ ಮೊದಲಾದ ಜನಗಳು ಹೂಣ್ದ ಕಪಟಗಳಿಗೆ ಇವನೇ ಮುಖ್ಯಕಾರಣನೆಂದು ಬೀದಿಯಲ್ಲಿ ಸಾರಿಸಿ ಶಕಟದಾಸನಂ ಶೂಲಕ್ಕೆ ಹಾಕಿರೆಂದು ನೇಮಿಸಲು; ಚಂಡಾಲರು ಅವನಂ ಹಿಡಿದು ವಧ್ಯಸ್ಥಾನಕ್ಕೆ ಕರೆದುಕೊಂಡು ಹೋಗುವುದಂ ಕಣ್ಣಾರ ಕಂಡೆನು ಎನಲು; ಆ ಮಾತಿಗೆ ರಾಕ್ಷಸನು ಮಹಾ ವ್ಯಸನಪಟ್ಟು—ಹಾ! ಮಿತ್ರನಾದ ಶಕಟದಾಸನೇ! ನಿನಗೂ ಇಂಥ ದುರ್ದಶೆ ಬರಬಹುದೇ? ಎಂದು ಕಂಬನಿಗಳಂ ತುಂಬುತ್ತ ದಾರುವರ್ಮಾದಿಗಳಿಗೆ ಸಹಾಯಮಂ ಮಾಡುತ್ತಿರುವಂತೆ ನಾವು ಶಕಟದಾಸನಿಗೆ ನೇಮಿಸಿದುದಕ್ಕೆ ಕಾರ್ಯ ವಿಘಾತವಾಯಿತು. ನಾನು ನಂದರನ್ನಗಲಿ ಜೀವಂತನಾಗಿರುವುದಕ್ಕೆ ಮಾತ್ರ ದುಃಖಪಡಬೇಕಲ್ಲದೆ ಸ್ವಾಮಿಕಾರ್ಯಕ್ಕೋಸುಗ ಅಸುವಂ ತ್ಯಜಿಸಿದವರಿಗೆ ಶೋಕಪಡಲೇಕೆ? ಎಂದು ಹೇಳಿ ಮತ್ತೇನು? ಎನಲು;

ಸ್ವಾಮಿ, ಶಕಟದಾಸನಿಗೆ ತೀಕ್ಷ್ಣವಾದ ದಂಡನೆಯಂ ವಿಧಿಸಿದ ಬಳಿಕ ಬಳಿಗಾರನಾದ ಚಂದನದಾಸನೆಂಬ ವರ್ತಕನಂ ಕರೆಯಕಳುಹಿಸಿ—ನೀನು ಅಮಾತ್ಯರಾಕ್ಷಸನಿಗೆ ಆಪ್ತನಾದುದರಿಂದ ಆತನ ಗೃಹಜನಮಂ ತೋರಿಸೆಂದು ನಯಭಯಂಗಳಿಂದ ಚಾಣಕ್ಯನು ನಿರ್ಬಂಧಪಡಿಸಿದಾಗ್ಯೂ ಸರ್ವಥಾ ನಾನು ಅರಿತವನಲ್ಲವೆಂಬುದಾಗಿ ಅವನು ಹೇಳಲು; ಆ ಮಾತಿಗೆ ಕ್ರುದ್ಧನಾದ ಚಾಣಕ್ಯನು ಚಂದನದಾಸನ ಸರ್ವಸ್ವಮಂ ರಾಜ ಭಂಡಾರಕ್ಕೆ ತೆಗೆದುಕೊಂಡು ಪತ್ನೀಪುತ್ರ ಸಮೇತ

ಮಾಗಿ ಅವನಂ ಕಾರಾಗೃಹದಲ್ಲಿರಿಸುವಂತೆ ನಿರೂಪಿಸಿ ಕಳುಹಿಸಿದನು ಎನಲು ; ಆ ಮಾತಿಗೆ ರಾಕ್ಷಸನು ಮನಸ್ಸಿನಲ್ಲಿ ಆತಂಕಂಗೊಳ್ಳುತ್ತ—ನನ್ನ ಮನೆಯ ಜನವು ಚಂದನದಾಸನ ಮಂದಿರದಲ್ಲಿರುವ ಅರ್ಥವು ಬಾಲಕನಾದ ನಮ್ಮ ಪುತ್ರನ ಚಾಪಲ್ಯದಿಂದ ಚಾಣಕ್ಯನಿಗೆ ತಿಳಿದಿದ್ದರೂ ಇರಬಹುದು. ಆ ಚಂದನದಾಸನು ನಿರ್ಬಂಧಕ್ಕೆ ಸಿಲುಕಿದ ಬಳಿಕ ನಾನೇ ಚಾಣಕ್ಯನ ವಶವಾದಂತಾಯಿತು ಎಂದು ಚಿಂತಿಸುತ್ತ ಪತ್ನೀಪುತ್ರ ಸಮೇತನಾದ ಆತನಂ ಕಾರಾಗೃಹದಲ್ಲಿ ಇಡಿಸಿದನು ಎಂದು ಇಷ್ಟು ಹೇಳಿದ ಮಾತ್ರದಿಂದಲೇ—ಚಂದನದಾಸನು ನನ್ನ ಹೆಂಡತಿ ಮಕ್ಕಳನ್ನು ಅನ್ಯತ್ರ ಮರೆಮಾಡಿ ಇದ್ದಾನು. ಅದರಿಂದಾತನು ಬಹು ಬುದ್ಧಿಶಾಲಿಯು ಎಂದು ಯೋಚಿಸುತ್ತಿರುವ ಸಮಯದಲ್ಲಿ ಒಬ್ಬ ದೂತನು ಬಂದು—ಸ್ವಾಮೀ, ಶಕಟದಾಸನೈತಂದು ಬಾಗಿಲಿನಲ್ಲಿ ನಿಂತು ಅರಿಕೆ ಮಾಡೆಂಬುದಾಗಿ ಉಸುರಿದನೆನಲು ; ಅದಂ ಕೇಳಿ ಸಮೀಪದಲ್ಲಿದ್ದ ವಿರಾಧಗುಪ್ತನಂ ನೋಡಿ—ಇದೇನಾಶ್ಚರ್ಯವೈ ? ಎಂದು ರಾಕ್ಷಸನು ನುಡಿಯಲು ;

ಸ್ವಾಮೀ, ಆತನು ಈಶ್ವರಕೃಪೆಯಿಂದಲೇ ಆಪತ್ತಿನದೆಸೆಯಿಂದ ಮುಕ್ತನಾಗಿ ಬಂದಿದ್ದಾನು ಎನಲು ; ಹಾಗೇ ಶಕಟದಾಸನಂ ಕರೆಯಕಳುಹಿಸಿ ಅವನಂ ನೋಡಿ—

ಅಯ್ಯಾ ಶಕಟದಾಸನೇ, ನೀನು ಅಸಹಾಯನಾಗಿ ಚಾಣಕ್ಯನೆಂಬ ವ್ಯಾಘ್ರಮುಖಗ್ರಸ್ತನಾದರೂ ತಪ್ಪಿಸಿಕೊಂಡು ಬಂದ ಪ್ರಕಾರವೆಂತು ? ಎನಲು ; ಅವನು ನಮಸ್ಕರಿಸಿ ಕುಳಿತು—

ಸ್ವಾಮೀ, ನಂದರಾಜ್ಯದಲ್ಲಿ ಚಾಣಕ್ಯನಿಂದ ನಿಲ್ಲಿಸಲ್ಪಟ್ಟಿರುವ ಚಂದ್ರಗುಪ್ತನಂತೆ ವಧ್ಯಸ್ಥಾನದಲ್ಲಿ ನೆಟ್ಟಿರುವ ಶೂಲದ ಸಮೀಪಕ್ಕೆ ಚಂಡಾಲರು ನನ್ನಂ ಕರತರಲು ; ಆಗ ನನಗೆ ಪರಮಮಿತ್ರನಾದ ಸಿದ್ಧಾರ್ಥಕನು ಕೈಲಿ ಖಡ್ಗಪಾಣಿಯಾಗಿ ಬಂದು ಆ ಘಾತುಕರ ಮೇಲೆ ಕಾಣಿಸಿಕೊಳ್ಳಲು ; ಅವನ ರಭಸಕ್ಕೆ ನಿಲ್ಲಲಾರದೆ ಕಟುಗರು ಓಡಿ ಹೋದರು. ಅಲ್ಲಿಂದ ಇಲ್ಲಿಗೆ ಆತನು ನನ್ನಂ ಕರತಂದನು ಎನಲು ; ಅದಂ ಕೇಳಿ ಸಂತೋಷಭರಿತನಾಗಿ ರಾಕ್ಷಸನು ಹೊರಗಿದ್ದ ಸಿದ್ಧಾರ್ಥಕನಂ ಕರೆಯ ಕಳುಹಿಸಿ—

ಎಲೈ ಆಪ್ತನಾದ ಸಿದ್ಧಾರ್ಥಕನೇ, ಶಕಟದಾಸನಂ ಬಿಡಿಸಿ ನನ್ನ ಸಮೀಪವನ್ನೈಯ್ದಿಸಿದುದಕ್ಕಾಗಿ ನಿನಗೆ ಏನು ಕೊಟ್ಟರೂ ಸಲ್ಲುವುದು ಎಂದು ಹೇಳಿ ತಾನು

ಅಲಂಕರಿಸಿದ್ದ ದಿವ್ಯವಸ್ತ್ರಭೂಷಣಂಗಳೆಲ್ಲಮಂ ತೆಗೆದು ಅವನಿಗೆ ಕೊಡಲು ; ಆ ಸಿದ್ಧಾರ್ಥಕನು ನಮಸ್ಕರಿಸಿ ರಾಜಯೋಗ್ಯವಾದ ಆ ಮಂಡನವಮಂ ಸ್ವೀಕರಿಸಿ—

ಸ್ವಾಮಿಾ, ಇಲ್ಲಿ ನನಗೆ ಬೇರೇ ಆಪ್ತರು ಇಲ್ಲ. ಈ ಆಭರಣಂಗಳಂ ತಮ್ಮ ಬೊಕ್ಕಸದಲ್ಲಿಯೇ ಇರಿಸಿದ್ದು ನಾನು ಕೇಳಿದಾಗ ಕೊಡುವಂತೆ ಶಕಟದಾಸನಿಗೆ ಅಪ್ಪಣೆಯಾಗಬೇಕು ಎನಲು ; ಆ ಪ್ರಕಾರವೇ ಮಾಡಿಸು ಎಂದು ಶಕಟದಾಸನಿಗೆ ರಾಕ್ಷಸನು ಹೇಳಲು ; ಆಗ ಒಂದು ಪೆಟ್ಟಿಗೆಯಂ ತರಿಸಿ ಆ ತೊಡವುಗಳನ್ನದರಲ್ಲಿ ಹಾಕಿ ಮೋಹರಮಂ ಮಾಡುವುದಕ್ಕೆ ಯತ್ನಮಂ ಗೆಯ್ಯಲು ; ಆಗ ಸಿದ್ಧಾರ್ಥಕನು—ತನ್ನ ಕೈಯ್ಯಲ್ಲಿ ಚಾಣಕ್ಯಂ ಕೊಟ್ಟಿದ್ದ ಅಂಗುಳೀಯಕವನ್ನು ಶಕಟದಾಸನ ಹಸ್ತದಲ್ಲಿತ್ತು ಇದರಿಂದಲೇ ಈ ಮಂಜೂಷಮಂ ಮೋಹರು ಮಾಡು ಎನಲು ; ಶಕಟದಾಸನು ಅದರ ಅಕ್ಷರಮಂ ನೋಡಿ—ಸ್ವಾಮಿಾ, ಈ ಉಂಗುರದಲ್ಲಿ ತಮ್ಮ ನಾಮಾಂಕಿತವಿರುವುದರಿಂದ ಇದು ತಮ್ಮದೆಂದು ತೋರುತ್ತಿದೆ ಎನಲು ; ಆ ಮುದ್ರೆಯಂ ರಾಕ್ಷಸನು ನೋಡಿ ತನ್ನದೆಂದು ತಿಳಿದು ತಾನು ಬರುವ ಸಮಯದಲ್ಲಿ ನನ್ನ ಸ್ಮರಣೆಗೆ ಇರಬೇಕೆಂದು ನನ್ನ ಪತ್ನಿಯು ಕೇಳಲಾಗಿ ಕೊಟ್ಟು ಬಂದಿದ್ದೆನು. ಇದು ಈತನಿಗೆ ಸಿಕ್ಕಿದ ಪರಿ ಹೇಗೆ? ಎಂದು ಯೋಚಿಸುತ್ತ—

ಎಲೈ ಸಿದ್ಧಾರ್ಥಕನೇ, ಈ ಉಂಗುರವು ನಿನಗೆ ಎಲ್ಲಿ ದೊರಕಿತು ? ಎಂಬುದಾಗಿ ಬೆಸಗೊಳ್ಳಲು ;

ಸ್ವಾಮಿಾ, ಪಾಟಲೀಪುರದಲ್ಲಿ ನಾನು ಮಾರ್ಗವಿಡಿದು ಹೋಗುವ ಸಮಯದೊಳಗೆ ಇದು ಚಂದನದಾಸನೆಂಬ ಒಬ್ಬ ಬಳೆಗಾರನಾದ ವರ್ತಕನ ಪಟ್ಟಸಾಲೆಯ ಕೆಳಗೆ ಬಿದ್ದಿದ್ದುದರಿಂದ ನನ್ನ ಕಣ್ಣಿಗೆ ಗೋಚರವಾಯಿತು. ಯಾಕೆ ಬಿಡಬೇಕು ? ಎಂದು ಗ್ರಹಿಸಿದೆನೆನಲು ;

ಇದು ಸಹಜವೇ ಸರಿ. ಇಂಥ ವಸ್ತುಗಳು ಆ ವರ್ತಕನಲ್ಲಿ ಎಷ್ಟು ಇರುವುವೋ ? ಎನ್ನುತ್ತ ಈ ಉಂಗುರವು ಇವನ ಕೈಗೆ ಸಿಕ್ಕಿದುದರಿಂದ ಉತ್ತಮವಾಯಿತು. ಅಲ್ಲದೆ ಇದು ಕಪಟಿಗಳಾದ ಶತ್ರುಗಳ ಕೈವಶವಾಗಿದ್ದರೆ ಮೋಸ ಬರುತ್ತಿದ್ದಿತು. ಆಡುತ್ತಿದ್ದ ನನ್ನ ಶಿಶುವು ಕೆಡವಿತೋ ಏನೋ ! ಎಂದು ಆಲೋಚಿಸುತ್ತಿರಲು; ಆಗ ಶಕಟದಾಸನು ಸಿದ್ಧಾರ್ಥಕನಿಗೆ—

ಎಲೈ ಮಿತ್ರನೇ, ಈ ಯಂಗುಳೀಯಕದಲ್ಲಿ ನಮ್ಮ ಅಮಾತ್ಯರ ಹೆಸರು ಬರೆದಿರುವುದರಿಂದ ಇದು ನಿಮಗೆ ಸಲ್ಲತಕ್ಕುದೆಂದು ಕೈಗಾಣಿಕೆಯಾಗಿ ಅವರಿಗೆ

ಒಪ್ಪಿಸುವವನಾಗು ಎನಲು; ನಾನು ಧನ್ಯನಾದೆನು ಎಂಬುದಾಗಿ ಸಿದ್ಧಾರ್ಥಕನು ಆ ಮೋಹರವನ್ನು ರಾಕ್ಷಸನಿಗೆ ಸಮರ್ಪಿಸಲು; ಅವನು ಅದಂ ತೆಗೆದುಕೊಂಡು ಶಕಟದಾಸನ ಕೈಯ್ಯಲ್ಲಿ ಕೊಟ್ಟು—ಇಂದು ಮೊದಲು ನಮ್ಮ ಕಾಗದಗಳಿಗೆಲ್ಲ ಈ ಉಂಗುರದಿಂದಲೇ ಮುದ್ರೆಯಂ ಒತ್ತುತ್ತಿರು. ಈಗ ಈ ಪೆಟ್ಟಿಗೆಗೂ ಇದ ರಿಂದಲೇ ಮೋಹರಮಂ ಮಾಡಿ ಇರಿಸು ಎಂದನು. ಆಗ ಸಿದ್ಧಾರ್ಥಕನು ಅಮಾ ತ್ಯನಂ ಕುರಿತು—

ಸ್ವಾಮೀ, ಮತ್ತೊಂದು ವಿಶೇಷ ವಿಜ್ಞಾಪನೆಯುಂಟು. ಚಾಣಕ್ಯನಿಗೆ ವಿರು ದ್ಧಕಾರ್ಯಮಂ ಮಾಡಿ ಇಲ್ಲಿಗೆ ಬಂದುದರಿಂದ ನಾನು ಪಾಟಲೀಪುರದಲ್ಲಿ ಇರ ಕೂಡದೆಂದು ಸ್ವಾಮಿಯವರ ಚಿತ್ತಕ್ಕೆ ತಿಳಿದಿರುವುದಷ್ಟೆ? ಅಪ್ಪಣೆಯಾದರೆ ರಾಜ ಕಾರ್ಯಪರ್ಯವಸಾನವಾಗುವ ಪರ್ಯಂತರ ತಾವು ಹೇಳಿದ ಕಾರ್ಯಮಂ ಮಾಡುತ್ತ ತಮ್ಮ ಸನ್ನಿಧಾನದಲ್ಲೇ ಇರಬೇಕೆಂದು ಮನೋವಾಂಛೆಯುಂಟು ಎನಲು; ರಾಕ್ಷಸನು ಶಕಟದಾಸನಂ ನೋಡಿ—

ಸಿದ್ಧಾರ್ಥಕನು ನನ್ನ ಮನಸ್ಸಿನಲ್ಲಿ ಇದ್ದಂತೆ ನುಡಿದನು. ಇವನಂ ಆದ ರಿಸಿ ನಮ್ಮ ಮನೆಯಲ್ಲೇ ಇಟ್ಟುಕೋ ಎಂದು ಹೇಳಿ—ಎಲೈ ಸಿದ್ಧಾರ್ಥಕನೇ, ಶಕಟದಾಸನಂತೆ ನಮ್ಮ ಬಳಿಯಲ್ಲಿ ಆಪ್ತನಾಗಿ ಇರುವವನಾಗು. ನೀವಿರ್ವರೂ ಮಾರ್ಗಶ್ರಮದಿಂದ ಬಂದಿರಿ. ವಿಶ್ರಮಿಸಿಕೊಳ್ಳಿರಿ ಎನ್ನುತ್ತ ಅವರನ್ನಾಚೆಗೆ ಕಳುಹಿಸಿ ಆ ಬಳಿಕ ಪುನಃ ಹಾವಾಡಿಗನಾದ ಚಾರನಂ ನೋಡಿ—

ಎಲೈ, ಇನ್ನು ಏನಾದರೂ ಪಾಟಲೀಪುರದ ವಿಶೇಷವರ್ತಮಾನಮುಂಟೋ? ಎನಲು;

ಸ್ವಾಮೀ, ಮತ್ತೊಂದು ವಿಶೇಷಮುಂಟು. ವಿರೋಚನನು ನಷ್ಟವಾದ ಬಳಿಕ ಭದ್ರಭಟಾದಿಗಳನ್ನಪಮಾನಂಗೆಯ್ದು ಹೊರಡಿಸಿದುದರಿಂದಲೋ! ಮತ್ತಾ ವುದರಿಂದಲೋ! ಚಾಣಕ್ಯನಲ್ಲಿ ಚಂದ್ರಗುಪ್ತನಿಗೆ ವಿರೋಧಮುಂಟಾಗಿದೆ ಎಂದು ಜನರು ಹೇಳಿಕೊಳ್ಳುವುದಂ ಕೇಳಿ ಅದಂ ಸಿಕ್ಷಯಿಸಬೇಕೆಂದು ನಾನು ಅಲ್ಲಿಯೇ ಇರುತ್ತಿರಲು; ಮತ್ತೊಂದು ದಿವಸ ಕೌಮುದೀಮಹೋತ್ಸವಂ ನಡೆಯುವಂತೆ ಚಂದ್ರಗುಪ್ತನ ಆಜ್ಞಾನುಸಾರವಾಗಿ ಸಾರುತ್ತ ಬರುವ ದೂತರ ಕೋಲಾ ಹಲ ಧ್ವನಿಯಂ ಚಾಣಕ್ಯನು ಆಕರ್ಣಿಸಿ ಸಹಿಸಲಾರದೆ ಆ ಉತ್ಸವವು ನಡೆಯ ಕೆಲಸವಿಲ್ಲವೆಂದು ನೇಮಿಸಿ ಸಾರುತ್ತಿರುವವರಂ ಹಿಂದಕ್ಕೆ ಕಳುಹಿಸಿದನು. ಅದಂ ಕಂಡು ಪುರದ ಜನರು—ಚಾಣಕ್ಯನು ಸ್ವತಂತ್ರನಾದುದರಿಂದ ಚಂದ್ರ

ಗುಪ್ತನಿಗೆ ಅಭಿಮತವಾದ ಈ ಉತ್ಸವಮಂ ನೋಡಿ ಸಹಿಸಲಾರದೆ ನಿಲ್ಲಿಸಿದನು. ಹೀಗೆ ಆಜ್ಞಾಭಂಗವಾಗಲು; ಮುಂದೆ ಚಂದ್ರಗುಪ್ತ ಚಾಣಕ್ಯರಿಗೆ ಮನಸ್ತಾಪವು ಹೆಚ್ಚೀತು ಎಂದು ಆಡಿಕೊಳ್ಳುವುದಂ ಸಹ ತಿಳಿದು ತ್ವರಿತದಿಂ ಬಂದು ಸ್ವಾಮಿಯವರಿಗೆ ವಿಜ್ಞಾಪಿಸಿದೆನು ಎಂಬ ಬೇಹಿನವರ ವಾಕ್ಯಮಂ ಕೇಳಿ ರಾಕ್ಷಸನು ಸಂತೋಷಪಟ್ಟು ಇದೇ ಸಮಯದಲ್ಲಿ ಚಂದ್ರಗುಪ್ತಚಾಣಕ್ಯರಿಗೆ ವಿರೋಧವು ಹೆಚ್ಚಿ ಬರುವಂತೆ ಮಾಡಬೇಕೆಂಬುದಾಗಿ ನೆನಸಿ—

ಎಲೈ ಗೂಢಪುರುಷನೇ, ನೀನು ಇದೇ ವೇಷದಿಂದ ಪುನಃ ಪಾಟಲೀಪುರಕ್ಕೆ ಹೋಗಿ ಮುಂದೆ ನಡೆಯುವ ವರ್ತಮಾನವೇನಿದ್ದರೂ ಕರಭಕನೆಂಬವನಿಗೆ ತಿಳುಹಿಸಿ ಅವನಂ ಇಲ್ಲಿಗೆ ಅಟ್ಟುವವನಾಗು. ಅವನಂ ಇಲ್ಲಿಂದ ಕುಸುಮಪುರಕ್ಕೆ ಕಳುಹಿಸುವೆನು ಎಂದು ಹೇಳಿ ಆ ಗುಪ್ತಚರನಂ ಬರಿಸಿ—

ಎಲೈ ಕರಭಕನೇ, ಪಾಟಲೀಪುರದಲ್ಲಿ ಚಂದ್ರಗುಪ್ತನ ಆಸ್ಥಾನದೊಳ್ ನಮಗೆ ಆಪ್ತರಾದ ಸ್ತುತಿಪಾಠಕರಾಗಿರುವ ನಮ್ಮ ಕಲಶಕವಿಜಯರೆಂಬವರಿಗೆ—ಚಾಣಕ್ಯನು ಚಂದ್ರಗುಪ್ತನ ಆಜ್ಞಾಭಂಗಮಂ ಮಾಡಿದುದರಿಂದ ರಾಜಸಭೆಯಲ್ಲಿ ಅವರೀರ್ವರಿಗೂ ವಾಕ್ಕಲಹಮುಂಟಾಗಿರುವ ಸಮಯದಲ್ಲಿ ಪರಸ್ಪರ ವಿರೋಧವು ಹುಟ್ಟುವಂತೆ ಸ್ತುತಿ ಪದ್ಯಗಳಿಂದ ಹೊಗಳುವ ಹಾಗೆ ಹೇಳಿ ಆ ಕಾಲದಲ್ಲಿ ನಡೆದ ವಿಶೇಷ ವರ್ತಮಾನಮಂ ತಿಳಿದು ಬಂದು ಅರಿಕೆ ಮಾಡುವವನಾಗು. ವೇಗಯುಕ್ತವಾದ ತುರಗಂಗಳನ್ನೇರಿ ಹೋಗಿರಿ ಎಂದು ರಾಕ್ಷಸನು ಆ ಚಾರರಿಗೆ ನೇಮಿಸಿ ಪಾಟಲೀಪುರಕ್ಕೆ ಕಳುಹಿಸಿದನು. ಅವರು ಅದೇ ಮೇರೆಗೆ ಕುಸುಮನಗರಿಗೈದಿ ಸ್ತುತಿಪಾಠಕರಿಗೆ ಅಮಾತ್ಯನ ವಚನಮಂ ಹೇಳುತ್ತಿದ್ದರೆಂಬಲ್ಲಿಗೆ ಮುದ್ರಾಮಂಜೂಷವೆಂಬ ಗ್ರಂಥದಲ್ಲಿ ಕ್ಷಪಣಕಾಪಮಾನ ಕಥನಮೆಂಬ ಚತುರ್ದಶಾಶಯವು ಸಮಾಪ್ತಮಾದುದು.

---

## ಪಂಚದಶಾಶಯ ಪ್ರಾರಂಭವು.

---

### ಚಾಣಕ್ಯ ಚಂದ್ರಗುಪ್ತರ ಕಪಟ ಕಲಹವು.

ಅನಂತರದಲ್ಲಿ ಮೊದಲು ಚಾಣಕ್ಯನಿಂದ ನೇಮಿಸಿ ಕಳುಹಿಸಲ್ಪಟ್ಟಿದ್ದ ವಿಶ್ವಾವಸು ಮುಖ್ಯರಾದ ಮೂರು ಮಂದಿ ಬ್ರಾಹ್ಮಣರು ವರ್ತಕವೇಷಮಂ ಧರಿಸಿ ಬಂದು ರಾಕ್ಷಸನ ಗೃಹಸಮೀಪದಲ್ಲಿ ನಿಂತು—ನಾವು ದೇಶಾಂತರದ ವಣಿ

ಜರು. ಶ್ಲಾಘ್ಯವಾಗಿರುವ ಆಭರಣಂಗಳಂ ತಂದಿರುವೆವು. ಇವು ನಿಮ್ಮ ದೊರೆಗಳಿಗೆ ಯೋಗ್ಯವಾದುವುಗಳು. ಈ ವಿಷಯವನ್ನು ಅವರಿಗೆ ತಿಳಿಹಿಸಿರಿ ಎಂದು ಆತನ ದೂತರಿಗೆ ಹೇಳಲು ; ಅವರು ಹೋಗಿ ಅಮಾತ್ಯನಿಗೆ ತಿಳುಹಿಸಿ ತದಾಜ್ಞೆಯಿಂದ ಆ ವರ್ತಕರಂ ಕರತಂದು ಮುಂದೆ ನಿಲ್ಲಿಸಲು ; ರಾಕ್ಷಸನು ಅವರಲ್ಲಿದ್ದ ಮೂರು ಸಂಪುಟಗಳ ಆಭರಣಂಗಳಂ ನೋಡಿ ಶ್ಲಾಘ್ಯವಾಗಿರುವುವೆಂದು ತಿಳಿದು ರಾಜ ಸಭೆಗೆ ಹೋಗುವಾಗ ಧರಿಸುವುದಕ್ಕೆ ಉಚಿತವಾಗಿವೆ ಎಂಬುದಾಗಿ ಹೇಳಿ ಆ ತೊಡವುಗಳಿಗೆ ಉಂಟಾದ ಕ್ರಯದ್ರವ್ಯಮಂ ಕೊಟ್ಟು ಬೊಕ್ಕಸದಲ್ಲಿ ಕಟ್ಟಿರಿಸುವವನಾಗು ಎಂದು ಶಕಟದಾಸನಿಗೆ ಆಜ್ಞಾಪಿಸುತ್ತಿರಲು ; ಆತನು ಹಾಗೇ ಆಗಲೆಂದು ಅದರ ಮೌಲ್ಯಧನಮಂ ಆ ವರ್ತಕನಿಗೆ ಕೊಟ್ಟು ವಿಭೂಷಣಂಗಳನ್ನು ಬೊಕ್ಕಸದಲ್ಲಿ ಕಟ್ಟಿರಿಸಿದನು.

ಆ ಸಮಯದೊಳ್ ರಾಕ್ಷಸನು ತನ್ನ ಮನಸ್ಸಿನಲ್ಲಿ—ಈಗ ನನ್ನಿಂದ ಆಜ್ಞಪ್ತನಾಗಿರುವ ಕರಭಕನೆಂಬ ಚಾರನು ಪಾಟಲೀಪುರಮಂ ಸೇರಿ ನಾವು ಹೇಳಿದರ್ಥಮಂ ವಂದಿಗಳಿಗೆ ಸೂಚಿಸಿದ ಬಳಿಕ ಸಭೆಯಲ್ಲಿ ಚಂದ್ರಗುಪ್ತ ಚಾಣಕ್ಯರಿಗೆ ವಾಕ್ಕಲಹಮುಂಟಾದರೆ ಆ ಸಮಯದೊಳ್ ವೈತಾಳಿಕರು ಸ್ತುತಿಪದ್ಯಗಳಿಂದ ಅವರೀರ್ವರ್ಗೆ ಪರಸ್ಪರವಾಗಿ ಮನಸ್ತಾಪವು ಹೆಚ್ಚುವಂತೆ ಮಾಡಿಯಾರು. ಈ ಕರಭಕನು ಅವರಿಗೆ ತಿಳಿಸುವುದಕ್ಕಿಂತ ಮುಂಚಿತವಾಗಿಯೇ ಚಂದ್ರಗುಪ್ತ ಚಾಣಕ್ಯರಿಗೆ ವಾಗ್ವಾದ ಮುಂಟಾಗಿದ್ದರೆ ಇವನ ಶ್ರಮವು ವ್ಯರ್ಥವಾಗುವುದು. ಹಾಗಾದರೂ ಚಂದ್ರಗುಪ್ತನು ಸಕಲ ಜನರರಿಯುವಂತೆ ತನ್ನ ಆಜ್ಞೆಗೆ ಭಂಗಮಂ ಮಾಡಿದ ಚಾಣಕ್ಯನಲ್ಲಿ ಅಲಕ್ಷ್ಯತೆಯಿಂದ ತನ್ನ ರಾಜ್ಯವು ತನ್ನ ಕೈವಶವಾಗಿ ಎಲ್ಲರಿಗೂ ತಾನರಸಾದ ಬಳಿಕ ತನಗೆ ಯಾರಿಂದ ಆಗತಕ್ಕುದೇನು ? ಎಂದು ತಿಳಿದು ಇದ್ದಾನು. ಚಾಣಕ್ಯನಾದರೋ ತಾನು ಮಾಡಿದ್ದ ಪ್ರತಿಜ್ಞೆಯಂ ನಿರ್ವಹಿಸಿಕೊಂಡ ಅನಂತರ ಇನ್ನು ಯಾವುದು ಹೇಗಾದರೂ ಆಗಲಿ ಎಂದು ಚಂದ್ರಗುಪ್ತನಲ್ಲಿ ಉಪೇಕ್ಷೆಯಂ ಮಾಡಿ ಇದ್ದಾನು. ಯಾವರೀತಿಯಿಂದಾದರೂ ಅವರೀರ್ವರಿಗೂ ಅನುರಾಗಂ ತಪ್ಪಿ ಮನಸ್ತಾಪಮುಂಟಾಗಿರುವ ಈ ಸಮಯದಲ್ಲಿ ನಾನು ಮಲಯಕೇತುಸಮೇತನಾಗಿ ದಂಡೆತ್ತಿಹೋದರೆ ಕಾರ್ಯವು ಸ್ವಾಧೀನವಾಗುವುದೆಂದು ನಿಶ್ಚಯಿಸುತ್ತಿದ್ದನು.

ಇತ್ತ ಪಾಟಲೀಪುರದಲ್ಲಿ ಚಂದ್ರಗುಪ್ತನು ತನ್ನ ಆಜ್ಞೆಯ ಮೇರೆಗೆ ಅಲಂಕರಿಸಲ್ಪಟ್ಟು ಶೋಭಿಸುತ್ತಿರುವ ನಿಜನಗರದ ವೈಭವಮಂ ನೋಡಲಿಚ್ಛೈಸಿದವ

ನಾಗಿ ಸುಗಾಂಗವೆಂಬ ಪ್ರಾಸಾದಮಾರ್ಗವಿಡಿದು ಮಿತಪರಿವಾರಯುಕ್ತನಾಗಿ ಬಂದು ಅಲ್ಲಿ ರಾಜಯೋಗ್ಯಾಸನದಲ್ಲಿ ಕುಳಿತು ಚತುರ್ದಿಕ್ಕುಗಳಂ ನೋಡುವಲ್ಲಿ ಪುರ ವೀಥೀ ಪ್ರಾಸಾದಗಳಲಂಕೃತಗಳಾಗದೆ ಎಂದಿನಂತೆ ಇರಲಾಗಿ ; ಸಮೀಪದಲ್ಲಿ ನಿಂತಿರುವ ಅವಸರದವನಂ ನೋಡಿ—

ಎಲೈ ವೈತಾಳಿಕನೇ, ಈ ಪಟ್ಟಣದಲ್ಲಿ ಕೌಮುದೀಮಹೋತ್ಸವಂ ನಡೆ ಯುವ ವಿಷಯದಲ್ಲಿ ನಾವು ಆಜ್ಞಾಪಿಸಿದಂತೆ ಒಂದೂ ನಡೆಸಲ್ಪಟ್ಟ ಹಾಗೆ ಕಾಣುವುದಿಲ್ಲ. ಈ ಪುಟಭೇದನದಲ್ಲಿರುವ ಜನರು ನಮ್ಮ ಆಜ್ಞಾನುಸಾರ ವಾಗಿ ನಡೆದುಕೊಳ್ಳುವುದಿಲ್ಲವೋ ? ಎನಲು ; ಆ ಮಾತಿಗೆ ಅವಸರದವನು ಕೈಮುಗಿದು—

ಜೀಯಾ, ಸ್ವಾಮಿಯವರ ಅಪ್ಪಣೆಯಂ ಮೀರಿ ನಡೆಯುವುದಕ್ಕೆ ಲೋಕ ದಲ್ಲಿ ಮತ್ತೊಬ್ಬರಿಗೆ ಸಾಮರ್ಥ್ಯವಂದರೇನು ? ಬಿನ್ನೈಸುವುದಕ್ಕೆ ಭಯಪಡು ವೆನು ಎನಲಾಗಿ ; ಆ ವಾಕ್ಯದ ಭಾವಮಂ ತಿಳಿದು ಹಾಗಾದರೆ ಈ ಉತ್ಸವಮಂ ಮಾಡಕೆಲಸವಿಲ್ಲವೆಂದು ಯಜಮಾನರಾದ ಚಾಣಕ್ಯರ ಅಪ್ಪಣೆಯಾಗಿದೆಯೋ ಎಂದು ಕೇಳಿದುದಕ್ಕೆ—

ಬುದ್ಧೀ, ಹೌದೆಂದು ಅವಸರದವನು ವಿಜ್ಞಾಪಿಸಲು; ಆಗ ಚಂದ್ರಗು ಪ್ತನು ತನ್ನ ಮನಸ್ಸಿನಲ್ಲಿ—

ಸಕಲ ರಾಷ್ಟ್ರದಲ್ಲಿಯೂ ನನ್ನ ಆಜ್ಞೆಯು ಅವಿಚ್ಛಿನ್ನವಾಗಿ ನಡೆಯ ಬೇಕೆಂದು ನಮ್ಮ ಯಜಮಾನರಾದ ಚಾಣಕ್ಯರು ತಮ್ಮ ಚಿತ್ತದಲ್ಲಿ ನಿಶ್ಚಯಿಸಿ ಮಹಾಸಾಹಸವಂತರಾದ ನನ್ನ ಶತ್ರುಗಳಂ ನಿಗ್ರಹಿಸಿ ಈ ಮಹಾರಾಜ್ಯಕ್ಕೆ ನನ್ನಂ ಅಧಿಪತಿ ಯೆಂದೆನಿಸಿ ನಿನ್ನ ರಾಷ್ಟ್ರಮಂ ನೀನೇ ಸ್ವತಂತ್ರದಿಂದ ವಿಚಾರಿಸು ವುದೆಂದು ನೇಮಿಸಿದ ಬಳಿಕ ಅವರ ಆಜ್ಞಾಪ್ರಕಾರವಾಗಿಯೇ ನಾನು ರಾಜ್ಯ ವಿಚಾರ ಮಾಡುವುದಂ ತಿಳಿದು ಏನು ನಿಮಿತ್ತ ನನ್ನ ಆಜ್ಞಾಭಂಗಮಂ ಮಾಡಿಸಿ ದರೋ ! ತಿಳಿಯಕೂಡದು. ತಾವು ಸಕಲಾಶೆಗಳಂ ತ್ಯಜಿಸಿ ವಿರಕ್ತರಾಗಿ ಆರ್ಜಿ ಸುವ ತಪಸ್ಸಂ ನಿಲ್ಲಿಸಿ ನಾನು ಮಾಡುವ ರಾಜ್ಯವಿಚಾರಮಂ ನೋಡಿ ತಾವು ಮಂಸಿದ ಕಾರ್ಯವು ಸಫಲವಾಯಿತೆಂದು ಸಂತೋಷಪಡುವ ಅಭಿಜ್ಞರಾದ ನಮ್ಮ ಯಜಮಾನರಿಗೆ ನನ್ನಲ್ಲಿ ಎಂದಿಗೂ ಅಸೂಯೆಯೆಂಬುವುದು ಬರಲಾ ರದು. ಮತ್ತು ನನ್ನ ಆಜ್ಞಾಭಂಗಮಂ ಮಾಡಿದುದರಿಂದ ತಮಗೂ ನನಗೂ ಮನಸ್ತಾಪಮುಂಟಾದುದೆಂಬ ಅರ್ಥವು ಲೋಕಪ್ರಸಿದ್ಧವಾಗಿ ಆದು ಶತ್ರುಗಳ

ಕಿವಿಗೆ ಬಿದ್ದರೆ ಇಂಥ ಸಮಯಮಂ ನೋಡಿ ರಾಕ್ಷಸನು ಮಲಯಕೇತುವಂ ಕಟ್ಟಿಕೊಂಡು ದಂಡೆತ್ತಿ ಬೇಗ ಬರಲಿ. ಹಾಗೆ ಬಂದರೆ ನಿಗ್ರಹಿಸಬೇಕೆಂಬ ಬುದ್ಧಿಯಿಂದ ಹೀಗೆ ಮಾಡಿದ್ದಾರೆಂದರೆ ಪರಾಜಿತನಾಗಿ ಹೋಗಿರುವ ಶತ್ರುವನ್ನು ತನ್ನ ಮೇಲೆ ದಂಡೆತ್ತಿಕೊಂಡು ಬರುವಂತೆ ಮಾಡಿಕೊಳ್ಳುವ ಪುರುಷನು ಅಪ್ರಬುದ್ಧನಾದುದರಿಂದ ಈ ಯರ್ಥವು ನಮ್ಮ ಯಜಮಾನರ ಮನೋಗತವಲ್ಲ. ಮತ್ತು ನನ್ನಿಂದ ತಿಳಿಯದ ಅಪರಾಧವೇನಾದರೂ ಉಂಟಾಗಿದ್ದರೆ ನನಗೆ ರಹಸ್ಯದಲ್ಲಿ ಬುದ್ಧಿಯಂ ಕಲಿಸುವರಲ್ಲದೆ ಹೀಗೆ ಸಕಲ ಜನವೂ ತಿಳಿಯುವಂತೆ ನನ್ನ ಆಜ್ಞಾಭಂಗವಮಂ ಎಂದಿಗೂ ಮಾಡರು. ಮತ್ತೇನೆಂದರೆ—ಅಜೇಯರಾದ ನಂದರಂ ಸ್ವಲ್ಪಯತ್ನದಲ್ಲಿ ನಿಗ್ರಹಿಸಿದ ಚಾಣಕ್ಯರು ಈಗ ನನ್ನಲ್ಲಿ ವೈರಮಂ ಎಣಿಸಿರುವ ಮಲಯಕೇತು ರಾಕ್ಷಸರಂ ಸಹ ಜಯಿಸಲೆಣಿಸಿ ನನಗೂ ತಮಗೂ ವಿರೋಧಮುಂಟಾಗಿದೆ ಎಂಬರ್ಥವು ಅರಿಸೇನೆಯಲ್ಲಿ ಪ್ರಸಿದ್ಧಿಯಾಗುವಂತೆ ಯಾವ ಉಪಾಯದಿಂದಲೋ ಶತ್ರುವಂ ಗೆಲ್ಲುವ ಉದ್ದಿಶ್ಯವಾಗಿ ಉತ್ಸವಮಂ ನಿಲ್ಲಿಸಿದ್ದಾರು. ಯಜಮಾನರು ಮಾಡಿದ ಕಾರ್ಯವೆಲ್ಲವೂ ನನಗೆ ಉಪಯೋಗಿಸುವುವು. ಅವರ ಮನೋನುಗುಣವಾಗಿ ನಡೆದುಕೊಳ್ಳುವುದೇ ನನಗೆ ಶ್ರೇಯಸ್ಕರವು. ಹೀಗಾದರೆ ಮುಖತಃ ಚರ್ಚೆಯಂ ಮಾಡಿದಲ್ಲದೆ ವಿಮರ್ಶೆಯಾಗದೆಂದು ಬಗೆದು ಪುನಃ ವೈತಾಳಿಕನಂ ನೋಡಿ—

ಎಲೈ ಕುಮುದಕನೇ, ನಮ್ಮ ಯಜಮಾನರಿಗೆ ಶಿರಸ್ಸಿನಿಂದ ನಮಸ್ಕರಿಸಿದೆನೆಂದು ಹೇಳಿ ನಿಮ್ಮಂ ನೋಡಲಿಚ್ಛೈಸಿದ್ದಾನೆಂದು ಬಿನ್ನೈಸಿ ಕಾರ್ಯಗೌರವಮಿಲ್ಲದೇ ಇದ್ದು ಬಂದರೆ ಇಲ್ಲಿಗೆ ಕರತರುವವನಾಗು ಎಂಬುದಾಗಿ ಹೇಳಲು; ಅ ಅವಸರದವನು ಮಹಾ ಪ್ರಸಾದಮೆಂದು ಕೈಮುಗಿದು ಬಂದು ಸಮಿತ್ಕುಶಾಸ್ತರಣ ದಾರುಪಾತ್ರ ಕೃಷ್ಣಾಜಿನ ಕಂದಮೂಲಂಗಳಿಂ ಶೋಭಿತವಾಗಿ ಋಷಿಗಳ ಆಶ್ರಮದಂತೆ ಕಂಗೊಳಿಸುತ್ತಿರುವ ಚಾಣಕ್ಯರ ಪರ್ಣಶಾಲೆಯಂ ನೋಡಿ ವಿಸ್ಮಿತನಾಗಿ ಈ ಚಾಣಕ್ಯನು ಆಶಾಪಾಶವಿಮುಕ್ತನಾದುದರಿಂದಲೇ ಪ್ರಭುವಾದ ಚಂದ್ರಗುಪ್ತನಂ ಲಕ್ಷ್ಯೀಕರಿಸದೆ ತನ್ನ ಕುಮಾರಕನಂ ಕಂಡಂತೆ—ಎಲೈ ಅರಸೇ, ಬಾರೈ ಎನ್ನುತ್ತ ಮಾತನಾಡಿಸುವನು. ವಿರಕ್ತನಾದವನಿಗೆ ಯಾವುದು ತಾನೇ ವಿಷಯಮಾದೀತು ಎಂಬುದಾಗಿ ಯೋಚಿಸುತ್ತ ಬಂದು ಪ್ರಜ್ವಲಿಪ ಅಗ್ನಿಯಂತೆ ಕುಶಾಸನದಲ್ಲಿ ಕುಳಿತು ಶಿಷ್ಯರಿಗೆ ಧರ್ಮೋಪದೇಶಂಗೆಯ್ಯುತ್ತಿರುವ ಚಾಣಕ್ಯಂಗೆ ಕೈಮುಗಿದು ಜೀಯಾ! ಎಂದು ದೂರದಲ್ಲಿಯೇ ನಿಂತಿರಲು; ಚಾಣಕ್ಯನು ನೋಡಿ ಏನೈ ವೈತಾಳಿಕನೇ, ಎಂದು ಕೇಳಲು; ಅವನು—

ಸ್ವಾಮಿಾ ಮಹಾತ್ಮರಾದ ಯಜಮಾನರೇ, ಚಂದ್ರಗುಪ್ತಮಹಾರಾಜರು ಸಕಲ ಸುರಾಸುರ ವಂದ್ಯಮಾನನಾಗಿ ತ್ರೈಲೋಕ್ಯಗುರುವಾದ ಕಪರ್ದೀಶ್ವರನೆಂಬ ಇಷ್ಟದೇವರಿಗೆ ಶಿರಮಂ ಬಾಗಿಸಿ ನಮಸ್ಕರಿಸುವಂತೆ ತಮ್ಮ ಪಾದಾರವಿಂದಂಗಳಿಗೆ ಅಭಿವಂದಿಸಿದರು, ಇಲ್ಲಿ ಕಾರ್ಯಗೌರವಮಿಲ್ಲದಿದ್ದರೆ ತಮ್ಮ ದರ್ಶನವಾಗಬೇಕೆಂದು ಸುಗಾಂಗವೆಂಬ ಪ್ರಾಸಾದದಲ್ಲಿ ಮೂರ್ತಿಗೊಂಡಿದ್ದಾರೆ ಎಂದ ಮಾತಿಗೆ ಚಾಣಕ್ಯನು—

ಆತನಾಚರಿಸಿದ ನಮಸ್ಕಾರವು ಈಶ್ವರನಿಗೆ ಸಮರ್ಪಿತವಾಗಲಿ. ಎಲೈ ವೈತಾಳಿಕನೇ, ಅರಸು ನಮ್ಮನ್ನು ಕರೆಯಕಳುಹಿಸಿ ಇದ್ದಾನೆಯೇ? ಹಾಗಾದರೆ ಕೌಮುದೀಮಹೋತ್ಸವಮಂ ನಾವು ನಿಲ್ಲಿಸಿದೆವೆಂದು ನೃಪನಿಗೆ ಯಾರೋ ತಿಳುಹಿಸಿ ಇರಬೇಕು ಎನಲು; ವೈತಾಳಿಕನು—ಬುದ್ಧೀ, ಯಾರೂ ಅರಿಕೆ ಮಾಡಲಿಲ್ಲ. ಸುಗಾಂಗಪ್ರಾಸಾದಕ್ಕೆ ಪ್ರಭುಗಳು ತಾವೇ ಬಂದು ಉತ್ಸವ ರಹಿತವಾದ ಪುರಮಂ ನೋಡಿ ಅವರೇ ತಿಳಿದುಕೊಂಡಂತೆ ತೋರುತ್ತದೆ ಎಂದನು. ಅದಂ ಕೇಳಿ ಚಾಣಕ್ಯನು—

ಎಲಾ, ನೀವೆಲ್ಲರೂ ಅರಸಿಗೆ ಏನೋ ಬೋಧಿಸಿ ನನ್ನಲ್ಲಿ ಆತನಿಗೆ ಇದ್ದ ಅನುರಾಗಮಂ ತಪ್ಪಿಸಿದಂತೆ ತೋರುತ್ತದೆ. ಆಗಲದಕ್ಕೇನು? ಎನಲು; ಅವಸರದವನು ಭಯದಿಂದ ತಲೆವಾಗಿ ನಿಂತನು. ಆಗ—

ಎಲೈ ವೈತಾಳಿಕನೇ, ರಾಜಪರಿವಾರಕ್ಕೆ ನನ್ನಲ್ಲಿ ದ್ವೇಷಮುಂಟಾಗಿರುವಂತೆ ತೋರುತ್ತಿದೆ. ಹಾಗಾದರೆ ಪ್ರಭುವಂ ಕಂಡು ಬರುವೆನೆಂದು ಚಾಣಕ್ಯನು ಎದ್ದು ಬಂದು ಚಂದ್ರಶಾಲೆಯನ್ನೇರಿ ಅರಸುಗಳಿಂದುಪಾಸ್ಯಮಾನನಾಗಿ ಭದ್ರಪೀಠದಲ್ಲಿ ಕುಳಿತಿರುವ ಚಂದ್ರಗುಪ್ತನಂ ದೂರದಿಂದಲೇ ನೋಡಿ ಸಂತೋಷಪಡುತ್ತ ಬರುತ್ತಿರಲು; ತನ್ನ ಸಮಿಾಪಕ್ಕೆ ಬಿಜಮಾಡುವ ಚಾಣಕ್ಯನಂ ವೀಕ್ಷಿಸಿ ಮೌರ್ಯಪುತ್ರನು ಪೀಠದಿಂದೆದ್ದು ಆತನ ಪಾದಕ್ಕೆ ನಮಸ್ಕರಿಸಿದನು.

ಅಯ್ಯಾ ಅರಸೇ, ಸರ್ವೋತ್ಕೃಷ್ಟನೂ ಆಯುಷ್ಮಂತನೂ ಆಗಿರು ಎಂದು ಆಶೀರ್ವಾದಮಂ ಮಾಡಿದನು. ಅದಕ್ಕೆ ಚಂದ್ರಗುಪ್ತನು—

ಸ್ವಾಮಿಾ, ವೇದಸದೃಶವಾದ ತಮ್ಮ ಮಂಗಲಾಶಾಸನದಿಂದ ಅದೇ ಅರ್ಥವನ್ನು ಅನುಭವಿಸುತ್ತಿದ್ದೇನೆ. ಕುಳ್ಳಿರಬಹುದು ಎಂದು ಸ್ವರ್ಣಪೀಠದಲ್ಲಿ ಚಾಣಕ್ಯನಂ ಮೂರ್ತಿಗೊಳಿಸಿ ಯಥಾಯೋಗ್ಯವಾಗಿ ಎಲ್ಲರೂ ಕುಳಿತ ಬಳಿಕ ಚಾಣಕ್ಯನು ಚಂದ್ರಗುಪ್ತನಂ ನೋಡಿ—

ಎಲೈ ಕುಮಾರಕನೇ, ಏನು ನಿಮಿತ್ತವಾಗಿ ನಮ್ಮಂ ಕರೆಯ ಕಳುಹಿಸಿದವ ನಾದೆ? ಎನಲು;

ಚಂ—ಸ್ವಾಮಿಯವರ ದರ್ಶನದಿಂ ಧನ್ಯನಾಗುವೆನೆಂದು ಇಚ್ಛೈಸಿದೆನೆಂದನು.

ಚಾ—ಎಲೈ ಅರಸೇ, ಅತಿವಿನಯಮಂತಿರಲಿ. ನಿಮಿತ್ತವಿಲ್ಲದೆ ಕರೆಯ ಕಳುಹಿಸುವುದುಂಟೇ? ಎನಲು;

ಚಂ—ಸ್ವಾಮಿ, ಕೌಮುದೀಮಹೋತ್ಸವಮಂ ನಿಲ್ಲಿಸುವುದಕ್ಕೆ ಪ್ರಯೋ ಜನವೇನು? ಎಂದನು.

ಚಾ—ಹಾಗಾದರೆ ಮುಖ್ಯವಾಗಿ ಆಕ್ಷೇಪಿಸುವುದಕ್ಕೆ ನಮ್ಮಂ ಕರೆಯಿಸಿ ದೆಯೋ? ಎನಲು;

ಚಂ—ಸ್ವಾಮಿ, ಅದಕ್ಕಲ್ಲ. ಅರಿಕೆಮಾಡಿಕೊಳ್ಳುವುದಕ್ಕೆ ಎಂದನು.

ಚಾ—ಎಲೈ ಅರಸೇ, ಚಾಣಕ್ಯನು ಸ್ವಪ್ನದಲ್ಲಿಯಾದರೂ ಪ್ರಯೋಜನ ವಿಲ್ಲದೆ ಕಾರ್ಯಾರಂಭಮಂ ಮಾಡುವವನಲ್ಲೆಂಬ ಅರ್ಥವು ನಿನಗೆ ತಿಳಿದೇ ಇದೆ ಯಷ್ಟೆ? ಎನಲು;

ಚಂ—ಸ್ವಾಮಿ, ಅದೇ ಕಾರ್ಯಮಂ ತಿಳಿಯಲೋಸುಗ ಕರೆಯಕಳುಹಿಸಿ ದೆನು ಎಂದನು.

ಚಾ—ಎಲೈ ರಾಯನೇ, ದಂಡನೀತಿಶಾಸ್ತ್ರದಲ್ಲಿ ಸ್ವಾಯತ್ತವೆಂದೂ ಸಚಿ ವಾಯತ್ತವೆಂದೂ ಉಭಯಾಯತ್ತವೆಂದೂ ಸಿದ್ಧಿಯು ಮೂರು ತೆರನಾಗಿ ಪೇಳ ಲ್ಪಡೆಗುಂ. ಹಾಗೆ ಸಚಿವಾಯತ್ತಸಿದ್ಧಿಯುಳ್ಳ ನಿನಗೆ ಪ್ರಯೋಜನವಿಚಾರವೇ ತಕ್ಕೆ? ಏನು ಇದ್ದರೂ ನಾವೇ ವಿಚಾರಿಸಿಕೊಳ್ಳುತ್ತೇವೆ ಎನಲಾಗಿ ಆ ಮಾತಿಗೆ ಅರಸು ಕೋಪದಿಂ ಮುಖಮಂ ಹಿಂತಿರಿಗಿಸಲು; ಆಗ ಇದೇ ಸಮಯವೆಂದು ಮೊದಲು ರಾಕ್ಷಸನು ಚಾರನಿಂದ ನೇಮಿಸಲ್ಪಟ್ಟಿದ್ದ ಕಲಶಕ ವಿಜಯರೆಂಬ ಸ್ತುತಿ ಪಾಠಕರು ಬಂದು ಅರಸಿನ ಮುಂಗಡೆಯಲ್ಲಿ ನಿಂತು ಸ್ತುತಿ ಪದ್ಯಗಳನ್ನಾರಂಭಿಸಿ ಹೊಗಳುತ್ತಿದ್ದರು. ಹೇಗಂದರೆ—

ಜೀಯಾ, ಮಾನಶಾಲಿಗಳಾದ ಭೂಪತಿಗಳೆಂಬ ತಾರಾಗಣದ ಮಧ್ಯದಲ್ಲಿ ಚಂದ್ರನಂತೆ ಶೋಭಿಸುವ ಚಂದ್ರಗುಪ್ತ ಸಾರ್ವಭೌಮರೇ ಎಂದು ವಿಜಯನೆಂಬ ವಂದಿಯು ಹೊಗಳಿದನು.

ಜೀಯಾ, ಪ್ರಬಲ ಮದಗಜಗಳ ಮೇಲೆ ಕೈಮಾಡುವ ಸಿಂಹವು ತನ್ನ ದಾಡೆಗಳಂ ಬಲಹೀನಮೃಗವು ಕೀಳುತ್ತಿದ್ದರೆ ಆ ಅಪಮಾನಮಂ ಹೇಗೆ ಸಹಿಸ

ಲಾರದೋ ಅದೇರೀತಿಗೆ ಭೂಪತಿಯು ಸಾಧಾರಣರಿಂದಾಗುವ ಆಜ್ಞಾಭಂಗಮಂ ಸಹಿಸಲಾರನು. ಮತ್ತು ದಿವ್ಯವಸ್ತ್ರಭೂಷಣಂಗಳಿಂದ ಭೂಷಿತನಾದ ಮಾತ್ರದಿಂದಲೇ ಪುರುಷನು ಪ್ರಭುವೆನಿಸಿಕೊಳ್ಳಲಾರನು. ಯಾರಿಂದಲೂ ಲಂಘಿಸುವುದಕ್ಕೆ ಅಶಕ್ಯವಾದ ಆಜ್ಞಾಶಕ್ತಿಯಿಂದಲಂಕೃತರಾದ ನಿಮ್ಮಂಥ ಭೂಪತಿಗಳೇ ಪ್ರಭುವೆನ್ನಿಸಿಕೊಳ್ಳುವವರೆಂದು ಕಲಶಕನೆಂಬ ಬಟ್ಟನು ಹೊಗಳುತ್ತಿದ್ದನು. ಅದಂ ಕೇಳಿ ಚಾಣಕ್ಯನು—

ದುಷ್ಟನಾದ ರಾಕ್ಷಸನು ನನಗೂ ಚಂದ್ರಗುಪ್ತನಿಗೂ ವಾಕ್ಕಲಹಂ ಬಂದ ಸಮಯದಲ್ಲಿ ನಮ್ಮಿರ್ವರಿಗೂ ಮನಸ್ತಾಪವು ಹೆಚ್ಚುವಂತೆ ಸ್ತುತಿಪದ್ಯಗಳಿಂದ ಹೊಗಳುವ ಹಾಗೆ ಈ ವಂದಿಗಳಿಗೆ ನೇಮಿಸಿದ್ದಾನು. ಇದರಿಂ ಹೆಚ್ಚುವ ಮುನಿಸಿನಿಂದ ನಾನು ಚಂದ್ರಗುಪ್ತನಂ ಉಪೇಕ್ಷಿಸಿದರೆ ತಾನು ಜಯಿಸೇನು ಎಂಥ ಯತ್ನಮಂ ಮಾಡಿ ಇದ್ದಾನು. ಹೀಗಾದರೂ ಆ ರಾಕ್ಷಸನು ಎಲ್ಲಿ ಹೋದಾನು ! ನನ್ನ ಕೈವಶವೇ ಆದಾನು ಎಂದು ಯೋಚಿಸುತ್ತಿರಲು ; ಆ ಸಮಯದಲ್ಲಿ ಚಂದ್ರಗುಪ್ತನು ವೈತಾಳಿಕನಂ ನೋಡಿ—

ಎಲೈ ಕುಮುದಕನೇ, ಬುದ್ಧಿವಂತರಾದ ಈ ಸ್ತುತಿಪಾಠಕರಿಗೆ ಉಚಿತವಾಗಿ ಸಹಸ್ರ ಸಹಸ್ರ ಮೊಹರಿಗಳಂ ಬೊಕ್ಕಸದಿಂದ ಕೊಡಿಸು ಎನಲು ; ಅದಂ ಕೇಳಿ ಚಾಣಕ್ಯನು ಹುಬ್ಬಂ ಗಂಟಿಕ್ಕಿಕೊಂಡು ಚಂದ್ರಗುಪ್ತನಂ ಕುರಿತು—

ಎಲೈ ವೃಷಲನೇ, ಅಕಾರಣವಾದ ಇಂಥ ಪೋಲು ವೆಚ್ಚಮಂ ಮಾಡಕೂಡದೆಂದು ಹೇಳಿ—ಎಲೈ ವೈತಾಳಿಕನೇ, ಧನವನ್ನಾರ್ಜಿಸುವ ಶ್ರಮವು ಅರ್ಜಕನಿಗೆ ತಿಳಿಯುವುದಲ್ಲದೆ ಈ ಅರಸು ಏನು ಬಲ್ಲನು ? ಈ ವಂದಿಗಳಿಗೆ ದ್ರವ್ಯಮಂ ಕೊಡಕೆಲಸವಿಲ್ಲ ನಿಲ್ಲಿಸಿಬಿಡು ಎನಲು; ಅದಂ ಕೇಳಿ ಚಂದ್ರಗುಪ್ತನು—

ಇದೇನು ಸ್ವಾಮಿ, ನನ್ನ ಯಾವ ಮಾತುಗಳನ್ನೂ ಹೀಗೆ ಸಾಗಲೀಸದೆ ಅಡ್ಡಿ ಮಾಡುವಿರಿ ? ಹೀಗಾದರೆ ನನಗೆ ಇದು ಪ್ರಭುತ್ವಮಲ್ಲ. ಕಾರಾಗೃಹವಾಸವೆಂದು ತಿಳಿಯಬೇಕು ಎಂದನು. ಆ ಮಾತಿಗೆ ಚಾಣಕ್ಯನು—

ಎಲೈ ವೃಷಲನೇ, ಸ್ವಭುಜಶೌರ್ಯದಿಂದಾರ್ಜಿತಮಲ್ಲದ ಈ ರಾಷ್ಟ್ರವನ್ನನುಭವಿಸುತ್ತಿರುವ ನಿನಗೆ ಆ ಯರ್ಥವೇ ಸಿದ್ಧವೆಂದು ಹೇಳಬೇಕು. ಇದಂ ಅವಮಾನವೆಂದು ಸಹಿಸಲಾರದೆ ಇದ್ದರೆ ಈ ರಾಜ್ಯಭಾರಮಂ ನೀನೇ ನಿರ್ವಹಿಸಿಕೊಳ್ಳುವವನಾಗು ಎನಲು ; ಚಂದ್ರಗುಪ್ತನು—

ಸ್ವಾಮಿ, ಹಾಗೇ ಆಗಲಿ. ನನ್ನ ರಾಷ್ಟ್ರವಿಚಾರಮಂ ನಾನೇ ನಿರ್ವಹಿಸಿಕೊಳ್ಳುತ್ತೇನೆ ಎಂದನು. ಅದಕ್ಕೆ ಚಾಣಕ್ಯನು—

ಎಲೈ ವೃಷಲನೇ, ಹಾಗಾದರೆ ನನಗೆ ಭಾರ ಕಳೆಯಿತು. ಹಾಗೇ ಮಾಡಿಕೋ, ನಮ್ಮ ಕೆಲಸದಲ್ಲಿ ನಾವು ಜಾಗ್ರತೆಯಾಗಿರುವೆವು ಎನಲು; ಅರಸು—

ಆದರೆ ಉತ್ಸವಮಂ ನಿಲ್ಲಿಸುವುದಕ್ಕೆ ಪ್ರಯೋಜನವೇನೆಂದು ನಾನು ಕೇಳಿದುದೇ ತಪ್ಪಾಯಿತೋ? ಎಂದನು. ಆ ಮಾತಂ ಕೇಳಿ ಚಾಣಕ್ಯನು—

ಎಲೈ ವೃಷಲನೇ, ಉತ್ಸವಮಂ ಮಾಡದಿದ್ದರೆ ಯಾವ ಕಾರ್ಯ ಕೆಡುವುದೆಂದು ಕೇಳಿದುದಕ್ಕೆ ದೋಷಮುಂಟೋ? ಎನಲು ; ಚಂದ್ರಗುಪ್ತನು—

ಸ್ವಾಮಿಾ, ನನ್ನ ಆಜ್ಞಾ ವಚನವು ಸಫಲವಾಗದೆ ಇರುವುದೇ ದೋಷವೆಂದನು. ಆ ಮೇಲೆ ಚಾಣಕ್ಯನು—

ಎಲೈ ವೃಷಲನೇ, ನಿನ್ನ ಆಜ್ಞೆಯು ಸಾಗದಂತೆ ಮಾಡುವುದೇ ನಮಗೆ ಪ್ರಥಮಪ್ರಯೋಜನವು. ಅದೆಂತೆಂದರೆ—ಚತುಸ್ಸಮುದ್ರ ಮಧ್ಯಗತ ಭೂಭಾಗಗಳನ್ನಾಳುತ್ತಿರುವ ರಾಜಮಂಡಲಿಗಳು ಕೋಮಲತರವಾದ ಪರಿಮಳಭರಿತ ಪುಷ್ಪಮಾಲೆಗಳಂ ಶಿರಸ್ಸುಗಳಂ ವಹಿಸುವಂತೆ ಯಾವ ನಿನ್ನ ಆಜ್ಞಾ ವಚನಂಗಳಂ ತಮ್ಮ ಶಿರಸ್ಸುಗಳಿಂದ ವಹಿಸುತ್ತಾರೆಯೋ ಅಂಥ ನಿನ್ನ ಆಜ್ಞೆಯು ನನ್ನಲ್ಲಿ ಸಾಗದೆ ಇರುವುದರಿಂದ ಈ ನಿನ್ನ ಪ್ರಭುತ್ವವು ವಿನಯದಿಂದಲಂಕೃತವಾಗಿ ನಿನಗೆ ಕೀರ್ತಿಯನ್ನುಂಟುಮಾಡುತ್ತಿದೆ. ಇದೇ ನಿನಗೆ ಶ್ರೇಯಸ್ಕರವೆಂದು ತಿಳಿಯುವವನಾಗು. ಎರಡನೆಯ ಪ್ರಯೋಜನವೇನಂದರೆ ಇದೋ! ಈ ಕಾಗದಮಂ ಓದಿಕೊಂಡು ಗ್ರಹಿಸಿಕೊಳ್ಳುವವನಾಗೆಂದು ತನ್ನ ಸೊಂಟದಲ್ಲಿ ಸಿಕ್ಕಿಸಿದ್ದ ಭದ್ರಭಟಾದಿಗಳ ಕೈ ಕಾಗದಮಂ ಚಂದ್ರಗುಪ್ತನ ಕರದಲ್ಲಿ ಕೊಡಲು; ಅದಂ ಅವನು ತೆಗೆದುಕೊಂಡು ಅದರೊಳಗೆ—

ಶ್ರೀಮಚ್ಚಂದ್ರಗುಪ್ತ ಮಹಾರಾಜರ ಸನ್ನಿಧಿಗೆ ಭದ್ರಭಟಾದಿ ಸೇನಾನಾಯಕರು ಬರೆದು ಒಪ್ಪಿಸಿದ ಕಾಗದವೇನಂದರೆ—ನಾವೆಲ್ಲರೂ ಕೋಪಿಸಿಕೊಂಡು ಹೋದವರಂತೆ ಈ ಪುರದಿಂದ ಹೊರಟು ದೇಶಾಂತರದೊಳ್ ನಿಮ್ಮ ಕಾರ್ಯದಲ್ಲಿ ಜಾಗರೂಕರಾಗಿ ನಿಮ್ಮೊಳಗೆ ಭೃತ್ಯಭಾವದಿಂದಿರುತ್ತಿದ್ದೇವೆ ಎಂದು ಬರೆದಿರುವುದಂ ಓದಿಕೊಂಡು ಚಾಣಕ್ಯರಂ ಕುರಿತು—

ಸ್ವಾಮಿಾ, ಇದರಲ್ಲಿ ಬರೆದಿರುವ ಚಮೂಪತಿಗಳಿಗೆ ಇಲ್ಲಿ ಉಪೇಕ್ಷೆಯುಂಟಾಗಿ ಹೊರಟು ಹೋಗುವುದಕ್ಕೆ ಕಾರಣವೇನು? ಎನಲು; ಅದಂ ಕೇಳಿದ ಚಾಣಕ್ಯನು—ಈ ಅರಸು ಪತ್ರಮಂ ನೋಡಿಕೊಂಡು ರಾಜಕಾರ್ಯಮಂ ತಿಳಿದವನಾದರೂ ಅರಿಯದವನಂತೆ ಕೇಳುವುದರಿಂದ ನಮ್ಮ ಮನೋಭಾವಮಂ ತಿಳಿದು

ನಮ್ಮಿರ್ವರಿಗೂ ವಾಕ್ಕಲಹವು ಇನ್ನೂ ಅಧಿಕವಾಗಲೆಂದು ಅಪೇಕ್ಷಿಸಿದಂತೆ ತೋರುತ್ತಿದೆ. ಇದಕ್ಕೆ ಯಥಾರ್ಥಮಂ ಹೇಳಿದರೆ ಈ ಸಭೆಯಲ್ಲಿ ಶತ್ರುಪಕ್ಷದವ ರಿದ್ದಲ್ಲಿ ಈ ಮರ್ಮಮಂ ಹಗೆಗಳೇ ತಿಳಿದಂತಾಗುವುದು. ಹಾಗೆ ಅರಿಗಳು ಜಾಗರೂಕತೆಯುಳ್ಳವರಾದರೆ ನಮ್ಮ ಯತ್ನವು ಭಂಗವಾದೀತು. ರಹಸ್ಯದಲ್ಲಿ ತಿಳಿಸೋಣವೆಂದರೆ ಓಲಗದಲ್ಲಿ ಕಿವಿಮಾತುಗಳಂ ಹೇಳಬೇಕಾಗುತ್ತಿದೆ. ಇದರಲ್ಲಿ ನಿಪುಣರಾದವರು ಅಧರ ಸ್ಪಂದಮಾತ್ರದಿಂದಲೇ ಮುಖಚೇಷ್ಟೆಯಂ ನೋಡಿ ರಹಸ್ಯಕಾರ್ಯಮಂ ಊಹಿಸುವುದುಂಟು. ಅದರಿಂದ ನೃಪಸದಸ್ಸಿನಲ್ಲಿ ಕಿವಿಮಾತು ಗಳನ್ನಾಡೋಣವೂ ಅಂಗಚೇಷ್ಟೆಗಳೂ ಅಸಮಾನರಲ್ಲಿ ಸಂವಾದವೂ ಮಾತನಾಡು ವಲ್ಲಿ ನಗುತ್ತ ಮತ್ತೊಬ್ಬರಂ ನೋಡೋಣವೂ ರಾಜಕಾರ್ಯಮಂ ಹೇಳುವಲ್ಲಿ ಅರ್ಥಾಂತರಂ ತೋರುವಂತೆ ವಾಚಿಸೋಣವೂ ಪರಿಹಾಸೋಕ್ತಿಗಳೂ ಎಂಬ ಈ ವಿಕಾರಗಳು ಯೋಗ್ಯವಲ್ಲ. ಮತ್ತು ಯಶಸ್ಕರವಲ್ಲ. ಅದರಿಂದ ತಿಳುಹಿಸು ವುದಕ್ಕೆ ಇದು ಸಮಯವಲ್ಲ. ಅದುಕಾರಣ ಈತಂ ಅಪೇಕ್ಷಿಸಿದುದಕ್ಕೆ ಪ್ರಕಾ ರಾಂತರದಿಂದ ಹೇಳುತ್ತ ವಾಕ್ಕಲಹಮಂ ಹೆಚ್ಚಿಸಿ ಕೋಪಿಸಿಕೊಂಡವನಂತೆ ಎದ್ದು ಹೋಗಬೇಕೆಂದು ನಿಶ್ಚಯಿಸಿ ಆ ಚಂದ್ರಗುಪ್ತನಂ ಕುರಿತು—

ಎಲೈ ಅರಸೇ, ಭದ್ರಭಟಾದಿ ಸೇನಾಪತಿಗಳು ಇಲ್ಲಿ ಉಪೇಕ್ಷೆಯಂ ಮಾಡಿ ಅನ್ಯತ್ರ ಹೋಗುವುದಕ್ಕೆ ನಿಮಿತ್ತವೇನು ಎಂದು ಕೇಳುವೆಯಾ? ಗಜಾಧ್ಯಕ್ಷ ನಾದ ಭದ್ರಭಟನು ಅಶ್ವಾಧ್ಯಕ್ಷನಾದ ಪುರುಷದತ್ತನು ಇವರೀರ್ವರೂ ಸ್ತ್ರೀಮದ್ಯ ದ್ಯೂತಾಸಕ್ತರಾಗಿ ವಾಹಿನೀವಿಚಾರಮಂ ಮಾಡದೆ ಮತ್ತರಾಗಿರುವುದಂ ಕಂಡು ಅವರ ಅಧಿಕಾರಮಂ ತೆಗೆದುದರಿಂದ ಅವರು ಈ ಪುರಮಂ ಬಿಟ್ಟು ಹೋದರು. ಕುಮಾರ ಸಂತತಿಯಲ್ಲಿ ಜನಿಸಿದ ರಾಜಸೇನ ಡಿಂಗಿರಾತರುಗಳು ಪಡೆಯ ಗಣಿತೆ ಯಾದಲ್ಲಿ ಪ್ರಭುತ್ವವು ನೂತನವಾದುದರಿಂದ ಎಂದಿನಂತೆ ಇರಲೀಸದೆ ತಮ್ಮಿಚ್ಛೆ ಬಂದಂತೆ ಮಾಡಿಕೊಂಡಾರೆಂಬ ಶಂಕೆಯಿಂದ ಅಧಿಕವಾದ ಫೌಜುಗಳಂ ತೆಗೆದು ಕೊಂಡು ಮಲಯಕೇತುವನ್ನಾಶ್ರಯಿಸಿ ಬದುಕಬೇಕೆಂದು ಹೊರಟುಹೋದರು. ಬಾಗುರಾಯಣನಾದರೋ ಪರ್ವತೇಶ್ವರನು ಕಾಲವಾದ ಸಮಯದಲ್ಲಿ ಮಲಯ ಕೇತುವಿಗೆ ಇಲ್ಲದ ಸಲ್ಲದ ಮಾತುಗಳಂ ಹೇಳಿ ಬೆದರಿಸಿ ಇಲ್ಲಿಂದ ಅವನಂ ಓಡಿಸಿ ಕೊಂಡು ಹೋಗಿ ಅವನಿಗೆ ಆಪ್ತನಾಗಿ ಮಂತ್ರಿಪದದಲ್ಲಿ ಇರುತ್ತಾನೆ. ಆಡಿದ ಮಾತು ಕೂಡಿ ಬಂದರೆ ಮನುಷ್ಯನು ಎಂದಿನಂತೆ ಇರುವನೇ? ಲೋಹಿತಾಕ್ಷ ವಿಜಯವರ್ಮರುಗಳಾದರೋ ತಮ್ಮ ದಾಯಾದಿಗಳಿಗೆ ನಿನ್ನಿಂದ ಉಂಟಾದ

ಬಹುಮಾನವಂ ಕಂಡು ಸಹಿಸಲಾರದೆ ನಿನ್ನಲ್ಲಿ ಅಸೂಯೆಯುಳ್ಳವರಾಗಿ ಹೋಗಿ ಮಲಯಕೇತುವನ್ನಾಶ್ರಯಿಸಿದರು. ಇಲ್ಲಿಂದ ಈ ಸೇನಾಪತಿಗಳು ಹೋಗುವುದಕ್ಕೆ ನಿಮಿತ್ತವಿದು. ಹೀಗೆ ಇವರ ದುರ್ಬೋಧನೆಯಿಂದ ಮತ್ತೆ ಕೆಲವರು ಸಹ ಹೋದರು ಎಂದು ಹೇಳಲಾಗಿ; ಚಂದ್ರಗುಪ್ತನು ಕೇಳಿ—

ಸ್ವಾಮಿ, ಈ ಜನಗಳ ಅಪರಾಧವಂ ತಿಳಿದ ಬಳಿಕ ಅವರು ಹೋಗುತ್ತಿದ್ದರೆ ಅವರಂ ನಿಗ್ರಹಿಸುವುದಕ್ಕೆ ಸಾಮರ್ಥ್ಯವಿಲ್ಲದೆ ಉಪೇಕ್ಷಿಸಿದಿರೋ? ಕಾರ್ಯಾರ್ಥವಾಗಿ ಉಪೇಕ್ಷಿಸಿದಿರೋ? ಎನಲು; ಚಾಣಕ್ಯನು—

ಎಲೈ ಅರಸೇ, ನಮಗೆ ಸಾಮರ್ಥ್ಯವಿಲ್ಲ ಅಂದರೇನು? ಅವರಂ ಕಾರ್ಯಾರ್ಥವಾಗಿಯೇ ದಂಡಿಸಲಿಲ್ಲ. ಯಾಕಂದರೆ—ನಂದರ ಐಶ್ವರ್ಯಕ್ಕೆ ತಗುಲಾದ ಈ ಜನವನ್ನು ತೀಕ್ಷ್ಣದಂಡನೆಯಿಂದ ನಿಗ್ರಹಿಸಿದರೆ ಆ ರಾಜಕುಲದಲ್ಲಿ ಅನುರಕ್ತರಾದ ಜನರೆಲ್ಲರಿಗೂ ನಮ್ಮ ವಿಷಯದಲ್ಲಿ ಭೀತಿಯು ತೊಲಗದೆಂಬ ಯೋಚನೆಯಿಂದ ದಂಡಿಸದೆ ಉಪೇಕ್ಷಿಸಿದೆವು ಎಂದನು.

ಚಂ—ಹಾಗಾದರೆ ಸ್ವಾಮಿಯವರು ಅನುಗ್ರಹವಂ ಮಾಡಿದ ಮೇಲೆ ಅವರಂ ಸ್ವಾಧೀನಂಗೆಯ್ದುಕೊಳ್ಳಲಿಲ್ಲವೇಕೆ?

ಚಾ—ಎಲೈ ಅರಸೇ, ಅಧಿಕಾರವಂ ಹೋಗಲಾಡಿಸಿಕೊಂಡಿರುವ ಭದ್ರಭಟ ಪುರುಷದತ್ತರಿಗೆ ಪುನಃ ಉದ್ಯೋಗವನ್ನಿತ್ತು ಅನುಗ್ರಹಿಸಿದರೆ ನಮ್ಮಿಂದ ಹೊರತು ಮತ್ತೊಬ್ಬರಿಂದ ನಿರ್ವಾಹವಾಗದೇ ಇದ್ದುದರಿಂದ ಎಂದಿನಂತೆ ನಮಗೆ ಅಧಿಕಾರವಂ ನೇಮಿಸಿದರೆಂದು ಗರ್ವಾಂಧರಾಗಿ ಮೊದಲಿನ ಹಾಗೆ ಸ್ತ್ರೀಮದ್ಯಾದಿಗಳಲ್ಲಿ ಆಸಕ್ತಿಯಿಂದ ರಾಜ ಸಂಪದಂಗವಾದ ಗಜಾಶ್ವಂಗಳಂ ನೋಡಿ ವಿಚಾರಿಸದೆ ಕೆಡಿಸುವರಾದುದರಿಂದ ಅವರಂ ಅನುಗ್ರಹಿಸಲಿಲ್ಲ. ಡಿಂಗಿರಾತ ಬಲಗುಪ್ತರಾದರೋ ಈ ರಾಜ್ಯಮಂ ಉಚಿತವಾಗಿ ಕೊಟ್ಟರೂ ಅವರಿಗೆ ತೃಪ್ತಿ ಸಾಲದು. ಅವರಂ ಹೇಗೆ ಅನುಗ್ರಹಿಸಬೇಕು? ರಾಜಸೇನ ಬಾಗುರಾಯಣರು—ತಾವು ಸಂಪಾದಿಸಿದ ದ್ರವ್ಯಗಳಿಗೆ ಎಲ್ಲಿ ಮೋಸಬರುವುದೋ ಎಂದು ಚಿಂತಿಸುತ್ತ ಪ್ರಭುಗಳಿಗೆ ವಿಪತ್ತನ್ನೇ ಹಾರೈಸುವವರಾದುದರಿಂದ ಅವರಲ್ಲಿ ಹೇಗೆ ಅನುಗ್ರಹಂ ಘಟಿಸೀತು? ಲೋಹಿತಾಕ್ಷ ವಿಜಯವರ್ಮರು ತಮ್ಮ ಜ್ಞಾತಿಗಳಾದ ನೃಪಸನ್ಮಾನಮಂ ನೋಡಿ ಸಹಿಸಲಾರದೆ ರಾಜಕಾರ್ಯದಲ್ಲಿ ಉಪೇಕ್ಷಾವಂತರಾದುದರಿಂದ ಅವರ ಮನಸ್ಸು ಪ್ರಸನ್ನವಾಗುವುದಕ್ಕೆ ನಿಮಿತ್ತವಿಲ್ಲದೆ ಅವರ ಜ್ಞಾತಿಗಳಂ ನಿಗ್ರಹಿಸುವುದು ಯುಕ್ತವಲ್ಲವಾದುದರಿಂದ ನಮ್ಮ ದಯೆಗೆ ಪಾತ್ರರಾಗಲಿಲ್ಲ.

ಹೀಗೆ ಕೋಪಿಸಿಕೊಂಡು ಪುರಮಂ ಬಿಟ್ಟು ಹೋಗಿರುವ ಈ ಜನಗಳನ್ನೆಲ್ಲ ಮಲಯಕೇತು ಕಟ್ಟಿಕೊಂಡು ರಾಕ್ಷಸನ ವಾಕ್ಯದಲ್ಲಿ ವಿಶ್ವಾಸಮಂ ಮಾಡಿ ಬಲ ಸಮೇತನಾಗಿ ನಮ್ಮ ಮೇಲೆ ಕಾರ್ಯಭಾಗಮಂ ಮಾಡುವುದಕ್ಕೆ ಬರುವವನಾದುದರಿಂದ ಈ ಸಮಯದಲ್ಲಿ ಕೋಟೆಕೊತ್ತಲಂಗಳಂ ಭದ್ರಮಾಡಿಕೊಂಡು ಸೇನೆಗಳಂ ಜೊತೆಗೊಳಿಸಿ ಯುದ್ಧ ಪ್ರಯತ್ನಮಂ ಮಾಡಿ ಕೆಲಸಮಂ ಸಾಧಿಸುವುದಕ್ಕೆ ಸಿದ್ಧವಾಗಿರಬೇಕಲ್ಲದೆ ಕೌಮುದೀಮಹೋತ್ಸವವೆಂದು ಮೈಮರೆತು ಇರಬಾರದೆನ್ನುತ್ತ ಈ ಉತ್ಸವಮಂ ನಿಲ್ಲಿಸಿದೆನೆಂಬುದಾಗಿ ಹೇಳಿದನು.

ಚಂ—ಸ್ವಾಮೀ, ಇಷ್ಟು ಅನರ್ಥಕ್ಕೆ ಕಾರಣಭೂತನಾದ ಮಲಯಕೇತುವನ್ನು ಇಲ್ಲಿದ್ದಾಗಲೇ ನಿಗ್ರಹಿಸದೆ ಯಾಕೆ ಉಪೇಕ್ಷಿಸಿದಿರಿ ?

ಚಾ—ಎಲೈ ಅರಸೇ, ಆಗಲೇ ಮಲಯಕೇತುವಂ ನಿಗ್ರಹಿಸಿದ್ದರೆ ಪರ್ವತರಾಜನನ್ನು ನಾವೇ ಸಂಹಾರಂಗೊಳಿಸಿದೆವೆಂಬ ಲೋಕಾಪವಾದವು ನಮ್ಮ ಶಿರಸ್ಸಿನ ಮೇಲೆ ಬರುವುದು. ಹಾಗೆ ಘಾತಿಸದೆ ಮಲಯಕೇತುವಿಗೆ ಅರ್ಧರಾಜ್ಯವಂ ಕೊಟ್ಟರೆ ಅಪವಾದ ಮಾತ್ರ ತಪ್ಪಿ ಸಮರಾಜ್ಯವನ್ನು ಕಳದುಕೊಂಡಂತೆ ಆಗುವುದೆಂದು ತಿಳಿದು ಓಡುತ್ತಿದ್ದ ಮಲಯಕೇತುವಂ ಉಪೇಕ್ಷಿಸಿ ಬಿಟ್ಟೆವು.

ಚಂ—ಸ್ವಾಮೀ, ವಿರೋಧಿಯಾದ ರಾಕ್ಷಸನು ಈ ಪುರದಲ್ಲಿಯೇ ಇದ್ದ ಸಮಯದಲ್ಲಿ ಅವನಂ ಇಲ್ಲಿ ನಿಲ್ಲಿಸಿಕೊಳ್ಳದೇ ಬಿಟ್ಟುದಕ್ಕೆ ಕಾರಣವೇನು ?

ಚಾ—ರಾಕ್ಷಸನು ಪ್ರಭುಗಳಾದ ನಂದರಲ್ಲಿ ಬಹುಕಾಲ ಈ ನಗರದೊಳ್ ಪ್ರಾಧಾನ್ಯಮಂ ಮಾಡುತ್ತ ಪ್ರಜಾರಂಜಕನೂ ಪ್ರಜ್ಞಾ ಬಲ ಪೌರುಷಯುಕ್ತನೂ ಮಹಾ ಧನಿಕನೂ ಆದುದರಿಂದ ಆತನು ಇಲ್ಲಿಯೇ ಇದ್ದರೆ ಏನಾದರೂ ಒಂದು ಕಪಟವನ್ನೆಣಿಸಿ ನಮಗೆ ಕೋಪಮುಂಟಾಗುವಂತೆ ಮಾಡಿಕೊಂಡಾನು. ಊರಿಂದ ಹೊರಗಿದ್ದರೆ ಪೊಳಲಲ್ಲಿ ನಡೆದ ರಹಸ್ಯಮಂ ತಿಳಿಯಲಾರನು. ಆತನು ಅನುಗ್ರಹಿಸುವುದಕ್ಕೆ ಯೋಗ್ಯನಾದರೆ ಉಪಾಯಾಂತರದಿಂದ ಮುಂದೆ ಸಂಗ್ರಹಿಸಬಹುದೆಂದೆಣಿಸಿ ಇಲ್ಲಿಂದ ಹೋಗುತ್ತಿದ್ದಾಗ ಉಪೇಕ್ಷೆ ಮಾಡಿದೆವು.

ಚಂ—ಸ್ವಾಮೀ, ರಾಕ್ಷಸನನ್ನು ಬಲಾತ್ಕರಿಸಿ ಹಿಡಿಯುವುದಕ್ಕೆ ಅಶಕ್ಯವಾದುದರಿಂದ ಉಪೇಕ್ಷಿಸಿದ್ದೀರಾದೀತು ?

ಚಾ—ಎಲೈ ವೃಷಲನೇ, ರಾಕ್ಷಸನಂ ಬಲವಂತದಿಂದ ಹಿಡಿಯ ಹೋದರೆ ಆತನು ಮಹಾ ಶೂರನೂ ಆಪ್ತಬಂಧುಗಳಾದ ಶೂರ ಪರಿವಾರಮುಳ್ಳವನೂ ಆದುದರಿಂದ ಹಿಡಿಯ ಹೋದ ನಿನ್ನ ಸೇನೆಯಂ ಬಹುವಾಗಿ ಸಂಹರಿಸಾನು.

ಅದಕ್ಕೂ ಅಶಕ್ಯವಾದರೆ ಮಾನಶಾಲಿಯಾದುದರಿಂದ ಪ್ರಾಣವನ್ನಾದರೂ ಹೋಗಲಾಡಿಸಿಕೊಂಡಾನು. ಹೀಗಾದರೆ ಕಾರ್ಯದಕ್ಷನಾಗಿ ಸಂಗ್ರಾಹ್ಯನಾದ ರಾಕ್ಷಸನು ಗತಪ್ರಾಣನಾದರೂ ನಿನ್ನ ಪತಾಕಿನಿಯು ಛೇದನವಾದರೂ ಉಭಯತೋಪಿ ನಿನಗೆ ಕಾರ್ಯ ಹಾನಿಯುಂಟಾದೀತೆಂದು ತಿಳಿದು ಬಲಾತ್ಕರಿಸದೆ ಬಿಟ್ಟೆವು.

ಚಂ—ಸ್ವಾಮೀ, ನೀವು ಕೋಟಿವಿಧವಾಗಿ ಹೇಳಿದರೂ ನಿಮಗಿಂತಲೂ ರಾಕ್ಷಸನೇ ಬುದ್ಧಿಶಾಲಿ ಎಂದು ತೋರುತ್ತಿದೆ.

ಚಾ—ಎಲೈ ಅರಸೇ, ರಾಕ್ಷಸನು ಬುದ್ಧಿಶಾಲಿ ಎಂದು ಹೇಳಿದುದರಿಂದ ನಾವು ಬುದ್ಧಿಹೀನರೆಂದು ಹೇಳಿದಂತಾಯಿತು. ಪ್ರಜ್ಞಾವಂತನಾಗಿ ಅವನು ಮಾಡಿದುದೇನು ?

ಚಂ—ಸ್ವಾಮೀ, ರಾಕ್ಷಸನು ಈ ಪುರದಲ್ಲಿ ನಿಂತು ನಿಮ್ಮೆಲ್ಲರಂ ಲಕ್ಷೀಕರಿಸದೆ ತಾನೇ ತಾನಾಗಿ ಯುದ್ಧಮಂ ಮಾಡುತ್ತ ನಮ್ಮಿಂದ ಮಾಡಲ್ಪಡುವ ಸೇನಾ ಜಯಾಂಗ ಭೂತವಾದ ಮಹಾ ಘೋಷಕಾಲದಲ್ಲಿಯೂ ಪರ್ಯವಸಾನವಾಗುವ ಯುದ್ಧಾರಂಭ ಕಾಲದಲ್ಲಿಯೂ ತನ್ನ ನೀತಿ ಶೌರ್ಯಾತಿಶಯದಿಂದ ನಮಗೆ ಹಿಂದು ಮುಂದು ತೋರದಂತೆ ಮಾಡಿ ಅಟ್ಟಿದನು. ಗುಣಕ್ಕೆ ಮತ್ಸರವುಂಟೇ ? ಕಾರ್ಯ ದಕ್ಷರಲ್ಲಿಯೇ ಹೊರತು ನಮಗೆ ಅನ್ಯರಲ್ಲಿ ಸ್ವಜನಾಭಿಮಾನವುಂಟಾಗದು.

ಚಾ—ಎಲೈ ವೃಷಲನೇ, ರಾಕ್ಷಸನು ಮಾಡಿದುದು ಇಷ್ಟು ಮಾತ್ರವೇನರಿಯಷ್ಟೆ ? ನಿನಗೆ ಶತ್ರುಗಳಾದ ನಂದರನ್ನು ಮೂಲೋತ್ಪಾಟನಮಂ ಮಾಡಿ ಈ ಮಹಾ ರಾಜ್ಯಾಧಿಪತ್ಯದಲ್ಲಿ ನಾವು ನಿನ್ನಂ ನಿಲ್ಲಿಸಿದಂತೆ ಆತನು ನಿನ್ನಂ ನಿರಾಕರಿಸಿ ತಾನು ವಹಿಸಿದ ಮಲಯಕೇತುವಿಗೆ ಈ ರಾಷ್ಟ್ರಾಧಿಪತ್ಯವನ್ನುಂಟುಮಾಡಿದನೋ ?

ಚಂ—ಏನೋ ! ಅದೃಷ್ಟವಶದಿಂದ ಈ ರಾಜ್ಯವು ಲಬ್ಧವಾಯಿತೆಂದು ತಿಳಿಯದೆ ನನ್ನಂ ಬಹುವಾಗಿ ತಿರಸ್ಕರಿಸುವಿರಿ.

ಚಾ—ಎಲೈ ಅರಸೇ, ನಂದರಂ ಸಂಹರಿಸದೆ ಬಿಚ್ಚಿ ಹೋದ ಶಿಖಾಬಂಧಮಂ ಬಂಧಿಸುವುದಿಲ್ಲವೆಂದು ಮಹಾ ಶಪಥಮಂ ಮಾಡಿ ಆ ಪ್ರತಿಜ್ಞಾನುಸಾರವಾಗಿ ನವಾರ್ಬುದ ಧನಾಧಿಪತಿಗಳಾದ ನಂದರೆಲ್ಲರಂ ಶೂರನಾದ ರಾಕ್ಷಸನು ನೋಡುತ್ತಿರುವಾಗಲೇ ಸಂಹರಿಸಿ ಅವರ ರಕ್ತದಿಂದಲೇ ಭೂತಬೇತಾಳಾದಿಗಳಿಗೆ ಔತಣಮಂ ಮಾಡಿಸಿದಾಗ್ಯೂ ನನ್ನ ಕ್ರೋಧಾಗ್ನಿಯು ಇನ್ನೂ ಚೆನ್ನಾಗಿ ಶಾಂತವಾಗದು.

ಚಂ—ಸ್ವಾಮಿಾ, ಈ ಕಾರ್ಯಮಂ ನಂದವಿದ್ವೇಷಿಯಾದ ದೈವವೇ ಮಾಡಿ ತಲ್ಲದೆ ಮತ್ತೊಬ್ಬರಿಂದ ಶಕ್ಯಮಾಗವುದುಂಟೇ ?

ಚಾ—ಎಲೈ ವೃಷಲನೇ, ದೈವವೇ ಪ್ರಮಾಣಮೆಂದು ಪೌರುಷಹೀನರಾದವರು ಹೇಳುವರು.

ಚಂ—ಸ್ವಾಮಿಾ, ವಿದ್ವಾಂಸರಾದವರು ಹೀಗೆ ಆತ್ಮಸ್ತುತಿಯಂ ಮಾಡಿಕೊಳ್ಳುವುದುಂಟೇ ?

ಚಾ—ಎಲೈ ವೃಷಲನೇ, ನಮ್ಮಂ ಭೃತ್ಯರಂ ಕಂಡಂತೆ ಆಡಿಕೊಂಡುಬರುತ್ತಿರುವೆ. ಪುನಃ ಪ್ರತಿಜ್ಞೆಯಂ ಮಾಡಬೇಕೆಂದು ನಮ್ಮ ಚಿತ್ತವು ತವಕಂಬಡುತ್ತಿದೆ. ನಂದನಾಶಾನಂತರದಲ್ಲಿ ಸ್ವಲ್ಪಶಾಂತಪ್ರಾಯವಾದ ನಮ್ಮ ಕೋಪಾಗ್ನಿಯಂ ದೈವಬಲಹೀನನಾದ ನೀನು ಪುನಃ ಪ್ರಜ್ವಲಿಸುವಂತೆ ಮಾಡಿಕೊಳ್ಳುತ್ತಿರುವೆ ಎಂದು ಆಗ್ರಹದಿಂದ ಹುಬ್ಬುಗಂಟಿಕ್ಕಿ ಹೇಳುತ್ತಿರಲು ; ಅದಂ ನೋಡಿ ಚಂದ್ರಗುಪ್ತನು—

ನಾನು ಮರ್ಯಾದೆಯಂ ಮಿಾರಿ ಹೆಚ್ಚು ಮಾತುಗಳನ್ನಾಡಿದುದರಿಂದ ನಮ್ಮ ಯಜಮಾನರಿಗೆ ಪ್ರಮಾಣಿಕವಾಗಿ ಪ್ರಳಯಾಗ್ನಿಯೋಪಾದಿಯಲ್ಲಿ ಕೋಪ ಮುಂಟಾದಂತೆ ತೋರುತ್ತದೆ ಎಂದು ಯೋಚಿಸುತ್ತಿರಲು ; ಆಗ ಚಾಣಕ್ಯನು ತನ್ನ ಕಪಟ ಕೋಪಮಂ ಶಾಂತಿಪಡಿಸಿಕೊಂಡು—

ಎಲೈ ವೃಷಲನೇ, ಮಾತಿಗೆ ಮಾತುಗಳಂ ಬೆಳೆಯಿಸಿದುದರಿಂದ ಪ್ರಯೋಜನವೇನು ? ನಮಗಿಂತಲೂ ರಾಕ್ಷಸನೇ ಬುದ್ಧಿವಂತನೆಂದು ನಿನಗೆ ತಿಳಿದ ಬಳಿಕ ಈ ಪ್ರಾಧಾನ್ಯಶಸ್ತ್ರಮಂ ಅವನಿಗೇ ಕೊಟ್ಟು ಅವನ ಮುಖದಿಂದಲೇ ನಿನ್ನ ಕಾರ್ಯನಿರ್ವಾಹಮಂ ಮಾಡಿಕೊಳ್ಳುವವನಾಗು. ನಮ್ಮ ಮನಸ್ಸು ಬಂದಂತೆ ನಾವು ಇರುವೆವು ಎಂದು ಆ ಸಚಿವಲಾಂಛನಶಸ್ತ್ರಮಂ ಚಂದ್ರಗುಪ್ತನ ಮುಂದಿರಿಸಿ ರಾಜಸಭೆಯಿಂದೆದ್ದು ಹೊರಟು ಹೋಗಲು ; ಚಂದ್ರಗುಪ್ತನು ಅವಸರದವನಂ ನೋಡಿ—

ಎಲೈ ವೈತಾಳಿಕನೇ, ಈ ದಿವಸ ಮೊದಲುಗೊಂಡು ಚಾಣಕ್ಯರ ಮಂತ್ರಿಪದಮಂ ತೆಗೆದು ಚಂದ್ರಗುಪ್ತರೇ ರಾಜ್ಯವಿಚಾರಮಂ ಮಾಡುವುದರಿಂದ ಅಧಿಕಾರಿಗಳಾದವರು ಚಾಣಕ್ಯನಂ ಕಾಣಿಸಿಕೊಳ್ಳಕೆಲಸಮಿಲ್ಲವೆಂದು ರಾಜವೀಧಿಗಳಲ್ಲಿ ಸಾರಿಸತಕ್ಕದು ಎನಲು ; ಆ ಮಾತಿಗೆ ವೈತಾಳಿಕನು ಮಹಾಪ್ರಸಾದವೆಂಬುದಾಗಿ ಕೈಮುಗಿದು ತನ್ನ ಮನಸ್ಸಿನಲ್ಲಿ—ಈ ರಾಯನು ಚಾಣಕ್ಯರಂ ಇಂದಿನ

ವರೆಗೂ ಯಜಮಾನರೆಂದು ಹೇಳುತ್ತ ಇದ್ದು ಈಗ ಚಾಣಕ್ಯನೆಂದು ಏಕವಚನ ಪ್ರಯೋಗಮಂ ಮಾಡಿದುದರಿಂದ ಪ್ರಾಮಾಣಿಕವಾಗಿ ಚಾಣಕ್ಯರ ಅಧಿಕಾರವು ಹೋದಂತೆ ತೋರುತ್ತಿದೆ. ದೈವ ಕೃತವಿದೆಂದು ಹೇಳಕೂಡದು. ಅಶಿಕ್ಷಿತವಾದ ಗಜವು ಮಾವುತನಂ ನಿರಾಕರಿಸಿದರೆ ಅದು ಅವನ ದೋಷವಲ್ಲದೆ ಗಜ ನಿಷ್ಠ ದೋಷವೆಂತಲ್ಲವೋ ? ಅದೇ ರೀತಿಗೆ ಅರಸಾದವನು ಮಂತ್ರಿಯಂ ನಿರಾಕರಿಸು ವುದು ಸಚಿವಗತದೋಷವಲ್ಲದೆ ಪ್ರಭುನಿಷ್ಠದೋಷವಲ್ಲವೆಂದು ಯೋಚಿಸುತ್ತಿ ರುವಲ್ಲಿ ಅರಸನು ನೋಡಿ—

ಎಲೈ ನಿನ್ನ ವಿಚಾರವೇನು ? ಎಂದು ಕೇಳಲು ;

ಬುದ್ಧೀ, ಮತ್ತೇನೂ ಇಲ್ಲ. ಈಗ ಪ್ರಾಮಾಣಿಕವಾಗಿ ಸ್ವಾಮಿಯವರಿಗೆ ಪ್ರಭುತ್ವದಲ್ಲಿ ಸ್ವಾತಂತ್ರ್ಯ ಮುಂಟಾಯಿತು ಎಂಬುದಾಗಿ ನಿಶ್ಚಯಿಸುತ್ತಿದ್ದೆ ನೆನಲು ; ಅದಂ ಕೇಳಿ ಚಂದ್ರಗುಪ್ತನು ತನ್ನ ಮನಸ್ಸಿನಲ್ಲಿ—ನನ್ನ ಯಜಮಾನರು ಸಭೆಯಲ್ಲಿ ನನ್ನಂ ಕೆಣಕಿ ಹೆಚ್ಚು ಮಾತುಗಳನ್ನಾಡಿಸಿ ಕೋಪಿಸಿಕೊಂಡವರಂತೆ ಎದ್ದು ಹೋದುದರಿಂದ ಇದಕ್ಕೆ ಏನು ಪ್ರಯೋಜನವೋ ! ಕಾರ್ಯಪರ್ಯವಸಾ ನದಲ್ಲೇ ಹೊರತು ಈಗ ಹೀಗೆಂದು ನೆಲೆಗೊಳಿಸಕೂಡದು. ಈ ಪ್ರಕಾರ ವಿಶೇ ಷೋಕ್ತಿಗಳಂ ಅವರ ಮನೋನುಗುಣವಾಗಿ ಆಡಿದಾಗ್ಗೂ ನನ್ನ ಮನಸ್ಸು ಭೂಮಿಗೆ ಇಳಿದು ಹೋಗಿದೆ. ಯಥಾರ್ಥವಾಗಿ ಗುರುಗಳಂ ನಿರಾಕರಿಸಿದವನು ಶ್ರೇಯೋವಂತನಾಗುವುದುಂಟೇ ? ಎಂದು ಯೋಚಿಸುತ್ತ ಅರಸು ಅಂತಃಪುರವ ನ್ನೈಯ್ದುತ್ತಿರಲು ; ರಾಜಾಜ್ಞೆಯ ಮೇರೆಗೆ ದೂತರು ವೀಧಿಗಳಲ್ಲಿ ಸಾರುತ್ತಿದ್ದ ರೆಂಬಲ್ಲಿಗೆ ಮುದ್ರಾಮಂಜೂಷವೆಂಬ ಗ್ರಂಥದಲ್ಲಿ ಚಂದ್ರಗುಪ್ತಚಾಣಕ್ಯರ ಕಪಟ ಕಲಹ ಕಥನವೆಂಬ ಪಂಚದಶಾಶಯವು ಸಮಾಪ್ತವಾದುದು.

---

## ಷೋಡಶಾಶಯ ಪ್ರಾರಂಭವು.

---

### ಮಲಯಕೇತು ರಾಕ್ಷಸರ ಸಂವಾದವು.

ಹೀಗಿರುತ್ತಿರಲು ರಾಕ್ಷಸನಿಂದ ಆಜ್ಞಪ್ತನಾಗಿ ಬಂದು ಈ ವಿದ್ಯಮಾನಗಳೆ ಲ್ಲಮಂ ತಿಳಿದ ಕರಭಕನೆಂಬ ಗೂಢಚಾರನು ಪಾಟಲೀಪುರದಿಂದ ಹೊರಟು ಎಂದಿ ನಂತೆ ಪರ್ವತರಾಜನ ಪಟ್ಟಣಕ್ಕೈದಿ ರಾಕ್ಷಸನ ಗೃಹದ್ವಾರದಲ್ಲಿ ನಿಂತು ಅಲ್ಲಿನ

ದೌವ್ವಾರಿಕನಂ ಕುರಿತು—ಎಲೈ ಪ್ರತೀಹಾರಿಯೇ, ಪಾಟಲೀಪುರಕ್ಕೆ ಹೋಗಿದ್ದ ಕರಭಕನೆಂಬ ಚಾರನು ಬಂದಿದ್ದಾನೆಂದು ಅಮಾತ್ಯರಿಗೆ ಬಿನ್ನೈಸು ಎನಲು ;

ಎಲೈ ಕರಭಕನೇ, ರಾಜಕಾರ್ಯಾಲೋಚನೆಯಿಂದ ನಿನ್ನಿನ ರಾತ್ರಿಯೆಲ್ಲ ನಿದ್ರಾರಹಿತರಾಗಿ ಶಿರೋವೇದನೆಯಿಂದ ಅಮಾತ್ಯರು ಪವಡಿಸಿದ್ದಾರೆ. ಅರೆಗಳಿಗೆ ನಿಲ್ಲುವವನಾಗು. ಸಮಯವಂ ನೋಡಿ ವಿಜ್ಞಾಪಿಸುವೆನು ಎಂದು ಹೇಳಿ ಆ ದ್ವಾರಪಾಲಕನು ಒಳಯಿಂಕೆ ಹೋದಾಗ ಹಾಸಿಗೆಯಲ್ಲಿ ಕುಳಿತು ಶಕಟದಾಸನೊಡನೆ ಮಾತನಾಡುತ್ತ ಚಿಂತಾಕ್ರಾಂತನಾಗಿರುವ ರಾಕ್ಷಸನಂ ಕಂಡು ಹೇಳಲಂಜಿ ದೂರದಲ್ಲಿ ನಿಂತಿರಲು ; ಒಳಗೆ ಅಮಾತ್ಯನು ತನ್ನ ರಾಯಸದವನ ಸಂಗಡ—

ಅಯ್ಯಾ ಶಕಟದಾಸನೇ, ನಾವು ಯಾವ ಕಾರ್ಯವನ್ನಾರಂಭಿಸಿದರೂ ದೈವವು ಪ್ರತಿಕೂಲವೇ ಆಗುತ್ತಿದೆ. ಚಾಣಕ್ಯನು ಪ್ರತಿಕ್ರಿಯೆಯನ್ನೇ ಮಾಡುತ್ತಿದ್ದಾನೆ. ಹಿಡಿದ ಕೆಲಸವು ಎಂತು ನೆರವೇರುವುದೋ ? ಚಾಣಕ್ಯನು ನಮ್ಮ ಕೈಗೆ ಹೇಗೆ ಸಿಕ್ಕುವನೋ ಎಂಬ ಚಿಂತೆಯಿಂದಲೇ ರಾತ್ರಿಗಳು ಕಳೆಯುತ್ತಿವೆ. ಪ್ರಥಮದಲ್ಲಿ ಒಂದು ಕಾರ್ಯಕ್ಕೆ ಆರಂಭಮಂ ಮಾಡಿ ಅದಕ್ಕೆ ವಿಸ್ತಾರಮಂ ನೆಗಳ್ದು ಗೂಢವಾದ ಕಾರ್ಯಬೀಜಮಂ ಸ್ವಲ್ಪಮಾಗಿ ವ್ಯಕ್ತಮಂ ಮಾಡುತ್ತ ಬುದ್ಧಿಯಿಂದ ಅದಂ ಚೆನ್ನಾಗಿ ಪರಿಭಾವಿಸುತ್ತ ಒಂದಕ್ಕೊಂದು ಸಂಬಂಧವಿಲ್ಲದೆ ನಾನಾ ಮುಖವಾಗಿ ಹರಡಿಕೊಂಡಿರುವ ಕ್ರಿಯಾಸಮೂಹವನ್ನು ವಿಮರ್ಶೆಗೆಯ್ದು ಅದರ ಗೂಢೋಪಾಂಗಳಂ ನಿಶ್ಚಯಿಸುತ್ತ ಅದಕ್ಕೆ ಸಾಧಕಬಾಧಕಂಗಳಂ ಲಾಭಾಲಾಭಗಳಂ ಪರಿಭಾವಿಸುತ್ತ ಹೀಗೆ ಚಿತ್ತಕ್ಲೇಶವನ್ನನುಭವಿಸುತ್ತಿರುವವರಲ್ಲಿ ನಾನೊಬ್ಬನು ಮತ್ತು ಪೂರ್ವೋತ್ತರ ವಿರೋಧಮಿಲ್ಲದಂತೆ ಗ್ರಂಥದಲ್ಲಿ ಸಂವಿಧಾನಮಂ ರಚಿಸಿ ಹೇಳುವ ಕವಿಯೊಬ್ಬನು ಎಂದು ಹೇಳುತ್ತಿರುವ ಸಮಯದಲ್ಲಿ ರಾಕ್ಷಸನಿಗೆ ವಾಮಭುಜವು ಅದುರಲು ; ಯಾಕೋ ! ಅಪಶಕುನವಾಗುತ್ತಿದೆ. ಆದಾಗ್ಗೂ ಹಿಡಿದ ಕಾರ್ಯವಂ ಸಾಧಿಸಬೇಕು ಎಂದು ನುಡಿಯುತ್ತ ದೂರದಲ್ಲಿ ನಿಂತಿರುವ ದ್ವಾರಪಾಲಕನಂ ನೋಡಿ—ಎಲೈ, ಏನಂ ಹೇಳಬೇಕೆಂದು ಸಮಯವಂ ನೋಡುತ್ತಿರುವೆ ? ಎಂದು ರಾಕ್ಷಸನು ಕೇಳಲು ; ಅವನು—

ಬುದ್ಧೀ, ಕರಭಕನೆಂಬ ಚಾರನು ಪಾಟಲೀಪುರದಿಂದ ಬಂದು ವಿಜ್ಞಾಪಿಸೆಂದು ಅರಿಕೆ ಮಾಡುತ್ತಾನೆ ಎನಲು ; ಅವನಂ ಬೇಗ ಬರಹೇಳೆಂಬುದಾಗಿ ರಾಕ್ಷಸನು ನೇಮಿಸಲು ; ಅವನು ಅಪ್ಪಣೆಯ ಪ್ರಕಾರವೆಂದು ಹೋಗಿ ಕರಭಕನಂ ಒಳಯಿಂಕೆ ಕಳುಹಿಸಿದನು. ಹಾಗೇ ಬಂದು ಕೈಮುಗಿದ ಆ ಗೂಢಚಾರನಂ ನೋಡಿ ರಾಕ್ಷಸನು—

ಏನೈ ಬಂದೆಯಾ, ಕುಳ್ಳಿರೆಂದು ನುಡಿದು ಶಕಟದಾಸನು ವಿಜ್ಞಾಪಿಸಿಕೊಳ್ಳುವ ಮಾತಿಗೆ ಪ್ರತ್ಯುತ್ತರಮಂ ಕೊಡುತ್ತ ಇರುತ್ತಿದ್ದನು.

ಹೀಗಿರುವಲ್ಲಿ ಭಾಗುರಾಯಣನು ಶಿರೋವೇದನೆಯಿಂದ ಶ್ರಮಪಡುತ್ತಿರುವ ಅಮಾತ್ಯನ ಬಳಿಗೆ ಪಾಟಲೀಪುರದಿಂದ ಕರಭಕನೆಂಬ ಚಾರನ ಆಗಮನಮಂ ತಿಳಿದು ಮಲಯಕೇತುವಿಗೆ ತಿಳಿಹಿಸಲು ; ರಾಕ್ಷಸನಿಗೂ ಬಂದಿರುವ ಗುಪ್ತಚರ ನಿಗೂ ನಡೆಯುವ ಪಾಟಲೀಪುರದ ರಹಸ್ಯಸಂವಾದವು ಎಂತಿರುವುದೋ? ತಾನೇ ಕೇಳಬೇಕೆಂದು ಮಲಯಕೇತುವು ಅಮಾತ್ಯನ ಶಿರೋವೇದನೆಯಂ ವಿಚಾರಿಸುವ ನೆವದಿಂದ ಆತನ ಗೃಹಮಂ ಕುರಿತು ಹೊರಡುತ್ತ ಒಬ್ಬ ಕಂಚುಕಿಯಂ ನೋಡಿ—

ಎಲೈ ಪುಷ್ಕರನೇ, ನಾವು ಅಮಾತ್ಯನಿಕೇತನಕ್ಕೆ ಹೋಗಬೇಕಾಗುತ್ತಿದೆ. ಮಾರ್ಗದಲ್ಲಿ ಇದ್ದ ಜನರಂ ದೂರಮಾಡಿ ಸಚಿವಗೃಹದ್ವಾರದಲ್ಲಿ ನೀನೇ ನಿಂತು ನಾವು ಒಳಗೆ ಹೋದ ಬಳಿಕ ಯಾರನ್ನೂ ಭವನಾಂತಃಪ್ರವೇಶಮಂ ಮಾಡಗೊಡಿಸದೆ ಕಾದಿರುವವನಾಗು ಎನಲು ; ಅವನು ಮಹಾ ಪ್ರಸಾದವೆಂದು ಆ ಪ್ರಕಾರಂಗೆಯ್ಯುತ್ತಿರಲು ; ಈ ವರ್ತಮಾನಮಂ ರಾಕ್ಷಸನಿಗೆ ತಿಳುಹಿಸುವು ದಕ್ಕೆ ಅವಕಾಶವಿಲ್ಲದೆ ಅಲ್ಲಿನ ಜನರು ಅಲ್ಲಿಯೇ ಇರುತ್ತಿರಲು ; ಆಗ ಕಾಲು ನಡೆಯಲ್ಲೇ ಮಲಯಕೇತು ಹೊರಡುತ್ತಿರಲು ; ಎಂದಿನಂತೆ ಆತನ ಪರಿವಾರವು ಸಿದ್ಧವಾಗಲು ; ಹಾಗೆಯೇ ಭದ್ರಭಟಾದಿಗಳು ಆ ರಾಜಪುತ್ರನನ್ನನುಸರಿಸಿ ಬರು ತ್ತಿರಲು ; ಅದಂ ನೋಡಿ ಮಲಯಕೇತುವು ಅವರಿಗೆ—

ಅಯ್ಯಾ ಸೇನಾಪತಿಗಳಿರಾ, ಅಮಾತ್ಯರು ತಲೆನೋವಿನಿಂದ ಶ್ರಮಪಡುತ್ತಾ ರಂತೆ. ನಾನು ಮಾತ್ರ ಹೋಗಿ ಅವರಂ ಕಂಡು ವಿಚಾರಿಸಿಕೊಂಡು ಬರುವೆನು. ನೀವೆಲ್ಲರೂ ಇಲ್ಲಿಯೇ ಇರಬಹುದು ಎನಲು ; ಆ ಮಾತಿಗೆ ಭದ್ರಭಟಾದಿಗಳು ಭಾಗುರಾಯಣ ಸಮೇತನಾಗಿರುವ ಮಲಯಕೇತುವಂ ಕುರಿತು—

ಸ್ವಾಮಿ ರಾಜಕುಮಾರಕರೇ, ನಾವು ರಾಕ್ಷಸನ ಮುಖದಿಂದ ತಮ್ಮನ್ನಾ ಶ್ರಯಿಸಲಿಲ್ಲ. ದುರ್ಮಂತ್ರಿಯಾದ ಚಾಣಕ್ಯನ ವಶವರ್ತಿಯಾದ ಚಂದ್ರಗುಪ್ತನಲ್ಲಿ ಮನಸ್ಸು ಒಡಂಬಡದೆ ಇಲ್ಲಿಗೆ ಬಂದು ಶೇಖರನ ಮುಖಾಂತರದಿಂದಲೇ ತಮ್ಮನ್ನಾ ಶ್ರಯಿಸದೆವಾದುದರಿಂದ ಅಪ್ಪಣೆಯ ಮೇರೆಗೆ ಇಲ್ಲಿಯೇ ಇರುವೆವು ಎನಲು ; ಮಲಯಕೇತು—ಹಾಗೇ ಮಾಡಿರೆಂದು ಹೇಳಿ ಭಾಗುರಾಯಣನ ಹಸ್ತಮಂ ಹಿಡಿದು—ಭಾರ್ಯ ಮಿತ್ರನೇ ಎಂಬುದಾಗಿ ಹೇಳುತ್ತ ನಡೆಯುತ್ತಿರಲು ; ಅಯ್ಯಾ ರಾಜಕುಮಾರಕನೇ, ಅಮಾತ್ಯನಂ ವಿಚಾರಿಸುವುದಕ್ಕೆ ಹೋಗತಕ್ಕುದು ಯುಕ್ತವೇ

ಸರಿ. ಆದರೂ ಪಾಟಲೀಪುರದ ರಹಸ್ಯವಾರ್ತೆಯಂ ಆತನು ತಾನಾಗಿ ತಿಳಿಯ
ಪಡಿಸಿದರೆ ಎಷ್ಟು ತಿಳಿಸುತ್ತಾನೋ ಅಷ್ಟು ಮಾತ್ರವೇ ಅರಿಯಬಂದೀತು
ಎಂದು ಬಾಗುರಾಯಣನು ನುಡಿಯುತ್ತ ಸಂಗಡ ಹೋಗುತ್ತಿರುವಲ್ಲಿ ಮಲಯ
ಕೇತು—ಒಳ್ಳೆಯದು, ಅಲ್ಲಿ ಸಮಯದೊರಕಿದಂತೆ ಮಾಡೋಣ. ಅದಂತಿ
ರಲಿ. ಅಯ್ಯಾ ಮಿತ್ರನೇ, ನಾವು ಇಲ್ಲಿಗೆ ಹೊರಟ ವೇಳೆಯಲ್ಲಿ ಎಲ್ಲರೂ
ಇಲ್ಲಿಯೇ ಇರತಕ್ಕುದೆಂದು ಹೇಳಿದ ಮಾತಿಗೆ ಭದ್ರಭಟಾದಿಗಳು ರಾಕ್ಷಸನ
ವಿಷಯವಾಗಿ ಹೇಳಿಕೊಂಡ ಮಾತಿನ ಭಾವವೇನು ? ಎಂದು ಬಾಗುರಾಯ
ಣನಂ ಕೇಳಲು ; ಆತನು ಭದ್ರಭಟಾದಿಗಳು ಹೇಳಿಕೊಂಡ ಉಕ್ತಿಗೆ ತಾತ್ಪ
ರ್ಯಮಂ ಯೋಚಿಸುವವನಂತೆ ನಟಿಸುತ್ತ ಈ ಮಲಯಕೇತುವಿಗೆ ಅಮಾತ್ಯ
ನಲ್ಲಿ ವಿಶ್ವಾಸಂ ತಪ್ಪುವಂತೆ ಮಾಡುವುದಕ್ಕೆ ಇದೇ ಮೊದಲನೆಯ ಸಮಯ
ವೆಂದು ತಿಳಿದು—

ಅಯ್ಯಾ ರಾಜಪುತ್ರನೇ, ಶೇಖರನ ಮುಖದಿಂದಲೇ ಹೊರತು ರಾಕ್ಷಸನ
ಮುಖಾಂತರವಾಗಿ ನಿನ್ನಂ ಆಶ್ರಯಿಸಿದವರಲ್ಲವೆಂದು ಭದ್ರಭಟಾದಿಗಳು ಅರಿಕೆ
ಮಾಡಿಕೊಂಡ ಮಾತಿಗೆ ತಾತ್ಪರ್ಯವು ಅಷ್ಟು ದುರವಗಾಹವಾಗಿ ತೋರುವು
ದಿಲ್ಲ. ಆದರೂ ಹೇಳುವೆನು—ಲೋಕದಲ್ಲಿ ಗುಣವಂತನಾದ ಪ್ರಭುವನ್ನಾಶ್ರ
ಯಿಸಬೇಕಾದರೆ ಅವನಿಗೆ ಪ್ರಿಯಮಿತ್ರರೂ ಆಪ್ತರೂ ಘಟಕರೂ ಆಗಿರುವ
ಜನರ ಮುಖದಿಂದ ಅನುಸರಿಸುವುದು ನ್ಯಾಯವೇ ಸರಿ ಎನಲು ; ಅರಸನು—

ಅಯ್ಯಾ ಸ್ನೇಹಿತನೇ, ರಾಕ್ಷಸನು ನಮಗೆ ಮಿತ್ರನಹುದಷ್ಟೆ ? ಎನಲು ;

ಅಯ್ಯಾ ಅರಸುಮಗನೇ, ನೀನು ಹೇಳಿದುದು ಯುಕ್ತವೇ ಸರಿ. ಆದಾಗ್ಯೂ
ರಾಕ್ಷಸನಿಗೆ ಚಾಣಕ್ಯನಲ್ಲಿ ವೈರವಿರುವಂತೆ ಚಂದ್ರಗುಪ್ತನಲ್ಲಿರುವುದಾಗಿ
ತೋರುವುದಿಲ್ಲ. ಚಾಣಕ್ಯನು ಅತ್ಯಂತ ಗರ್ವಿತನಾಗಿ ಚಂದ್ರಗುಪ್ತನಂ ಲಕ್ಷೀ
ಕರಿಸದೆ ಇರುವುದರಿಂದ ಆತನು ರಾಕ್ಷಸನಲ್ಲಿ ದೃಷ್ಟಿ ಇಟ್ಟು ಸಮಯಾಂತರ
ದಲ್ಲಿ ಚಾಣಕ್ಯನ ಪ್ರಾಧಾನ್ಯಮಂ ತೆಗೆದಾನು. ಆ ಕಾಲದಲ್ಲಿ ನಂದವಂಶೋತ್ಪ
ನ್ನನಾದವನೆಂಬ ಅಭಿಮಾನದಿಂದಲೂ ತನ್ನ ಗೃಹಜನವು ಪಾಟಲೀಪುರದಲ್ಲಿ
ಸಿಕ್ಕಿರುವುದರಿಂದಲೂ ಅಮಾತ್ಯನು ಚಂದ್ರಗುಪ್ತನಲ್ಲಿ ಸಂಧಿಗೆ ಒಡಂಬಟ್ಟಾನು.
ಹಾಗೇ ಮೌರ್ಯಪುತ್ರನೂ ಕೂಡ ಬಹುಕಾಲದಿಂದ ತನ್ನ ವಂಶದ ಮಂತ್ರಿತ್ವಮಂ
ಮಾಡಿದವನೂ ಪ್ರಜಾರಂಜಕನೂ ರಾಜಕಾರ್ಯಗಳಲ್ಲಿ ದಕ್ಷನೂ ಆಗಿರುವ
ಈ ರಾಕ್ಷಸನಲ್ಲಿ ಸಂಧಿಗೆ ಸಮ್ಮತಿಸಾನು. ಹೀಗಾದರೆ ಪಾಟಲೀಪುರದ ಜನರೆ

ಲ್ಲರೂ ಇಂಥವರೇ ಸರಿ ಎಂದು ಪ್ರಭುವಾದ ನಿನಗೆ ನಮ್ಮಲ್ಲಿ ವಿಶ್ವಾಸ ತಪ್ಪಿದರೆ ಉಭಯತೋಪಿ ಭ್ರಷ್ಟರಾದೇವೆಂಬ ಭೀತಿಯಿಂದ ಭದ್ರಭಟಾದಿಗಳು ಮುಂಚಿತವಾಗಿಯೇ ನಿನಗೆ ವಿಜ್ಞಾಪಿಸಿಕೊಂಡಂತಾಯಿತು. ಅವರು ಹೇಳಿಕೊಂಡ ಮಾತಿಗೆ ಇದೇ ಅರ್ಥವು ಎನಲು ; ಮಲಯಕೇತುವು ಅದಕ್ಕೆ—ಎಷ್ಟಾದರೂ ಜನಗಳಿಗೆ ಸ್ಥಳಾಭಿಮಾನ ತಪ್ಪುವುದುಂಟೇ? ನಿಂತವೇ ಸರಿ ಎಂದು ಒಪ್ಪಿಕೊಂಡು ಆ ಬಳಿಕ ಬಾಗುರಾಯಣಸಮೇತನಾಗಿ ರಾಕ್ಷಸನ ಮಂದಿರಮಂ ಪ್ರವೇಶಿಸಿ ಆತನ ಶಯನಗೃಹಕ್ಕೆ ಹೋಗುತ್ತಿರಲು ; ಆಗಲಾಮನೆಯಲ್ಲಿ ರಾಕ್ಷಸನು ಶಕಟದಾಸನೊಡನೆ ಆಡುತ್ತಿರುವ ಮಾತುಗಳಂ ನಿಲ್ಲಿಸಿ ಪಾಟಲೀಪುರದಿಂದ ಬಂದಿದ್ದ ಚಾರನಂ ಕುರಿತು -

ಎಲೈ ಚಾರನೇ, ಪಾಟಲೀಪುರದ ವರ್ತಮಾನಗಳೇನು ? ಎಂದು ಕೇಳಲು; ಆ ವಾಕ್ಯವಂ ಮಲಯಕೇತುವು ಆಲಿಸಿ ಬಾಗುರಾಯಣನಂ ನೋಡಿ—ಅಯ್ಯಾ ಮಿತ್ರನೇ, ರಾಕ್ಷಸನಿಗೂ ಗೂಢಚಾರನಿಗೂ ಕುಸುಮ ನಗರದ ರಹಸ್ಯವಾರ್ತಾ ಸಂವಾದವಾಗುತ್ತಿದೆ. ನಾವು ಇನ್ನೂ ಒಳಗೆ ಹೋದರೆ ಯಥೋಚಿತವಾಗಿ ತಿಳಿದೀತು. ಅದರಿಂದ ಇಲ್ಲಿಯೇ ನಿಂತು ವರ್ತಮಾನವೆಲ್ಲಮಂ ತಿಳಿಯಬೇಕೆಂದು ನುಡಿದು ಬಾಗುರಾಯಣಸಮೇತನಾಗಿ ಹೊರಗೆ ಕಿವಿಗೊಟ್ಟು ಹೊಂಚಿ ಆಲೈಸುತ್ತಿರಲು ; ಶಯನಗೃಹದೊಳಗೆ ಕರಭಕನು ರಾಕ್ಷಸನಂ ಕುರಿತು—

ಸ್ವಾಮೀ ಅಮಾತ್ಯರೇ, ನಾನು ತಮ್ಮ ಅಪ್ಪಣೆಯ ಮೇರೆಗೆ ಪಾಟಲೀಪುರಕ್ಕೆ ಹೋಗಿ ತಾವು ಉಸುರಿದರ್ಥವನ್ನು ಅಲ್ಲಿನ ಸ್ತುತಿಪಾಠಕರಿಗೆ ಸೂಚಿಸಲು ; ತಮ್ಮ ಪ್ರಭಾವದಿಂದ ತಾವು ಸಂಕಲ್ಪಿಸಿದ ಕಾರ್ಯವು ಘಟಿಸಿತು ಎನಲು ; ಹೊರಗೆ ನಿಂತಿದ್ದ ಮಲಯಕೇತುವು ಅದಂ ಕೇಳಿ—ಅಯ್ಯಾ ಸಖನೇ ಸಂಕಲ್ಪಿಸಿದ ಕಾರ್ಯವೆಂದರೇನು ? ಎಂದು ಬಾಗುರಾಯಣನಂ ಕೇಳಲು ; ಅಯ್ಯಾ ರಾಜಪುತ್ರನೇ, ಇಷ್ಟು ಮಾತ್ರದಿಂದಲೇ ತಿಳಿಯಕೂಡದು. ಮತ್ತೇನು ನಡೆಯುವುದೋ ಚೆನ್ನಾಗಿ ಆಲಿಸುವವನಾಗು ಎನಲು ; ಪುನಃ ಒಳಗೆ—

ಸ್ವಾಮೀ ಅಮಾತ್ಯರೇ, ಕಾರ್ಯಘಟಿಸಿದುದು ಹೇಗೆಂದರೆ—ನಂದವಿನಾಶನದಿಂದ ದುಃಖಿತರಾದ ಪುರಜನರಿಗೆ ಸಂತೋಷಾರ್ಥವಾಗಿ ಚಂದ್ರಗುಪ್ತನು ತಾನು ಮಾಡಹೇಳಿದ ಕೌಮುದೀಮಹೋತ್ಸವಮಂ ಸಾಗದಂತೆ ಚಾಣಕ್ಯನು ನಿಲ್ಲಿಸಲಾಗಿ; ಆಗ ಚಂದ್ರಗುಪ್ತನು ತನ್ನ ಆಜ್ಞೆಗೆ ಭಂಗವನ್ನುಂಟುಮಾಡಿದುದಕ್ಕೆ ಕಾರಣವೇನು ? ಎಂದು ಕೇಳುವುದಕ್ಕೋಸ್ಕರ ಚಾಣಕ್ಯರಂ ಕರೆಯಕಳುಹಿಸಿ ಉತ್ಸ

ವಮಂ ನಿಲ್ಲಿಸಿದುದಕ್ಕೆ ಕಾರಣವೇನು ? ಎಂದೆನಲು ; ಆ ಸಮಯದಲ್ಲಿ ತಮ್ಮ ಅಪ್ಪಣೆಯ ಮೇರೆಗೆ ಸ್ತುತಿಪಾಠಕರು ಚಂದ್ರಗುಪ್ತನಿಗೆ ಚಾಣಕ್ಯನ ಮೇಲೆ ಕೋಪಂ ಹೆಚ್ಚುವಂತೆ ಗದ್ಯಪದ್ಯಸ್ತುತಿಗಳಿಂದ ಮಾನಶಾಲಿಗಳಾದ ಅರಸುಗಳು ಆಜ್ಞಾಭಂಗಮಂ ಸಹಿಸಲಾರರೆಂಬ ವಿಷಯವಾಗಿ ವಿಸ್ತರಿಸಿ ಹೊಗಳುತ್ತಿದ್ದರು ಎನಲು ; ರಾಕ್ಷಸನು—

ಆ ಮಾತಿಗೆ ಸಂತೋಷಪಡುತ್ತ—ಆ ಬಳಿಕ ಏನು ನಡೆಯಿತು ? ಸಾಧಾರಣ ಪುರುಷನಾದರೂ ತಾನು ಮಾಡಿದ ಕೆಲಸಕ್ಕೆ ಅಡ್ಡಿ ಬಂದರೆ ಸಹಿಸಲಾರನು. ಮಹಾಪ್ರಭುವಾದವನು ಸಹಿಸುವನೇ ? ಎನಲು ; ಕರಭಕನು—

ಸ್ವಾಮಿ, ಚಾಣಕ್ಯನಿಂದ ಭಗ್ನವಾದ ಆಜ್ಞೆಯುಳ್ಳವನಾದುದರಿಂದ ಕ್ರುದ್ಧನಾದ ಚಂದ್ರಗುಪ್ತನು ಪ್ರಸಂಗವಶದಿಂದ ಅಮಾತ್ಯರಾಕ್ಷಸನಿಗಿಂತಲೂ ಬುದ್ಧಿವಂತರುಂಟೇ ? ಎಂದು ನಿಮ್ಮ ಗುಣಪ್ರಶಂಸೆಯಂ ಮಾಡಿ ಚಾಣಕ್ಯನ ಪ್ರಾಧಾನ್ಯಮಂ ತೆಗೆಯಲು ; ಖಿನ್ನನಾದ ಚಾಣಕ್ಯನು ಸಭೆಯಿಂದ ಎದ್ದು ಹೋದನು ಎಂದನು. ಆ ವಾಕ್ಯಮಂ ಹೊಂಚಿ ಕೇಳುತ್ತಿದ್ದ ಮಲಯಕೇತುವು ಆಕರ್ಣಿಸಿ—ಅಯ್ಯಾ ಭಾಗುರಾಯಣನೇ, ಚಂದ್ರಗುಪ್ತನು ರಾಕ್ಷಸನ ಗುಣಸ್ತೋತ್ರಮಂ ಮಾಡಿದುದರಿಂದ ನೀನು ಹೇಳಿದಂತೆ ಅಮಾತ್ಯನಿಗೆ ಮೌರ್ಯಪುತ್ರನಲ್ಲಿ ಪಕ್ಷವಿದ್ದೀತು ಎನಲು : ಅಯ್ಯಾ ರಾಜಕುಮಾರಕನೇ, ರಾಕ್ಷಸನಿಗೆ ಗುಣಪ್ರಶಂಸಾಮಾತ್ರದಿಂದಲ್ಲ. ಚಾಣಕ್ಯನ ಅಧಿಕಾರಮಂ ತೆಗೆದುದರಿಂದ ವಿಶೇಷವಾಗಿ ಪಕ್ಷಮುಂಟೆಂದು ಹೇಳಬೇಕು ಎಂದನು. ಬಳಿಕ ಒಳಗೆ ರಾಕ್ಷಸನು—

ಎಲೈ ಚಾರನೇ, ಚಂದ್ರಗುಪ್ತನಿಗೆ ಚಾಣಕ್ಯನ ಮೇಲೆ ಕೋಪಮುಂಟಾಗುವುದಕ್ಕೆ ಕೌಮುದೀಮಹೋತ್ಸವಮಂ ನಿಲ್ಲಿಸಿದುದೊಂದೇ ನಿಮಿತ್ತವೋ ? ಮತ್ತೇನಾದರೂ ನಿಮಿತ್ತಮುಂಟೋ ? ಎನಲು ;

ಸ್ವಾಮಿ, ತಾವೂ ಮಲಯಕೇತುವೂ ಪಾಟಲೀಪುರಮಂ ಬಿಟ್ಟು ಬರುವಲ್ಲಿ ತಿಳಿದಿದ್ದರೂ ತಡೆದು ನಿಲ್ಲಿಸದೆ ಉಪೇಕ್ಷೆಯಂ ಮಾಡಿದನೆಂಬುವುದೊಂದು ಕಾರಣವು ಎನಲು ; ರಾಕ್ಷಸನು ಅದಂ ಕೇಳಿ ಶಕಟದಾಸನಂ ನೋಡಿ—

ಎಲೈ ಶಕಟದಾಸನೇ, ಇನ್ನು ಚಂದ್ರಗುಪ್ತನು ನನ್ನ ಕೈವಶನಾದನಲ್ಲವೇ? ಚಂದನದಾಸನ ಬಂಧನವು ಇನ್ನು ಮೇಲೆ ನಿವೃತ್ತಿಯಾದಿತು. ನೀನು ನಿನ್ನ ಹೆಂಗಸರು ಮಕ್ಕಳುಗಳಂ ನೋಡೀಯೆ ಎನಲು ; ಹೊರಗೆ ಮಲಯಕೇತುವು—ಅಯ್ಯಾ ಭಾಗುರಾಯಣನೇ ಚಂದ್ರಗುಪ್ತನು ನನ್ನ ಕೈವಶನಾದನೆಂದು ಹೇಳಿ

ಕೊಂಡ ಮಾತಿಗೆ ಅಭಿಪ್ರಾಯವೇನು ? ಎಂದೆನಲು : ಅಯ್ಯಾ ಜನೇಶಪುತ್ರನೇ, ಚಾಣಕ್ಯನಂ ನಿರಾಕರಿಸಿರುವ ಚಂದ್ರಗುಪ್ತನಲ್ಲಿ ತಾನೂ ಚಾಣಕ್ಯನಂತೆ ಇರುತ್ತಿದ್ದರೆ ನೀತಿಕೌಶಲ್ಯದಿಂದ ಮೌರ್ಯಜಾತನು ತನ್ನ ವಶನಾಗುವನೆಂದು ಹೇಳಿದಂತಾಯಿತು ಎನಲು ; ಬಳಿಗೆ ರಾಕ್ಷಸನು—

ಎಲೈ ಚಾರನೇ, ಚಾಣಕ್ಯನು ಈಗ ಪಾಟಲೀಪುರದಲ್ಲಿಯೇ ಇದ್ದಾನೋ ? ಅಥವಾ ಕೋಪದಿಂದ ಚಂದ್ರಗುಪ್ತನಮೇಲೆ ಪ್ರತಿಜ್ಞೆಯಂ ಮಾಡಿ ಹೋದನೋ? ಎಂದು ಕೇಳಿದನು. ಅದಕ್ಕೆ ಚಾರನು—

ಸ್ವಾಮೀ, ಚಾಣಕ್ಯನು ತಪೋವನಕ್ಕೆ ತೆರಳುತ್ತಿದ್ದಾನೆ ಎಂಬ ವರ್ತಮಾನವುಂಟಾಗಿದೆ ಎನಲು ; ರಾಕ್ಷಸನು—

ಅಯ್ಯಾ ಶಕಟದಾಸನೇ, ನಂದರಿಂದುಂಟಾದ ಅಪಮಾನಕ್ಕಾಗಿ ಅವರಲ್ಲಿ ತೀಕ್ಷ್ಣಪ್ರತಿಜ್ಞೆಯಂ ಮಾಡಿ ನಿರ್ವಹಿಸಿಕೊಂಡ ಚಾಣಕ್ಯನು ಈಗ ತನ್ನಿಂದಲೇ ಪ್ರಭುಪದದಲ್ಲಿ ನಿಲ್ಲಿಸಲ್ಪಟ್ಟಿರುವ ಚಂದ್ರಗುಪ್ತನಿಂದ ಬಂದ ಅಪಮಾನಮಂ ಸಹಿಸಿಕೊಂಡು ಪ್ರತಿಜ್ಞೆಯಂ ಮಾಡದೆ ಅಶಕ್ತನಂತೆ ತಪೋವನಕ್ಕೆ ನಡೆಯುವನು ಎಂಬ ವಾರ್ತೆಯು ಸಂಗತವಾಗಿ ತೋರುವುದಿಲ್ಲವೆಂದು ಹೇಳಿ—

ಎಲೈ ಚಾರನೇ, ಚಾಣಕ್ಯನು ತಪೋವನಕ್ಕೆ ಹೋಗುವನೆಂಬ ವರ್ತಮಾನವು ಪ್ರಸಿದ್ಧವಾಗಿದೆಯೋ ಏನು ? ಎನ್ನುತ್ತಿರುವಲ್ಲಿ ಹೊರಗಿರುವ ಮಲಯಕೇತುವು ಭಾಗುರಾಯಣನಂ ಕುರಿತು—ಎಲೈ ಸ್ನೇಹಿತನೇ, ಚಾಣಕ್ಯನು ಚಂದ್ರಗುಪ್ತನಲ್ಲಿ ಪ್ರತಿಜ್ಞೆ ಮಾಡುವುದನ್ನೂ ತಪೋವನಕ್ಕೆ ಹೋಗುವುದನ್ನೂ ಕೇಳಿದುದರಿಂದ ರಾಕ್ಷಸನಿಗೆ ಪ್ರಯೋಜನವೇನು ? ಎಂದು ಬೆಸಗೊಂಡುದಕ್ಕೆ ಭಾಗುರಾಯಣನು—ಅಯ್ಯಾ ನೃಪಕುಮಾರಕನೇ, ಚಾಣಕ್ಯನು ಯಶಸ್ಸಿನಲ್ಲಿ ದೃಷ್ಟಿಯನ್ನಿಟ್ಟು ಈಗ ಚಂದ್ರಗುಪ್ತನಿಂದುಂಟಾದ ಅಪಮಾನಕ್ಕೆ ಅವನಂ ಕೃತಘ್ನನೆಂದು ತಿಳಿದು ಸರ್ವಾತ್ಮನಾ ಮೌರ್ಯಾತ್ಮಜನ ಮುಖಾವಲೋಕನಮಂ ಮಾಡುವುದಿಲ್ಲವೆಂದು ಪ್ರತಿಜ್ಞೆಯಂಗೆಯ್ದು ತಾನು ಸಂಪಾದಿಸಿದ ಕೀರ್ತಿಗೆ ಹಾನಿ ಇಲ್ಲದಂತೆ ತಪೋವನಕ್ಕೆ ಹೋಗಬಹುದು. ಚಾಣಕ್ಯನ ಸಂಬಂಧವು ಎಷ್ಟೆಷ್ಟು ತಪ್ಪಿದರೂ ಅಷ್ಟಷ್ಟು ತನ್ನ ಕಾರ್ಯಸಿದ್ಧಿಗೆ ಅನುಕೂಲವಾದೀತೆಂದು ರಾಕ್ಷಸನ ಮನೋಭಿಪ್ರಾಯವಾಗಬಹುದು ಎನಲು ; ಬಳಿಗೆ ಶಕಟದಾಸನು—

ಸ್ವಾಮೀ, ಚಾಣಕ್ಯನು ತಪೋವನಕ್ಕೆ ಹೋಗುವುದು ಯಥಾರ್ಥವಾಗಬಹುದು. ಹೇಗೆಂಬರೆ ಬಹು ರಾಜಸಮೂಹದಿಂದ ಉಪಾಸ್ಯಮಾನನಾದ ಚಂದ್ರಗು

ಪ್ತನು ಚಾಣಕ್ಯನಿಂದ ತನ್ನ ಆಜ್ಞೆಗೆ ಭಂಗಮುಂಟಾದುದರಿಂದಲೂ ನಿಮ್ಮಲ್ಲಿರುವ ಕಾರ್ಯನಿರ್ವಾಹಶಕ್ತಿಯಂ ತಿಳಿದವನಾದುದರಿಂದಲೂ ಆತನ ಅಧಿಕಾರಮಂ ತೆಗೆದಿದ್ದಾನು ! ಚಾಣಕ್ಯನಾದರೋ ಮೊದಲು ಕ್ರೋಧವಶದಿಂದ ನಂದರ ಮೇಲೆ ಕ್ರೂರ ಪ್ರತಿಜ್ಞೆಯಂ ಮಾಡಿ ದೈವಬಲದಿಂದ ಅದಂ ನಿರ್ವಹಿಸಿಕೊಂಡಾಗ್ಗೂ ಅದೇ ರೀತಿಯಲ್ಲಿ ಶಪಥಮಂ ಮಾಡಿದರೆ ಈಗ ನೆರವೇರುವುದೋ ಇಲ್ಲವೋ ! ಎಂದು ಆಲೋಚಿಸಿ ತಾನು ಸಂಪಾದಿಸಿದ ಯಶಸ್ಸಿಗೆ ಹಾನಿ ಬರಬಾರದೆಂದು ನಿಶ್ಚಯಿಸಿ ಮೃದುಪ್ರತಿಜ್ಞೆಯಂ ಮಾಡಿ ತಪೋವನವನ್ನೆಯ್ದುವನು ಎನಲು ; ಆ ಮಾತಿಗೆ ರಾಕ್ಷಸನು—

ಲೋಕದಲ್ಲಿ ಉತ್ತಮಪುರುಷನು ಉಪಾರ್ಜಿತವಾದ ಯಶಸ್ಸಿನಲ್ಲಿ ದೃಷ್ಟಿ ಯನ್ನಿರಿಸುವನಲ್ಲದೆ ಕಾಮಕ್ರೋಧವಶನಾಗನು. ಮತ್ತು ಪ್ರಭುಪದಮಂ ಪಡೆದವರು ಕಾರ್ಯದಕ್ಷರಂ ಪುರಸ್ಕರಿಸುವುದರಿಂದಲೇ ಅವರ ಪದವಿಯು ನಿಷ್ಕಂ ಟಕವಾಗಿರುವುದು ಎಂದು ಹೇಳುತ್ತಿರಲು ; ಹೊರಗೆ ಭಾಗುರಾಯಣನು— ಅಯ್ಯಾ ರಾಜಪುತ್ರನೇ, ಒಳಗೆ ರಾಕ್ಷಸನಿಗೂ ಶಕಟದಾಸನಿಗೂ ನಡೆದ ಸಂವಾ ದದಿಂದ ಚಂದ್ರಗುಪ್ತನಲ್ಲಿ ರಾಕ್ಷಸನಿಗೆ ಅಭಿಮಾನಮುಂಟಾಗಿರುವುದರಲ್ಲಿ ಸಂಶ ಯಮುಂಟೇ ? ಎನಲು ; ಆ ವಾಕ್ಯಮಂ ಕೇಳಿ ಮಲಯಕೇತುವು—ಮುಂದೆ ರಾಕ್ಷಸನ ಗುಣಮಂ ಪರೀಕ್ಷಿಸಿದುದಲ್ಲದೆ ಕಾರ್ಯೋದ್ಯೋಗಮಂ ಮಾಡಕೂಡದು ಎಂದು ನಿಶ್ಚಯಿಸುತ್ತಿದ್ದನು. ಆಗ ಅಮಾತ್ಯನು ಚಾರನಂ ಕುರಿತು—ಹೊರಗೆ ವಿಶ್ರಮಿಸಿಕೋ ಎಂದು ಹೇಳುತ್ತಿರುವಲ್ಲಿ ಮಲಯಕೇತುವು ರಾಕ್ಷಸನ ಸಮೀ ಪಕ್ಕೆ ಭಾಗುರಾಯಣಸಮೇತನಾಗಿ ಹೋಗುತ್ತಿದ್ದನು. ಆಗ ರಾಕ್ಷಸನು ಮಲಯಕೇತು ಬಂದುದಂ ಕಂಡು ತಾನೇ ಎದ್ದು ಬಂದು ಆ ನೃಪತನಯನಂ ಕೈಹಿಡಿದು ಕರೆದೊಯ್ದು ಹಾಸಿಗೆಯ ಮೇಲೆ ಕುಳ್ಳಿರಿಸಿಕೊಂಡು—

ಅಯ್ಯಾ ಕುಮಾರನೇ, ಬಡವರ ಮನೆಗೆ ಭಾಗ್ಯದೇವತೆ ಬಂದಂತೆ ಈಗ ನೀನು ಬಂದುದರಿಂದ ನನ್ನ ಗೃಹವು ಮಂಗಳಕರವಾಯಿತು. ಒಮ್ಮಿಂದೊಮ್ಮೆ ಬಂದ ಪ್ರಯೋಜನವೇನು ? ಎಂದೆನಲು ; ಮಲಯಕೇತುವು—

ಸ್ವಾಮೀ ಅಮಾತ್ಯರೇ, ತಾವು ಶಿರೋವೇದನೆಯಿಂದ ಶ್ರಮಪಡುವಿರೆಂದು ಕೇಳಿ ನಿಮ್ಮಂ ನೋಡ ಬಂದೆನು ಎಂದನು.

ರಾಕ್ಷಸನು—ಅಯ್ಯಾ ಕುಮಾರನೇ, ನಿನಗೆ ರಾಜಾಧಿರಾಜನೆಂಬ ಹೆಸರುಂಟಾ ಗುವ ಪರ್ಯಂತರವೂ ನನ್ನ ಶಿರೋವೇದನೆಯು ಹೇಗೆ ಶಾಂತವಾಗುವುದುಎನಲು ;

ಮಲಯ—ಅಮಾತ್ಯರೇ, ತಾವು ಅಭಿಮಾನಿಸಿ ಇರುವಲ್ಲಿ ಈ ಯರ್ಥವು ಲಭಿಸುವುದಕ್ಕೆ ಸಂಶಯ ಮುಂಟೇ? ಈಗ ಇಲ್ಲಿ ಬಹು ಸೇನೆಗಳಂ ನಿಲ್ಲಿಸಿ ಕೊಂಡು ಶತ್ರುವಿನ ವ್ಯಸನಕಾಲಮಂ ನಿರೀಕ್ಷಿಸುತ್ತ ಎಷ್ಟು ದಿವಸ ಕಾಲಹರಣಮಂ ಮಾಡಬೇಕು ? ಎಂದನು.

ಅಮಾತ್ಯ—ಅಯ್ಯಾ ಅರಸು ಮಗನೇ, ಈಗಲೇ ವಿಜಯಪ್ರಯಾಣಮಂ ಮಾಡಬಹುದು. ವೈರಿಯಾದ ಚಂದ್ರಗುಪ್ತನಿಗೆ ವ್ಯಸನಕಾಲವು ಪ್ರಾಪ್ತವಾಗಿದೆ ಎಂದು ಹೇಳಿದುದಕ್ಕೆ

ಮಲಯ—ಅಯ್ಯಾ ಅಮಾತ್ಯರೇ, ಆ ವ್ಯಸನವೆಂಥದು ? ಎಂದನು.

ಅಮಾತ್ಯ—ಅಯ್ಯಾ ರಾಜಕುಮಾರನೇ, ಮಂತ್ರಿವ್ಯಸನ ಸಂಭವಿಸಿದೆ ಎಂದ ಮಾತಿಗೆ

ಮಲಯ—ಮಂತ್ರಿ ವ್ಯಸನವು ಪ್ರಭುವಿಗೆ ವ್ಯಸನಕೂಟವಲ್ಲ ಎಂದನು.

ಅಮಾತ್ಯ—ಮಿಕ್ಕ ಅರಸರಿಗೆ ಹಾಗಿದ್ದರೂ ಇರಬಹುದು. ಚಂದ್ರಗುಪ್ತನಿಗೆ ಹಾಗೆ ಹೇಳಕೂಡದು ಎನಲು ;

ಮಲಯ—ಅಮಾತ್ಯರೇ, ಚಂದ್ರಗುಪ್ತನು ಚಾಣಕ್ಯನಲ್ಲಿ ಅನುರಕ್ತನಾಗಿದ್ದುದರಿಂದ ಅವನಲ್ಲಿ ಪ್ರಜೆಗಳಿಗೆ ವಿಶ್ವಾಸವು ಸಾಲದೇ ಇತ್ತು. ಆ ಚಾಣಕ್ಯನು ಚಂದ್ರಗುಪ್ತನಂ ಬಿಟ್ಟುಹೋದ ಬಳಿಕ ಪ್ರಜೆಗಳಿಗೆ ಆತನಲ್ಲಿ ಪ್ರೀತಿಯುಂಟಾಗಿದ್ದೀತು ಎಂದನು.

ಅಮಾತ್ಯ—ಅಯ್ಯಾ ರಾಜಕುಮಾರನೇ, ಪ್ರಕೃತಿಗಳಲ್ಲಿ ಎರಡು ತೆರನಾಗಿರುವರು. ಅದರಲ್ಲಿ ಚಂದ್ರಗುಪ್ತನ ಅಭ್ಯುದಯಮಂ ಹಾರೈಸುವವರು ಕೆಲವರು. ನಂದರಲ್ಲಿ ಅನುರಕ್ತರಾಗಿದ್ದವರು ಕೆಲವರು. ಚಂದ್ರಗುಪ್ತಾನುರಕ್ತರಾದ ಪ್ರಜೆಗಳಿಗೆ ಇಷ್ಟು ದಿನವೂ ಚಾಣಕ್ಯನ ಸಹವಾಸದುರ್ವಾಸನೆ ಬಿಡದೇ ಇರುವುದರಿಂದ ಆ ದೇಶವಾಸಿಗಳಿಗೆ ಚಂದ್ರಗುಪ್ತನಲ್ಲಿ ಉಪೇಕ್ಷೆಗೆ ಕಾರಣವಾಯಿತು. ನಂದಾನುರಕ್ತರಾದ ಪ್ರಜೆಗಳಿಗೆ ಚಂದ್ರಗುಪ್ತನಲ್ಲಿ ಎಂದಿಗೂ ವಿರೋಧವೇ ಸಿದ್ಧವು. ಈ ಉಭಯವಿಧ ಜನರೂ ಅವಲಂಬನಾಂತರಮಿಲ್ಲದೆ ಇರುವುದರಿಂದ ಚಂದ್ರಗುಪ್ತನಂ ಅನುವರ್ತಿಸಿಕೊಂಡು ಕಾಲಹರಣಮಂ ಮಾಡುತ್ತಿದ್ದಾರೆ. ಅರಾತಿಗಳಂ ನಿಗ್ರಹಿಸುವುದರಲ್ಲಿ ಸಮರ್ಥನೂ ಪ್ರಜಾರಕ್ಷಕನೂ ಆದುದರಿಂದ ರಾಷ್ಟ್ರನಿವಾಸಿಗಳೆಲ್ಲರೂ ನಿನ್ನನ್ನೇ ಆಶ್ರಯಿಸಿ ಚಂದ್ರಗುಪ್ತನಂ ತ್ಯಜಿಸುತ್ತಿದ್ದಾರೆ. ಈ ಯರ್ಥದಲ್ಲಿ ನಾನೇ ದೃಷ್ಟಾಂತವೆನಲು ;

ಮಲಯ—ಅಮಾತ್ಯರೇ, ಚಂದ್ರಗುಪ್ತನು ಸ್ವತಂತ್ರನಾಗಿ ರಾಜ್ಯಭಾರವಮಂ ನಿರ್ವಹಿಸಲಾರನೇ ? ಎಂದನು.

ಅಮಾತ್ಯ—ಅಯ್ಯಾ ಕುಮಾರಕನೇ, ಆತನು ಅಷ್ಟಕ್ಕೆ ಯೋಗ್ಯನಲ್ಲ. ಯಾಕಂದರೆ ತನ್ನ ಬಾಹುಬಲದಿಂದ ರಾಜ್ಯಮಂ ಸಂಪಾದಿಸಿದ ಅರಸಿಗೆ ಮಾತ್ರ ಪ್ರಭುತ್ವನಿರ್ವಾಹವು ಘಟಿಸುವುದೆಂದು ಹೇಳಬೇಕು. ಈಗ ಚಂದ್ರಗುಪ್ತನಿಗೆ ಚಾಣಕ್ಯನ ಬುದ್ಧಿ ಬಲದ ಅವಲಂಬನವಿಲ್ಲದುದರಿಂದ ರಾಜ್ಯನಿರ್ವಾಹಮಂ ಮಾಡುವುದಕ್ಕೆ ಸಾಮರ್ಥ್ಯವು ಹೇಗೆ ಘಟಿಸೀತು ? ಲೋಕದಲ್ಲಿ ಸ್ತನ್ಯಪಾನದಿಂದ ಜೀವಿಸುವ ಶಿಶುವು ಸ್ತನ್ಯವಿಲ್ಲದಿದ್ದರೆ ಹೇಗೆ ಜೀವಿಸಲಾರದೋ ಅದೇರೀತಿಯಲ್ಲಿ ಮಂತ್ರಸಿದ್ಧಿಯುಳ್ಳ ಅರಸು ದಕ್ಷನಾದ ಸಚಿವನಂ ಬಿಟ್ಟು ರಾಜ್ಯತಂತ್ರಮಂ ನಿರ್ವಹಿಸಲಾರನು ಎನಲು ;

ಮಲಯ—ಸ್ವಾಮಿ ಅಮಾತ್ಯರೇ, ಹಾಗಾದರೆ ಶತ್ರುವಿನ ಮೇಲೆ ನಾವು ದಂಡೆತ್ತಿ ಹೋಗಬೇಕಾಗುತ್ತಿದೆಯಷ್ಟೆ ? ಅರಿವಿಜಯಕ್ಕೆ ಅನೇಕಕಾರಣವಿರಲಾಗಿ ಅಹಿತ ವ್ಯಸನಕಾಲವನ್ನೇ ಮುಖ್ಯವಾಗಿ ನಿರೀಕ್ಷಿಸುತ್ತ ನಾವು ಯುದ್ಧಕ್ಕೆ ತೆರಳಿದರೆ ನಮಗೆ ಕಾರ್ಯಸಿದ್ಧಿಯಾಗುವ ಪರಿ ಹೇಗೆ? ಎಂದು ಹೇಳಿದನು.

ಅಮಾತ್ಯ—ಅಯ್ಯಾ ರಾಜಪುತ್ರನೇ, ಅದು ಮಾತ್ರವೇ ಅಲ್ಲ ನೀನು ಶೂರಸೇನಾಪರಿವೃತನಾಗಿ ಇರುವುದರಿಂದಲೂ ಚಾಣಕ್ಯನು ಅಧಿಕಾರಭ್ರಷ್ಟನಾಗಿ ಚಂದ್ರಗುಪ್ತನಂ ಬಿಟ್ಟು ಹೋಗುವುದರಿಂದಲೂ ಮೌರ್ಯಾತ್ಮಜನು ನೂತನ ಪ್ರಭುವಾಗಿ ಮಂತ್ರಿರಹಿತನಾಗಿರುವುದರಿಂದಲೂ ನಿನಗೆ ವೇಳೆ ಸಮಯಗಳಲ್ಲಿ ಉಪಾಯವನ್ನುಪದೇಶಿಸುತ್ತ ನಾನು ನಿನ್ನವನಾಗಿರುವುದರಿಂದಲೂ ನೀನು ಎಣಿಸಿದಂತೆ ಕಾರ್ಯಸಿದ್ಧಿಯಾಗುವುದರಲ್ಲಿ ಸಂಶಯಮುಂಟೇ ? ಎನಲು ;

ಮಲಯ—ಅಯ್ಯಾ ಅಮಾತ್ಯರೇ, ಹಾಗಾದರೆ ನಮ್ಮ ಸೇನೆಯು ಗೌಡದೇಶದಲ್ಲಿರುವ ಶೋಣಾನದೀತೀರಕ್ಕೆ ಹೋಗಿ ಇಳಿಯುವಂತೆ ನಮ್ಮ ಚಮೂಪತಿಗಳೆಲ್ಲರಿಗೂ ನೀವೇ ಅಪ್ಪಣೆಯನ್ನು ಕೊಡತಕ್ಕುದು ಎಂದು ಮಲಯಕೇತುವು ರಾಕ್ಷಸನಿಗೆ ಹೇಳಿ ಅವನಿಂದಾದ ಸನ್ಮಾನಮಂ ಕೈಕೊಂಡು ಬಾಗುರಾಯಣಸಮೇತನಾಗಿ ತನ್ನ ಗೃಹಕ್ಕೆ ಬರುತ್ತಿದ್ದನೆಂಬಲ್ಲಿ ಮುದ್ರಾಮಂಜೂಷಮೆಂಬ ಗ್ರಂಥದಲ್ಲಿ ಮಲಯಕೇತು ರಾಕ್ಷಸ ಸಂವಾದ ಕಥನಮೆಂಬ ಷೋಡಶಾಶಯವು ಸಮಾಪ್ತಮಾದುದು.

# ಸಪ್ತದಶಾಶಯ ಪ್ರಾರಂಭವು.

## ರಾಕ್ಷಸನಿರಸನವು.

ಅನಂತರದಲ್ಲಿ ಮೊದಲಿಗಿಂತಲೂ ಅಧಿಕವಾಗಿ ದೇಶಾಧಿಪತಿಗಳ ಸೇನೆಗಳೆಲ್ಲವೂ ಗುಂಪು ಕೂಡಿ ಪಾಟಲೀಪುರಕ್ಕೆ ತೆರಳಲುದ್ಯುಕ್ತವಾಗಿ ಆಘುನಾಶಿನಿ ತೀರಪರ್ಯಂತರವೂ ಭೂಮಂಡಲಂ ಕಾಣಿಸದಂತೆ ವ್ಯಾಪಿಸಿ ಇಳಿಯುತ್ತಿರುವಲ್ಲಿ ಆ ಪಡೆಯ ಪದಹತಿಯಿಂದುಂಟಾದ ಧೂಳೀನಿಕರದಿಂದ ನಭೋಮಂಡಲವೆಲ್ಲವೂ ಮುಚ್ಚಿ ದಿಕ್ತಟಂಗಳು ಗೋಚರಿಸದಿರಲು ; ಗೌಡದೇಶಪ್ರಜೆಗಳು ಮೊದಲಿನಂತೆ ಆತಂಕಪಟ್ಟು ವಲಸೇ ಹೋಗುವುದಕ್ಕೆ ಯತ್ನಮಂ ಮಾಡುತ್ತಿರಲು ; ಇದೆಲ್ಲಮಂ ತಿಳಿದು ಪಾಟಲೀಪುರದಿಂದ ಅಪಮಾನಿತನಾಗಿ ಹೊರಟು ಬಂದ ಕ್ಷಪಣಕನು ಪರ್ವತರಾಜ್ಯಕ್ಕೆ ಬಂದು ಶಾಹುರೀನಗರದೊಳ್ ರಾಕ್ಷಸನ ಗೃಹದ್ವಾರದಲ್ಲಿ ನಿಂತಿರಲು ; ಆ ಸಮಯದೊಳಗೆ ರಾಕ್ಷಸನು ಮಲಯಕೇತುವಿನ ಪತಾಕಿನಿಯು ಮುಂದೆ ಪಾಟಲೀಪುರಕ್ಕೆ ಹೊರಡಲೋಸುಗ ಲಗ್ನಮಂ ನಿಶ್ಚಯಿಸಬೇಕೆಂದು ಆಲೋಚಿಸುತ್ತ ದೂತನ ಮುಖವಮಂ ನೋಡಿ—

ಎಲೈ, ಹೊರಗೆ ಜ್ಯೋತಿಷಜ್ಞರಾದವರು ಯಾರಾದರೂ ಇದ್ದರೆ ಕರತರುವವನಾಗು ಎಂದು ನೇಮಿಸಲು; ಹಾಗೇ ಊಳಿಗದವನು ಬಂದು ನೋಡಿ ಹೋಗಿ—

ಬುದ್ಧೀ, ಜ್ಯೋತಿಷಜ್ಞರು ಯಾರೂ ಸಿದ್ಧವಾಗಿಲ್ಲ. ಮೊದಲಿನ ಕ್ಷಪಣಕನು ಮಾತ್ರ ನಿಂತಿಹನೆಂದು ಹೇಳಲು;

ಪ್ರಥಮದಲ್ಲಿ ಕ್ಷಪಣಕನ ದರ್ಶನವು ಅಪಶಕುನವು. ಆದರೂ ಅವನಂ ಸೌಮ್ಯವೇಷದಿಂದ ಬರಹೇಳೆಂದು ರಾಕ್ಷಸನು ಉಸಿರಲು; ಆವನು ಹಾಗೇ ನುಡಿದು ಆ ಕ್ಷಪಣಕನಂ ಕರತಂದು ಅಮಾತ್ಯನ ಮುಂದೆ ಬಿಡಲು; ಜೀವಸಿದ್ಧಿಯು ಧರ್ಮನಿಯುತರಿಗೆ ಜಯವಾಗಲೆಂದು ಹರಸಿ ನಿಂತಿರಲು; ಆತನಂ ನೋಡಿ—

ಅಯ್ಯಾ ಕ್ಷಪಣಕನೇ, ಬಂದೆಯಾ ? ಕುಳಿತುಕೋ. ಉಳಿದ ವರ್ತಮಾನವೇನಿದ್ದರೂ ಆ ಬಳಿಕವಾಗಲಿ. ಪ್ರಕೃತದಲ್ಲಿ ವಿಜಯಯಾತ್ರೆಗೆ ಈ ದಿವಸ ಮುಹೂರ್ತಮಂ ನಿಶ್ಚಯಿಸು ಎನಲು; ಆ ಮಾತಿಗೆ—

ಅಯ್ಯಾ ಅಮಾತ್ಯನೇ, ಈ ದಿವಸ ಮಧ್ಯಾಹ್ನಾತ್ಪರದಲ್ಲಿ ಸಕಲಗುಣಯುಕ್ತವಾದ ತಿಥಿಯೂ ಪೂರ್ಣಿಮೆಯೂ ಬರುತ್ತಿದೆ. ಉತ್ತರದಿಂದ ದಕ್ಷಿಣಕ್ಕೆ ಹೋಗಲಿಚ್ಛೈಸಿದ ನಿನಗೆ ನಕ್ಷತ್ರವು ವಾಮಭಾಗಕ್ಕೆ ಆಗುತ್ತಿದೆ. ಬಲು

ಬಳ್ಳಿಯದು ತೆರಳಬಹುದೆಂದು ಜೀವಸಿದ್ಧಿಯು ಹೇಳುತ್ತಿರಲು; ರಾಕ್ಷಸನು ಪೂರ್ವಸ್ಮರಣೆಯಿಂದ ಸಂಶಯಾವಿಷ್ಟನಾಗಿ—

ಎಲೈ ಕ್ಷಪಣಕನೇ, ಮೊದಲು ವಿಜಯಯಾತ್ರೆಗೆ ಲಗ್ನಮಂ ಹೇಳಿದಂತೆ ಈಗಲೂ ಹೇಳಬೇಡ ಮಿಕ್ಕವರಾದ ಜ್ಯೋತಿಷಜ್ಞರೊಡನೆಯಾದರೂ ಆಲೋಚಿಸಿ ಏಕವಾಕ್ಯತೆಯಿಂದ ಉಸಿರುವವನಾಗು ಎನಲು;

ಎಲೈ ಅಮಾತ್ಯನೇ, ನೀನೇ ಹೋಗಿ ಯಾವ ದೈವಜ್ಞರಂ ಕೇಳಬೇಕೋ ಕೇಳಿಕೊಂಡು ನಿಶ್ಚಯಮಂ ಮಾಡಿಕೋ. ನಾನು ಮತ್ತೆಲ್ಲಿಯಾದರೂ ಗಮಿಸುವೆನೆಂದೆನಲು; ರಾಕ್ಷಸನು—

ಎಲೈ ಕ್ಷಪಣಕನೇ, ಇಷ್ಟುಮಾತ್ರಕ್ಕೇ ಸನ್ಯಾಸಿಯಾದವನಿಗೆ ಕೋಪ ಬಂದಿತೋ? ಎನಲು; ಕ್ಷಪಣಕನು—

ಎಲೈ ಅಮಾತ್ಯನೇ, ನನಗೆ ನಿನ್ನ ಮೇಲೆ ಕೋಪವೇತಕ್ಕೆ? ಎನಲು;

ಎಲೈ ಕ್ಷಪಣಕನೇ, ಮತ್ತಾರಿಗೆ ನನ್ನ ಮೇಲೆ ಕೋಪವೆಂದು ರಾಕ್ಷಸನು ನುಡಿಯಲು;

ಎಲೈ ಅಮಾತ್ಯನೇ, ಸ್ವಾಶ್ರಿತರಂ ಬಿಟ್ಟು ಅನ್ಯರನ್ನಪೇಕ್ಷಿಸುತ್ತ ದೈವಬಲಹೀನನಾದ ನಿನ್ನ ಮೇಲೆ ದೈವವೇ ಆಗ್ರಹಮಂ ಮಾಡುತ್ತಿದೆ ಎಂದು ಹೇಳಿ ಕ್ಷಪಣಕನು ಅಲ್ಲಿಂದ ಎದ್ದು ಹೋಗಲು; ಅದಂ ನೋಡಿ ರಾಕ್ಷಸನ ಬಳಿಯಲ್ಲಿ ಆಪ್ತನಂತೆ ಆಶ್ರಯಿಸಿಕೊಂಡಿದ್ದ ಸಿದ್ಧಾರ್ಥಕನು–ಇನ್ನು ವಿಳಂಬಮಂ ಮಾಡಿದರೆ ಮೊದಲಿಗಿಂತಲೂ ಅಧಿಕವಾಗಿ ಕೂಡಿರುವ ಮಲಯಕೇತುವಿನ ವಾಹಿನಿಯ ಪಾದಘಾತದಿಂದ ಗೌಡದೇಶವೆಲ್ಲವೂ ಕ್ಷುಬ್ಧಮಾಗಿ ರಾಜಕಾರ್ಯವು ಬಹು ಪ್ರಯತ್ನಸಾಧ್ಯವಾಗುವುದೆಂದು ತಿಳಿದು ರಹಸ್ಯದಲ್ಲಿ ಬಂದು ಬಾಗುರಾಯಣನಂ ಕಂಡು ಆತನು ಹೇಳಿದಂತೆ ಅಲ್ಲಿಂದ ಹೋಗಿ ಭದ್ರಭಟಾದಿಗಳಿಗೆ ಜಾಗರೂಕರಾಗಿ ಇರತಕ್ಕುದೆಂದು ಏಕಾಂತದಲ್ಲಿ ಸೂಚಿಸಿ ಪುನಃ ರಾಕ್ಷಸನ ಭವನಕ್ಕೆ ಬಂದು ಶಕಟದಾಸನಂ ಕುರಿತು—

ಅಯ್ಯಾ ಮಿತ್ರನೇ, ನನಗೆ ಹೆಣ್ಣು ಕೊಟ್ಟ ಮಾವನ ಗ್ರಾಮವು ಇಲ್ಲಿಗೆ ಸಮೀಪವಾಗಿದೆ. ನಾನು ವಿದೇಶಗತನಾದುದಂ ತಿಳಿದು ನನ್ನ ಹೆಂಡರು ಸ್ಥಳದಲ್ಲಿ ಇರಲಾಜದೆ ತೌರುಮನೆಯಂ ಸೇರಿದಳಂತೆ. ಅವರೆಲ್ಲರಂ ನೋಡಿ ಅಮಾತ್ಯರಿಗೆ ನಾನು ಪ್ರೀತಿಪಾತ್ರನೆಂದು ತಿಳಿಯಪಡಿಸಿ ನನಗೆ ಪ್ರಧಾನರು ಸಂತೋಷದಿಂದ ಕೊಟ್ಟ ಭೂಷಣಂಗಳನ್ನಿತ್ತು ಪತ್ನೀದುಃಖಶಮನಂಗೆಯ್ದು ಬರುವೆನು ಎನಲು

ಅದಂ ಕೇಳಿ ಶಕಟದಾಸನು ಹಾಗೇ ಮಾಡಿಕೋ ಎಂದು ರಾಕ್ಷಸನು ಕೊಟ್ಟಿದ್ದ ಆಭರಣಂಗಳನ್ನವಗಿಯಲು; ಅವನು ಆ ಮಂಡನದ ಸಂಪುಟಮಂ ತೆಗೆದು ಕೊಂಡು ಮೊದಲು ಚಾಣಕ್ಯರು ತನ್ನ ಕಿವಿಯಲ್ಲಿ ಹೇಳಿ ಕಳುಹಿಸಿದ್ದ ಮೇರೆಗೆ ಎಲ್ಲಮಂ ನೆನೆದು ಅವರು ಬರೆದುಕೊಟ್ಟಿದ್ದ ಕಾಗದಮಂ ಸಹ ಗ್ರಹಿಸಿ ಅಲ್ಲಿಂದ ಹೊರಟು ಉಕ್ಕಡದ ಮಾರ್ಗವಾಗಿ ಬರುತ್ತಿರಲು; ಸಿದ್ಧಾರ್ಥಕನು ಹೇಳಿ ಹೋದ ರೀತಿಗೆ ಬಾಗುರಾಯಣನು ಮಲಯಕೇತುವಿಗೆ ಬೋಧಿಸಿ ದಂಡೆತ್ತಿ ಹೋಗುವ ಸ್ಥಳಪರಸ್ಥಳಗಳ ಜನರಂ ವಿಚಾರಿಸಿಕೊಂಡು ಉಕ್ಕಡಕ್ಕೆ ಉಂಡಿಗೆ ಯಂ ಕೊಡುವ ಅಧಿಕಾರಮಂ ತಾನೇ ನೋಡುವೆನೆಂದು ಉಸುರಿ ಜನಗಳಿಗೆ ಉಂಡಿಗೆಯಂ ಕೊಡುತ್ತಿರಲು; ಆ ಮಾರ್ಗಂಗೊಂಡು ಬರುವ ಸಿದ್ಧಾರ್ಥಕನಿಗೆ ಕ್ಷಪಣಕನು ಎದುರಾಗಲು; ಅವನಂ ಕಂಡು ತನ್ನ ಮನಸ್ಸಿನಲ್ಲಿ—ನಮ್ಮ ಕ್ಷಪ ಣಕನು ಎದುರಾದುದರಿಂದ ಅಪಶಕುನವಾದರೂ ನನಗೇ ಸುಶಕುನವೇ ಸರಿ. ಈತನು ಕ್ಷಪಣಕನೇ ಯತಾರ್ಥವಾಗಿದ್ದರೆ ಬಾಧಕವು. ವೇಷಮಂ ಧರಿಸಿರು ವವನಾದುದರಿಂದ ದೊಡ್ಡವರಂ ಕಂಡಂತೆ ಸುಶಕುನವೇ ಆಯಿತೆಂದು ತಿಳಿಯುತ್ತ ವಿಶೇಷಮುಂಟಾಗಿದ್ದರೆ ವಿಚಾರಿಸಬೇಕೆಂದು ನಿಶ್ಚಯಿಸಿ—

ಸ್ವಾಮಿ ಕ್ಷಪಣಕರೇ, ನಮಸ್ಕಾರವು. ಎಲ್ಲಿಂದ ಬಂದಿರಿ? ಪ್ರಯಾಣ ವೆಲ್ಲಿಗೆ? ಎಂದು ಕೇಳಲು;

ಎಲೈ ಸಿದ್ಧಾರ್ಥಕನೇ, ಯಜಮಾನರ ವಾಕ್ಯಾನುಸಾರವಾಗಿ ಹೊರಟು ಇರುವಂತೆ ತೋರುತ್ತಿದೆ ಎಂದನು. ಅದಕ್ಕೆ ಸಿದ್ಧಾರ್ಥಕನು—

ಕ್ಷಪಣಕರೇ, ನೀವು ಜ್ಯೋತಿಷಜ್ಞರಾದುದರಿಂದ ತಿಳಿದಿರೋ ಏನು? ಎನಲು; ಆ ಮಾತಿಗೆ ಕ್ಷಪಣಕನು ನಗುತ್ತ—

ಎಲೈ ಸಿದ್ಧಾರ್ಥಕನೇ, ನಿನ್ನ ಬಳಿಯಲ್ಲಿರುವ ಕಾಗದವೇ ನಿನ್ನ ಪ್ರಯಾ ಣಮಂ ಸೂಚಿಸುತ್ತಿದೆ ಎಂದನು. ಆ ಬಳಿಕ ಸಿದ್ಧಾರ್ಥಕನು—

ಕ್ಷಪಣಕರೇ, ನಾನು ಮತ್ತೊಂದು ದೇಶಕ್ಕೆ ಹೋಗಬೇಕಾಗುತ್ತಿದೆ. ಪ್ರಯಾಣಕ್ಕೆ ದಿವಸವೆಂತಿರುವುದು? ಎನಲು; ಕ್ಷಪಣಕನು—

ಎಲೈ ಸಿದ್ಧಾರ್ಥಕನೇ, ವಪನಮಂ ಮಾಡಿಕೊಂಡ ಬಳಿಕ ಆಯುಷ್ಕರ್ಮ ಕ್ಕೆ ದಿವಸವು ಹೇಗಿರುವುದು? ಎಂದು ಕೇಳುವಂತೆ ಪ್ರಯಾಣಸನ್ನಾಹದಿಂದ ಬರುತ್ತ ಲಗ್ನಮಂ ಕೇಳುವುದು ಬಹು ಕೌತುಕವಾಯಿತು ಎಂದನು.

ಬಳಿಕ ಸಿದ್ಧಾರ್ಥಕನು—ಅದಂತಿರಲಿ. ತಾವು ಎಲ್ಲಿಗೆ ಹೋಗುವಿರಿ? ಮತ್ತೇನುವಿಶೇಷವು? ಎಂದೆನಲು; ಕ್ಷಪಣಕನು -

ಎಲೈ ಸಿದ್ಧಾರ್ಥಕನೇ, ನಿನ್ನೆ ಮೊದಲುಗೊಂಡು ಪಾಟಲೀಪುರದ ಮಾರ್ಗವಾಗಿ ಹೋಗುವ ಜನರು ಬಾಗುರಾಯಣಂ ಕೊಡುವ ಉಂಡಿಗೆಯಂ ಉಕ್ಕಡದವರಿಗೆ ತೋರಿಸಿದಲ್ಲದೆ ಸುಮ್ಮನೆ ಹೋಗಕೂಡದಂತೆ. ರಾತ್ರಿ ವೇಳೆಯಲ್ಲಿ ಮತ್ತೂ ಅಶಕ್ಯವಂತೆ. ನೀನು ನಿಶಾಸಮಯದಲ್ಲಿ ಉಕ್ಕಡದವರಿಗೆ ಸಿಕ್ಕಿ ಬಂಧನಕ್ಕೆ ತಗುಲಿ ರಾಜಪುತ್ರನಾದ ಮಲಯಕೇತುವಿನ ಮುಂದೆ ನಿಲ್ಲಬೇಕಾದರೆ ಉಂಡಿಗೆಯನ್ನಪೇಕ್ಷಿಸದೆ ಹೋಗುವವನಾಗು. ನೀನು ರಾಕ್ಷಸನ ಹರಿಕಾರನಾದುದರಿಂದ ನಿನ್ನಂ ಯಾರೂ ತಡೆಯರು. ನಿನ್ನ ಕಾರ್ಯಸಿದ್ಧಿಯಾಗುವ ಸಮಯವು ಸನ್ನಿಹಿತವಾಯಿತು ಹೋಗು, ನಾನು ಬಾಗುರಾಯಣನ ಬಳಿಗೆ ಉಂಡಿಗೆಯಂ ಕೇಳುವುದಕ್ಕೆ ಹೋಗುವೆನು ಎಂದು ಹೇಳಿ ಸಿದ್ಧಾರ್ಥಕನಂ ಉಕ್ಕಡದ ಬಳಿಗೆ ಕಳುಹಿಸಿ ತಾನು ಬಾಗುರಾಯಣನ ಬಳಿಗೆ ಬರುತ್ತಿದ್ದನು.

ಆಗ ಬಾಗುರಾಯಣನು ತನ್ನ ಮನಸ್ಸಿನಲ್ಲಿ—ನಮ್ಮ ಯಜಮಾನರಾದ ಚಾಣಕ್ಯರ ನೀತಿ ಪ್ರಯೋಗವು ಅಕಾಲ ಮೇಘದಂತೆಯೂ ವಿಚಿತ್ರವಾದ ದೈವವಿಲಾಸದಂತೆಯೂ ಒಂದುವೇಳೆ ಮಹಾಫಲಮಂ ತೋರುತ್ತ ಹಾಗೇ ಕಾಣಿಸಿಕೊಳ್ಳದೆ ಕೃಶವಾಗುತ್ತ ಪುನಃ ತೋರಿ ಅಡಗುತ್ತ ಮೂಲಮಂ ತೋರಿಸಿಕೊಳ್ಳದೆ ಅಗಾಧವಾಗಿದೆ. ಮಲಯಕೇತುವಿನ ಸೇನೆಗಳೆಲ್ಲವೂ ರಾಕ್ಷಸನು ಹೇಳಿದಂತೆ ಪಾಟಲೀಪುರಮಂ ಮುತ್ತುವುದಕ್ಕೆ ಪ್ರಯತ್ನಮಂ ಮಾಡುತ್ತವೆ. ಈ ವೇಳೆಯಲ್ಲಿ ನಾನು ದೂರದಲ್ಲಿದ್ದರೆ ಮಲಯಕೇತುವಿಗೆ ರಾಕ್ಷಸನಲ್ಲಿ ಸಂಶಯಂ ತೋರಿರುವಂತೆ ನನ್ನಲ್ಲಿಯೂ ತೋರೀತು. ಆದುದರಿಂದ ರಾಜಪುತ್ರನ ಸಮೀಪದಲ್ಲಿಯೇ ಇರಬೇಕು. ಮತ್ತು ಮಲಯಕೇತುವು ನನಗೆ ಮಿತ್ರನಾದವನಾದರೂ ಚಾಣಕ್ಯರ ವಾಕ್ಯಗೌರವದಿಂದ ಇವನಂ ವಂಚಿಸಿ ಧನಾಶೆಗೆ ಒಳಗಾಗಿ ದೇಹಮಂ ಮಾರಿಕೊಂಡವನಂತೆ ಪರಾಧೀನನಾಗಿ ಕುಲ ಮಾನ ಯಶಸ್ಸುಗಳಲ್ಲಿ ದೃಷ್ಟಿಯನ್ನಿಡದೆ ಹೀಗಿರುವ ನನಗೆ ಸ್ವಾಮಿಕಾರ್ಯಮಂ ಬಿಟ್ಟು ಯುಕ್ತಾಯುಕ್ತವಿಚಾರದಿಂದ ಪ್ರಯೋಜನವೇನು? ಎಂದು ಚಿಂತಿಸುತ್ತ ತನ್ನ ಬಳಿಯಲ್ಲಿದ್ದ ದೂತನಂ ಕರೆದು—

ಎಲೈ, ಇಲ್ಲಿನ ಉಕ್ಕಡದಿಂದ ಹೊರಗೆ ಹೋಗುವ ಜನರು ಬಂದು ಉಂಡಿಗೆಯಂ ಕೇಳಿದರೆ ಅವರಂ ಇಲ್ಲಿಗೆ ಕರತರುವವನಾಗು ಎನಲು; ದೂತನು

ಬಳ್ಳಿಯದೆಂದು ಹೇಳಿ ಹಾಗೇ ಹೊರಗೆ ಹೋಗಿ ನೋಡಿ ಕಾದುಕೊಂಡಿರುವ ಕ್ಷಪಣಕನಂ ಕರತಂದು ನಿಲ್ಲಿಸಿ—ಈತನು ಉಂಡಿಗೆಗಾಗಿ ಕಾದಿದ್ದನು ಎಂದು ಭಾಗುರಾಯಣನಿಗೆ ಹೇಳಲು; ಆಗ ಕ್ಷಪಣಕನು ಧರ್ಮಿಷ್ಠರಿಗೆ ಧರ್ಮವೃದ್ಧಿಯುಂಟಾಗಲಿ ಎಂದು ಹೇಳಿ ಕುಳ್ಳಿರಲು; ಅವನಂ ಭಾಗುರಾಯಣಂ ನೋಡಿ ರಾಕ್ಷಸನ ಸ್ನೇಹಿತನಾದ ಜೀವಸಿದ್ಧಿ ಎಂದು ತಿಳಿದು—ಬನ್ನಿರಿ ಜೀವಸಿದ್ಧಿಗಳೇ, ಕ್ಷೇಮವೇ? ಎನಲು; ಕ್ಷಪಣಕನು—

ಅಯ್ಯಾ, ಕಾರ್ಯಧುರಂಧರರಾದ ನಿಮ್ಮೆಲ್ಲರ ಕ್ಷೇಮದಿಂದ ನಾವೆಲ್ಲರೂ ಕುಶಲಿಗಳು ಎಂದು ನುಡಿಯುವ ಸಮಯದಲ್ಲಿ ಒಳಗೆ ಮಲಯಕೇತುವು ತನ್ನ ಮನಸ್ಸಿನೊಳ್—ಈಗ ನಮ್ಮ ಸೈನ್ಯಗಳು ಪಾಟಲೀಪುರಕ್ಕೆ ಹೋಗಿ ಮುತ್ತಿಗೆಯಂ ಹಾಕುವುದಕ್ಕೆ ಯತ್ನಮಂ ಮಾಡಿದ್ದಲ್ಲಿ ರಾಕ್ಷಸನು ತನ್ನ ಪತ್ನೀಪುತ್ರರು ಕುಸುಮನಗರದಲ್ಲಿ ಸಿಕ್ಕಿರುವುದರಿಂದಾಗಲಿ ನಂದವಂಶದಲ್ಲಿ ಜನಿಸಿದವನೆಂಬ ಅಭಿಮಾನದಿಂದಾಗಲಿ ಚಂದ್ರಗುಪ್ತನಲ್ಲಿ ಸಂಧಿಯಂ ಮಾಡಿಕೊಂಡಾನೋ? ಅಲ್ಲದಿದ್ದರೆ ಕೊಟ್ಟ ಮಾತು ತಪ್ಪಬಾರದೆಂದು ನನ್ನ ಕಾರ್ಯವನ್ನೇ ಸಾಧಿಸಾನೋ! ತಿಳಿಯಕೂಡದು. ಆದುದರಿಂ ಈ ವಿಷಯಮಂ ಪುನಃ ಭಾಗುರಾಯಣನ ಸಂಗಡ ಆಲೋಚಿಸಿ ನಿರ್ಧರಿಸಬೇಕೆಂದು ನೆನಸಿ ತನ್ನ ಬಳಿಯಣ ಕಂಚುಕಿಯಂ ನೋಡಿ—

ಎಲೈ, ಭಾಗುರಾಯಣನು ಎಲ್ಲಿದ್ದಾನೆ? ಎನಲು; ಬುದ್ಧಿ ಎಂದು ಬಂದು ನೋಡಿ ಹೋಗಿ—

ಜೀಯಾ, ಭಾಗುರಾಯಣನು ಉಂಡಿಗೆಗಾಗಿ ಬಂದ ಕ್ಷಪಣಕನೊಡನೆ ಮಾತನಾಡುತ್ತ ಚಾವಡಿಯಲ್ಲಿ ಕುಳಿತಿದ್ದಾನೆಂದು ಬಿನ್ನೈಸಲು; ಆ ಮಾತಿಗೆ ಪಾಟಲೀಪುರದಲ್ಲಿದ್ದ ರಾಕ್ಷಸನಿಗೆ ಆಪ್ತನಾದ ಕ್ಷಪಣಕನೊಡನೆ ಭಾಗುರಾಯಣನು ಮಾತನಾಡುತಿದ್ದಾನು. ಅವರೀರ್ವರ ಸಲ್ಲಾಪರಹಸ್ಯವೆಂತಿರುವುದೋ ತಿಳಿಯಬೇಕೆಂದು ಮಲಯಕೇತು ಉಂಡಿಗೆಯ ಚಾವಡಿಗೆ ಅಭಿಮುಖವಾಗಲು; ಆಗ ಪಂಜರದ ಗಿಣಿಯು ಆತನಂ ಕಂಡು ಪರಾಕು! ಚಿಕ್ಕದೊರೆಯೇ! ಎಂಬುದಾಗಿ ಕೂಗುತ್ತಿರಲು; ಆ ಧ್ವನಿಯು ಭಾಗುರಾಯಣನಿಗೆ ಕೇಳಿಬರಲು; ಕಂಚುಕಿಯು ಬಂದು ಇಣಿಕಿನೋಡಿ ಸುಮ್ಮನೇ ಹೋದುದರಿಂದಲೂ ಪಂಜರಸ್ಥ ಶುಕದ ಪರಾಕೆಂಬ ಸ್ವನವು ಶ್ರೋತ್ರೇಂದ್ರಿಯಕ್ಕೆ ಮುಟ್ಟಿದುದರಿಂದಲೂ ರಾಜಕುಮಾರಕನು ನನ್ನ ಬಳಿಗೆ ವ್ಯಾಜಾಂತರವನ್ನವಲಂಬಿಸಿ ನಡೆತರುವವನಾಗಿದ್ದಾನೆ. ಈ ಸಮಯದಲ್ಲಿಯೇ ಕ್ಷಪಣಕನೊಡನೆ ಮಾತನಾಡುವ ಸಂದರ್ಭ

ದಿಂದ ಈ ಜೀವಸಿದ್ಧಿಯಂ ಕೇಕಿದಂತೆ ಮಾಡಿ ಇವನ ಮುಖವಚನದಿಂದಲೂ ಮಲಯಕೇತುವಿಗೆ ರಾಕ್ಷಸನಲ್ಲಿ ಕೋಪಮುಂಟಾಗುವಂತೆ ಮಾಡುವೆನೆಂದು ನಿಶ್ಚಯಿಸಿ ಆಗ ಕ್ಷಪಣಕನಂ ನೋಡಿ—

ಅಯ್ಯಾ ಕ್ಷಪಣಕರೇ, ರಾಕ್ಷಸನ ಕಾರ್ಯಾರ್ಥವಾಗಿ ಹೋಗುವುದಕ್ಕೆ ಉಂಡಿಗೆಯನ್ನಪೇಕ್ಷಿಸಿ ಬಂದವರಲ್ಲವಷ್ಟೇ? ಎನಲು; ಅಷ್ಟರಲ್ಲಿಯೇ ಮಲಯಕೇತುವು ಬಂದು ವಿನೋದಾರ್ಥವಾಗಿ ಭಾಗುರಾಯಣನ ಕಣ್ಣುಮುಚ್ಚುವ ನೆವದಿಂದ ಆತನು ಕುಳಿತಿದ್ದ ಸ್ಥಾನದ ತೆರೆಯ ಹಿಂದೆ ನಿಂತು ಮಾತುಗಳಂ ಕೇಳುತ್ತಿರಲು; ಆಗ ಭಾಗುರಾಯಣನ ಆಕ್ಷೇಪಣೋಕ್ತಿಗೆ ಕ್ಷಪಣಕನು ಸೌಗತ! ಸೌಗತ! ಎಂದು ತನ್ನ ಕಿವಿಗಳಂ ಕೈಯ್ಯಿಂದ ಮುಚ್ಚುತ್ತ—

ಅಯ್ಯಾ ಭಾಗುರಾಯಣನೇ, ವಂಚಕನಾದ ರಾಕ್ಷಸನ ಕಾರ್ಯವು ನನಗೇಕೆಬೇಕು? ಅವನ ನಾಮಗ್ರಹಣವು ಯಾವ ದೇಶದಲ್ಲಿ ಇಲ್ಲವೋ ಅಲ್ಲಿಗೆ ಹೋಗುವೆನು. ಉಂಡಿಗೆಯಂ ಕೊಡುವವನಾಗು ಎಂದನು.

ಭಾಗುರಾಯಣನು—ಅಯ್ಯಾ ಕ್ಷಪಣಕರೇ, ನಿಮ್ಮ ಮಿತ್ರನಾದ ರಾಕ್ಷಸನಲ್ಲಿ ಹೀಗೆ ಪ್ರಣಯಕಲಹವಂ ಮಾಡುವುದಕ್ಕೆ ಆತನಿಂದ ನಡೆದ ಅಪರಾಧವೇನು? ಎಂದೆನಲು;

ಅವನಿಂದೇನು ದೋಷ? ಆತನ ಸ್ವಭಾವವೇ ಹಾಗಿರುವುದು. ನಾನು ಮಾಡಿಕೊಂಡುದಕ್ಕೆ ಲಜ್ಜಿಪಡುತ್ತ ಹೀಗೆ ನಿರ್ಭಾಗ್ಯನಾದೆನು. ಅದು ಹೇಳತಕ್ಕ ಪ್ರಸ್ತಾಪವಲ್ಲವೆಂದು ಕ್ಷಪಣಕನು ನುಡಿದನು.

ಅಯ್ಯಾ ಜೀವಸಿದ್ಧಿಗಳೇ, ಅದು ಅಂಥ ರಹಸ್ಯವೇನಾಗಿದ್ದೀತು? ಎಂದು ಭಾಗುರಾಯಣನು ನುಡಿದನು.

ಅಂಥ ರಹಸ್ಯವಲ್ಲದಿದ್ದರೂ ಮಹಾಘಾತುಕವ್ಯಾಪಾರವಾದುದರಿಂದ ಲಜ್ಜೆ ಪಡಬೇಕಾಯಿತು ಎಂದನು. ಬಳಿಕ ಭಾಗುರಾಯಣನು—

ಕ್ಷಪಣಕರೇ, ಹೇಳಕೂಡದ ಗೂಢಾಂಶವಾದರೆ ಉಂಡಿಗೆಯಂ ಕೇಳಕೆಲಸವಿಲ್ಲ ಎನಲು; ಕ್ಷಪಣಕನು—

ಅಯ್ಯಾ ಭಾಗುರಾಯಣನೇ, ಅಷ್ಟು ಕೌತೂಹಲವಿದ್ದರೆ ಹೇಳುವೆನು ಕೇಳು. ಮೊದಲು ಪಾಟಲೀಪುರದಲ್ಲಿ ನಾನು ರಾಕ್ಷಸನಿಗೆ ಮಿತ್ರನಾಗಿರುತ್ತಿರಲು; ಒಂದಾನೊಂದು ಸಮಯದಲ್ಲಿ ಆ ಅಮಾತ್ಯನು ನಂದರ ಮೇಲೆ ದಂಡೆತ್ತಿಕೊಂಡು ಬಂದು ಅವರಂ ಸಂಹಾರಗೆಯ್ಸಿದನೆಂಬ ವೈರವನ್ನೆಣಿಸಿ ವಿಷಕನ್ಯೆಯಂ

ರಹಸ್ಯವಾಗಿ ನನ್ನ ಮುಖದಿಂ ಕಳುಹಿಸಿ ಪರ್ವತರಾಜನಂ ನಿರ್ಯಾಣಂಗೆಯ್ಸಿದುದಕ್ಕೆ ಕೆಲವು ದಿವಸಗಳ ಮೇಲೆ ನನ್ನಂ ಆ ರಾಕ್ಷಸನ ಮಿತ್ರನೆಂದು ಚಾಣಕ್ಯನು ಕೇಳಿ ನನ್ನನ್ನು ಹಿಡಿದು ಅಪಮಾನಪೂರ್ವಕವಾಗಿ ಸಾರಿಸಿ ಪಟ್ಟಣವಂ ಬಿಟ್ಟು ದಾಟಿಸಿದನು. ಆ ಬಳಿಕ ಮತ್ತೆಲ್ಲಿಯೂ ಅವಲಂಬನವು ದೊರಕದೆ ಇದ್ದುದರಿಂದ ನಾನು ರಾಕ್ಷಸನನ್ನೇ ಆಶ್ರಯಿಸಿ ಕಾಲಹರಣವಂ ಮಾಡುತ್ತಿರಲು ; ಇಲ್ಲಿಯೂ ಅದೇ ರಾಕ್ಷಸನು ಕೆಲವು ಜನ ಅರಸುಗಳೊಡನೆ ಆಲೋಚಿಸುತ್ತ ಚಂದ್ರಗುಪ್ತನಲ್ಲಿ ವಿಶ್ವಾಸಮಂ ಬಳಸುವವನಾಗಿ ಈಗಲೂ ಮಹಾಘಾತುಕವ್ಯಾಪಾರವಂ ಮಾಡಲೆಣಿಸಿ ಇರುವವನಾದಕಾರಣ ಆತನ ಸಹವಾಸದೋಷದಿಂದ ಮೊದಲಿನಂತೆ ಮತ್ತೂ ಅನಿಷ್ಟಸಂಭವಿಸಿದರೆ ನಾನು ಈ ಲೋಕದಲ್ಲಿಯೇ ಇರದಂತೆ ಆಗುವುದೆಂದು ತಿಳಿದು ದೇಶಾಂತರವಂ ಕುರಿತು ಹೋಗುವುದಕ್ಕೆ ಉಂಡಿಗೆಯಂ ಕೇಳಬಂದೆನು. ಈ ಯರ್ಥವಂ ಹೇಳುವುದಕ್ಕೆ ಲಜ್ಜೆಪಟ್ಟವನಾಗಿ ಅಶಕ್ತನಾಗಿದ್ದೆನು ಎನಲು : ಭಾಗುರಾಯಣನು—

ಹಾಗಾದರೆ ಪರ್ವತೇಶ್ವರನಿಗೆ ಅರ್ಧರಾಜ್ಯವಂ ಕೊಡಬೇಕಾಯಿತಲ್ಲಾ ಎಂಬ ಲೋಭಬುದ್ಧಿಯಂ ನೆನೆದು ಚಾಣಕ್ಯನು ವಿಷಕನ್ಯಾಮೂಲಕವಾಗಿ ಪರ್ವತಕಕ್ಷ್ಮಾಪಾಲನಂ ಸಂಹಾರಂಗೆಯ್ಸಿದವನೆಂಬ ವಾರ್ತೆಯು ಅನೃತವಾಯಿತಷ್ಟೆ? ಎನಲು ; ಆ ಮಾತಿಗೆ ಕ್ಷಪಣಕನು ಕಿವಿಗಳಂ ಮುಚ್ಚಿಕೊಂಡು—

ಬುದ್ಧೇಶಸಾಕ್ಷಿಯಾಗಿ ಚಾಣಕ್ಯನು ಇದೊಂದನ್ನೂ ಅರಿತವನಲ್ಲ. ಸುಮ್ಮನೇ ದೋಷವಂ ಕಲ್ಪಿಸಬಹುದೇ? ಎಂದನು. ಆ ಮಾತಿಗೆ ಭಾಗುರಾಯಣನು—

ಅಯ್ಯಾ ಕ್ಷಪಣಕನೇ, ಹಾಗಾದರೆ ಈ ಯರ್ಥವಂ ರಾಜಪುತ್ರನಾದ ಮಲಯಕೇತುವಿನ ಮುಂದೆ ಹೇಳಬಹುದಲ್ಲ? ಎನಲು ; ಕ್ಷಪಣಕನು—

ಅಯ್ಯಾ ಭಾಗುರಾಯಣನೇ, ಆ ವೇಳೆಯಲ್ಲಿ ರಾಕ್ಷಸನಿಗೆ ನಾನು ಮಿತ್ರನಾಗಿದ್ದು ಈ ಸಮಯದೊಳ್ ಶತ್ರುಭಾವವನ್ನಾಚರಿಸಬಹುದೇ? ಎಂದು ಹೇಳುತ್ತಿರಲು ; ಆ ವೃತ್ತಾಂತಮೆಲ್ಲಮಂ ಮರೆಯಾಗಿ ನಿಂತು ಕೇಳುತ್ತಿದ್ದ ಮಲಯಕೇತುವು ತಂದೆಯಂ ನೆನಸಿಕೊಂಡು ದುಃಖಿತನಾಗಿ ರಾಕ್ಷಸನಲ್ಲಿ ಅಸಹ್ಯವಾದ ಕೋಪವಂ ವಹಿಸಿ ಭಾಗುರಾಯಣನ ಅಭಿಮುಖಕ್ಕೈತಂದು—

ಅಯ್ಯಾ ಮಿತ್ರನೇ, ಯಥಾರ್ಥವಾದಿಯಾದ ಈ ಕ್ಷಪಣಕನು ನಿನ್ನ ಸಂಗಡ ಹೇಳಿದ ಕರ್ಣಕಠೋರವಾದ ವಾಕ್ಯವಂ ಕೇಳಿ ಮರೆತುಹೋಗಿದ್ದ ಪಿತೃಕ್ಲೇಶ

ಮುಳ್ಳವನಾದ ನನಗೆ ಈಗ ದ್ವಿಗುಣವ್ಯಥೆಯುಂಟಾಯಿತು ಎನಲು ; ಆಗ ಕ್ಷಪಣಕನು—ತಾನು ಯಾವ ಅರ್ಥಮಂ ಮಲಯಕೇತುವಿಗೆ ಹೇಳಬೇಕೆಂದು ನಿಶ್ಚಯಿಸಿ ಇದ್ದೆನೋ ಆ ಯರ್ಥವು ನೃಪಾತ್ಮಜಂಗೆ ತಿಳಿದಂತಾಯಿತು. ಇನ್ನು ನಾನು ಕೃತಾರ್ಥನಾದೆನು ಎಂದು ಯೋಚಿಸುತ್ತ ಭಯಪಟ್ಟವನಂತೆ ಮರೆಯಾಗುತ್ತಿರಲು ; ಆಗ ಮಲಯಕೇತು ಬಾಗುರಾಯಣನಂ ನೋಡಿ—

ಅಯ್ಯಾ ಪ್ರಿಯನೇ, ಅಮಾತ್ಯರಾಕ್ಷಸನು ನಮ್ಮ ತಂದೆಗೆ ಮಿತ್ರನಾದುದರಿಂದ ಅವನಿಗೆ ಸರ್ವಾಧಿಕಾರಮಂ ಕೊಟ್ಟು ನಂಬುಗೆಯಿಂದ ಇರುತ್ತಿದ್ದೆನು. ಈತನು ಹೀಗೆ ಗೂಢಶತ್ರುತ್ವವನ್ನಾಚರಿಸಿ ಬಂದು ನಮ್ಮೆಲ್ಲರಿಗೂ ಇಂಥ ವ್ಯಸನವನ್ನುಂಟುಮಾಡಿದನು. ಈತನು ನಮಗೆ ಪ್ರತ್ಯಕ್ಷರಾಕ್ಷಸನೇ ಸರಿ ಎಂದು ಕಂಬನಿಗಳಂ ತುಂಬುತ್ತ ಶೋಕಪಡುತ್ತಿರುವ ಮಲಯಕೇತುವಂ ನೋಡಿ ಬಾಗುರಾಯಣನು—ನಾನು ಇಲ್ಲಿಗೆ ಬರುವ ಅವಸರದಲ್ಲಿ ಯಜಮಾನರಾದ ಚಾಣಕ್ಯರು ನನಗೆ—ನೀನು ಮಲಯಕೇತುವಿನ ಬಳಿಯಲ್ಲಿ ಮಿತ್ರನಾಗಿದ್ದು ಕಾಲಾಂತರದೊಳ್ ರಾಕ್ಷಸನು ಆಶ್ರಯರಹಿತನಾಗಿ ಬಂದು ಪರ್ವತರಾಜಪುತ್ರನನ್ನನುಸರಿಸಿ ಚಂದ್ರಗುಪ್ತನ ಮೇಲೆ ಕಾರ್ಯಭಾಗಕ್ಕೆ ಯತ್ನಮಂ ಮಾಡಿದರೆ ಸಮಯಮಂ ನೋಡಿ ರಾಕ್ಷಸನಲ್ಲಿ ಮಲಯಕೇತುವಿಗೆ ವಿಶ್ವಾಸಮಂ ತಪ್ಪಿಸಿ ಕೋಪಮುಂಟಾಗುವಂತೆ ಮಾಡಿ ಜೀವಸಹಿತಮಾಗಿ ರಾಕ್ಷಸನಂ ಅಲ್ಲಿಂದ ಹೊರಡಿಸತಕ್ಕುದು ಎಂದು ಬರೆದು ಕಳುಹಿಸಿರುವುದರಿಂದ ಈಗ ನನ್ನ ಮತ್ತು ಕ್ಷಪಣಕನ ಸಂವಾದಮಂ ಹೊಂಚಿ ಕೇಳಿ ಮಲಯಕೇತುವಿಗೆ ಮಹಾಕೋಪಮುಂಟಾಗಿರುವುದರಿಂದ ರಾಕ್ಷಸನಿಗೆ ಮಹಾನರ್ಥವು ಸಂಭವಿಸುವಂತೆ ತೋರುತ್ತದೆ. ಇದಕ್ಕಿಂತಲೂ ಮಲಯಕೇತುವಿಗೆ ರಾಕ್ಷಸನಲ್ಲಿ ಅತ್ಯಾಗ್ರಹಮುಂಟಾಗುವ ನಿಮಿತ್ತವು ಬೇರೆ ಇರುವುದರಿಂದ ಪ್ರಕೃತದಲ್ಲಿ ಇವನಂ ಸಮಾಧಾನಂಗೊಳಿಸಿ ಅಮಾತ್ಯನ ಜೀವಕ್ಕೆ ಮೋಸಬಾರದಂತೆ ಮಾಡದೆ ಇದ್ದರೆ ಯಜಮಾನರಾದ ಚಾಣಕ್ಯರಿಗೆ ನನ್ನ ಮೇಲೆ ಮಹಾ ರೋಷಮುಂಟಾಗುವುದು ಎಂದು ನಿಶ್ಚಯಿಸಿ ಮಲಯಕೇತುವಂ ಕುರಿತು—

ಅಯ್ಯಾ ರಾಜಕುಮಾರನೇ, ಕಳೆದುಹೋದ ಮಾತಿಗೆ ಕಳವಳಗೊಂಡು ಫಲವೇನು ? ಈ ನನ್ನ ಬಿನ್ನಹಮಂ ಸಾವಧಾನದಿಂದ ಅವಧರಿಸುವವನಾಗು. ಅದೇನೆಂದೊಡೆ—ಲೋಕದಲ್ಲಿ ವಿಮರ್ಶೆಯಿಲ್ಲದೆ ಮಾಡುವ ಕೋಪವೂ ವ್ಯಸನವೂ ಅನರ್ಥಕಾರಣಮೆಂದು ನೀತಿಜ್ಞರು ಹೇಳುವರು. ಆದುದರಿಂದ ನೀತಿ

ಮಾರ್ಗವನ್ನನುಸರಿಸಿ ನಡೆಯುವ ಅರಸುಗಳಿಗೆ ಸಕಲ ಶ್ರೇಯಸ್ಸೂ ಉಂಟಾಗುವುದು. ಮತ್ತು ರಾಜ್ಯಾಧಿಪತ್ಯಮಂ ಮಾಡುವವರಿಗೆ ಶತ್ರುಗಳೂ ಮಿತ್ರರೂ ಉದಾಸೀನರೂ ಎಂದು ಜನರು ಮೂರು ತರನಾಗಿಹರು. ಅರಸುಗಳಿಗೆ ಕಾರ್ಯವಶದಿಂದ ಒಂದುವೇಳೆ ಶತ್ರುಗಳು ಮಿತ್ರರಾಗುವುದುಂಟು. ಹಾಗೇ ಮಿತ್ರರು ಶತ್ರುಗಳಾದಾರು. ಅದೆಂತೆಂದರೆ—ಮೊದಲು ನಂದರು ಸಂಹೃತರಾದ ಸಮಯದಲ್ಲಿ ಅವರುಗಳ ತಂದೆಯಾದ ಸರ್ವಾರ್ಥಸಿದ್ಧಿರಾಜನಿಗೆ ಸ್ವೀಕೃತ ಪುತ್ರನನ್ನಾದರೂ ಉಂಟುಮಾಡಿ ಪುನಃ ನಂದವಂಶವು ಅಂಕುರಿಸುವಂತೆ ಮಾಡಲೆಣಿಸಿದ್ದ ರಾಕ್ಷಸನಿಗೆ ಆ ವೇಳೆಯಲ್ಲಿ ಪರ್ವತರಾಜನೂ ಚಂದ್ರಗುಪ್ತ ಚಾಣಕ್ಯರೂ ಶತ್ರುಗಳೇ ಆಗಿದ್ದರು. ಅದರಿಂದ ರಾಕ್ಷಸನು ವಿಪಕ್ಷಪ್ರತೀಕಾರವನ್ನಾಚರಿಸಿದ್ದಾನು. ಅದಂ ದೋಷವೆಂದೆಣಿಸಕೂಡದು. ಮತ್ತೆ ಕೆಲವು ದಿವಸಗಳ ಮೇಲೆ ವೃದ್ಧರಾಜನು ಕಾಲಾಧೀನನಾಗಿ ರಾಕ್ಷಸನು ಯೋಚಿಸಿದ್ದ ಅರ್ಥವು ನಿಷ್ಫಲವಾಗಲು ; ನಂದವೈರಿಯಾದ ಚಂದ್ರಗುಪ್ತನನ್ನು ಸಂಹರಿಸಲೆಣಿಸಿ ಅದಕ್ಕೆ ಅವಲಂಬನ ದೊರಕದೆ ಇದ್ದುದರಿಂದ ನಿನ್ನನ್ನಾಶ್ರಯಿಸಿ ನಿನ್ನ ಮುಖದಿಂದ ಚಂದ್ರಗುಪ್ತನಂ ಕೊಲ್ಲಿಸಿ ನಂದರಾಜ್ಯಮಂ ನಿನಗೆ ಉಂಟುಮಾಡುವೆನೆಂದು ಉದ್ಯುಕ್ತನಾಗಿದ್ದರೆ ರಾಕ್ಷಸನಲ್ಲಿ ದೋಷಮಂ ಹೇಳಕೂಡದು. ರಾಜನೀತಿಯಂ ನೀನು ತಿಳಿದಿರುವೆಯಷ್ಟೆ? ರಾಜ್ಯತಂತ್ರವು ಕಾರ್ಯಾನುಗುಣವಾಗಿ ಶತ್ರುಗಳಂ ಮಿತ್ರರನ್ನಾಗಿ ಮಾಡುವುದು. ಈಗ ಗೌಡದೇಶವು ಕೈವಶವಾಗುವ ಸಮಯದೊಳ್ ರಾಕ್ಷಸನಲ್ಲಿ ಅಸಹ್ಯತೆ ತೋರಿದರೂ ಗತವೃತ್ತಾಂತವೊಂದನ್ನೂ ಸ್ಮರಿಸದೆ ಉಪೇಕ್ಷೆಯಿಂದ ಇರುತ್ತ ನಂದರಾಜ್ಯವು ನಮ್ಮ ಕೈವಶವಾದ ಬಳಿಕ ಆವಶ್ಯಕವಾದರೆ ರಾಕ್ಷಸನಂ ಪುರಸ್ಕರಿಸಬಹುದು. ಇಲ್ಲದಿದ್ದರೆ ಪರಿತ್ಯಜಿಸಬಹುದು. ಹೀಗೆ ವಿಮರ್ಶಾಪೂರ್ವಕವಾಗಿ ಕಾರ್ಯವನ್ನಾಚರಿಸುವ ಅರಸಿಗೆ ಆಪತ್ತುಗಳೆಲ್ಲವೂ ಸಂಪತ್ತುಗಳೇ ಆಗುವುವೆಂದು ನೀತಿವಾಕ್ಯಗಳಂ ಹೇಳಿ ಆತನ ಕೋಪಮಂ ಸಮಾಧಾನಂಗೊಳಿಸಲು ;

ಅಯ್ಯಾ ಮಿತ್ರನೇ, ವಿಚಾರಮಿಲ್ಲದೆ ರಾಕ್ಷಸನಲ್ಲಿ ಒದಗಿದ ಕ್ರೋಧಮಂ ಸಮಾಧಾನಂಗೊಳಿಸಿ ಅಪಯಶಸ್ಸು ಬಾರದಂತೆ ಮಾಡಿ ಮುಂದೆ ಯೋಚಿಸಿರುವ ಕಾರ್ಯಕ್ಕೆ ಅನುಗುಣವಾದ ನೀತಿಯಂ ತಿಳುಹಿಸಿ ಪ್ರಮಾದಮಂ ದಾಟಿಸಿದವನಾದೆ ಎಂದು ಮಲಯಕೇತುವು ಬಾಗುರಾಯಣನಿಗೆ ಹೇಳಿ ತನ್ನ ಅಂತಃಪುರಕ್ಕೆ ಹೋಗುತ್ತಿದ್ದನು.

ಹೀಗಿರುತ್ತಿರಲು ಆ ಮೂರನೆಯ ದಿವಸ ರಾತ್ರಿವೇಳೆಯಲ್ಲಿ ಮೊದಲು ಕ್ಷಪಣಕನಂ ಕಂಡು ಮಾತನಾಡಿ ಹೋದ ಸಿದ್ಧಾರ್ಥಕನು ಬೇಕಾಗಿಯೇ ಅಲ್ಲಿನ ಉಕ್ಕಡದ ಸಮೀಪಕ್ಕೈದಿ ನಿಂತು ಭೀತನಾದವನಂತೆ ಹಿಂದಕ್ಕೆ ಹೋಗುತ್ತ ಪುನಃ ಉಕ್ಕಡದ ಸಮೀಪಕ್ಕೆ ಬರುತ್ತ ನಾಲ್ಕುಕಡೆಯನ್ನೂ ಬೆದರಿ ನೋಡುತ್ತ ಉಕ್ಕಡಮಂ ಮೀರಿ ಹೋಗುವವನಂತೆ ಯತ್ನಮಂ ಮಾಡುತ್ತಿರಲು ; ಅಲ್ಲಿದ್ದ ಕಾವಲುಗಾರರು ಅವನಂ ನೋಡಿ—ಇವನಾರೋ ! ಈ ವೇಳೆಯಲ್ಲಿ ಕದ್ದು ಬಂದವನಂತೆ ತೋರುತ್ತಿದೆ. ದಟ್ಟಿಯಲ್ಲಿ ಲಕ್ಕೋಟು ಕಾಗದಮಂ ಕಟ್ಟಿಕೊಂಡಿದ್ದಾನೆ ಎಂದು ಮಾತನಾಡಿಕೊಳ್ಳುತ್ತ ಆ ಸಿದ್ಧಾರ್ಥಕನಂ ಹಿಡಿದು—

ಎಲೈ, ಎಲ್ಲಿಗೆ ಹೋಗುವೆ? ಉಂಡಿಗೆಯಂ ತೋರಿಸು ಎನಲು ; ಸಿದ್ಧಾರ್ಥಕನು—

ಉಂಡಿಗೆ ಅಂದರೇನು ? ನನ್ನ ಬಳಿಯಲ್ಲಿ ಇಲ್ಲ. ದಮ್ಮಯ್ಯಾ ! ಹೇಗಾದರೂ ನನ್ನಂ ಬಿಟ್ಟು ಬಿಡಿರಿ ಎಂದನು. ಕಾವಲವರು—

ಈ ರಾತ್ರಿವೇಳೆಯಲ್ಲಿ ನಿನಗೆ ಅಂಥ ಕಾರ್ಯವಾವುದು ? ಎನಲು :

ಸಿದ್ಧಾರ್ಥಕನು—ಕಾರ್ಯಮುಂಟು. ಪುನಃ ಬರುತ್ತಿದ್ದೇನೆ. ಬಿಟ್ಟುಕೊಡಿ ದಮ್ಮಯ್ಯಾ ! ಎನಲು ; ಕಾವಲವರು ವಂಚಕನಾದ ಇವನಂ ಕಾಗದ ಸಮೇತವಾಗಿ ಕರೆದುಕೊಂಡು ಹೋಗಿ ಬಾಗುರಾಯಣನ ವಶಕ್ಕೆ ಒಪ್ಪಿಸಿದರೆ ಯಾವುದಿದ್ದರೂ ಆತನೇ ವಿಚಾರಿಸಿಕೊಳ್ಳುವನು ಎಂದು ಹೇಳಿಕೊಳ್ಳುತ್ತ ಆ ಸಿದ್ಧಾರ್ಥಕನಂ ಹಿಡಿದು ತಂದು ರಾಜದ್ವಾರದ ಬಳಿಯಲ್ಲಿ ನಿಲ್ಲಿಸಿ ದ್ವಾರಪಾಲಕರಿಗೆ ತಿಳುಹಿಸಲು ; ಅವರು ಹೋಗಿ ಬಾಗುರಾಯಣನೊಡನೆ ಸಲ್ಲಾಪಮಂ ಮಾಡುತ್ತಿರುವ ಮಲಯಕೇತುವಿಗೆ ಕೈಮುಗಿದು—

ಬುದ್ಧೀ, ಈ ರಾತ್ರಿವೇಳೆಯಲ್ಲಿ ಉಂಡಿಗೆ ಇಲ್ಲದಿರುವ ಒಬ್ಬ ಮನುಷ್ಯನು ಸಿಕ್ಕಿದನಂತೆ. ಅವನ ಬಳಿಯಲ್ಲಿ ಲಕ್ಕೋಟಿನ ಕಾಗದವಿರುವುದಂತೆ. ಅವನಂ ಕಾವಲವರು ಹಿಡಿತಂದು ಬಾಗಿಲಲ್ಲಿ ನಿಲ್ಲಿಸಿದ್ದಾರೆ. ಅಪ್ಪಣೆ ಏನು ? ಎನಲು ;

ಆ ಕಾಗದಮಂ ತರುವವರಾಗಿರಿ ಎಂದು ಮಲಯಕೇತುವು ಹೇಳಲು ; ಆ ಬಾಗುರಾಯಣನು ಗವಾಕ್ಷದಿಂದ ಸಿದ್ಧಾರ್ಥಕನಂ ನೋಡಿ—ಇವನು ಬೇಕಾಗಿಯೇ ಉಕ್ಕಡದಲ್ಲಿ ಸಿಕ್ಕಿದವನಾದುದರಿಂದ ರಾಕ್ಷಸನ ಉಚ್ಚಾಟನೆಗೆ ಸಮಯಂ ಸನ್ನಿಹಿತವಾಯಿತೆಂದು ಆಲೋಚಿಸುತ್ತ ಅಲ್ಲಿನ ದೂತನಂ ನಿರೀಕ್ಷಿಸಿ—

ಎಲೈ, ಉಕ್ಕಡದಲ್ಲಿ ಸಿಕ್ಕಿದವನು ಇಲ್ಲಿಗೆ ನೂತನವಾಗಿ ಬಂದವನೋ? ಇಲ್ಲದಿದ್ದರೆ ಇಲ್ಲಿನ ಯಾವನೋ ಒಬ್ಬ ಅಧಿಕಾರಿಯ ಭೃತ್ಯನಾಗಿರುವನೋ? ಕೇಳು ಎನಲು; ಆ ಮಾತಿಗೆ—

ಬುದ್ಧೀ, ನಾನು ಅಮಾತ್ಯರಾಕ್ಷಸರ ಸೇವಕನು ಎಂದು ಸಿದ್ಧಾರ್ಥಕನೇ ಹೇಳಲು; ಬಾಗುರಾಯಣನು—

ಹಾಗಾದರೆ ಇಲ್ಲಿಗೆ ಬಂದು ಉಂಡಿಗೆಯನ್ನು ಯಾಕೆ ಕೇಳಲಿಲ್ಲ? ಎನಲು; ಸಿದ್ಧಾರ್ಥಕನು—

ಸ್ವಾಮಿಾ, ತ್ವರಿತಕಾರ್ಯವಿರುವುದರಿಂದ ಸಾವಕಾಶಮಿಲ್ಲದೆ ಹೋಗುತ್ತಿದ್ದೆನು ಎಂದನು. ಆ ಮೇಲೆ—

ಎಲೋ, ರಾಜಶಾಸನಮಂ ಮಿಾರಿ ಹೋಗುವುದಕ್ಕೆ ಅಂಥ ಕೆಲಸವೇನು? ಎಂದು ಬಾಗುರಾಯಣನು ಕೇಳಲು; ಆಗ ಮಲಯಕೇತುವು—

ಅಯ್ಯಾ ಮಿತ್ರನೇ, ಈ ಭೃತ್ಯನ ಬಳಿಯಲ್ಲಿ ಈ ಕಾಗದವು ಸಿಕ್ಕಿತಂತೆ. ನೋಡುವವನಾಗು ಎನಲು; ಅದಂ ನಿರೀಕ್ಷಿಸಿ ಬಾಗುರಾಯಣನು—

ಅಯ್ಯಾ ರಾಜಕುಮಾರನೇ, ಈ ಕಾಗದದ ಮೇಲೆ ರಾಕ್ಷಸನ ಮೋಹರವು ಇದೆ. ಮುದ್ರೆ ಒಡೆಯದ ಹಾಗೆ ಓದಿ ಕೊಡುವಂತೆ ಅಪ್ಪಣೆಯಾದರೆ ವಿಜ್ಞಾಪಿಸುವೆನೆಂದು ಹೇಳಿ ಆತನ ಆಜ್ಞೆಯಿಂದ ಪತ್ರಮಂ ಬಿಚ್ಚಿ—

ಶ್ರೀಮತು ಸ್ಥಳದಲ್ಲಿರುವ ಒಬ್ಬ ಶ್ರೇಷ್ಠರಿಗಾಗಿ ಸ್ಥಳಾಂತರದಲ್ಲಿರುವ ಒಬ್ಬ ಪುರುಷನು ವಿಜ್ಞಾಪಿಸುವ ಅರ್ಥವೇನಂದರೆ—ನಮಗೆ ಪ್ರತಿಪಕ್ಷನಾದ ಮನುಷ್ಯನಂ ನಿರಾಕರಿಸಿ ಆತಂ ಕೇಳುವಂತೆ ನನ್ನ ಗುಣಕಥನಮಂ ಮಾಡಿದುದು ಪರೋಕ್ಷವಾಗಿ ಶ್ರುತವಾದುದರಿಂದಲೂ ಆಭರಣಂಗಳ ಮೂರು ಪೆಟ್ಟಿಗೆಗಳು ತಲಪಿದುದರಿಂದಲೂ ಸಂತೋಷವಾಯಿತು. ಇಲ್ಲಿ ನಮಗೆ ಆಪ್ತರಾಗಿ ಸಮಯಮಂ ನಿರೀಕ್ಷಿಸುತ್ತ ನಮ್ಮ ಕಾರ್ಯಕ್ಕೆ ಉದ್ಯುಕ್ತರಾಗಿರುವ ಪುರುಷರಿಗೆ ಕೆಲಸ ಕೈಗೂಡಿದ ಬಳಿಕ ಆ ಜನಗಳಿಗೆ ನಡಸಿಕೊಡತಕ್ಕುದೇನಂದರೆ—ಕೆಲವರಿಗೆ ಶತ್ರುವಿನ ಬೊಕ್ಕಸದಲ್ಲಿ ಅಪೇಕ್ಷೆ ಇರುವುದು. ಮತ್ತೆ ಕೆಲವರು ಪರಿಪಂಥಿ ಸೇನೆಯನ್ನಪೇಕ್ಷಿಸುವರು. ಉಳಿದವರು ನಿಮ್ಮ ಹಗೆಯ ರಾಜ್ಯಮಂ ಬಯಸುವರು. ಇದು ಚಿತ್ತದಲ್ಲಿರಬೇಕು. ಈ ಕಾಗದದ ಸಂಗಡ ಕಳುಹಿಸಿರುವ ಈ ರಾಜಭೋಗ್ಯವಾಗಿರುವ ವಿಭೂಷಣಮಂ ನೋಡುವುದರಿಂದ ಇಲ್ಲಿ ನನಗೆ ಸರ್ವಸ್ವಾತಂತ್ರ್ಯಮುಂಟೆಂಬ ಅರ್ಥವು ಚಿತ್ತಕ್ಕೆ ವೇದ್ಯವಾಗುವುದು. ಕಡಮೇ

ಸಂಗತಿ ಏನಿದ್ದರೂ ಆಪ್ತನಾದ ಈ ಪುರುಷನ ಮುಖವಚನದಿಂದ ತಿಳಿಯಬರು ತ್ತಿದೆ ಎಂದು ಬರೆದಿರುವ ಒಕ್ಕಣೆಯಂ ಮಲಯಕೇತುವಿಗೆ ಓದಿ ತಿಳುಹಿಸಿ ಸಿದ್ಧಾರ್ಥಕನಂ ನೋಡಿ—

ಎಲೈ ಚಾರನೇ, ಈ ಕಾಗದವಂ ಯಾರು ಕೊಟ್ಟರು? ಎಂದು ಕೇಳಲು; ಆ ಮಾತಿಗೆ ಸಿದ್ಧಾರ್ಥಕನು—

ಸ್ವಾಮಿ, ಈ ಲೇಖನವಂ ಕೊಟ್ಟವರ ನೆಪ್ಪನ್ನು ನಾನರಿಯೆನು ಎಂದನು.

ಭಾಗುರಾಯಣನು—ಆದರೆ ನಿನ್ನಲ್ಲಿರುವ ಒಡವೆಯಂ ತೋರಿಸೆನಲು; ಸಿದ್ಧಾರ್ಥಕನು—

ಒಡವೆ ಅಂದರೇನು? ಎನಲು; ಆ ಮಾತಿಗೆ ಭಾಗುರಾಯಣನು ದೂತನ ಮುಖವಂ ನೋಡಿ—ಈ ಚಾರನು ವಂಚಕನಾಗಿ ತೋರುವುದರಿಂದ ಯಥಾರ್ಥ ವಂ ಹೇಳುವ ಪರ್ಯಂತವೂ ಇವನಂ ಕಶೆಗಳಿಂದ ಪ್ರಹರಿಸಿರಿ ಎನಲು; ಅವರು ಹಾಗೆ ಮಾಡುವಲ್ಲಿ ಸಿದ್ಧಾರ್ಥಕನು ಕಶಾಹತಿಗೆ ತಾಳದವನಂತೆ ನಡುಗುತ್ತ ಕಕ್ಷಗತವಾಗಿದ್ದ ಪೆಟ್ಟಿಗೆಯಂ ಕೆಡಹಲು; ಅದಂ ದೂತನು ತಂದು ಮಲಯಕೇ ತುವಿನ ಮುಂದೆ ಇರಿಸಿ—ಈ ಸಂಪುಟವೂ ಸಹ ಈ ಚಾರನಲ್ಲಿಯೇ ಇದ್ದಿತು ಎನಲು; ಅದಂ ನೋಡಿ ಭಾಗುರಾಯಣನು ಈ ಪೆಟ್ಟಿಗೆಗೂ ಕಾಗದಕ್ಕೂ ಸಹ ಮಾಡಿರುವ ಮುದ್ರೆ ಒಂದೇ ಆಗಿದೆ ಎಂದು ಮಲಯಕೇತುವಿಗೆ ತಿಳಿಹಿಸಲು; ಆತನು ಮೋಹರು ಒಡೆಯದಂತೆ ಆಭರಣವಂ ತೆಗೆದು ತೋರಿಸುವವನಾಗು ಎನಲು; ಭಾಗುರಾಯಣನು ಹಾಗೇ ಪೆಟ್ಟಿಗೆಯ ಮುಚ್ಚಳವಂ ತೆಗೆದು ಮಂಡ ನಂಗಳಂ ತೋರಿಸಲು; ಅದಂ ನಿರೀಕ್ಷಿಸಿ ರಾಕ್ಷಸನು ಮೊದಲು ನಮ್ಮ ಬಳಿಗೆ ಬಂದ ಸಮಯದಲ್ಲಿ ಆತನು ಅಲಂಕರಿಸಿಕೊಳ್ಳುವುದಕ್ಕಾಗಿ ನಾವು ಕೊಟ್ಟ ನೈಪ ಥ್ಯಗಳಿವು. ಇವು ನಮ್ಮಿಂದ ಧರಿಸಲ್ಪಟ್ಟವುಗಳಾದುದರಿಂದ ರಾಜಯೋಗ್ಯವೆಂದು ರಾಕ್ಷಸನು ಚಂದ್ರಗುಪ್ತನಲ್ಲಿ ಅಧಿಕಾರವಂ ಬಯಸಿ ಚಾಣಕ್ಯನಿಲ್ಲದ ಸಮಯ ದಲ್ಲಿ ಈ ಕಾಗದದ ಸಂಗಡ ಈ ವಿಭೂಷಣಂಗಳಂ ಕಳುಹಿಸಿದ್ದಾನು. ಈಗ ಅಮಾತ್ಯನ ಹೃದಯವು ತಿಳಿಯಬಂದಿತು ಎಂದು ಮಲಯಕೇತು ಹೇಳಿದನು. ಆ ಮಾತಿಗೆ ಭಾಗುರಾಯಣನು—

ಅಯ್ಯಾ ರಾಜಕುಮಾರನೇ, ಈ ಯರ್ಥವು ಮತ್ತೂ ನಿನಗೆ ದೃಢವಾಗುವಂತೆ ಮಾಡುವೆನು ಎಂದು ಹೇಳಿ ಸೇವಕನ ಮುಖವಂ ನೋಡಿ ಉಂಟಾದರ್ಥವಂ ಹೇಳದೆ ಇರುವ ಈ ತುಂಟನಾದ ಚಾರನಂ ಗಟ್ಟಾದ ಕಶೆಯಿಂದ ಪ್ರಹರಿಸೆಂದು

ದೂತನಿಗೆ ನೇಮಿಸಲು ; ಆ ಪ್ರಹಾರಕ್ಕೆ ಸಿದ್ಧಾರ್ಥಕನು ನೆಲಕ್ಕೆ ಬಿದ್ದು ಭೀತ ನಂತೆ ಕೈಮುಗಿಯುತ್ತ—

ಸ್ವಾಮಿ, ನನಗೆ ಅಭಯಮಂ ಕೊಟ್ಟರೆ ಉಂಟಾದರ್ಥಮಂ ಯಥಾರ್ಥ ವಾಗಿ ವಿಜ್ಞಾಪಿಸುವೆನೆನಲು ; ಬಾಗುರಾಯಣನು—

ಎಲೋ, ಭೃತ್ಯನಾದವನು ಯಥಾರ್ಥಮಂ ಹೇಳಿದರೆ ಅಭಯಮಲ್ಲದೆ ಭಯವೇಸಿರುವುದು ? ಅರಿಕೆ ಮಾಡಿಕೋ ಎನಲು ; ಸಿದ್ಧಾರ್ಥಕನು ಎದ್ದು ಕೈ ಮುಗಿದು ನಡುಗುತ್ತ—

ಸ್ವಾಮಿ, ಅಮಾತ್ಯರಾಕ್ಷಸರು ಈ ಪೆಟ್ಟಿಗೆಯನ್ನೂ ಕಾಗದವನ್ನೂ ಪಾಟಲೀಪುರಾಧಿಪರಾದ ಚಂದ್ರಗುಪ್ತ ಮಹಾರಾಜರಿಗೆ ಒಪ್ಪಿಸಿ ಬಾರೆಂದು ನನ್ನಂ ಕಳುಹಿಸಿದರು. ನಾನವರ ದೂತನೆನಲು ;

ಎಲೈ ಬಂಟನೇ, ಈ ಯರ್ಥವು ವಿದಿತವಾಗಿಯೇ ಇರುವುದು. ಅಮಾತ್ಯರು ಚಂದ್ರಗುಪ್ತನಿಗೆ ಯಾವ ಬಾಯಿಮಾತುಗಳಂ ಹೇಳೆಂದು ಕಳುಹಿಸಿದರು ? ಅದಂ ಯಥಾರ್ಥವಾಗಿ ಉಸಿರೆಂದು ಬಾಗುರಾಯಣನು ಬೆಸಗೊಳ್ಳಲು ; ಸಿದ್ಧಾರ್ಥಕನು—

ಸ್ವಾಮಿ, ಅಮಾತ್ಯರಾಕ್ಷಸರು ಚಂದ್ರಗುಪ್ತಮಹಾರಾಜರಿಗೆ ತಿಳುಹಿಸೆಂದು ಅಪ್ಪಣೆ ಕೊಟ್ಟ ಮಾತುಗಳು ಯಾವುವೆಂದರೆ—ಇಲ್ಲಿ ತಮಗೆ ಆಪ್ತರಾದ ಐದು ಮಂದಿ ಅರಸುಗಳುಂಟು. ಅವರು ನಿಮ್ಮ ಕಾರ್ಯದಲ್ಲಿ ಅತಿ ಜಾಗರೂಕರಾಗಿ ಸಮಯಮಂ ಪ್ರತೀಕ್ಷಿಸುತ್ತ ಇಲ್ಲಿಗೂ ಆಪ್ತರಂತೆ ಇರುವುದರಿಂದ ಸ್ವಲ್ಪದಿವಸಗಳಲ್ಲಿಯೇ ನಿಮ್ಮ ಕಾರ್ಯಂ ಕೈಸೇರುವುದು. ಆ ಬಳಿಕ ಅವರ ಮನೋರಥಮಂ ನಡೆಸಿಕೊಡಬೇಕೆಂದು ನುಡಿದು ಅವರುಗಳಂ ಸೂಚಿಸೆಂದು ನನಗೆ ಅಪ್ಪಣೆಯಂ ಕೊಟ್ಟರು ಎಂಬುದಾಗಿ ಹೇಳಲು ; ಅದಂ ಕೇಳಿ ಬಾಗುರಾಯಣನು—

ಆ ಅರಸುಗಳ ಹೆಸರೇನು ? ಎಂದು ಕೇಳಲು ; ಸಿದ್ಧಾರ್ಥಕನು—

ಸ್ವಾಮಿ, ಕುಲೂತಪತಿಯಾದ ಚಿತ್ರವರ್ಮನೊಬ್ಬನಂತೆ. ಮಲಯದೇಶಾಧೀಶ್ವರನಾದ ಸಿಂಹನಾದನೊಬ್ಬನಂತೆ. ಕಾಶ್ಮೀರ ವಲ್ಲಭನಾದ ಪುಷ್ಕರಾಕ್ಷನೊಬ್ಬನಂತೆ. ಸಿಂಧುಪಾಲನಾದ ಸಿಂಧುಷೇಣನೊಬ್ಬನಂತೆ. ಪಾರಶೀಕ ಭೂಧವನಾದ ಮೇಘನಾದನೊಬ್ಬನಂತೆ. ಈ ಐದು ಜನರ ಹೆಸರುಗಳಂ ಸೂಚಿಸುವ ಹಾಗೆ ಅಮಾತ್ಯರ ಅಪ್ಪಣೆಯಾಗಿದ್ದಿತು ಎಂದು ಹೇಳಲು ; ಅದಂ ಕೇಳಿ ಮಲಯಕೇತುವು

ಮನಸ್ಸಿನಲ್ಲಿ ವ್ಯಸನಂಗೊಂಡು—ಅಹಹ! ಚಿತ್ರವರ್ಮಾದಿಗಳೂ ಕೂಡ ನನಗೆ ದ್ರೋಹಮಂ ಮಾಡಲೆಣಿಸಿ ರಾಕ್ಷಸನಲ್ಲಿ ವಿಶ್ವಾಸಮಂ ಬಳಸಿದರ್ಥವು ತಿಳಿದ ಬಳಿಕ ಇನ್ನಾರಂ ಆಪ್ತರೆಂದು ಭಾವಿಸಬಹುದು? ಕಾಲಗತಿ ಯೆಂತಿರುವುದೋ! ಹರ ಹರ! ಇವರು ಎಷ್ಟು ದಿವಸಗಳಿಂ ಈ ಮತ್ಸರಮಂ ಮನಸ್ಸಿನಲ್ಲಿ ಅಡಗಿಸಿ ಕೊಂಡಿದ್ದರೋ! ಈ ದುಷ್ಟಸಾಮಂತರಂ ನಮ್ಮ ತಂದೆಯು ಸಲಹಿದುದು ಸರ್ಪಕ್ಕೆ ಕ್ಷೀರವನ್ನೆರೆದು ಸಲಹಿದಂತಾಯಿತು ಎಂದು ಹೇಳಿ ತನ್ನ ಬಳಿಯಣ ಕಂಚುಕಿಯಾದ ಹಂಸಕನಂ ನೋಡಿ—

ಎಲೈ ಹಂಸಕನೇ, ನೀನು ಹೋಗಿ ಅಮಾತ್ಯರಾಕ್ಷಸರು ಯಾವ ಕಾರ್ಯಮಂ ನೋಡುವರು? ತಿಳಿದು ಬಂದು ಹೇಳುವವನಾಗು ಎಂದು ಆಜ್ಞಾಪಿಸಲು; ಅಪ್ಪಣೆಯ ಮೇರೆಗೆ ಕಂಚುಕಿ ಹೋಗಿ ಆತನ ಸಮಯಮಂ ನೋಡುತ್ತಿರಲು ಆಗ ರಾಕ್ಷಸನು ತನ್ನ ಬಳಿಯಣ ದೂತನಂ ಕುರಿತು—

ಎಲೈ ಪಿಂಗಲನೇ, ಗೌಡದೇಶದಲ್ಲಿ ರಾಜಕಾರ್ಯಕ್ಕೋಸುಗ ಸೇನೆಗಳು ಅಲ್ಲಿಗೆ ಹೊರಟು ಸಿದ್ಧವಾಗಲಿ. ರಾಜಪುತ್ರನಾದ ಮಲಯಕೇತುವಿನ ಸುತ್ತಲೂ ಸ್ವಸೈನ್ಯವ್ಯೂಹರಚನೆಯಂ ಮಾಡಿಕೊಂಡು ಕುಲೂತಪತಿ ಚಿತ್ರವರ್ಮನೂ ಮಲಯಪತಿ ಸಿಂಹನಾದನೂ ಕಾಶ್ಮೀರಪತಿ ಪುಷ್ಕರಾಕ್ಷನೂ ಸಿಂಧುಪತಿ ಸಿಂಧುಷೇಣನೂ ಪಾರಶೀಕಪತಿ ಮೇಘನಾದನೂ ಈ ಐದು ಮಂದಿ ಅರಸುಗಳೂ ನಮ್ಮ ಅಪ್ಪಣೆಯ ಮೇರೆಗೆ ಜಾಗರೂಕರಾಗಿ ತೆರಳುತ್ತಿರಲಿ. ನಾವು ಹಿಂದೆ ಬರುವೆವು. ನಮ್ಮ ಸಂಗಡ ಮಗಧ ಗಾಂಧಾರ ಶಕನರಪತಿಗಳು ವ್ಯೂಹಮಂ ರಚಿಸಿಕೊಂಡು ಬರಲಿ. ಚೀಣ ಹೂಣಾಧಿಪತಿಗಳು ನಮ್ಮ ಹಿಂದುಗಡೆಯಲ್ಲಿ ಬರುತ್ತಿರಲಿ. ಶೇಖರನೆಂಬ ಸೇನಾಪತಿಯು ಪಾರ್ವತೇಯವಾಹಿನೀ ಸಮೇತನಾಗಿ ಈ ಪುರದೇಶಂಗಳಂ ರಕ್ಷಿಸಿಕೊಂಡು ಇಲ್ಲಿಯೇ ಇರುವವನಾಗಲೆಂದು ನಾವು ಹೇಳಿದೆವೆಂಬುದಾಗಿ ಆ ದಳಪತಿಗಳೆಲ್ಲರಿಗೂ ಉಸುರಿ ಬಾರೆಂದು ನುಡಿಯುತ್ತಿರಲು; ಈ ಯರ್ಥಮಂ ಕಂಚುಕಿ ತಿಳಿದು ಬಂದು ಮಲಯಕೇತುವಿಗೆ ಅರಿಕೆಮಾಡಲು; ಅದಂ ಕೇಳಿ ಬಾಗುರಾಯಣನಂ ಕುರಿತು—

ಎಲೈ ಮಿತ್ರನೇ, ರಾಕ್ಷಸನು ಫೌಜಿಗೆ ಆಜ್ಞಾಪಿಸಿದರ್ಥಮಂ ತಿಳಿದೆಯಷ್ಟೆ? ನಮ್ಮ ವಂಶಪರಂಪರೆಗೆ ಆಪ್ತವಾದ ಪಾರ್ವತೇಯಪತಾಕಿನಿಯೊಡಗೂಡಿ ಶೇಖರನು ಈ ಪುರದಲ್ಲಿಯೇ ಇರಬೇಕಂತೆ. ನಮಗೆ ದ್ರೋಹಿಗಳಾದ ಚಿತ್ರವರ್ಮಾದಿಗಳು ವ್ಯೂಹಮಂ ರಚಿಸಿಕೊಂಡು ಆತನು ಹೇಳಿದ ಮೇರೆಗೆ ಜಾಗರೂಕ

ರಾಗಿ ನಮ್ಮಂ ಬಳಿಸಿಕೊಂಡು ತೆರಳಬೇಕಂತೆ. ತಾನು ಕೆಲವು ದೇಶಾಧಿಪತಿ ಗಳೊಡನೆ ಹಿಂದೆ ಬರುವನಂತೆ. ಹೀಗೆ ರಾಕ್ಷಸನು ಧ್ವಜನಿಗೆ ಅಜ್ಞಾಪಿಸಿದ ಭಾವಮಂ ನೋಡಿದರೆ ಈಗ ಉಕ್ಕಡದಲ್ಲಿ ಸಿಕ್ಕಿದ ಆತನ ಚಾರನು ಹೇಳಿದ ಮಾತು ಈಗಲೇ ನಿದರ್ಶನಕ್ಕೆ ಬಂದಂತಾಯಿತು ಎಂದು ಉಸುರಿ ಮುಖಮಂ ಗಂಟಿಕ್ಕಿ ರಾಕ್ಷಸನ ಮೇಲೆ ಕೋಪಭಾವದಿಂದ ಆತನಂ ಕರೆಯಕಳುಹಿಸೆಂದು ಮಲಯಕೇತುವು ಹೇಳುತ್ತಿರಲು; ಅದೇ ಮೇರೆಗೆ ಭಾಗುರಾಯಣನು ಒಬ್ಬ ಕಂಚುಕಿಯಂ ಕರೆದು—

ಎಲೈ ದಾತ್ಯೂಹಕನೇ, ಅಮಾತ್ಯರಾಕ್ಷಸರಂ ಇಲ್ಲಿಗೆ ಕರೆತರುವಂತೆ ದೊರೆಗಳ ಅಪ್ಪಣೆಯಾಗಿದೆ. ಅವರಂ ಒಡಗೊಂಡು ಬರುವವನಾಗು ಎಂದು ನೇಮಿಸಲು; ಅವನು ಬುದ್ಧೀ ಎಂದು ಹೋಗುತ್ತ ತನ್ನ ಮನಸ್ಸಿನಲ್ಲಿ—ಏನು ನಿಮಿತ್ತದಿಂದಲೋ ರಾಜಪುತ್ರನು ಮುಖಮಂ ಗಂಟಿಕ್ಕಿ ಆತನಂ ಕರೆಯಕಳು ಹಿಸೆಂದು ಭಾಗುರಾಯಣನಿಗೆ ನೇಮಿಸಿದನೇ ಹೊರತು ಎಂದಿನಂತೆ ಮುಖಪ್ರಸಾ ದದಿಂದ ನನ್ನಂ ಕುರಿತು ಅಜ್ಞಾಪಿಸಲಿಲ್ಲ. ಅಮಾತ್ಯರಲ್ಲಿ ಕೋಪಮುಂಟಾಗಿರು ವಂತೆ ತೋರುತ್ತಿದೆ. ಈ ರಾಕ್ಷಸನಿಂದ ಏನೋ ಅಚಾತುರ್ಯ ನಡೆದಿರಬೇ ಕೆಂದು ಯೋಚಿಸುತ್ತ ಹೋಗಿ ಅಮಾತ್ಯನ ಸಮೀಪದಲ್ಲಿ ನಿಂತು ತಲೆಯಂ ಬಾಗಿಸದೆ ಸುಮ್ಮನೆ ಕೈಮುಗಿದು—

ಸ್ವಾಮೀ, ದೊರೆಗಳ ಅಪ್ಪಣೆಯಾಗಿದೆ. ಜಾಗ್ರತೆಯಾಗಿ ಹೊರಡಬಹುದು ಎನಲು ; ರಾಕ್ಷಸನು—ಈ ಕಂಚುಕಿಯು ಇದುವರೆಗೂ ದೂರದಲ್ಲಿ ನಿಂತು ವಿನ ಯದಿಂ ನೆಲಮುಟ್ಟಿ ಕೈಮುಗಿದು ನಿಂತಿರುವಲ್ಲಿ ಅದೇನೈ ? ಎಂದು ನಾವು ಕೇಳಿದ ಮೇಲೆ—ಬುದ್ಧೀ ಎಂದು ತಾನು ಬಂದ ಕಾರ್ಯಮಂ ವಿಜ್ಞಾಪಿಸುತ್ತಿದ್ದನು. ಈಗ ಸಮೀಪದಲ್ಲಿ ನಿಂತು ಜಾಗ್ರತೆಯಿಂದ ಹೊರಡಿ ಎಂಬುದಾಗಿ ನಮ್ಮಂ ತ್ವರೆ ಪಡಿಸುವುದರಿಂದ ಬಾಲಕನಾದ ಮಲಯಕೇತುವು ವಂಚಕರ ವಾಕ್ಯಕ್ಕೆ ವಿಹ್ವ ಲನಾಗಿ ಪರೋಕ್ಷದಲ್ಲಿ ಏನೋ ಬಿಡಿಮಾತುಗಳಂ ಆಡಿದ್ದಾನು. ಆದುದರಿಂದ ಈ ಕಂಚುಕಿಗೆ ನಮ್ಮಲ್ಲಿ ಲಘುತ್ವ ಯುಕ್ತವಾದ ಬುದ್ಧಿಯು ತೋರಿ ಹೀಗೆ ನಡೆದಿರು ವನು. ಪ್ರಭುವು ಯಾರಲ್ಲಿ ಗೌರವವನ್ನಿಡುತ್ತಾನೋ ಅವನಲ್ಲಿ ಜನರೆಲ್ಲ ವಿನಯ ದಿಂದ ನಡೆದುಕೊಳ್ಳುವರು. ಉಪೇಕ್ಷೆಯಂಗೆಯ್ದೊಡೆ ಅವನಲ್ಲಿ ಉದಾಸೀನರಾಗು ವರು. ಮತ್ತು ಲೋಕದಲ್ಲಿ ಬಾಲಕನು ಪ್ರಭುವಾದರೆ ಅವನ ಹೃದಯಮಂ ತಿಳಿದ ವಂಚಕರು ಸ್ವಕಾರ್ಯಪರರಾಗಿ ಗುಣಗಳಂ ದೋಷದಲ್ಲಿ ಪರ್ಯವಸಾನಂ

ಗೊಳಿಸಿ ದೋಷಂಗಳಂ ಗುಣವಾಗಿ ಕಲ್ಪಿಸಿ ನಷ್ಟದಲ್ಲಿ ಲಾಭಭ್ರಾಂತಿಯನ್ನುಂಟು ಮಾಡಿ ಲಾಭದಲ್ಲಿ ಉಪೇಕ್ಷೆಯಂ ಕಲ್ಪಿಸಿ ಇದರಿಂದ ಪ್ರಭುವಿಗೆ ಉಂಟಾಗುವ ಹಾನಿಯಂ ಗಣನೆಗೆ ತಾರದೆ ಅರಸಿಗೆ ಗುರುಹಿರಿಯರಲ್ಲಿ ವಿಶ್ವಾಸಮಂ ತಪ್ಪಿಸುವರು ಎಂದು ಆಲೋಚಿಸುತ್ತ ಬಂದಿದ್ದ ಕಂಚುಕಿಯಂ ನೋಡಿ—

ಎಲೈ ಸ್ವಲ್ಪ ನಿಲ್ಲುವವನಾಗು, ಬರುವೆವು ಎಂದು ರಾಕ್ಷಸನು ಶಕಟದಾಸನಂ ಕರೆದು—

ಅಯ್ಯಾ, ರಾಜಕುಮಾರಕನು ನಮ್ಮಂ ಕರೆಯ ಕಳುಹಿಸಿರುವನು. ಆತನು ನಮಗೆ ಕೊಟ್ಟ ಆಭರಣಂಗಳು ವೆಚ್ಚವಾದವಷ್ಟೆ? ರಾಜಾಸ್ಥಾನಕ್ಕೆ ಹೋಗುವಲ್ಲಿ ಭೂಷಣರಹಿತನಾಗಿ ಹೋಗುವುದು ಯುಕ್ತಮಲ್ಲವಾದುದರಿಂದ ನಮಗೆ ವರ್ತಕರ ಕಡೆಯಿಂದ ಕ್ರಯಲಬ್ಧವಾಗಿ ಬಂದ ಆಭರಣಂಗಳು ನಮ್ಮ ಬೊಕ್ಕಸದಲ್ಲಿ ಇರುವುವಷ್ಟೆ? ಅವುಗಳಂ ತರುವವನಾಗು ಎಂದು ನೇಮಿಸಲು ; ಅದೇ ರೀತಿಗೆ ಶಕಟದಾಸನು ಮೂರು ಸಂಪುಟದ ನೈಪಥ್ಯಂಗಳಂ ತಂದು ಇರಿಸಲು ; ಪರ್ವತರಾಜಂ ಧರಿಸುತ್ತಿದ್ದ ಆ ವಿಭೂಷಣಂಗಳಂ ಧರಿಸಿ ರಾಕ್ಷಸನು ಸ್ವಗೃಹದಿಂದ ಹೊರಟು ತನ್ನ ಮನಸ್ಸಿನೊಳ್—ಪ್ರಭುಸನ್ನಿಧಿಯಲ್ಲಿ ಪ್ರಮುಖನಾದ ಪುರುಷನು ತನಗೆ ಯಾವ ವೇಳೆಯಲ್ಲಿ ಏನು ಬರುವುದೋ ಎಂದು ಭಯಪಡುವವನಾಗಿದ್ದರೂ ಅವನು ಪ್ರಭುಕಟಾಕ್ಷದಿಂದ ಹೆಚ್ಚಿಬಂದರೆ ಅವನಂ ನೋಡಿ ಸಹಿಸಲಾರದ ಕ್ಷುದ್ರಜನರು ಅವನು ಮಾಡಿದ ಕಾರ್ಯನಿರ್ವಾಹಂಗಳಂ ಪರೋಕ್ಷದಲ್ಲಿ ದೋಷದೊಳಗೆ ಪರ್ಯವಸಾನಂಗೊಳಿಸಿ ಹೇಳುತ್ತ ಎದುರಿಗಿದ್ದರೆ ಸ್ತುತಿಸುತ್ತ ಸಮಯಮಂ ನಿರೀಕ್ಷಿಸಿ ಪ್ರಭುವಿಗೆ ಅವನಲ್ಲಿ ಮಹಾಸಂಶಯವನ್ನುಂಟುಮಾಡಿ ಪುನಃ ಅವನಂ ತಲೆ ಎತ್ತದಂತೆ ಮಾಡುವರು. ಆದುದರಿಂದ ವಿಮರ್ಶಕಾರಿಯಾದ ಪ್ರಭುವಿನ ಅವಲಂಬನಂ ದೊರಕುವುದು ದುರ್ಲಭವು ಎಂದು ಆಲೋಚಿಸುತ್ತ ಬರುತ್ತಿರಲು ; ಆಗ ಆಸ್ಥಾನದಲ್ಲಿರುವ ಬಾಗುರಾಯಣನು ತನ್ನ ಮನಸ್ಸಿನಲ್ಲಿ—ಈಗ ರಾಕ್ಷಸನಲ್ಲಿ ಉಂಟಾಗಿರುವ ದ್ರೋಹಮಂ ಮಲಯಕೇತುವು ಆತನ ಪ್ರತ್ಯಕ್ಷವಾಗಿ ವಿಚಾರಿಸುವಲ್ಲಿ ಈ ಸಿದ್ಧಾರ್ಥಕನು ಎದುರಿಗಿದ್ದರೆ ರಾಜಪುತ್ರನು ಪುನಃ ಈಗ ನಡೆದಿರುವುದಂ ಕೇಳುವನು. ಮೊದಲಿನಂತೆ ಇವನು ಈ ಕಪಟವಾಕ್ಯಮಂ ಹೇಳಲುಪಕ್ರಮಿಸಿದರೆ ಅಮಾತ್ಯನು ಇದೆಲ್ಲ ಚಾಣಕ್ಯನ ತಂತ್ರವೆಂದು ರಾಜಪುತ್ರನಿಗೆ ತಿಳುಹಿಸಿ ಪಾಟಲೀಪುರದಿಂದ ಬಂದವರೆಲ್ಲ ಹೀಗೆಯೇ ಚಾಣಕ್ಯನಿಂದ ಪ್ರೇರಿತರಾಗಿರುವರೆಂದು

ಊಹಿಸಿ ಈಗ ತನಗೆ ಬಂದ ದುರವಸ್ಥೆಯನ್ನು ಭದ್ರಭಟನೇ ಮೊದಲಾದ ನಮ್ಮೆಲ್ಲರಿಗೂ ತರುವನು. ಅದುಕಾರಣ ಈ ಸಿದ್ಧಾರ್ಥಕನಂ ಮರೆ ಮಾಡಬೇಕೆಂದು ಯೋಚಿಸಿ—

ಎಲೈ ರಾಜಕುಮಾರನೇ, ಈ ಚಾರನಂ ಈಗ ಮರೆಮಾಡಿದ್ದರೆ ಬಳ್ಳೆಯದಲ್ಲವೇ ? ಎಂದು ಹೇಳಿ ಆತನ ಅಪ್ಪಣೆಯ ಪ್ರಕಾರವಾಗಿಯೇ ಅವನನ್ನು ಹೊರಗೆ ಕಳುಹಿಸಿದನು. ಅಷ್ಟರಲ್ಲಿ ರಾಕ್ಷಸನು ಮಲಯಕೇತುವಿನ ಸಭೆಗೆ ಬಂದು ನೋಡಿ—ಯಾಕೋ ! ರಾಜಪುತ್ರನು ಬಹಳ ಚಿಂತಾಕ್ರಾಂತನಾಗಿರುವಂತೆ ತೋರುತ್ತದೆ. ಯಾರು ಏನಂ ಹೇಳಿರುವರೋ ಎಂದು ಸಮೀಪಕ್ಕೆ ಬಂದು—

ಅಯ್ಯಾ ನೃಪತನಯನೇ, ನಿನಗೆ ವಿಜಯವಾಗಲಿ ಎಂದು ಹರಸಲು ; ಅದಂ ಕೇಳಿ ಮಲಯಕೇತು ಎದ್ದು ನಿಂತು—

ಯಜಮಾನರಾದ ಅಮಾತ್ಯರೇ, ತಮ್ಮಡಿಗಳಿಗೆ ನಮಸ್ಕರಿಸಿದೆನೆಂದು ಹೇಳಿ ರಾಕ್ಷಸನಂ ತನ್ನ ಹಾಸಿಗೆಯಲ್ಲಿ ಕುಳ್ಳರಿಸಿಕೊಂಡು ನಿಮ್ಮಂ ನೋಡಲಿಚ್ಛೈಸಿ ಕರಿಸಿದೆನೆನಲು ; ರಾಕ್ಷಸನು—

ಅಯ್ಯಾ ಕುಮಾರಕನೇ, ಸೇನಾ ಪ್ರಯಾಣ ಸನ್ನಾಹಂಗೊಳಿಸುವ ತ್ವರಿತದಿಂದ ನಿನ್ನಂ ಕಾಣುವುದಕ್ಕೆ ಕೂಡಲಿಲ್ಲವೆನಲು ; ಮಲಯಕೇತುವು—

ಅಮಾತ್ಯರೇ, ತಾವು ಸೈನ್ಯಪ್ರಸ್ಥಾನಂಗೊಳಿಸಿದುದಂ ನಾನು ಕೇಳಲಪೇಕ್ಷಿಸುತ್ತೇನೆ ಎನಲು ; ರಾಕ್ಷಸನು ಪೂರ್ವದಲ್ಲಿ ಕಂಚುಕಿ ಹೇಳಿದ ಹಾಗೆಯೇ ಉಸಿರಲಾಗಿ ; ಮಲಯಕೇತುವು ಚಿತ್ರವರ್ಮಾದಿ ಐದು ಜನರಿಂದ ನನ್ನಂ ಚಂದ್ರಗುಪ್ತನಿಗೆ ಕೈಸೆರೆಯಾಗಿ ಒಪ್ಪಿಸುವನೆಂದು ತನ್ನ ಮನಸ್ಸಿನಲ್ಲಿ ನಿಶ್ಚಯಿಸಿ—

ಅಮಾತ್ಯರೇ, ಈಗ ಪಾಟಲೀಪುರಕ್ಕೆ ಯಾರಾದರೂ ಹೋಗತಕ್ಕವರುಂಟೋ ? ಎನಲು ; ರಾಕ್ಷಸನು—

ಅಯ್ಯಾ ರಾಜಕುಮಾರನೇ, ಈ ವೇಳೆಯಲ್ಲಿ ನಾವೇ ವಾಹಿನೀ ಸಮೇತರಾಗಿ ಹೋಗತಕ್ಕವರು ಎನಲು ; ಮಲಯಕೇತುವು—

ಹಾಗಾದರೆ ಈ ಕಾಗದವು ಯಾರದು ? ಈ ಮುದ್ರೆಯಾರದು ? ಇದರ ಅಭಿಪ್ರಾಯವೇನು ? ನೋಡಬಹುದೆಂದು ಅದಂ ಅವನಿಗೆ ಕೊಡಲು ; ರಾಕ್ಷಸನು ಅದಂ ಪಿಡಿಕೊಂಡು—

ಇದು ನಮ್ಮ ಶತ್ರುಗಳ ಕಪಟಲೇಶನವು. ಈ ಮುದ್ರೆಯೂ ಅಂಥದೇ ಎನಲು ; ಮಲಯಕೇತುವು—

ಹಾಗಾದರೆ ಈ ಭೂಷಣದ ಪೆಟ್ಟಿಗೆಯು ಯಾರದು ? ಎಂದು ಅದಂ ಮುಂದಿರಿಸಲು ; ಆಭರಣಂಗಳಂ ನೋಡಿ ರಾಕ್ಷಸನು ತನ್ನ ಮನಸ್ಸಿನಲ್ಲಿ—ಈ ಭೂಷಣಂಗಳಂ ಮಲಯಕೇತು ನಮಗೆ ಕೊಟ್ಟನು. ನಾವು ಸಿದ್ಧಾರ್ಥಕನಿಗಿತ್ತೆವು. ಇವು ಈ ಸ್ಥಳಕ್ಕೆ ಬರುವುದಕ್ಕೆ ನಿಮಿತ್ತವೇನು ? ಈ ಕಾಗದದ ಅಭಿಪ್ರಾಯಮಂ ನೋಡಿದರೆ ಚಂದ್ರಗುಪ್ತನು ನಮಗೆ ಮೊದಲು ವಿಭೂಷಣಂಗಳಂ ಕಳುಹಿಸಿದ ಹಾಗೂ ಅದಕ್ಕೆ ಪ್ರತಿಯಾಗಿ ಈ ಮಂಡನಮಂ ಕೊಟ್ಟು ಅವನಲ್ಲಿ ನಾವು ಅಧಿಕಾರಮಂ ಅಪೇಕ್ಷಿಸಿರುವ ಹಾಗೂ ಇಲ್ಲಿನ ಐದು ಮಂದಿ ಅರಸುಗಳೂ ನಾನೂ ಮಲಯಕೇತುವಂ ಹಿಡಿದು ಚಂದ್ರಗುಪ್ತನ ವಶಕ್ಕೆ ಒಪ್ಪಿಸಿ ಕೊಡುವ ಹಾಗೂ ಅರ್ಥವಾಗುವಂತೆ ಇದೆ. ಈ ಮೋಸವು ಚಾಣಕ್ಯನಿಂದಲ್ಲದೆ ಮತ್ತೊಬ್ಬರಿಂದ ನಡೆಯಲಾರದು. ಇದರಿಂದ ಇಲ್ಲಿನ ಐದು ಮಂದಿ ಅರಸುಗಳಿಗೂ ನನಗೂ ವಿಪತ್ತು ಸಂಭವಿಸುವುದು ನಿಜ ಎಂದು ಆಲೋಚಿಸುತ್ತ ಇರುವಲ್ಲಿ ಮಲಯಕೇತು—

ಅಮಾತ್ಯರೇ, ಭೂಷಣಮಂ ನೋಡಿ ಸುಮ್ಮನೇ ಆಗುವುದಕ್ಕೆ ನಿಮಿತ್ತವೇನು ? ಎನಲು ; ರಾಕ್ಷಸನು—

ಅಯ್ಯಾ ರಾಜಪುತ್ರನೇ, ಈ ಒಡವೆಗಳೂ ಸಹ ನಮ್ಮವಲ್ಲವೆನಲು :

ಮಲಯ—ಇವು ನಿಮ್ಮವಾದರೆ ಶತ್ರುಗಳ ಕಪಟವಲ್ಲವಷ್ಟೆ ? ಆದರೆ ಮೊದಲು ನಿಮಗೆ ಧರಿಸಿಕೊಳ್ಳುವುದಕ್ಕಾಗಿ ನಾನು ಕೊಟ್ಟ ಆಭರಣಂಗಳೆಲ್ಲಿರುವುವು ? ಅವುಗಳಂ ತರಿಸಬಹುದು ಎನಲು ; ರಾಕ್ಷಸನು—

ಅಯ್ಯಾ ರಾಜಪುತ್ರನೇ, ನೀನು ಕೊಟ್ಟ ಒಡವೆಗಳಂ ಒಂದು ಸಂತೋಷಕಾರ್ಯಾರ್ಥವಾಗಿ ಒಬ್ಬ ದೂತನಿಗೆ ಕೊಟ್ಟೆವು. ಆ ಮಂಡನಗಳೇ ಇವು. ಆದರೆ ಪರರಿಗೆ ಕೊಟ್ಟ ವಸ್ತುಗಳು ನಮ್ಮವಲ್ಲವಷ್ಟೆ ? ಎನಲು ; ಆ ಮಾತಿಗೆ ಬಾಗುರಾಯಣನು—

ಅಯ್ಯಾ ಅಮಾತ್ಯರೇ, ನೀವೇ ಧರಿಸಬೇಕೆಂದು ಅರಸುಮಗನು ಕೊಟ್ಟ ಅಮೂಲ್ಯವಾದ ತನ್ನ ಆಭರಣಂಗಳನ್ನು ಒಬ್ಬ ತುಚ್ಛ ಮನುಷ್ಯನು ಧರಿಸುವುದಕ್ಕೆ ಯೋಗ್ಯನೋ ? ಅವುಗಳಂ ಅವನಿಗೆ ಕೊಡಬಹುದೋ ? ಇದು ನಿಮ್ಮ ಮನಸ್ಸಿಗೆ ಸಮರ್ಪಕವಾಯಿತೋ ? ನಿಮ್ಮಂಥವರೇ ಹೀಗೆ ಲೋಕಸಮ್ಮತವ

ಲ್ಲದ ಮಾತನ್ನಾಡಿದ ಮೇಲೆ ಯಾವ ಅನರ್ಥ ತಾನೇ ಸಂಭವಿಸಲಾರದು ? ಎನಲು ರಾಕ್ಷಸನು—

ಅಯ್ಯಾ ಬಾಗುರಾಯಣನೇ, ಕಾರ್ಯಮಂ ನೋಡಿ ಕೊಟ್ಟಿದ್ದಾಯಿತಲ್ಲದೆ ಪಾತ್ರಮಂ ನೋಡಿ ಕೊಟ್ಟದಲ್ಲವೆಂದು ರಾಕ್ಷಸನು ಹೇಳಲು ; ಆ ಮಾತಿಗೆ ಮಲಯಕೇತುವು—

ಅಯ್ಯಾ ಮಿತ್ರನೇ, ಅಮಾತ್ಯರು ಅಂಥ ಮಹತ್ಕಾರ್ಯಾರ್ಥವಾಗಿಯೇ ಕೊಟ್ಟಿರಬಹುದು. ಅವರು ಹೇಳಿದುದು ಸಹಜವೇ ಸರಿ ಎಂದು ನುಡಿಯುತ್ತಲೇ ಬಾಗುರಾಯಣನು--

ಈ ಕಾಗದ ಮುದ್ರೆಯೂ ಈ ಪೆಟ್ಟಿಗೆಯ ಮುದ್ರೆಯೂ ನಿಮ್ಮವಲ್ಲವೋ ? ಈ ಕಾಗದದ ಅಕ್ಷರವು ನಿಮ್ಮ ಮನೆವಾರ್ತೆಯನ್ನು ವಿಚಾರಿಸುವ ರಾಯಸದವನಾದ ಶಕಟದಾಸನದಲ್ಲವೋ ? ಇನ್ನೊಮ್ಮೆ ಚೆನ್ನಾಗಿ ನೋಡಿರಿ ಎಂದು ಹೇಳಲು ; ರಾಕ್ಷಸನು ತನ್ನ ಮನಸ್ಸಿನಲ್ಲಿ—ನಮ್ಮ ಶಕಟದಾಸನು ಸರ್ವಾತ್ಮನಾ ಈ ಕಾಗದವನ್ನು ಬರೆಯಲಾರನೆಂದು ನಿಶ್ಚಯಿಸಿ ಮುದ್ರೆಯ ವಿಷಯವನ್ನು ಮೊದಲೇ ಹೇಳಿದ್ದೇವೆ. ಈ ಯಕ್ಷರ ಮಾತ್ರ ನಮ್ಮ ಶಕಟದಾಸನದಲ್ಲ ಎನಲು ; ಆಗ ಮಲಯಕೇತುವು ಒಬ್ಬ ದೂತನಂ ಕಳುಹಿಸಿ ಒಂದು ಕಾಗದದಲ್ಲಿ ಶಕಟದಾಸನ ಕೈಬರಹವಂ ಬರಸಿ ತರಿಸಿ—ಇವು ಎರಡೂ ಒಂದೆಯೋ ಅಲ್ಲವೋ ? ನೋಡಬಹುದೆಂದು ಅಮಾತ್ಯನ ಕೈಯಲ್ಲಿ ಕೊಡಲು ; ಅದಂ ನೋಡಿ ರಾಕ್ಷಸನು ತನ್ನ ಅಂತರಂಗದಲ್ಲಿ—ಈ ಎರಡು ಕಾಗದಗಳಲ್ಲಿರುವ ಅಕ್ಷರಗಳೂ ಒಂದೇ ಆಗಿವೆ. ಆ ಹಾ ! ಶಕಟದಾಸನೂ ಕೂಡ ಚಾಣಕ್ಯನಿಗೆ ಒಳಬಿದ್ದು ಈ ಪ್ರಕಾರ ಕಾಗದವನ್ನು ಬರೆದು ಮೋಹರವೂ ತನ್ನ ಕೈಯಲ್ಲೇ ಇತ್ತಾದುದರಿಂದ ತಾನೇ ಮುದ್ರೆಯಂ ಒತ್ತಿ ನಾನು ಕೊಟ್ಟ ತೊಡವುಗಳ ಸಂಗಡ ಸಿದ್ಧಾರ್ಥಕನ ಕೈಯಲ್ಲಿ ಕೊಟ್ಟು ಕಳುಹಿಸಿದ್ದಾನು. ಈ ತಂತ್ರವನ್ನೆಲ್ಲ ಚಾಣಕ್ಯ ಶಕಟದಾಸ ಸಿದ್ಧಾರ್ಥಕ ಇವರು ಕೂಡಿಯೇ ಆಲೋಚಿಸಿ ಮಾಡಿರಬೇಕು. ಅಥವಾ ಶಕಟದಾಸನು ಚಾಣಕ್ಯ ಸಿದ್ಧಾರ್ಥಕರ ವಂಚನೆಗೆ ಸಿಕ್ಕಿ ಕಾಗದವಂ ಬರದನೋ ! ಪ್ರಪಂಚ ಈಗ ನಮ್ಮ ಮಾತಿನಿಂದಲೇ ನಾವು ಸಿಕ್ಕಿಬಿದ್ದೆವು ಎಂದು ಸುಮ್ಮನೇ ಇರಲು ; ಮಲಯಕೇತುವು ಕೋಪದಿಂದ ಅಮಾತ್ಯರಾಕ್ಷಸನಂ ದುರುದುರನೆ ನೋಡುತ್ತಿರುವಲ್ಲಿ ಆತನು ಧರಿಸಿರುವ ಆಭರಣಂಗಳಂ ಕಂಡು ಈ ಭೂಷಣಂಗಳು ನನ್ನ ತಂದೆಯಾದ ಪರ್ವತರಾಜನಿಂ ಧರಿಸಲ್ಪಟ್ಟಿದ್ದುವುಗಳು ಎಂದು ನಿಶ್ಚಯಿಸಿ—

ಎಲೈ ಹಂಸಕನೇ, ಈ ಅಮಾತ್ಯರು ಧರಿಸಿರುವ ಭೂಷಣಮಂ ನೋಡಿ ಬಲ್ಲೆಯಾ? ಎನಲು;

ಬುದ್ಧೀ, ನಾನು ಇವುಗಳಂ ಚೆನ್ನಾಗಿ ಬಲ್ಲೆನು ಎಂದನು.

ಆಗ ಮಲಯಕೇತುವು—ಈಗ ನೀವು ಧರಿಸಿರುವ ನೈಪಥ್ಯವೆಲ್ಲಿಯದು? ಎಂದು ರಾಕ್ಷಸನಂ ಕೇಳಿದುದಕ್ಕೆ ಅವನು—

ಇದು ವರ್ತಕರಿಂದ ನಮಗೆ ಕ್ರಯಲಬ್ಧವಾಗಿ ಬಂದಿತು ಎನಲು; ರಾಜಪುತ್ರನು—

ಎಲೈ ಕಂಚುಕಿಯೇ, ಅಮಾತ್ಯರು ಹೇಳುವುದಂ ಕೇಳಿದೆಯಾ? ಎನಲಾಗಿ, ಅವನು—

ಬುದ್ಧೀ, ಈ ಒಡವೆಯು ನಮ್ಮ ಪರ್ವತರಾಜರು ವಿಜಯಾರ್ಥವಾಗಿ ಪಾಟಲೀಪುರಕ್ಕೆ ದಯಮಾಡುವಲ್ಲಿ ಧರಿಸಿಕೊಂಡು ಹೋದುದು ಎನಲು; ಮಲಯಕೇತುವು ಆ ಮಂಡನ ನಿರೀಕ್ಷಣದ ದೆಸೆಯಿಂದ ತನ್ನ ತಂದೆಯಂ ನೆನೆದು ದುಃಖಪಡುತ್ತ—

ಹಾ! ಕುಲಭೂಷಣನಾದ ನನ್ನ ತಂದೆಯೇ, ಈ ತೊಡವುಗಳಂ ಧರಿಸಿ ನಕ್ಷತ್ರಮಧ್ಯಗತನಾದ ಪೂರ್ಣಚಂದ್ರನಂತೆ ಲೋಕಾನಂದಕರನಾಗಿ ಈ ಜಗತ್ತನ್ನಾಳುತ್ತಿದ್ದೆಯಲ್ಲಾ! ಶತ್ರುಗಳ ಕಪಟಕ್ಕೆ ಬಳಗಾಗಿ ನಮ್ಮೆಲ್ಲರಂ ಅನಾಥರಂ ಮಾಡಿ ಎಲ್ಲಿ ಮರೆಯಾದೆ? ಆತತಾಯಿಗಳಂ ಮಿತ್ರರೆಂದು ಭಾವಿಸಿದುದಕ್ಕೆ ತದನುಗುಣ ಫಲಂ ನಿಮ್ಮಲ್ಲಿ ಮಾತ್ರವೇ ಪರ್ಯವಸಾನವಾಗಲಿಲ್ಲ. ಇಂಥ ಜನರು ಎಲ್ಲಿದ್ದರೂ ಆ ಆಶ್ರಯಸ್ಥಾನಕ್ಕೆ ಕ್ಷೇಮವಾಗುವುದುಂಟೇ? ನಾನು ಶ್ರೇಯಸ್ಸಂ ಪಡೆವೆನೆಂದು ಇವರಂ ಸಂಗ್ರಹಿಸಿದ್ದುದರಿಂದ ನಿರಪರಾಧಿಯಾದ ನನಗೆ ಕುಲದೇವತೆಯೇ ಕುಶಲವನ್ನುಂಟುಮಾಡಬೇಕು ಎಂದು ಕಂಬನಿಗಳಂ ತುಂಬುತ್ತ ಹಂಬಲಿಸುತ್ತಿರುವುದಂ ನೋಡಿ ರಾಕ್ಷಸನು—

ಆಹಾ! ನಾನು ಧರಿಸಿರುವ ಆಭರಣವು ಪರ್ವತರಾಜನದೇ ಎಂದು ನಿಶ್ಚಯವಾದ ಬಳಿಕ ನನ್ನಲ್ಲಿ ಇವರು ಏನು ಆರೋಪಣಮಂ ಮಾಡಿದರೂ ಮಾಡಬಹುದು. ನನ್ನ ಹಗೆಯಾದ ಚಾಣಕ್ಯನು ಈ ಭೂಷಣಂಗಳಂ ವರ್ತಕರ ಮುಖದಿಂದ ನನ್ನಲ್ಲಿ ಸೇರುವಂತೆ ಮಾಡಿ ಇರಬಹುದು ಎಂದು ಚಿಂತಿಸುತ್ತಿರುವಲ್ಲಿ ಮಲಯಕೇತುವು—

ಅಯ್ಯಾ ಭಾಗುರಾಯಣನೇ, ಅಮಾತ್ಯರು ತಾವು ಅಲಂಕರಿಸಿಕೊಂಡಿರುವ ವಿಭೂಷಣಂಗಳಂ ವರ್ತಕರಿಂದ ತಮಗೆ ಕ್ರಯವಾಗಿ ಬಂದಿರುವುದಾಗಿ ಹೇಳಿದ ಮಾತು ನಿನಗೆ ಸಮ್ಮತವೇ? ಎಂಬುದಾಗಿ ಕೇಳಲು ; ಆ ಮಾತಿಗೆ ಭಾಗುರಾಯಣನು ತನ್ನ ಮನಸ್ಸಿನಲ್ಲಿ—ಪರ್ವತರಾಜನ ಅಲಂಕಾರವನ್ನು ಚಂದ್ರಗುಪ್ತನು ಮಲಯಕೇತುವಿನ ಬಳಿಯಲ್ಲಿ ಪ್ರಾಧಾನ್ಯಮಂ ಮಾಡಿಕೊಂಡಿರುವ ರಾಕ್ಷಸನಿಗೆ ಕಳುಹಿಸಿರುವನು ಎಂದು ನಾನು ಹೇಳಿದರೆ ಒಂದು ವೇಳೆ—ರಾಕ್ಷಸನಲ್ಲಿ ವಿಶ್ವಾಸದಿಂದ ಚಂದ್ರಗುಪ್ತನು ಕಳುಹಿಸಲಿಲ್ಲ. ತನಗೂ ರಾಕ್ಷಸನಿಗೂ ವಿರೋಧಮಂ ಹುಟ್ಟಿಸುವುದಕ್ಕೆ ಕಳುಹಿಸಿದ್ದಾನೆಂದು ಅರಸುಮಗನಿಗೆ ತೋರಿದಲ್ಲಿ ಚಾಣಕ್ಯನ ಉಪಾಯಗಳೆಲ್ಲ ಭಗ್ನವಾಗುವುವು. ಆದುದರಿಂದ ಪ್ರಕಾರಾಂತರವಾಗಿ ತಿರುಗಿಸುವೆನು ಎಂದು ನಿಶ್ಚಯಿಸಿ—

ಅಯ್ಯಾ ರಾಜಪುತ್ರನೇ, ಈ ಕಾಗದದಲ್ಲಿ ಕಳುಹಿಸಿದ ಒಡವೆಗಳು ಮುಟ್ಟಿದುವು ಎಂದು ಬರೆದಿರುವ ಆಭರಣಂಗಳು ಇವೇ ಎಂಬುದಾಗಿ ತೋರುತ್ತದೆ. ಲೋಕದಲ್ಲಿ ಪರರಾಜರ ಆಭರಣಂಗಳು ತಮ್ಮ ಕೈವಶವಾದರೆ ಖ್ಯಾತಿಗೋಸ್ಕರ ಅರಸುಗಳು ಅವುಗಳಂ ಭಂಡಾರದಲ್ಲಿ ಕಟ್ಟಿಸಿಡುವುದುಂಟು. ಈ ಪರ್ವತರಾಜರ ಮಂಡನವನ್ನು ಕೂಡ ಚಾಣಕ್ಯನು ಬೊಕ್ಕಸದಲ್ಲಿ ಕಟ್ಟಿರಿಸಿರಬಹುದು. ಚಾಣಕ್ಯ ಚಂದ್ರಗುಪ್ತರಿಗೆ ಮನಸ್ತಾಪ ಮುಂಟಾದ ಕಾಲದಲ್ಲಿ ತನಗೆ ಬೇಕಾದವರ ಪ್ರೀತಿಯಂ ಸಂಪಾದಿಸಲೋಸುಗ ಚಂದ್ರಗುಪ್ತನು ಬೊಕ್ಕಸದಲ್ಲಿರುವ ರಾಜಾರ್ಹವಾದ ಆಭರಣಂಗಳಂ ತರಿಸಿ ನೋಡಿ ಇವು ಅತ್ಯುತ್ತಮವಾದುದರಿಂದ ಈ ಭೂಷಣಂಗಳು ಬಂದ ಮಾರ್ಗವನ್ನರಿಯದೆ ಕಳುಹಿಸಿದ್ದಾನು ಎಂದು ಉಸಿರಲು; ಆ ಮಾತಿಗೆ ಮಲಯಕೇತುವು ಯುಕ್ತವೆಂದು ಹೇಳಿ ರಾಕ್ಷಸನನ್ನೀಕ್ಷಿಸಿ—

ಅಮಾತ್ಯರೇ, ಚಂದ್ರಗುಪ್ತನು ಈ ಭೂಷಣಂಗಳಿಂದ ಅಧಿಕಲಾಭಮಂ ಪಡೆಯಬೇಕೆಂದು ನಿಮಗೆ ಕ್ರಯಕ್ಕೆ ಕೊಟ್ಟುದರಿಂದ ಇದರ ಮೂಲ್ಯಕ್ಕಾಗಿ ಮೌರ್ಯಪುತ್ರನಿಗೆ ನನ್ನನ್ನೇ ಒಪ್ಪಿಸಿ ಕೊಡುವುದಕ್ಕೆ ಯತ್ನಮಂ ಮಾಡಿರುವಿರಿ ಎನಲು ; ಆ ಮಾತಿಗೆ ರಾಕ್ಷಸನು—ಶಿವ ಶಿವಾ! ಇಂಥ ಅಪವಾದವು ನನಗೆ ಉಂಟಾಗಬಹುದೇ? ಶತ್ರುಗಳ ಕಪಟ ಪ್ರಯೋಗವು ಚೆನ್ನಾಗಿ ಬಂದೊದಗಿತು. ಈ ವೇಳೆಯಲ್ಲಿ ಯಾವ ವಿಷಯಕ್ಕೂ ಹೌದು ಅಲ್ಲ ಎನ್ನಕೂಡದು ಎಂದು ಚಿಂತಿಸುತ್ತಿರಲು; ಮಲಯಕೇತುವು ರಾಕ್ಷಸನಂ ಕುರಿತು—

ಯಜಮಾನರೇ, ಇಲ್ಲಿಂದ ಮುಂದೆ ಮಾಡತಕ್ಕುದೇನು? ಎಂದು ಬೆಸಗೊಳ್ಳಲು ;

ಅಯ್ಯಾ ಪ್ರಭುವೇ, ಯಜಮಾನರಾದವರಂ ಕೇಳಬಹುದು. ಈಗ ನಾವು ಅಪ್ರಯೋಜಕರಾದೆವೆಂದು ರಾಕ್ಷಸನು ನುಡಿಯಲು ;

ಎಲೈ ರಾಕ್ಷಸನೇ, ಚಂದ್ರಗುಪ್ತನಾದರೋ ಸ್ವಾಮಿಪುತ್ರನಾದ ಮೌರ್ಯ ತನಯನು. ನಾನಾದರೋ ನಿನ್ನಂ ಮಿತ್ರನೆಂದು ಭಾವಿಸಿದ್ದ ಪರ್ವತೇಶ್ವರಕು ಮಾರನು. ಇದೂ ಅಲ್ಲದೆ ನಿನಗೆ ಸೇವಕನಂತೆ ಇದ್ದೆನು. ಅಲ್ಲಿ ಚಂದ್ರಗುಪ್ತನು ನಿನಗೇನಾದರೂ ಕೊಟ್ಟರುಂಟು. ಇಲ್ಲಿ ನೀನು ನನಗೆ ಕೊಟ್ಟರುಂಟು. ಅಲ್ಲಿ ನಿನಗೆ ಭೃತ್ಯಭಾವವು. ಇಲ್ಲಿ ಸರ್ವಸ್ವಾತಂತ್ರ್ಯವು. ಹೀಗಿದ್ದರೂ ಇಂಥ ದುರಾ ಲೋಚನೆಯಂ ಮಾಡಿದುದರಿಂದ ಈ ದುಷ್ಕೃತ್ಯವೇ ನಿನ್ನಂ ಅಪ್ರಯೋಜಕನಂ ಮಾಡಿತು ಎನಲು :

ಅಯ್ಯಾ ಪ್ರಭುವೇ, ಈಗ ನಿಷ್ಠುರವಚನವಂ ಹೇಳುವುದು ನಿನಗೆ ಯುಕ್ತವೇ ಸರಿ. ನಿನ್ನಿಂದ ದೋಷವೇನು ಎಂದು ಕಂಬನಿಗಳಂ ತುಂಬುತ್ತಿರಲು; ಆ ಮಾತಿಗೆ ಕ್ರುದ್ಧನಾಗಿ ಮಲಯಕೇತುವು ಆ ಪೆಟ್ಟಿಗೆಯನ್ನೂ ಕಾಗದವನ್ನೂ ಸಹ ನೆಲಕ್ಕೆ ಒಗೆದು—

ಎಲೈ ಕೃತಘ್ನನೇ, ಇದು ಯಾರ ದೋಷವು? ನಿರಪರಾಧಿಯಂತೆ ಈಗ ಲೂ ತಪ್ಪಿಸಿಕೊಂಡು ಮಾತನಾಡುವೆ ಎನಲು; ರಾಕ್ಷಸನು-

ಅಯ್ಯಾ ಅರಸೇ, ಮೊದಲು ನಾನು ಅಪಮಾನಾಸ್ಪದವಾದ ಭೃತ್ಯಭಾವ ದಲ್ಲಿ ಇದ್ದವನಾದರೂ ಕೃತಜ್ಞರಾದ ನಂದರು ನನಗೆ ಮಾಡುತ್ತಿದ್ದ ಸನ್ಮಾನ ದಿಂದ ಲೋಕದಲ್ಲಿ ಪೂಜ್ಯನಾಗಿದ್ದೆನು. ಅಂಥ ಲೋಕೇಶ್ವರರಾದ ನಂದರಂ ಸಂಹರಿಸಿ ನನ್ನಂ ಶತ್ರುವಿಗೆ ಭೃತ್ಯನಂ ಮಾಡಿ ಸ್ವಾಮಿಭಕ್ತಿಯಿಂದ ನಾನು ಮಾಡುವ ಕಾರ್ಯಗಳನ್ನು ಸಾಗಲೀಸದೆ ಇರುವ ದೈವವಿಲಾಸವೇ ಹೊರತು ಮತ್ತಾರ ದೋಷವೂ ಅಲ್ಲ ಎನಲು ; ಆ ನುಡಿಗೆ ರಾಜಪುತ್ರನು ಮತ್ತೂ ಕುಪಿ ತನಾಗಿ—

ಎಲೈ ಪ್ರತ್ಯಕ್ಷರಾಕ್ಷಸನೇ, ಇದು ದೈವವಿಲಾಸವೇ ಹೊರತು ಲೋಭ ವಿಲಾಸವಲ್ಲವೋ ? ಎಲೈ ವಂಚಕನೇ, ತ್ಯಾಗಶೀಲನಾಗಿ ಗುಣಜ್ಞನಾದ ನಮ್ಮ ತಂದೆಯು ನಿನ್ನಂ ಸತ್ಯಸಂಧನೂ ಕಾರ್ಯದಕ್ಷನೂ ಮತಿವಂತನೂ ಎಂದು ಮಿತ್ರನನ್ನಾಗಿ ಎಣಿಸಿ ನಿನ್ನ ಹೃದಯವನ್ನರಿಯದೆ ತನಗೆ ಲಬ್ಧವಾಗುವ ನಂದ ರಾಜ್ಯಾರ್ಧಕ್ಕೆ ನಿನ್ನನ್ನೇ ಅಧಿಪತಿಯಾಗಿ ಮಾಡಿ ತನ್ನ ಅಮಾತ್ಯ ಪದದಲ್ಲಿ ಇರಿಸಿ ಕೊಳ್ಳಬೇಕೆಂದು ಸಂಕಲ್ಪಿಸಿದ್ದನು. ಅಂಥವನನ್ನು ವಿಷಕನ್ಯಾಮುಖದಿಂದ ಸಂಹ

ರಿಸಿದವನಾದೆ. ಇಂಥ ನಿನ್ನ ಹೃದಯವನ್ನು ನಾನರಿಯದೆ ಸರ್ವಾಧಿಕಾರದಲ್ಲಿ ನಿಲ್ಲಿಸಿದುದಕ್ಕೆ ಮಾಂಸವಿಕ್ರಯಮಂ ಮಾಡುವವನಂತೆ ವೈರಿಯಾದ ಚಂದ್ರಗುಪ್ತನಿಗೆ ನನ್ನಂ ಒಪ್ಪಿಸಿಕೊಡುವುದಕ್ಕೆ ಉದ್ಯೋಗಿಸಿದೆ ಎನಲು; ಆ ಮಾತಿಗೆ ರಾಕ್ಷಸನು—ಶಿವ ಶಿವಾ! ಎಂದು ಕಿವಿಗಳಂ ಮುಚ್ಚಿಕೊಳ್ಳುತ್ತ—

ನಾನು ಪರ್ವತೇಶ್ವರನಂ ಕೊಂದವನಲ್ಲ ಎನಲು;

ಹಾಗಾದರೆ ಮತ್ತಾರು? ಎಂದು ಮಲಯಕೇತು ಕೇಳಲು;

ದೈವಮಂ ಕೇಳಬೇಕೆಂದು ರಾಕ್ಷಸನು ಹೇಳಲಾಗಿ; ರಾಜಪುತ್ರನು—

ದೈವಮಂ ಕೇಳಬೇಕೋ? ಜೀವಸಿದ್ಧಿ ಎಂಬ ಕ್ಷಪಣಕನಂ ಕೇಳಬೇಡವಲ್ಲಾ? ಎಂದು ಆಕ್ಷೇಪಿಸಲು;

ಹಾ! ಕ್ಷಪಣಕನೂ ಕೂಡ ಗೂಢಚಾರನಾದ ಬಳಿಕ ಅರಿಗಳು ನನ್ನ ಹೃದಯವನ್ನೂ ಸಹ ಆಕ್ರಮಿಸಿದ ಹಾಗೇ ಆಯಿತು. ಇನ್ನು ಪುರುಷಪ್ರಯತ್ನ ಸಾಗುವುದುಂಟೇ? ಎಂದು ರಾಕ್ಷಸನು ಚಿಂತಿಸುತ್ತಿರಲು; ಆಗ ಆಗ್ರಹೋದಗ್ರನಾದ ಮಲಯಕೇತುವು ತನ್ನ ಅಕ್ಷರದಿಂದಲೇ ಒಂದು ಕಾಗದಮಂ ಬರೆದು ಅದಕ್ಕೆ ಮೋಹರಮಂ ಮಾಡಿ—ಇದಂ ಶೇಖರನ ಕೈಯ್ಯಲ್ಲಿ ಕೊಟ್ಟು ಉತ್ತರಮಂ ಬರಸಿಕೊಂಡು ಬಾರೆಂದು ಕಲವಿಂಕನೆಂಬ ಕಂಚುಕಿಯ ಕೈಯ್ಯಲ್ಲಿತ್ತು ಕಳುಹಿಸಲು; ಆ ಭೃತ್ಯನ ವೇಗಮಂ ನೋಡಿ ರಾಕ್ಷಸನು—ಯಾರಿಗೋ ವಿಪತ್ತು ಒದಗಿರುವುದು ಎಂದು ಚಿಂತಿಸುತ್ತಿರಲು ; ಆ ಕಂಚುಕಿಯು ತ್ವರಿತದಿಂ ಹೋಗಿ ಪುನಃ ಶೇಖರನು ಬರೆದುಕೊಟ್ಟ ಕಾಗದಮಂ ತಂದು ಕೊಡಲು; ಮಲಯಕೇತುವು—ಅಲ್ಲಿ ನಡೆದ ವರ್ತಮಾನವೇನು? ಎಂದು ಆ ಸೇವಕನಂ ಕೇಳಿದುದಕ್ಕೆ—

ಸ್ವಾಮೀ, ಶೇಖರನು ತಮ್ಮ ಪತ್ರಮಂ ನೋಡಿದ ಕ್ಷಣದಲ್ಲಿಯೇ ರಾಜಕಾರ್ಯಾಲೋಚನೆಯುಂಟೆಂದು ಕರೆಯಕಳುಹಿಸಿ ಚಿತ್ರವರ್ಮ ಸಿಂಹನಾದ ಪುಷ್ಕರಾಕ್ಷ ಈ ಮೂವರನ್ನೂ ಭೂಗತ ಮಾಡಿಸಿದನು. ಸಿಂಧುಷೇಣ ಮೇಘನಾದರಂ ಆನೆಯ ಕಾಲಿಗೆ ಕಟ್ಟಿಸಿ ಎಳೆಸಿ ಕೊಲ್ಲಿಸಿದನು ಎಂದು ವಿಜ್ಞಾಪಿಸಲು ; ಆಗ ಮಲಯಕೇತುವು—

ಎಲೈ ರಾಕ್ಷಸನೇ, ನಿನ್ನಲ್ಲಿ ಸ್ನೇಹಮಂ ಬಳಸಿದುದಕ್ಕೆ ಚಿತ್ರವರ್ಮಾದಿಗಳೂ ಇಹಲೋಕದ ಆಶೆಯಂ ಬಿಟ್ಟರು. ನಾನು ನಿನ್ನಂತೆ ವಿಶ್ವಾಸಘಾತುಕನಲ್ಲ. ನೀನು ಬ್ರಾಹ್ಮಣನೆಂದೆನಿಸಿಕೊಂಡಿದ್ದೀ. ಪ್ರಾಣಸಮೇತವಾಗಿ ನಿನ್ನಂ ಬಿಟ್ಟು ಕಳುಹಿಸುವೆನು. ಚಂದ್ರಗುಪ್ತನಂ ಹೊಂದಿ ಏನು ರಾಜಕಾರ್ಯಮಿದ್ದರೂ

ಮಾಡುವವನಾಗು. ದುರ್ನೀತಿಯು ಧರ್ಮಾರ್ಥಕಾಮಂಗಳಂ ಕೆಡಿಸುವಂತೆ ಚಂದ್ರಗುಪ್ತಸಹಿತವಾಗಿ ನಿನ್ನನ್ನು ನಿಗ್ರಹಿಸುವುದಕ್ಕೆ ನಾನೇ ಸಿದ್ಧನಾಗಿರುವೆನು ಎನಲು; ಭಾಗುರಾಯಣನು—

ಅಯ್ಯಾ ರಾಜಕುಮಾರನೇ, ಪ್ರಯಾಣಕ್ಕೆ ಇಂದು ಲಗ್ನವು ಪ್ರಶಸ್ತವಾಗಿ ತೋರುವುದಿಲ್ಲ. ಮತ್ತೊಂದು ಲಗ್ನಮಂ ನಿಶ್ಚಯಿಸಿ ನಮ್ಮ ಸೇನೆಗಳಂ ಪ್ರಸ್ಥಾನಂಗೊಳಿಸಿ ಪಾಟಲೀಪುರಕ್ಕೆ ಅಗಳಾಗಿರುವ ಮಹಾ ನದಿಯಂ ಧೂಳೀನಿಕುರುಂಬದಿಂದ ಪಂಕಪ್ರಾಯವನ್ನಾಗಿ ಮಾಡುವಂತೆ ವಾಹಿನಿಗೆ ಆಜ್ಞಾಪಿಸುವವನಾಗು. ಈ ರಾತ್ರಿಯಲ್ಲಿ ಮೂರು ಯಾಮ ಕಳೆದು ಬಂದಿತು ವಿಶ್ರಮಿಸಿಕೊಳ್ಳಬಹುದು. ಚಿತ್ರವರ್ಮಾದಿಗಳ ವಸ್ತುವಾಹನಂಗಳಂ ಅಲ್ಲಿನ ಜನರು ಸೂರೆಮಾಡದಂತೆ ರಾಜಕೋಶಕ್ಕೆ ಸೇರುವ ಹಾಗೆ ಶೇಖರನಿಗೆ ನಿರೂಪಿಸುವವನಾಗು ಎನಲು ; ಅದೇ ಮೇರೆಗೆ ಶೇಖರನಂ ಕರೆಯಿಸಿ—

ನೀನು ಸೇನಾಸಮೇತನಾಗಿ ಹೋಗಿ ಚಿತ್ರವರ್ಮಾದಿಗಳ ವಸ್ತುವಾಹನಂಗಳಂ ಬೊಕ್ಕಸಕ್ಕೊದಗಿಸುವವನಾಗು ಎನಲು ; ಅವನು ಅದೇ ಪ್ರಕಾರ ಬಲಸಮೇತನಾಗಿ ಹೋಗುತ್ತಿದ್ದನು. ಆಗ ಭಾಗುರಾಯಣನು—

ಅಮಾತ್ಯರ ಭೃತ್ಯನಿಗೆ ಏನಪ್ಪಣೆ? ಎಂದು ಕೇಳಲು;

ದೂತನಂ ಶಿಕ್ಷಿಸಕೂಡದು. ಇದರಮೇಲೆ ಯಥಾರ್ಥಮಂ ಹೇಳಿರುವನು. ಸ್ವಾಮಿಭೃತ್ಯರೀರ್ವರಂ ಜೊತೆಗೊಳಿಸಿ ನಮ್ಮ ದೇಶಮಂ ಬಿಟ್ಟು ಈಗಲೇ ಹೋಗುವಂತೆ ಹೇಳುವವನಾಗು ಎಂದು ನಿಯಮಿಸಿ ಅರಸುಮಕ್ಕಳೊಡನೆ ಕೂಡಿ ಮಲಯಕೇತುವು ಶಯನಗೃಹಕ್ಕೆ ತೆರಳಿದನು.

ಆಗ ರಾಕ್ಷಸನು ತನ್ನ ಮನಸ್ಸಿನಲ್ಲಿ—ನನ್ನ ಭೃತ್ಯನಾರೋ? ಎಂದು ಯೋಚಿಸುತ್ತಿರಲು; ಭಾಗುರಾಯಣನು ಸಿದ್ಧಾರ್ಥಕನಂ ಕರೆತರಿಸಿ—

ಎಲೈ ಭೃತ್ಯನೇ, ನಿಮ್ಮ ಅಮಾತ್ಯರ ಸಂಗಡ ನಿನ್ನಂ ಕಳುಹಿಸುವಂತೆ ರಾಜಾಜ್ಞೆಯಾಗಿದೆ. ಹೋಗೆಂದೆನಲು ; ಆ ಸಿದ್ಧಾರ್ಥಕನು ಬಂದು ರಾಕ್ಷಸನಿಗೆ ಅಡ್ಡಬಿದ್ದು ಲಜ್ಜಿತನಂತೆ ತಲೆಯಂ ಬಾಗಿಸಿಕೊಂಡು ನಿಂತಿರಲು ; ಅದಂ ನೋಡಿ ರಾಕ್ಷಸನು_ಇವನಿಂದಲೇ ಈ ಯನರ್ಥವೆಲ್ಲವೂ ನಡೆದಿದ್ದೀತು ಎಂದು ನಿಶ್ಚಯಿಸಿ—

ಎಲೈ, ನೀನು ಯಾರಿಗೆ ಭೃತ್ಯನು? ಎಂದೆನಲು; ಸಿದ್ಧಾರ್ಥಕನು—

ಸ್ವಾಮಿ, ಅಪ್ಪಣೆಯ ಮೇರೆಗೆ ಹೋಗುವಲ್ಲಿ ನನ್ನ ಉಪಾಯಗಳೊಂದೂ ಉಕ್ಕಡದಲ್ಲಿ ಸಾಗಲಿಲ್ಲವೆಂದನು. ಆ ಮಾತಿಗೆ ರಾಕ್ಷಸನು—

ನಿನಗೇನು ಅಪ್ಪಣೆಯಂ ಕೊಟ್ಟಿದ್ದೆವು ? ಎಂದು ಕೇಳಿದುದಕ್ಕೆ—

ಸ್ವಾಮಿ, ಕಾಗದಮಂ ಯಾರಿಗೂ ಸಿಕ್ಕದಂದೆ ಮರಸಿಕೊಂಡು ಇದ್ದೆನೆಂದನು. ಅದಂ ಕೇಳಿ ರಾಕ್ಷಸನು—

ಎಲಾ, ಕಾಗದವಂದರೇನು ? ಎಂದು ಆಕ್ಷೇಪಿಸಿದುದಕ್ಕೆ ಸಿದ್ಧಾರ್ಥಕನು—

ಸ್ವಾಮಿ, ನಾನು ಮಾಡುವುದೇನು ? ಬಹಳವಾಗಿ ಹೊಡೆದುದರಿಂದ ಕಂಕುಳಲ್ಲಿದ್ದ ಪೆಟ್ಟಿಗೆಯೂ ನೆಲಕ್ಕೆ ಬಿದ್ದು ಸಿಕ್ಕಿಹೋಯಿತು ಎನಲು; ರಾಕ್ಷಸನು—

ಎಲೋ, ಪೆಟ್ಟಿಗೆಯಾವುದೋ? ಎಂದು ಬೆಸಗೊಂಡುದಕ್ಕೆ ಸಿದ್ಧಾರ್ಥಕನು—

ಸ್ವಾಮಿ, ಆಭರಣಂಗಳಿದ್ದುದು ಎಂದನು. ಆ ಬಳಿಕ ರಾಕ್ಷಸನು—

ಎಲಾ, ಆಭರಣಂಗಳೆಂದರೇನೋ ? ಎಂದು ಪ್ರಶ್ನೆಗೆಯ್ದುದಕ್ಕೆ ಸಿದ್ಧಾರ್ಥಕನು—

ಸ್ವಾಮಿ, ಮೋಹರ ಸಹಿತವಾಗಿಯೇ ತಲಪಿಸೆಂದು ಅಪ್ಪಣೆಯಾಗಿತ್ತಷ್ಟೆ? ಎನಲು; ರಾಕ್ಷಸನು—

ಎಲಾ ದ್ರೋಹಿಯೇ, ಮೋಹರಮಂ ಮಾಡಿ ಕೊಟ್ಟವರಾರು ? ಎನಲು; ಸಿದ್ಧಾರ್ಥಕನು—

ಸ್ವಾಮಿ, ನಾನು ಯಾವುದನ್ನೂ ಬೇಕಾಗಿ ಹೇಳಿದವನಲ್ಲ. ಅಪ್ಪಣೆಯ ಮೇರೆಗೆ ಮುದ್ರೆಯಂ ಶಕಟದಾಸನು ಮಾಡಿದನು ಎಂಬುದಕ್ಕೆ ರಾಕ್ಷಸನು—

ಎಲೋ ಘಾತುಕನೇ, ಶಕಟದಾಸನು ಮೋಹರಮಂ ಮಾಡಿದುದು ನಿಜವೇನೋ ? ಎನಲು; ಸಿದ್ಧಾರ್ಥಕನು—

ಸ್ವಾಮಿ, ಪಾದಸಾಕ್ಷಿಯಾಗಿಯೂ ಆ ರಹಸ್ಯಗಳೊಂದನ್ನೂ ನಾನು ಬಾಯಿ ಬಿಟ್ಟವನಲ್ಲ. ಮೊದಲೇ ಅದೆಲ್ಲಮಂ ನಿಷ್ಕಪಟಿಯಾದ ಕ್ಷಪಣಕನೇ ಹೇಳಿಬಿಟ್ಟನು ಎಂದನು. ಅದಕ್ಕೆ ರಾಕ್ಷಸನು—

ಎಲೈ ದುರಾತ್ಮಕನೇ, ಕ್ಷಪಣಕನೆಂದರೆ ಯಾರೋ ? ಎನಲಾಗಿ; ಸಿದ್ಧಾರ್ಥಕನು—

ಏನು ಬುದ್ಧೀ, ಒಂದನ್ನೂ ಅರಿಯದವರಂತೆ ನೂತನವಾಗಿ ಕೇಳುವಿರಿ? ಮೊದಲು ವಿಷಕನ್ಯೆಯನ್ನು ಅಪ್ಪಣೆಯ ಮೇರೆಗೆ ಪರ್ವತರಾಜನ ಬಳಿಗೆ ಕರೆದುಕೊಂಡು ಹೋದ ಜೀವಸಿದ್ಧಿಯಲ್ಲವೇ ? ಎನಲು; ಅದಂ ಕೇಳಿ ರಾಕ್ಷಸನು—

ಶಿವ ಶಿವಾ ! ಈ ದುರಾತ್ಮನು ಮದ್ಯಪಾಯಿಯಂತೆ ಅನನ್ವಯವಾಗಿ ಬೊಗುಳುವನಲ್ಲಾ ! ಇವನೊಡನೆ ಮಾತನಾಡಿದುದೇ ಹೆಡ್ಡತನವು ಎಂದು ಪರಾಙ್ಮುಖನಾಗಿ

ತನ್ನ ಮನಸ್ಸಿನಲ್ಲಿ—ಈ ಸಿದ್ಧಾರ್ಥಕ ಕ್ಷಪಣಕ ಶಕಟದಾಸರುಗಳೇ ಶತ್ರುಪಕ್ಷ ದವರಾದುದರಿಂದ ಈಗ ನನಗೆ ಈ ದುರ್ದಶೆಯೊದಗಿತು. ಭಾಗುರಾಯಣ ಭದ್ರ ಭಟಾದಿಗಳೂ ಕೂಡ ವೈರಿ ಪ್ರೇರಿತರಾಗಿ ಬಂದಿರುವುದರಿಂದ ಸಮಯಮಂ ನೋಡಿ ಮಲಯಕೇತುವಂ ನಿಗ್ರಹಿಸಾರು. ಚಿತ್ರವರ್ಮಾದಿಗಳಂ ಸಂಹರಿಸಿ ಶೇಖರನಂ ಸೇನಾಸಮೇತವಾಗಿ ಪುರಮಂ ಬಿಟ್ಟು ಹೋಗುವಂತೆ ಮಾಡಿರುವುದ ರಿಂದ ಕ್ಷಿಪ್ರದಲ್ಲಿಯೇ ಪರ್ವತರಾಜಪುತ್ರನಿಗೆ ಏನೋ ಅನಿಷ್ಟ ತಟ್ಟುವುದರಲ್ಲಿ ಸಂದೇಹಮಿಲ್ಲ ಎಂದು ನಿಶ್ಚಯಿಸುತ್ತಿದ್ದನು. ಆಗ ಭಾಗುರಾಯಣನು—

ಸ್ವಾಮೀ ಅಮಾತ್ಯರೇ, ಸಮಯಕ್ಕೊದಗುವವನೆಂದು ಇವನಂ ಭೃತ್ಯ ನನ್ನಾಗಿ ಭಾವಿಸಿದಿರಿ ಎನಲು;

ಅಹುದೈ ಭಾಗುರಾಯಣನೇ, ಶತ್ರುಗ್ರಸ್ತನಾಗಿದ್ದ ಮಲಯಕೇತುವಂ ಈ ರಾಜ್ಯಕ್ಕೆ ಕರತಂದು ನೀನು ಅವನಿಗೆ ಆಪ್ತನಾಗಿರುವಂತೆ ಈ ಸಿದ್ಧಾರ್ಥಕನು ಶಕಟದಾಸನಂ ಇಲ್ಲಿಗೆ ಕರತಂದು ನಮಗೆ ಆಪ್ತನಂತೆ ಇದ್ದುದರಿಂದ ನಮಗೆ ಈ ಫಲಮಾಯಿತು. ನಮ್ಮಂತೆ ಶೀಘ್ರದಲ್ಲಿಯೇ ಮಲಯಕೇತುವಿಗೂ ಫಲಮಾದೀತು ಎಂದು ಹೇಳಿ ರಾಕ್ಷಸನು ರಾಜಸಭೆಯಿಂದ ಹೊರಟು ಖಿನ್ನನಾಗಿ ಗೃಹಮಂ ಬಿಟ್ಟು ಪುರದಿಂ ತೊಲಗಿ ತೆರಳುತ್ತಿದ್ದನು.

ಇತ್ತಲಾ ಚಿತ್ರವರ್ಮಾದಿಗಳು ನಷ್ಟರಾದುದಂ ಕೇಳಿ ಅವರ ಫೌಜುಗಳೆ ಲ್ಲವೂ ಭೀತಿಯಂ ಹೊಂದಿ ದಿಕ್ಕು ದಿಕ್ಕಿಗೆ ಓಡುತ್ತಿರಲು; ಅವುಗಳಂ ಅಟ್ಟಿ ಕೊಂಡು ಶೇಖರನು ಸೇನಾಸಮೇತನಾಗಿ ಹೋದನು.

ಈ ವರ್ತಮಾನವೆಲ್ಲಮಂ ಕೇಳಿ ಶಕ ಚೀಣ ಹೂಣ ಗಾಂಧಾರಾಧಿಪತಿ ಗಳು ತಾವು ಇಲ್ಲಿದ್ದರೆ ತಮಗೂ ಚಿತ್ರವರ್ಮಾದಿಗಳಂತೆ ಏನಾದರೂ ವಿಪತ್ತು ಸಂಭವಿಸೀತು ಎಂದು ತಮ್ಮ ತಮ್ಮ ಸೇನಾಸಮೇತರಾಗಿ ಸ್ವದೇಶಂಗಳಿಗೆ ತೆರಳು ತ್ತಿದ್ದರು.

ಇತ್ತಲಾ ಮಾರ್ಗವಿಡಿದು ಬರುತ್ತಿರುವ ರಾಕ್ಷಸನು ತನ್ನ ಮನಸ್ಸಿನಲ್ಲಿ— ಸ್ವಾಮಿಭಕ್ತಿಯನ್ನವಲಂಬಿಸಿ ಎಷ್ಟು ವಿಧವಾಗಿ ಸಾಹಸಮಂ ಮಾಡಿದರೂ ದೈವ ಸಹಾಯವಿಲ್ಲದುದರಿಂದ ಅದೆಲ್ಲವೂ ನಿರರ್ಥಕವಾಯಿತು. ನನ್ನ ನಿಮಿತ್ತದಿಂದ ನಿರಪರಾಧಿಗಳಾದ ಚಿತ್ರವರ್ಮಾದಿ ದೇಶಾಧಿಪತಿಗಳೂ ವಿನಷ್ಟರಾದರು. ಮತ್ತೊ ಬ್ಬರನ್ನಾಶ್ರಯಿಸಿ ಕಾರ್ಯಮಂ ಸಾಧಿಸೋಣ ಎಂದರೆ ಈ ಅಪವಾದದಿಂದ ಇನ್ನೊಂದು ಕಡೆಗೆ ಇಟ್ಟಣಿಕಿ ನೋಡಕೂಡದು. ತಪೋವನವನ್ನೈದುವೆನು

ಎಂದರೆ ಮಹಾ ವೈರಘಟಿತವಾದ ಈ ಮನಸ್ಸಿಗೆ ಹೇಗೆ ಉಪಶಾಂತಿಯುಂಟಾ
ದೀತು ? ಪ್ರಾಣಮಂ ತೊರೆದುಕೊಳ್ಳೋಣ ಎಂದರೆ ಅದು ಮೂರ್ಖಸ್ತ್ರೀಯ
ರುಗಳು ಮಾತ್ರ ಆಚರಿಸುವ ದುಷ್ಕೃತ್ಯವು. ಅಥವಾ ಖಡ್ಗಪಾಣಿಯಾಗಿ ಚಂದ್ರ
ಗುಪ್ತನ ಮೇಲೆ ಬಿದ್ದು ಅವನಂ ಸಂಹರಿಸೋಣವೆಂದರೆ ಪರ್ಯವಸಾನದಲ್ಲಿ ಹೇಗಾ
ದೀತೋ ? ಇವೊಂದೂ ಈಗ ಯುಕ್ತವಾಗಿ ತೋರುವುದಿಲ್ಲ. ಈಗ ನನ್ನ
ಹೆಂಡತಿ ಮಕ್ಕಳುಗಳಿಗೋಸ್ಕರ ಕುಟುಂಬಸಹಿತವಾಗಿ ನಿರ್ಬಂಧದಲ್ಲಿ ಸಿಕ್ಕಿಬಿ
ದ್ದಿರುವ ಪರಮಮಿತ್ರನಾದ ಚಂದನದಾಸನಂ ಏನಾದರೂ ಉಪಾಯಮಂ
ಮಾಡಿ ಬಿಡಿಸಿದರೆ ಅದು ಇಹಪರ ಸಾಧಕವಾದ ಕಾರ್ಯವೆಂದು ನಿಶ್ಚಯಿಸಿ
ಪಾಟಲೀಪುರಾಭಿಮುಖನಾಗಿ ತೆರಳುತ್ತಿದ್ದನೆಂಬಲ್ಲಿಗೆ ಮುದ್ರಾಮಂಜೂಷವೆಂಬ
ಗ್ರಂಥದಲ್ಲಿ ರಾಕ್ಷಸನಿರಸನ ಕಥನಮೆಂಬ ಸಪ್ತದಶಾಶಯವು ಸಮಾಪ್ತವಾದುದು.

---

## ಅಷ್ಟಾದಶಾಶಯ ಪ್ರಾರಂಭವು.

---

### ಚಂದ್ರಗುಪ್ತ ಮಹಾರಾಜನ ಪಟ್ಟಾಭಿಷೇಕವು.

ಅನಂತರದಲ್ಲಿ ರಾಕ್ಷಸನು ಪಾಟಲೀಪುರಾಭಿಮುಖವಾಗಿ ತೆರಳಿದುದನ್ನೂ
ಗಾಂಧಾರಾದಿ ದೇಶಾಧಿಪತಿಗಳು ಪಲಾಯನಂಗೆಯ್ದುದನ್ನೂ ಶೇಖರನು ಸೇನಾಸಮೇ
ತನಾಗಿ ಚಿತ್ರವರ್ಮಾದಿಗಳ ಬಲಮಂ ಬೆನ್ನಟ್ಟಿ ಹೋದುದನ್ನೂ ತಿಳಿದು ಬಾಗು
ರಾಯಣನು ತನ್ನ ಮನಸ್ಸಿನಲ್ಲಿ—ಯಜಮಾನರಾದ ಚಾಣಕ್ಯರು ತಮಗೆ ಹೇಳಿ
ಕಳುಹಿಸಿದ ಪ್ರಕಾರವೇ ಕಾರ್ಯಗಳೆಲ್ಲವೂ ಕೈಗೂಡಿ ಮಲಯಕೇತುವಂ
ಕೈಸೆರೆಯಾಗಿ ಹಿಡಿಯುವುದೊಂದೇ ಉಳಿದಿರುವುದು. ಈ ವೇಳೆಯಲ್ಲಿ ಭದ್ರಭ
ಟಾದಿಗಳು ಏನನ್ನು ಆಲೋಚಿಸುವರೋ ಎಂದು ಚಿಂತಿಸುತ್ತ ಆಸ್ಥಾನದಿಂದ
ಬರುತ್ತಿರುವ ಆತನ ಬಳಿಗೆ ಒಬ್ಬ ದೂತನು ಬಂದು ಕೈಮುಗಿದು—

ಸ್ವಾಮೀ, ತಮ್ಮ ಸಮಯಮಂ ತಿಳಿದು ಬಂದು ಹೇಳುವಂತೆ ಭದ್ರಭ
ಟಾದಿಗಳು ಕಳುಹಿಸಿದರು ಎನಲು ;

ಎಲೈ ದೂತನೇ, ನಮ್ಮ ಸೇನಾಪತಿಗಳು ಮೃಗಗಳ ಬೇಟೆಯನ್ನಾಡಬೇ
ಕೆಂದು ಯೋಚಿಸಿರುವುದರಿಂದ ಈಗ ಅರುಣೋದಯ ಸಮಯಂ ಸನ್ನಿಹಿತವಾ
ಯಿತು. ನಿದ್ರೆಗೆಯ್ಯುತ್ತಿರುವ ಮೃಗವು ಎದ್ದು ತನ್ನ ಬಳಗಗೂಡಿ ಹೋಗುವು
ದಕ್ಕೆ ಮುಂಚಿತವಾಗಿಯೇ ಬೇಟೆಯ ಸಾಮಗ್ರಿಗಳಿಂ ಸಹಿತವಾಗಿ ನಡೆದು ಬಳ

ಸಿಕ್ಕೊಂಡು ಅದಂ ಹಿಡಿಯುದಿದ್ದರೆ ಆಮೇಲೆ ಶ್ರಮಸಾಧ್ಯವಾಗುವುದು ಎಂದು ನಾವು ಹೇಳಿದೆವು ಎಂಬುದಾಗಿ ತಿಳುಹಿಸಿ ಅವರಂ ಹೊರಡುವಂತೆ ಮಾಡುವವನಾಗು ಎಂದು ಉಸಿರಲು ; ಆ ದೂತನು ಅದೇ ಮೇರೆಗೆ ಹೋಗಿ ಭದ್ರಭಟಾದಿಗಳಿಗೆ ತಿಳುಹಿಸಲು; ಅವರು ಆ ವಾಕ್ಯದ ಭಾವದಿಂದ ಈಗಲೇ ಮಲಯಕೇತುವಂ ಕೈಸೆರೆಯಾಗಿ ಹಿಡಿಯಬೇಕೆಂದು ನಿಶ್ಚಯಿಸಿ ಸನ್ನದ್ಧರಾಗಿ ಪುರಮಂ ಮುತ್ತಿ ನಗರದ್ವಾರಮಂ ಹಿಡಿದು ರಾಜಭವನ ಮಾರ್ಗವಾಗಿ ಬರುತ್ತಿರಲು; ಅದಂ ಕಂಡು ಬಾಗುರಾಯಣನು—ಮಲಯಕೇತುವಂ ಜಾಗ್ರತೆ ಹಿಡಿಯುವವರಾಗಿರಿ ಎಂದು ಅವರಿಗೆ ಉಸಿರಿ ರಾಕ್ಷಸನು ಹೋಗುವ ಮಾರ್ಗಮಂ ತಿಳಿದು ಚಾಣಕ್ಯರಿಗೆ ಈ ವಿಷಯಮಂ ವಿಜ್ಞಾಪಿಸು ಎಂದು ಸಿದ್ಧಾರ್ಥಕನಿಗೆ ನೇಮಿಸಿ ತಾನು ತುರಗಾರೂಢನಾಗಿ ಹೊರಟು ಪಾಟಲೀಪುರಾಭಿಮುಖವಾಗಿ ತೆರಳುತ್ತಿದ್ದನು.

ಭದ್ರಭಟಾದಿಗಳು ತೀವ್ರದಿಂದ ಬಂದು ರಾಜದ್ವಾರವನ್ನಾಕ್ರಮಿಸಿ ಶಯನಗೃಹದ ಕಂಚುಕಿಗಳಂ ಬಂಧಿಸಿ ಅಲ್ಲಿದ್ದ ಶೂರರಾದ ರಾಜಕುಮಾರರಂ ಪ್ರಹರಿಸುತ್ತಿರಲು ; ಆ ಜನರ ಕಲಕಲಧ್ವನಿಗೆ ಮಲಯಕೇತುವು ಎಚ್ಚತ್ತು ನಿದ್ರೆಯ ಮೊಬ್ಬಿನಿಂದ ಹೊರಟು ಇದೇನಿದೇನು ? ಎಂದು ಆಶ್ಚರ್ಯಗೊಂಡು ಬರುತ್ತಿರಲು ; ಆಯುಧಪಾಣಿಗಳಾದ ಆ ಚಮೂಪತಿಗಳು ಅವನಂ ಸುತ್ತಿಕೊಂಡು—

ಎಲೈ ರಾಜಪುತ್ರನೇ, ಕಾರ್ಯದಕ್ಷರಾದ ಅಮಾತ್ಯರಾಕ್ಷಸರು ಪಾಟಲೀಪುರಾಧಿಪತ್ಯವನ್ನು ನಿನಗೆ ಉಂಟು ಮಾಡುವೆವೆಂದು ಪ್ರತಿಜ್ಞೆಯಂ ಮಾಡಿದ ರೀತಿಗೆ ಆ ನಗರವು ಸ್ವಾಧೀನವಾಯಿತು. ನಿಮ್ಮಂ ಜಾಗ್ರತೆಯಾಗಿ ಕರತರುವುದೆಂದು ಹೇಳಿ ಅಂದಳಮಂ ಕೊಟ್ಟು ನಮ್ಮಂ ಕಳುಹಿಸಿ ತಾವು ಮುಂಚಿತವಾಗಿ ತೆರಳಿದರು. ಇನ್ನು ಸಾವಕಾಶಮಂ ಮಾಡದೆ ಪಲ್ಲಕ್ಕಿಯನ್ನೇರ ಬಹುದು ಎನಲು; ಮಲಯಕೇತು—

ಹಾ ! ಇದೇನೋ ಮಹಾವಿಪತ್ತು ಸಂಭವಿಸಿತು. ನಮ್ಮಿಂದ ತಿರಸ್ಕೃತನಾಗಿ ಹೋದ ರಾಕ್ಷಸನು ನಮಗೆ ದಂಡಿಗೆಯಂ ಕಳುಹಿಸುವುದುಂಟೇ ? ಇದು ಆಶ್ಚರ್ಯವಾಗಿರುವುದು ! ಎಂದು ಚಿಂತಿಸುತ್ತ—

ಅಯ್ಯಾ ವಾಹಿನೀನಾಯಕರುಗಳಿರಾ, ನಮ್ಮ ಬಾಗುರಾಯಣನೆಲ್ಲಿಹನು ? ಎನಲು ;

ಅಯ್ಯಾ ನೃಪತನಯನೇ, ಆತನು ಅಮಾತ್ಯರಾಕ್ಷಸರೊಡನೆ ಆಗಲೇ ತೆರಳಿ ಹೋದನು ಎಂದರು. ಅದಕ್ಕೆ ಮಲಯಕೇತು—

ಅಕಟಕಟಾ ! ರಾಕ್ಷಸನಲ್ಲಿ ಅಪರಾಧಮಂ ಸ್ಥಾಪಿಸಿ ನಮ್ಮಿಂದ ಧಿಕ್ಕಾರಂ ಗೊಳಿಸಿ ನಮಗೆ ಆಪ್ತನಾಗಿದ್ದ ಬಾಗುರಾಯಣನೂ ಈಗ ರಾಕ್ಷಸನಿಗೆ ಅನುಚರ ನಾಗಿ ತೆರಳಿದ ಬಳಿಕ ಇನ್ನು ಸಂಶಯಪಡುವುದೇಕೆ ? ಪಾಟಲೀಪುರದಿಂದ ಬಂದಿ ದ್ದ ಈ ಜನರೆಲ್ಲರೂ ಶತ್ರು ಪ್ರೇರಿತರಾಗಿ ಸಮಯಮಂ ನೋಡುತ್ತ ನನ್ನಂ ವಿಪತ್ತಿಗೆ ಗುರಿಮಾಡಿದರು. ಇವರುಗಳ ಸಂಸರ್ಗವು ದೇಹದಲ್ಲಿ ಅಡಗಿರುವ ಸಾಂಸರ್ಗಿಕವ್ರಣವು ಸಮಯಾಂತರದಲ್ಲಿ ಪ್ರಕೋಪಿಸುವಂತಾಯಿತು. ನಾನು ಸಂಕಲ್ಪಿಸಿದುದೆಲ್ಲವೂ ಲುಬ್ಧನ ಧನದಂತೆ ವ್ಯರ್ಥವಾಯಿತು. ಭೃತ್ಯರೊಡನೆ ಸರಸ ವಾಡುವವನ ಗೌರವದಂತೆ ಕಾಂಭೋಜಾಧಿಪತಿಗಳ ಚತುರಂಗವೂ ಕೈತಪ್ಪಿಹೋ ಯಿತು. ದ್ರವ್ಯಮಂ ಕಳಕೊಂಡಾತನ ಪರಿವಾರದಂತೆ ಶಕ ಹೂಣ ಪತಾಕಿನಿ ಯೂ ಪಲಾಯನಂಗೆಯ್ದಿತು. ವಂಚಕರೊಡನೆ ಮಂತ್ರಾಲೋಚನೆಯಂಗೆಯ್ವವನ ಚಿಂತಿತಾರ್ಥಗಳಂತೆ ಚಿತ್ರವರ್ಮಾದಿಗಳೂ ಪಂಚತ್ವವನ್ನೆಯ್ದಿದರು. ಅತಿಭಾಷೆ ಯನ್ನಾಡುವವನ ಆಜ್ಞೆಯಂತೆ ಶಬರ ಸೈನ್ಯವೂ ಕೂಡ ಉಪಯೋಗಿಸದೆ ತೊಲ ಗಿ ಹೋಯಿತು. ದೂರದೃಷ್ಟಿಯಿಲ್ಲದೆ ಕಾರ್ಯಮಂ ಕಳಕೊಂಡವನ ಪಶ್ಚಾತ್ತಾ ಪದಂತೆ ಮಹಾವಿಪತ್ತು ಸಂಭವಿಸಿತು. ಮಿಂಚಿಹೋದ ಮಾತಿಗೆ ಮಿಡಿಕಿ ಫಲ ವೇನು ? ಈಗ ನಾನು ಎದುರುಬಿದ್ದರೆ ಅವರು ಅಪಮಾನಪೂರ್ವಕವಾಗಿ ಬಂಧಿಸಿ ನನ್ನಂ ಹಿಡಿದುಕೊಂಡು ಹೋಗುವರು ಎಂದು ಚಿಂತಿಸುತ್ತ—

ಅಯ್ಯಾ ಚಕ್ರರಕ್ಷಕರುಗಳಿರಾ, ಅಮಾತ್ಯರು ನಮ್ಮಂ ಕರತರುವಂತೆ ನಿಮ್ಮಂ ಕಳುಹಿಸಿದರೇ ? ಮಿತ್ರರಾದ ನಿಮ್ಮೆಲ್ಲರಿಗೂ ಈ ಕಾರ್ಯವು ಸಮ್ಮತ ವಾದಲ್ಲಿ ಹಾಗೇ ಆಗಲೆಂದು ಹೇಳಿಕೊಳ್ಳಲು ; ಆ ಮಾತಿಗೆ ಖಿನ್ನರಾದ ಭದ್ರಭ ಟಾದಿಗಳು—

ಅಯ್ಯಾ, ಅರಸನೇ, ಪುತ್ರ ಮಿತ್ರ ಕಳತ್ರ ಕ್ಷೇತ್ರಾದಿ ವ್ಯಾಮೋಹಕ್ಕೆ ತಗುಲಿ ದೇಹಮಂ ಸ್ವಾಮಿಯಾದವಂಗೆ ಮಾರಿಕೊಂಡು ಲೋಕಾಪವಾದಮಂ ಗಣ ನೆಗೆ ತಾರದಿರುವ ನಮ್ಮಂಥವರಿಗಲ್ಲದೆ ನಿನ್ನಂ ಅನ್ಯರಿಗೆ ವಶಮಂ ಮಾಡೋಣ ವೆಂಬುವುದು ಮತ್ತಾರಿಗೆ ಸಮ್ಮತವಾದೀತು ? ಚಿಂತಿಸಬೇಡ ನಿನ್ನ ಕ್ಷೇಮವೆ ಲ್ಲವೂ ನಮ್ಮ ಕ್ಷೇಮದಂತಾಗುವುದು. ಹೊರಡಬಹುದು ಎನಲು ? ಆ ವಾಕ್ಯಮಂ ಕೇಳಿ—ಚಂದ್ರಗುಪ್ತನ ದೆಸೆಯಿಂದ ಪ್ರಾಣಾಪತ್ತು ಸಂಭವಿಸಲಾರದೆಂದು ತಿಳಿದು ಮಲಯಕೇತುವು ಅಂದಳದಲ್ಲಿ ಕುಳಿತು ವಂಚಕರಂ ಆಪ್ತರೆಂದು ಭಾವಿಸಿದವನ ಬಾಳು ಎಂದಿದ್ದರೂ ಇಷ್ಟೇ ಸರಿ ಎಂದು ತಿಳಿದು ತಲೆವಾಗಿ ಮುಸುಕನ್ನಿಕ್ಕ

ಲು ; ಭದ್ರಭಟಾದಿಗಳು ಅಲ್ಲಿದ್ದ ರಾಜಪುತ್ರ ಪರಿವಾರಮಂ ಹಿಡಿದು ಕಾವಲಿಟ್ಟು ಹೊರಡಿಸಿ ಆ ಬಳಿಯೊ ಅಂತಃಪುರದ ರಕ್ಷಣೆಗೋಸುಗ ವಿಜಯವರ್ಮನೆಂಬ ಸೇನಾಪತಿಯಂ ನೇಮಿಸಿ ಮಲಯಕೇತುವಿನ ಪಲ್ಲಕ್ಕಿಯಂ ಸುತ್ತಿಕೊಂಡು ಆ ಶಾಹುರೀನಗರದಿಂದ ಹೊರಟು ಪಾಟಲೀಪುರಾಭಿಮುಖವಾಗಿ ಬರುತ್ತಿದ್ದರು.

ಇದೆಲ್ಲಮಂ ತಿಳಿದ ಸಿದ್ಧಾರ್ಥಕನು ರಾಕ್ಷಸನ ಮಾರ್ಗವನ್ನನುಸರಿಸಿ ಆತನಿಗೆ ಕಾಣಿಸಿಕೊಳ್ಳದಂತೆ ತೆರಳುವವನಾಗಿ ಶೋಣಾನದೀತೀರದಲ್ಲಿ ಸನ್ನದ್ಧ ವಾಗುತ್ತಿರುವ ಚಂದ್ರಗುಪ್ತನ ಪಡೆಯಂ ನೋಡುತ್ತ ಕೋಟೆ ಕೊತ್ತಲುಗಳಲ್ಲಿ ಯುದ್ಧಮಂ ಮಾಡಲುದ್ಯೋಗಿಸಿರುವ ಭಟರುಗಳ ತಂಡಂಗಳನ್ನವಲೋಕಿ ಸುತ್ತ ಪಾಟಲೀಪುರಮಂ ಪ್ರವೇಶಿಸಿ ಅರುಣೋದಯದಲ್ಲಿ ಜಪಾಸನದೊಳ್ಕು ಳಿತಿರುವ ಚಾಣಕ್ಯರಿಗೆ ದೂರದಿಂ ನಮಸ್ಕರಿಸಿ ನಿಂತಿರಲು ; ಚಾಣಕ್ಯನು ಜಪಮಂ ಪರಿಸಮಾಪ್ತಿಗೊಳಿಸಿ ಅವನಂ ನೋಡಿ—

ಎಲೈ ಸಿದ್ಧಾರ್ಥಕನೇ, ಕ್ಷೇಮದಿಂ ಬಂದೆಯಾ. ಕುಳ್ಳಿರು. ನೀನು ಹೋಗಿದ್ದ ಕಾರ್ಯವು ಹೇಗಾಯಿತು ? ರಾಕ್ಷಸನ ವೃತ್ತಾಂತವೇನು ? ಎನಲು ;

ಸ್ವಾಮಿಯವರ ಅಪ್ಪಣೆಯ ಮೇರೆಗೆ ಹೋಗಿದ್ದ ಕೆಲಸವೆಲ್ಲವೂ ಕೈವಶ ವಾಯಿತು ಎಂದು ತಾನು ಚಾಣಕ್ಯನ ಬಳಿಯಿಂದ ಹೊರಟದು ಮೊದಲು ಭದ್ರಭ ಟಾದಿಗಳು ಮಲಯಕೇತುವನ್ನು ಕೈಸೆರೆಯಾಗಿ ಹಿಡಿದು ತರುವವರೆಗೂ ಯಾವ ವೃತ್ತಾಂತಮಂ ವಿಜ್ಞಾಪಿಸಿ ರಾಕ್ಷಸನು ಮತ್ತೆಲ್ಲಿಯೂ ಹೋಗುವುದಕ್ಕೆ ದಿಕ್ಕು ತೋರದೇ ಈ ಪುರಕ್ಕೇ ಬಂದು ಖಡ್ಗಪಾಣಿಯಾಗಿ ಈ ಪಟ್ಟಣದ ಉತ್ತರದಿಕ್ಕಿನ ವಸಂತ ವನಮಂ ಹೊಕ್ಕು ಬೆತುಕೊಂಡಿರುವನು. ಸ್ವಾಮಿಯವರ ತಪಃಪ್ರಭಾ ವದಿಂದ ನಿರ್ವಿಘ್ನವಾಗಿ ಸಂಕಲ್ಪಿಸಿದ ಕಾರ್ಯಗಳೆಲ್ಲವೂ ಪಾತ್ರನರಿತು ಕೊಟ್ಟ ವನ ಸುಕೃತದಂತೆ ಸಫಲವಾದುವು ಎಂದು ವಿಜ್ಞಾಪಿಸಲು ; ಚಾಣಕ್ಯನು ಪರಮ ಸಂತೋಷಯುಕ್ತನಾಗಿ ಎದ್ದು ಆ ಸಿದ್ಧಾರ್ಥಕ ಸಹಿತನಾಗಿ ಚಂದ್ರಗುಪ್ತನ ಅರಮನೆಗೆ ಬಂದು ಆತನಿಂದ ಸಾಷ್ಟಾಂಗ ನಮಸ್ಕಾರ ಪೂರ್ವಕವಾದ ಷೋಡ ಶೋಪಚಾರಂಗಳಂ ಕೈಕೊಂಡು ಉಚ್ಚಾಸನದಲ್ಲಿ ಕುಳಿತು—

ಅಯ್ಯಾ ಕುಮಾರಕನೇ, ನೀನು ಆಜ್ಞಾಪಿಸಿದ ಕೌಮುದೀಮಹೋತ್ಸವ ವನ್ನು ನಿಲ್ಲಿಸಿ ನಾನು ನಿನ್ನಲ್ಲಿ ವಾಕ್ಕಲಹಂಗೆಯ್ದ ತಂತ್ರಕ್ಕೆ ಆದ ಫಲವನ್ನು ಈ ಸಿದ್ಧಾರ್ಥಕನು ಹೇಳುವನು ಕೇಳು ಎನಲಾಗಿ ; ಅವನು ಚಾಣಕ್ಯನ ಬಳಿ ಯಲ್ಲಿ ವಿಜ್ಞಾಪಿಸಿದಂತೆ ಸಕಲ ವಾರ್ತೆಯನ್ನೂ ಚಂದ್ರಗುಪ್ತನಿಗೆ ತಿಳುಹಿಸಲು ; ಆತನು ಪರಮಾಶ್ಚರ್ಯಭರಿತನಾಗಿ ಪುನಃ ಚಾಣಕ್ಯರಿಗೆ ನಮಸ್ಕರಿಸಿ—

ಬಾಲಕನಾದ ನನ್ನಿಂದ ತಿಳಿಯದೆ ನಡೆಸಲ್ಪಟ್ಟ ವಾಗಪರಾಧಗಳನ್ನು ಕ್ಷಮಿಸ ಬೇಕು. ತಮ್ಮ ಚರಣಾನುಗ್ರಹದಿಂದ ಬೆಟ್ಟದಂತಿರ್ದ ನನ್ನ ಸಕಲವಿಧವಿಪತ್ತೂ ಮಂಜಿನಂತೆ ಪರಿಹಾರವಾಗಿ ಈ ನಂದ ರಾಜ್ಯದ ಮಹಾ ಸಾಮ್ರಾಜ್ಯ ಪದವಿಯು ಮೊದಲಿಗಿಂತ ಅತಿಶಯವಾಗಿ ನನ್ನಲ್ಲಿ ಸ್ಥಿರವಾಯಿತು. ಅಣುವಿನೋಪಾದಿಯಲ್ಲಿ ರುವ ನನ್ನನ್ನು ಕೈಹಿಡಿದು ಮೇರುಪರ್ವತವಾಗಿ ಮಾಡಿದಿರಿ. ಈ ಕೀರ್ತಿಯು ಆಚಂದ್ರಾರ್ಕವಾಗಿ ಯಜಮಾನರ ಚರಣಕ್ಕೆ ಬಂದಿತು ಎಂದು ಕಾಲುಗಳನ್ನು ಹಿಡಿದಿರುವ ಚಂದ್ರಗುಪ್ತನನ್ನು ಚಾಣಕ್ಯನು ಎತ್ತಿ ಆಲಿಂಗಿಸಿ—

ಅಯ್ಯಾ ಕುಮಾರಕನೇ, ನಿನ್ನ ವಾಗಪರಾಧವೆಂದರೆ ಏನು? ಶತ್ರುನಿಗ್ರಹಾ ರ್ಥವಾಗಿ ನಾವು ಮಾಡಿದ್ದ ಸೂಕ್ಷ್ಮಮಂ ತಿಳಿದು ನಮ್ಮ ಮನೋನುಗುಣವಾಗಿ ನೀನು ನಡೆದುದು ನಮಗೆ ಸಂತೋಷಕರವಾಯಿತೇ ಹೊರತು ಅನ್ಯಥಾ ಇಲ್ಲ. ನೀನು ಆದಿಯಲ್ಲಿ ಪರ್ವತರಾಜನಿಂದ ಆದ ಉಪಕಾರಮಂ ಸ್ಮರಿಸಿಕೊಂಡು ಕೃತಜ್ಞನಾಗಿ ಈಗ ಕೈಸೆರೆಯಿಂದ ಬರುವ ಮಲಯಕೇತುವಂ ಬಹುವಿಧವಾಗಿ ಸನ್ಮಾನಂಗೊಳಿಸಿ ಅವನ ರಾಜ್ಯಕ್ಕಾತನಂ ಕಳುಹಿಸಿ ಆ ರಾಜಪುತ್ರನ ಕ್ಷೇಮಲಾ ಭಕ್ಕೆ ನೀನು ಬಾಧ್ಯನಾಗಿ ಆತನಂ ನಿನ್ನ ಸ್ವಾಧೀನದಲ್ಲಿಟ್ಟುಕೊಂಡು ಸುಖದಲ್ಲಿರು ವವನಾಗು ಎಂದು ಹೇಳಿ ಸಿದ್ಧಾರ್ಥಕನಂ ಕರೆದು—

ಎಲೈ, ಸ್ವಲ್ಪ ಕಾರ್ಯವಿಶೇಷಮಿರುವುದು. ಅದಂ ನಿರ್ವಹಿಸುವವನಾಗು ಎಂದು ಕಿವಿಯಲ್ಲಿ ಹೇಳತಕ್ಕ ಮಾತುಗಳಂ ಹೇಳಿ ಅವನಂ ಕಳುಹಿಸಿ ಆಗ ದೂರ ದಲ್ಲಿ ನಮಸ್ಕರಿಸುತ್ತಿರುವ ಬಾಗುರಾಯಣನಂ ನೋಡಿ ಮಂದಸ್ಮಿತವದನನಾಗಿ—

ಎಲೈ ಸೇನಾಪತಿಯೇ, ನೇಮಿಸಿದಂತೆ ಕಾರ್ಯವಮಂ ನಿರ್ವಹಿಸಿಕೊಂಡು ಕ್ಷೇಮದಿಂದ ಬಂದೆಯಾ? ಚಂದ್ರಗುಪ್ತನಿಗೆ ನಿಮ್ಮಂಥ ಆಪ್ತರಿರುವಲ್ಲಿ ಯಾವ ಕಾರ್ಯತಾನೇ ಅಸಾಧ್ಯವಾಗುವುದು? ಸಕಲ ಸೈನ್ಯಾಧಿಕಾರವೂ ನಿನ್ನನ್ನೇ ಹೊಂದುವುದರಿಂದ ಮೊದಲಿಗಿಂತಲೂ ಯಶೋವಂತನಾಗಿ ಸುಖದಲ್ಲಿರುವವನಾಗು ಎಂದು ಹೇಳಿ ಆತನಂ ದಿವ್ಯ ವಸ್ತ್ರಭೂಷಣಾದಿಗಳಿಂದ ಸನ್ಮಾನಗೊಳಿಸಿ—ಎಲೈ ವಾಹಿನೀರಕ್ಷಕನೇ, ಇಲ್ಲಿಗೆ ಬರುವ ಮಲಯಕೇತುವಿಗೆ ಸಕಲವಸ್ತುಸಮೇತ ವಾಗಿ ರಾಜಯೋಗ್ಯವಾದ ಬೀಡಾರವಮಂ ಬಿಡಿಸಿ ಲಜ್ಜೆಯಂ ಬಿಟ್ಟು ನೀನೇ ಕಾದಿ ದ್ದು ಆತನಿಗೆ ತನ್ನ ಪಟ್ಟಣಕ್ಕಿಂತಲೂ ಅತಿಶಯವಾಗಿ ರಾಜೋಪಚಾರಂಗಳಂ ನಡಸುವವನಾಗು ಎಂದು ನೇಮಿಸಿ ಕಳುಹಿಸಿ ತಾನಿದ್ದೆಡೆಗೆ ಬರುತ್ತಿರಲು; ಸಿದ್ಧಾ ರ್ಥಕನು ರಹಸ್ಯವಾಗಿ ಚಾಣಕ್ಯನು ತನಗೆ ಉಸಿರಿದ ರೀತಿಗೆ ಪಶುಲೋಮನಂ

ಬವನಂ ಕರೆದು ಅವನಿಗೆ ಹೇಳತಕ್ಕ ಮಾತುಗಳಂ ಹೇಳಿ ರಾಕ್ಷಸನಿರುವ ವನಮಂ ತೋರಿ ಅವನಂ ಅಲ್ಲಿಗೆ ಕಳುಹಿಸಿ ಚಂದನದಾಸನಂ ಶೂಲವು ನೆಟ್ಟಿರುವ ವಧ್ಯಸ್ಥಾನಕ್ಕೆ ಕರೆತರಲೋಸುಗ ಹೋಗುತ್ತಿದ್ದನು.

ಇತ್ತಲಾ ರಾಕ್ಷಸನು ತನಗೆ ಮಿತ್ರನಾದ ಚಂದನದಾಸನ ಯೋಗಕ್ಷೇಮಮಂ ವಿಚಾರಿಸುವುದಕ್ಕೆ ಉಪಾಯಮಂ ಕಾಣದೆ ಮೊದಲು ನಂದರು ಬಂದು ವಿನೋದವಿಹಾರಮಂ ಮಾಡುತ್ತಿದ್ದ ವನಪ್ರದೇಶಮಂ ನೋಡಿ ಭೂಪತಿಗಳಾದ ನಂದರು ದಿವ್ಯಾಶ್ವಂಗಳನ್ನೇರಿ ಬಂದು ಈ ಸರೋವರದಲ್ಲಿ ಜಲಕೇಳಿಯಂ ಮಾಡಿ ಈ ಚಿತ್ರಮಂಟಪದಲ್ಲಿ ಕುಳಿತು ನನ್ನೊಡನೆ ಸಲ್ಲಾಪಂಗೆಯ್ಯುತ್ತ ರಾಜಭೋಗವನ್ನನುಭವಿಸುತ್ತಿದ್ದ ಉದ್ಯಾನವಿದು. ಈಗ ರಕ್ಷಕರಿಲ್ಲದೆ ಜೀರ್ಣವಾಗಿ ನೋಡುವವರಂ ಉತ್ಸಾಹಶೂನ್ಯರನ್ನಾಗಿ ಮಾಡುತ್ತಿರುವುದು ಎಂದು ಹಂಬಲಿಸುತ್ತ ತೃಷ್ಣಾತುರನಾಗಿ ಅಲ್ಲಿರುವ ಕೊಳದಲ್ಲಿ ಜಲಪಾನಂಗೆಯ್ದು ಮುಂದೆ ತೆರಳುತ್ತಿರಲು; ಆಗ ಸಿದ್ಧಾರ್ಥಕನಿಂದ ನೇಮಿಸಲ್ಪಟ್ಟಿದ್ದ ಪಶುಲೋಮನೆಂಬ ಚಾಣಕ್ಯಶಿಷ್ಯನು ಆತನಂ ಕಂಡು ದೂರದಲ್ಲಿಯೇ ಒಂದು ವೃಕ್ಷದ ಕೊನೆಗೆ ಹಗ್ಗಮಂ ಹಾಕಿ ಕೆಳಗಿರುವ ಹುತ್ತದ ಮೇಲೆ ನಿಂತು ನೇಣಿನ ಕುಣಿಕೆಯಂ ತನ್ನ ಕೊರಳಿಗೆ ತಗುಲಿಸಿಕೊಂಡು ನಿಂತು ನಾಲ್ಕು ದಿಕ್ಕುಗಳಿಗೂ ಕೈಮುಗಿಯುತ್ತ ದೇವತೆಗಳಂ ಪ್ರಾರ್ಥಿಸುವವನಂತೆ—ಸಕಲಲೋಕೇಶ್ವರರಾಗಿ ಪ್ರಾಣಿಗಳ ಅಂತರಂಗಗಳಂ ತಿಳಿದು ಅವುಗಳಿಗೆ ಕರ್ಮಾನುಗುಣಫಲಗಳಂ ಕೊಡುವ ಇಂದ್ರಾದಿ ಸಕಲ ದೇವತೆಗಳಿರಾ, ನಿಮಗೆ ಸಾಷ್ಟಾಂಗಪ್ರಣಾಮಂಗೆಯ್ಯುವೆನು. ನಾನು ಜನನಾರಭ್ಯ ಮನಃಪೂರ್ವಕವಾಗಿ ಪಾಪಗಳನ್ನಾಚರಿಸಿದವನಲ್ಲ. ಲೋಕಾಪವಾದಕ್ಕೆ ಅಂಜದೆ ನಡೆದವನಲ್ಲ. ಡಾಂಭಿಕನಂತೆ ವ್ಯರ್ಥವ್ಯಯಮಂ ಮಾಡಿದವನಲ್ಲ. ಕಾಮಕ್ರೋಧಗಳ ವಶನಾದವನಲ್ಲ. ಆದರೆ ನಿಜಸಖನಿಗೆ ಅಕಾಲದಲ್ಲಿ ಉಂಟಾಗುವ ಮರಣಮಂ ನೋಡಲಾರದೆ ಪ್ರಾಣಂಗಳಂ ತ್ಯಜಿಸುತ್ತಿರುವ ನನಗೆ ಆತ್ಮಹತ್ಯಾದೋಷಂ ಸಂಭವಿಸದಂತೆ ಕೃಪೆಮಾಡಬೇಕೆಂದು ಕೂಗಿ ಹೇಳಿಕೊಳ್ಳುತ್ತಿರುವ ವಾಕ್ಯಮಂ ಕೇಳಿ ರಾಕ್ಷಸನು—ಇವನಾರೋ ನಮ್ಮಂತೆಯೇ ಮಿತ್ರನಾಶಮಂ ನೋಡಲಾರದೆ ವ್ಯಸನಯುಕ್ತನಾಗಿ ಪ್ರಾಣಮಂ ತ್ಯಜಿಸುತ್ತಲಿರುವನು. ಇದಂ ವಿಚಾರಿಸಿ ನೋಡುವೆನೆಂದು ಅವನ ಸಮೀಪಕ್ಕೆ ಬಂದು—

ಎಲೈ ಪುರುಷನೇ, ನೀನಾರು? ದುಷ್ಟ ಸ್ತ್ರೀಯರುಗಳಂತೆ ಅಸುವಂ ನೀಗಲಿಚ್ಛೈಸುತ್ತಿರುವೆ. ಸ್ತ್ರೀ ವಿಯೋಗದಿಂದಲೋ? ಕೊಟ್ಟ ಭಾಷೆಯು

ಕೆಟ್ಟುದರಿಂದಲೋ? ಏನೋ ಪ್ರಮಾದಂ ಘಟಿಸಿದುದರಿಂದಲೋ? ಬಲವದ್ವಿರೋಧಮುಂಟಾದುದರಿಂದಲೋ? ಅಥವಾ ವಿತ್ತಾರ್ಥಮಾಗಿಯೋ? ಯಥಾರ್ಥಮಂ ಹೇಳೆಂದು ಕೇಳಲು; ಪಶುಲೋಮನು—

ಅಯ್ಯಾ ಮಾರ್ಗಸ್ಥನೇ, ಭಾಗ್ಯಹೀನನಾದ ನನ್ನ ವೃತ್ತಾಂತಮಂ ಯಾಕೆ ಕೇಳುವೆ? ಇದರಿಂದ ನಿನಗೇನು ಫಲ? ವೃಥಾ ಸಾವಕಾಶಮಾಗುವುದು. ನಿನ್ನ ಮಾರ್ಗಮಂ ಹಿಡಿದು ತೆರಳುವವನಾಗು ಎನಲು; ರಾಕ್ಷಸನು—

ಎಲೈ ಪುರುಷನೇ, ವಿಶ್ವಾಸದಿಂದ ಕೇಳುವವರಿಗೆ ಉತ್ತರಮಂ ಹೇಳದೆ ಪ್ರಾಣಗಳಂ ಹೋಗಲಾಡಿಸಲೋಸುಗ ತ್ವರಿತಪಡುವೆ ಯಾಕೆ? ವಿಮಾನಸ್ಥ ದೂತರು ನಿನ್ನಂ ತ್ವರೆ ಪಡಿಸುವರೋ? ಎಂದು ಕೇಳುತ್ತಿರಲು; ಆ ಪುರುಷನು—

ಅಷ್ಟಕ್ಕೆ ನಾನು ಪಾತ್ರನೆಂತಹನು? ಕೌತುಕವಿದ್ದರೆ ಹೇಳುವೆನು—ಈ ಪಾಟಲೀಪುರದಲ್ಲಿ ನನಗೆ ಪರಮಮಿತ್ರನಾದ ವಿಷ್ಣುದಾಸನೆಂಬ ಓರ್ವ ವರ್ತಕನಿರ್ಪಂ. ಆತನಿಗೆ ಸಂಭವಿಸಿರುವ ಬುದ್ಧಿಪೂರ್ವಕ ಮರಣಮಂ ಕೇಳಿ ಅದಂ ನೋಡಲಾರದೆ ಮುಂಚಿತವಾಗಿಯೇ ಅಸುವಂ ತೊರೆಯುವುದುತ್ತಮವೆಂದು ನಿಶ್ಚಯಿಸಿ ಜನರಹಿತವಾದ ಈ ಸ್ಥಾನಕ್ಕೆ ಬಂದೆನು. ಇದು ನನ್ನ ವೃತ್ತಾಂತವು ಎಂದು ಹೇಳಲು; ರಾಕ್ಷಸನು—

ಎಲೈ ಪುರುಷನೇ, ಆ ವಿಷ್ಣುದಾಸನೆಂಬವನಿಗೆ ಉಂಟಾದ ಬುದ್ಧಿಪೂರ್ವಕ ಮರಣಕ್ಕೆ ಕಾರಣವೇನು? ಎಂದೆನಲು; ಪಶುಲೋಮನು—

ಅಯ್ಯಾ ಪಥಿಕನೇ, ಆ ಆಶ್ಚರ್ಯವನ್ನೇನೆಂದು ಹೇಳುವೆನು! ವಿಷ್ಣುದಾಸನು ತನಗೆ ಮಹೋಪಕಾರಿಯಾದ ಚಂದನದಾಸನೆಂಬವನಿಗೆ ಸಂಭವಿಸಿದ ವಿಪತ್ತಂ ತಿಳಿದು ಆ ವ್ಯಸನಮಂ ಸಹಿಸಲಾರದೆ ಸ್ವಗೃಹ ಸರ್ವಸ್ವಮಂ ದೀನಾನಾಥರಿಗೆ ಕೊಟ್ಟು ಅಗ್ನಿಪ್ರವೇಶಮಂ ಮಾಡುವೆನೆಂದು ನಿಶ್ಚಯಿಸಿ ಹೊರಟುದಂ ತಿಳಿದು ಅವನಂ ನಿಲ್ಲಿಸುವುದಕ್ಕೆ ಉಪಾಯಮಂ ಕಾಣದೆ ನನ್ನ ಸ್ನೇಹಿತನಂತೆ ನಾನೂ ಭೂಲೋಕದಾಶೆಯಂ ಬಿಟ್ಟು ಈ ಯತ್ನಮಂ ಮಾಡಿರುವೆನು ಎನಲು; ರಾಕ್ಷಸನು ತನ್ನ ಮನಸ್ಸಿನಲ್ಲಿ—ಅಹಹ! ಏನೋ ಪ್ರಮಾದ ಬಂದಂತೆ ತೋರುತ್ತಿದೆ. ಚಂದನದಾಸನ ಯೋಗಕ್ಷೇಮಮಂ ವಿಚಾರಿಸಲೆಣಿಸಿ ಬಂದ ಸಮಯದಲ್ಲಿ ಈ ಅಶ್ಲೀಲಮಂ ಕೇಳಿದೆನು. ಇದುವರೆಗೆ ಆತನು ಜೀವವಂತನಾಗಿದ್ದರೆ ನನ್ನ ದೇಹದ ಆಶೆಯನ್ನಾದರೂ ಬಿಟ್ಟು ಆತನಿಗೆ ಕ್ಷೇಮಮುಂಟಾಗುವಂತೆ ಮಾಡುವೆನು. ಇಲ್ಲದಿದ್ದರೆ ಅವನ ಮಾರ್ಗವನ್ನೆಯ್ದುವೆನೆಂದು ನಿಶ್ಚಯಿಸಿ—

ಎಲೈ ಪುರುಷನೇ, ಆ ಚಂದನದಾಸನಿಗುಂಟಾದ ವಿಪತ್ತಂ ವಿವರಿಸಿ ಹೇಳು ವವನಾಗು ಎಂದು ರಾಕ್ಷಸನು ಕೇಳಲು; ಪಶುಲೋಮನು—

ಅಯ್ಯಾ ದಾರಿಗನೇ, ದೈವವಿಲಾಸಮಂ ಏನೆಂದು ಹೇಳಲಿ! ಚಂದನದಾಸ ನೆಂಬವನು ಅಮಾತ್ಯರಾಕ್ಷಸನಿಗೆ ಪರಮಮಿತ್ರನಂತೆ. ಆತನು ತನಗೆ ಆತಂಕ ಮುಂಟಾದ ಸಮಯದಲ್ಲಿ ತನ್ನ ಹೆಂಡರುಮಕ್ಕಳಂ ಯಾರಿಗೂ ತಿಳಿಯದಂತೆ ಆ ಬಳೆಗಾರ ಸೆಟ್ಟಿಯ ವಶಮಂ ಮಾಡಿ ಪುರಮಂ ಬಿಟ್ಟು ದೇಶಾಂತರಗತನಾದನಂತೆ. ಆ ಬಳಿಕ ಚಾಣಕ್ಯನು ಚಂದನದಾಸನಂ ಕರೆಯಕಳುಹಿಸಿ ರಾಕ್ಷಸನ ಗೃಹ ಜನಮಂ ತಂದು ತೋರೆಂದು ನಿರ್ಬಂಧ ಪಡಿಸಲು ; ಆಗ ಆ ಸೆಟ್ಟಿಯು ತನ್ನ ವಶದಲ್ಲಿ ಅಮಾತ್ಯನ ಕುಟುಂಬದವರಿಲ್ಲದುದರಿಂದಲೋ! ಅಥವಾ ಸ್ನೇಹಾಭಿ ಮಾನದಿಂದಲೋ! ಆತನ ಮಾತಿಗೆ ಒಡಂಬಡದೆ ಇರಲು; ಕ್ರುದ್ಧನಾದ ಚಾಣ ಕ್ಯನು ಚಂದನದಾಸನಂ ಶೂಲಕ್ಕೆ ಹಾಕುವುದೆಂದು ಭಟರಿಗೆ ನೇಮಿಸಲು; ಅವರು ಅವನಂ ವಧ್ಯಸ್ಥಾನಕ್ಕೆ ಕರಕೊಂಡು ಹೋಗುವರೆಂಬ ವಾರ್ತೆಯಂ ಕೇಳಿ ನನ್ನ ಮಿತ್ರನಾದ ವಿಷ್ಣುದಾಸನು ಪುರದ ಹೊರಗೆ ಅಗ್ನಿಕುಂಡಮಂ ಮಾಡುವಂತೆ ಭೃತ್ಯರಿಗೆ ನೇಮಿಸಿ ತನ್ನ ಮಂದಿರಮಂ ಬಿಟ್ಟು ಹೊರಡುವುದಂ ನೋಡಿ ನಾನು ಈ ಯತ್ನಮಂ ಮಾಡಬಂದೆನು ಎನಲು; ಆ ವಾಕ್ಯಮಂ ಕೇಳಿ ರಾಕ್ಷಸನು— ಇನ್ನು ವಿಳಂಬಮಂ ಮಾಡಲಾಗದು ಎಂದು ತಿಳಿದು—

ಎಲೈ ಪುರುಷನೇ, ನೀನು ಜೀವವನ್ನೇಕೆ ತ್ಯಜಿಸಬೇಕು ? ಚಂದನದಾಸನ ವಿಪತ್ತು ಪರಿಹಾರವಾಗುವುದೆಂದು ಹೇಳಿ ವಿಷ್ಣುದಾಸನಂ ನಿಲ್ಲಿಸುವವನಾಗು. ನಡೆ ಎಂಬುದಾಗಿ ಉಸುರಿ ಶಿಬಿರಾಯನಿಗೆ ಉಂಟಾದಂತೆ ಚಂದನದಾಸನಿಗೆ ಶಾಶ್ವತ ಯಶಸ್ಸುಂಟಾಯಿತೆಂದು ಆಲೋಚಿಸುತ್ತಿರಲು; ಪಶುಲೋಮನು ನೋಡಿ—

ಅಯ್ಯಾ ಆಗಂತುಕನೇ, ಚಂದನದಾಸನ ಕಷ್ಟವು ಹೇಗೆ ಪರಿಹಾರವಾ ದೀತು ? ನೀನು ಜೋತಿಷಜ್ಞನೋ ಎನಲು ; ಆ ಮಾತಿಗೆ ರಾಕ್ಷಸನು ತನ್ನ ಕೈಯ್ಯ ಖಡ್ಗಮಂ ಝಳುಪಿಸುತ್ತ—

ಎಲೈ ಪ್ರಿಯನೇ, ಈ ನನ್ನ ಅಸಿಪತ್ರವೇ ಚಂದನದಾಸನ ವಿಪತ್ತಂ ನಿವ ರ್ತಿಸುವುದೆನಲು; ಅವನು ಅದಂ ನಿರೀಕ್ಷಿಸಿ ಈತನು ಯುದ್ಧಮುಖದಿಂದ ಚಂದ ನದಾಸನಂ ಬಿಡಿಸಬೇಕೆಂದು ಎಣಿಸಿರುವವನಾದುದರಿಂದ ಮುಂದೇನು ಕಾರ್ಯವೆಂ ತಾಗುವುದೋ? ಅದುಕಾರಣ ಈತನು ಹಿಡಿದಿರುವ ಕತ್ತಿಯಂ ಬಿಸುಡುವಂತೆ ಮಾಡಬೇಕೆಂದು ನೆನಸಿ—

ಸ್ವಾಮಿಾ ಪ್ರಿಯಾನೀಕರೇ, ಚಂದನದಾಸನಿಗೆ ಆಪದ್ಬಂಧುಗಳಾಗಿ ಬದಗಿರುವ ನಿಮ್ಮನ್ನು ಯಾರೆಂದು ತಿಳಿಯಬೇಕು ? ಎನಲು ; ರಾಕ್ಷಸನು—

ಎಲೈ ಸುಹೃದನೇ, ಪ್ರಭುಗಳಾದ ನಂದರಂ ಹೋಗಲಾಡಿಸಿಕೊಂಡು ಸಖಿನನ್ನಾಪತ್ತಿಗೆ ತಗುಲಿಸಿ ರಾಕ್ಷಸರಂತೆ ದಯಾಹೀನನಾದ ನನ್ನನ್ನು ಅಮಾತ್ಯ ರಾಕ್ಷಸನೆಂದು ತಿಳಿಯುವವನಾಗು ಎನಲು ; ಪಶುಲೋಮನು ಅಷ್ಟುಮಾತ್ರಕ್ಕೇ ತಿಳಿದುಕೊಂಡವನಂತೆ ಆಶ್ಚರ್ಯಪಡುತ್ತ ಕೊರಳಿಗೆ ಹಾಕಿದ್ದ ಹಗ್ಗಮಂ ತೆಗೆದು ಬಿಸುಟು—

ಸ್ವಾಮಿಾ, ಅಸಹಾಯಶೂರರಾದ ತಮಗಲ್ಲದೆ ಈ ನಿಶ್ಚಯವು ಲೋಕ ದಲ್ಲಿ ಮತ್ತಾರಿಗುಂಟಾಗುವುದು ? ನಮ್ಮೆಲ್ಲರ ವಿಪತ್ತುಗಳೆಲ್ಲವೂ ಈಗ ತೊಲ ಗಿದುವು. ಸಂಶಯಮಂ ಬಿಟ್ಟೆನು. ಆದರೆ ಇನ್ನೊಂದು ವಿಜ್ಞಾಪನೆಯುಂಟು. ತಾವು ಈಗ ಶೌರ್ಯಮುಖದಿಂದ ಮಿತ್ರನಾದ ಚಂದನದಾಸನಿಗೆ ಕ್ಷೇಮವನ್ನುಂಟುಮಾಡುವೆವೆಂದು ಶಪಥಮಂ ಮಾಡಿದಿರಿ. ಇದರಲ್ಲಿ ಒಂದು ಪ್ರಮಾದ ತೋರುವುದು. ಅದು ಹೇಗೆಂದರೆ—ಮೊದಲು ಚಾಣಕ್ಯನು ಶಕಟದಾಸನೆಂಬವನಂ ಶೂಲಕ್ಕೆ ಹಾಕುವಂತೆ ನೇಮಿಸಿ ವಧ್ಯಸ್ಥಾನಕ್ಕೆ ಕಳುಹಿಸಲು ; ಆ ಸಮಯದಲ್ಲಿ ಯಾರೋ ಒಬ್ಬ ಪುರುಷನು ಖಡ್ಗಪಾಣಿಯಾಗಿ ಬಂದು ಕರೆದುಕೊಂಡು ಹೋಗುತ್ತಿರುವ ಘಾತುಕರ ಮೇಲೆ ಬಿದ್ದು ಅವರನ್ನೋಡಿಸಿ ಶಕಟದಾಸನಂ ಬಿಡಿಸಿಕೊಂಡು ಹೋದನಂತೆ. ಅದಂ ಕೇಳಿ ಕ್ರುದ್ಧನಾದ ಚಾಣಕ್ಯನು ಶಕಟದಾಸನಂ ಬಿಟ್ಟ ಅಪರಾಧಕ್ಕೆ ಆ ಕಡಿಗರಂ ಸಂಹಾರಂಗೆಯ್ಸಿ ಅಂದು ಮೊದಲುಗೊಂಡು ರಾಜಾಪರಾಧಿಗಳಂ ವಧ್ಯಸ್ಥಾನಕ್ಕೆಡೆಗೊಂಡು ಹೋಗುವಲ್ಲಿ ಆ ಬಳಿಗೆ ಮತ್ತಾರಾದರೂ ಆಯುಧಪಾಣಿಗಳಾಗಿ ಬಂದರೆ ಅವರು ಸಮಿಾಪಗತರಾಗುವುದಕ್ಕೆ ಮುನ್ನಮೇ ಯಾವುದನ್ನೂ ನೋಡದೆ ಆ ಕ್ಷಣದಲ್ಲಿಯೇ ಆ ರಾಜದ್ರೋಹಿಗಳಂ ಸಂಹರಿಸಿ ಆ ಬಳಿಕ ಖಡ್ಗಹಸ್ತನಾಗಿ ಬಂದವನಂ ಬಂಧಿಸಿ ತರಬೇಕೆಂದು ಚಾಣಕ್ಯನ ಆಜ್ಞೆಯಾಗಿದೆಯಂತೆ. ಈಗ ಚಂದನದಾಸನಂ ವಧ್ಯಸ್ಥಾನಕ್ಕೆ ಕರತರುವ ಸಮಯವು ಸನ್ನಿಹಿತವಾಗಿದೆ. ಈ ವೇಳೆಯಲ್ಲಿ ಆತನಂ ರಕ್ಷಿಸುವುದು ಸತ್ಯ ಮಾದೊಡೆ ಶೂಲದೆಡೆಗೆ ನೀವು ಖಡ್ಗಪಾಣಿಗಳಾಗಿ ಹೋಗುವುದು ತೊಂದರೆಯಾಗಿ ತೋರುತ್ತಿದೆ. ಕಾಲೋಚಿತಜ್ಞರಾದ ನಿಮ್ಮಂಥವರಿಗೆ ವಿಶೇಷವಾಗಿ ವಿಜ್ಞಾಪಿಸಲು ಶಕ್ತನಲ್ಲವೆಂದು ಹೇಳುತ್ತಿರಲು ; ಅದನ್ನಾಕರ್ಣಿಸಿ ರಾಕ್ಷಸನು ತನ್ನ ಮನಸ್ಸಿನಲ್ಲಿ—ಮೊದಲು ಚಾಣಕ್ಯನು ಶಕಟದಾಸನಂ ಶೂಲಕ್ಕೆ ಹಾಕು

ವಂತೆ ನೇಮಿಸಿ ಕಳುಹಿಸಿ ಸಂಗಡಲೇ ಸಿದ್ಧಾರ್ಥಕನನ್ನಟ್ಟಿ ಬಿಡಿಸಿದಂತೆ ಮಾಡಿ ನನ್ನ ಬಳಿಗೆ ಕಳುಹಿಸಿದ್ಧಾನೋ? ಎಂದರೆ ಶಕಟದಾಸನಂ ಬಿಟ್ಟ ಘಾತುಕರಂ ಸಂಹರಿಸುವುದಕ್ಕೆ ನಿಮಿತ್ತಮಿಲ್ಲ. ದ್ವೇಷದಿಂದಲೇ ಶಕಟದಾಸನಂ ವಧ್ಯಸ್ಥಾನಕ್ಕೆ ಕಳುಹಿಸಿದ್ದಲ್ಲಿ ಅದೃಷ್ಟದಿಂದ ತಪ್ಪಿಸಿಕೊಂಡವನಾಗಿ ನನ್ನ ಬಳಿಗೆ ಬಂದು ತನಗೆ ಒದಗಿದ್ದ ವಿಪತ್ತಂ ಪರಿಹರಿಸಿದನೆಂದು ಸಿದ್ಧಾರ್ಥಕನಿಗೆ ಉಚಿತಮಂ ಕೊಡಿಸಿದನೋ! ಎಂಬುದಾಗಿ ನಿಶ್ಚಯಿಸೋಣ ಎಂದರೆ ಶಕಟದಾಸನು ಚಂದ್ರಗುಪ್ತನ ಕಾರ್ಯಕ್ಕನುಕೂಲವಾಗಿ ಕಪಟಪತ್ರಿಕೆಯಂ ಸಿದ್ಧಾರ್ಥಕನ ಕೈಯ್ಯಲ್ಲಿ ಕೊಡುವುದಕ್ಕೆ ಕಾರಣವಿಲ್ಲ. ಯಾವ ತೆರದಲ್ಲಿ ಯೋಚಿಸಿ ನೋಡಿದರೂ ಚಾಣಕ್ಯನ ತಂತ್ರೋಪಾಯವು ಹೀಗೆಂದು ನಿಶ್ಚಯಿಸುವುದಕ್ಕೆ ಅಶಕ್ಯವು. ಅದು ಹೇಗಾದರೂ ಆಗಲಿ. ಪ್ರಕೃತದಲ್ಲಿ ಈ ಪುರುಷನು ಹೇಳಿದ ವಾಕ್ಯಮಂ ಭಾವಿಸಿ ನೋಡಿದರೆ ಶೌರ್ಯಮುಖದಿಂದ ಚಂದನದಾಸನಿಗೆ ಕ್ಷೇಮಮುಂಟಾಗಲಾರದು. ಉಪಾಯಾಂತರದಿಂದ ನಾವೀರ್ವರೂ ಕ್ಷೇಮವಂತರಾಗೋಣ ಎಂದರೆ ಅದು ಕಾಲಾಂತರದಲ್ಲಲ್ಲದೆ ಈಗ ಉಪಯೋಗಿಸಲಾರದು. ನನ್ನ ನಿಮಿತ್ತದಿಂದಲೇ ವಿಪತ್ತಿಗೆ ತಗುಲಿ ನಷ್ಟವಾಗುವ ಚಂದನದಾಸನಂ ಕಣ್ಣಿಂ ನೋಡುವುದಕ್ಕಿಂತಲೂ ಅವನಿಗುಂಟಾಗುವ ಶೂಲಾರೋಹಣಕ್ಕೆ ನಾನೇ ಸಮ್ಮತನಾಗಿ ಪ್ರಾಣಗಳನ್ನಾದರೂ ತ್ಯಜಿಸಿ ಮಿತ್ರನಾದ ಚಂದನದಾಸನಂ ಬಿಡಿಸುವುದೇ ಧರ್ಮಮೆಂದು ತಿಳಿದು ತನ್ನ ಕೈಯ್ಯಲ್ಲಿದ್ದ ಖಡ್ಗಮಂ ಬಿಸುಟು ಶೂಲಸ್ಥಾನಕ್ಕೆ ಹೋಗುತ್ತಿರಲು ;

ಸ್ವಾಮೀ, ತಾವು ಕೊಟ್ಟ ಅಭಯವಚನದಿಂದ ಶಪಥವನ್ನಾದರೂ ಮಾಡಿ ನನ್ನ ಮಿತ್ರನಾದ ವಿಷ್ಣುದಾಸನಂ ಪ್ರಾಣತ್ಯಾಗೋದ್ಯೋಗದಿಂದ ತಡೆದು ಬರುವೆನು ಎಂದು ಹೇಳಿ ಪಶುಲೋಮನು ತ್ವರಿತದಿಂದ ಓಡಿಹೋಗಿ ಚಾಣಕ್ಯನಿಗೆ ರಾಕ್ಷಸನ ವರ್ತಮಾನವೆಲ್ಲವನ್ನೂ ಹೇಳಲು ; ಚಾಣಕ್ಯನು—

ಎಲೈ ಪಶುಲೋಮಕನೇ, ಸಿದ್ಧಾರ್ಥಕನು ಚಂದನದಾಸನಂ ವಧ್ಯಸ್ಥಾನಕ್ಕೆ ಕರೆದುಕೊಂಡು ಹೋದನೋ ಇಲ್ಲವೋ? ತಿಳಿದುಬಾರೆಂದು ನೇಮಿಸಿ ಕಳುಹಿಸಲಾಗಿ ಆತನು ಹೋಗುತ್ತಿರಲು ; ಆಗ ಸಿದ್ಧಾರ್ಥಕನು ಚಾಣಕ್ಯನ ಸಂಕೇತಪ್ರಕಾರ ವೇಷಧಾರಿಗಳಾದ ಘಾತುಕರಂ ಕಳುಹಿಸಿ ಚಂದನದಾಸನಂ ಹಿಡಿದು ಅವನ ಕೊರಳಿಗೆ ಎಕ್ಕದ ಹೂವಿನ ಸರಮಂ ಹಾಕಿಸಿ ಪರುಷವಾದ ಧ್ವನಿಯಿಂದ ಸಾರಿಸಿಕೊಂಡು ರಾಜವೀಥಿವಿಡಿದು ವಧ್ಯಸ್ಥಾನಕ್ಕೆ ಕರದೊಯ್ಯುತ್ತಿ

ರಲು ; ಆಗ ಪುರಜನವು ನೆರೆದು ನಿರೀಕ್ಷಿಸಿ ವ್ಯಸನಪಡುತ್ತ ಮಿತ್ರಕಾರ್ಯ ಕ್ಕೋಸುಗ ಶೂಲಾರೋಹಣಕ್ಕೆ ಸಮ್ಮತನಾಗಿರುವ ಚಂದನದಾಸನಂ ಶ್ಲಾಘಿಸು ತ್ತಿರಲು ; ಆಗ ಪತಿಯನ್ನಗಲದೆ ಇರುತ್ತಿದ್ದ ಆತನ ಪತ್ನಿಯು ಪುತ್ರಸಮೇತ ಳಾಗಿ ರೋದನಮಂ ಮಾಡುತ್ತ ತನ್ನ ಹಿಂಗಡೆಯಲ್ಲಿಯೇ ಬರುತ್ತಿರುವುದಂ ನೋಡಿ ಚಂದನದಾಸನು—

ಎಲೈ ಪ್ರಾಣಪ್ರಿಯಳೇ, ಅನ್ಯಾಯವನ್ನಾಚರಿಸಿ ರಾಜದಂಡನೆಗೆ ಒಳಗಾದ ವರ ಹೆಂಡರುಗಳಂತೆ ಸುಹೃದರ್ಥವಾಗಿ ಪ್ರಾಣತ್ಯಾಗಮಂ ಮಾಡಲೆಣಿಸಿರುವ ನನ್ನ ನಿಮಿತ್ತದಿಂದ ವೃಥಾ ರೋದನವನ್ನೇಕೆ ಮಾಡುವೆ? ಬೇಟೆಗಾರರು ಮೃಗ ಗಳ ತಾರತಮ್ಯಮಂ ನೋಡದಂತೆ ಈ ಘಾತುಕರು ನನ್ನಂ ಕೊಂಡೊಯ್ವರು. ನೀನು ನನ್ನ ಮೇಲಣ ಆಶೆಯಂ ಬಿಟ್ಟು ಹಿಂದಕ್ಕೆ ಹೋಗುವವಳಾಗು ಎಂದು ಪತ್ನಿಗೆ ನುಡಿಯುತ್ತ ಶೂಲಸ್ಥಾನಕ್ಕೆ ನಡೆಯುತ್ತಿರಲು ; ಆಗ ಒಬ್ಬ ಕಡಿಗಂ ಬಂದು—

ಎಲೈ ಸೆಟ್ಟಿಯೇ, ಶೂಲವು ಸಮೀಪವಾಯಿತು. ನೀನು ಅಲಂಕರಿಸಿಕೊಂ ಡಿರುವ ಭೂಷಣಂಗಳು ನಮಗೆ ಸಲ್ಲತಕ್ಕವುಗಳು. ಅವುಗಳಂ ತೆಗೆದುಕೊಟ್ಟು ನಿನ್ನ ಸ್ವಜನಮಂ ಹಿಂದಕ್ಕೆ ಹೋಗುವಂತೆ ನೇಮಿಸುವವನಾಗು ಎನಲು ; ಅದಂ ಕೇಳಿ ಮತ್ತೂ ಶೋಕಮಂ ಮಾಡುತ್ತಿರುವ ಪತಿಯಂ ನೋಡಿ ಚಂದನದಾಸನು—

ಎಲೈ ಪ್ರಿಯಳೇ, ಇನ್ನು ದುಃಖಿಸುವುದಂ ನಿಲ್ಲಿಸಿ ಪುತ್ರನಂ ಕರೆದು ಕೊಂಡು ಗೃಹಮಂ ಸೇರುವವಳಾಗು. ಮುಂದೆ ನಡೆಯುವ ಘೋರಕರ್ಮಮಂ ಈ ಶಿಶುವು ನೋಡಿ ಭೀತಿಪಟ್ಟು ಎಂತು ಜೀವಿಸುವುದು? ಎಂದು ಪುತ್ರನ ಶಿರ ಸ್ಸಂ ನೇವರಿಸುತ್ತ ಕಂಬನಿಗಳಂ ತುಂಬುತ್ತಿರಲು ; ಆಗ ಆತನ ಮಡದಿಯು—

ಹಾ ! ನಾಥನೇ ! ಇನ್ನು ನಿನ್ನನ್ನಗಲಿ ಯಾವ ಪುರುಷಾರ್ಥಕ್ಕೆ ಪ್ರಾಣಧಾ ರಣಮಂ ಮಾಡಿಕೊಂಡಿರಲಿ? ನಾನೂ ಸಂಗಡವೇ ಬರುವೆನೆಂದು ಪಾದದ ಮೇಲೆ ಬಿದ್ದು ಹಂಬಲಿಸುತ್ತಿದ್ದಳು. ಆಕೆಯಂ ನೋಡಿ—

ಎಲೈ ಮರುಳೇ, ಈ ಬಾಲಕನು ಲೋಕವ್ಯವಹಾರವನ್ನರಿತವನಲ್ಲ. ಈತನಂ ರಕ್ಷಿಸಿಕೊಂಡು ಪ್ರಾಣಧಾರಣೆಯಂ ಮಾಡಿಕೊಂಡಿರುವವಳಾಗು ಎಂದು ಚಂದನದಾಸನು ಉಸುರುತ್ತಿರಲು ; ಆ ಸತಿಯು—

ಹಾ ! ಕಾಂತನೇ ! ಪ್ರವಾಸಮಂ ಮಾಡುವವರ ಪತ್ನಿಯರುಗಳು ಕೆಲವು ಕಾಲಾನಂತರದಲ್ಲಿಯಾದರೂ ಪತಿ ಮುಖಾವಲೋಕನಾಭಿಲಾಷೆಯಿಂದ ಪ್ರಾಣ

ಧಾರಣೆಯಂ ಮಾಡಿಕೊಂಡಿರುವರು. ಲೋಕಾಂತರವನ್ನೆಯ್ದುವ ನಿನ್ನನ್ನಗಲಿ ಅನಾಥಳಾಗಿ ಜೀವಿಸಿಕೊಂಡು ನಾನಿರುವುದಕ್ಕಿಂತಲೂ ನಿನ್ನಂ ಬೆಂಬಿಡದೆ ತೆರಳುವುದು ಶ್ರೇಯಸ್ಕರವು. ಸೃಷ್ಟಿಸಿದ ದೈವವೇ ಈ ಬಾಲಕನಂ ರಕ್ಷಿಸುವುದು. ಸತ್ಯವು ಪ್ರಾಮಾಣಿಕವಾದರೆ ನಮ್ಮಿರ್ವರಿಗೂ ಅದೇ ಸದ್ಗತಿಯಂ ಕೊಡುವುದು ಎಂದು ಹೇಳಿ ಪುತ್ರನಂ ನೋಡಿ—

ಎಲೈ ಪಸುಳೆಯೇ, ನಿಮ್ಮ ತಂದೆಯ ಮುಖಮಂ ಈಗಲೇ ಚೆನ್ನಾಗಿ ನೋಡಿ ನಿನಗೆ ಏನು ಬುದ್ಧಿಯಂ ಹೇಳುವನೋ ಕೇಳಿಕೊಳ್ಳುವವನಾಗು ಎಂದು ನುಡಿಯುತ್ತಿರಲು ; ಹಾಗೆಯೇ ಆ ಪುತ್ರನು ಆತನ ಚರಣಂಗಳ ಮೇಲೆ ಬಿದ್ದು ಹೊರಳುತ್ತ—

ಎನ್ನಂ ಪೆತ್ತವನೇ, ಇನ್ನು ಯಾರನ್ನು ಅಪ್ಪಾಜಿಯವರೇ ಎಂದು ಭಾವಿಸಿ ಕರೆಯಲಿ ? ಯಾರಿಗೆ ನಮಸ್ಕರಿಸಲಿ ? ನಿಮ್ಮ ವಿಯೋಗವನ್ನೆಂತು ಸಹಿಸಲಿ ? ನಾನು ಜೀವಿಸುವ ತೆರನಾವುದು ? ಎಂದು ಗೋಳಾಡುವುದಂ ನೋಡಿ ಚಂದನದಾಸನು—

ಎಲೈ ಆಯುಷ್ಮಂತನೇ, ಚಾಣಕ್ಯನೆಂಬ ಶಬ್ದಶ್ರವಣವು ಯಾವ ದೇಶದಲ್ಲಿ ಇಲ್ಲವೋ ಅಲ್ಲಿ ವಾಸಮಂ ಮಾಡುತ್ತ ಜೀವಿಸಿಕೊಂಡಿರುವವನಾಗು. ಅನ್ಯಧರ್ಮವನ್ನಾಚರಿಸದೆ ಸತ್ಯವಂತನಾಗಿರು ಎಂದು ಬುದ್ಧಿಯಂ ಪೇಳುತ್ತಿರುವಷ್ಟರಲ್ಲಿಯೇ ಘಾತುಕರು ಬಂದು—

ಎಲೈ ಸೆಟ್ಟಿಯೇ, ಶೂಲವು ಸಿದ್ಧವಾಗಿದೆ. ಮುಂದೆ ಬಾರೆಂದೆನಲು ;

ಎಲೈ ಅಣ್ಣಂದಿರುಗಳಿರಾ, ಪತಿಯಂ ಶೂಲಕ್ಕೆ ಹಾಕಬೇಡಿರಿ. ರಕ್ಷಿಸಿರಿ ಎಂದು ಆತನ ಪತ್ನಿಯು ಕಡಿಗರಂ ಬೇಡುತ್ತಿರಲು ; ಚಂದನದಾಸನು—

ಎಲೈ ಪತ್ನಿಯೇ, ಪರಾಧೀನರಾದ ಈ ಘಾತುಕರಂ ಪ್ರಾರ್ಥಿಸಿದರೇನುಂಟು ? ಸ್ವರ್ಗಸ್ಥರಾಗುವವರ ಹೆಂಡರು ಮಕ್ಕಳಂ ದೇವರೇ ರಕ್ಷಿಸಬೇಕಲ್ಲದೆ ವೃಥಾ ಹಂಬಲಿಸಿ ಫಲವೇನು ? ಎನಲು ; ಆಗಲಾ ಘಾತುಕರು ಆತನಂ ಶೂಲಾರೋಹಣಂಗೆಯ್ಯುವುದಕ್ಕೆ ಸನ್ನಾಹಂಗೆಯ್ಯುತ್ತಿರಲು ; ಆಗ ತನ್ನ ತನಯನಂ ನೋಡಿ ಚಂದನದಾಸನು—

ಎಲೈ ಕಂದನೇ, ನೀನು ಇನ್ನಿಲ್ಲಿರದಿರು. ನಿನ್ನ ತಾಯಂ ಸಮಾಧಾನಂಗೊಳಿಸುತ್ತ ಹಿಂದಕ್ಕೆ ಕರೆದುಕೊಂಡು ಹೋಗೆಂದೆನಲು ; ಆ ಬಾಲಕನು—

ಅಯ್ಯಾ ಜನಕನೇ, ಪರೋಪಕಾರಾರ್ಥವಾಗಿ ಸರ್ವಸ್ವವನ್ನಾದರೂ ವ್ಯಯಮಂ ಮಾಡಿ ಕೀರ್ತಿಯಂ ಪಡೆಯುವವರುಂಟು. ನೀನಾದರೋ ಪರಾರ್ಥ

ವಾಗಿ ಪ್ರಾಣವನ್ನೇ ವ್ಯಯಮಂ ಮಾಡುವುದಕ್ಕೆ ಉದ್ಯುಕ್ತನಾದ ಬಳಿಕ ನಿನಗೆ ಇಹಪರಂಗಳಲ್ಲಿ ಶಾಶ್ವತವಾದ ಕೀರ್ತಿಸುಖಗಳುಂಟಾದುವು. ನಾವು ಮಾತ್ರವೇ ಅನಾಥರಾದೆವು ಎಂದು ಕಂಬನಿಗಳಂ ತುಂಬುತ್ತಿರಲು; ಆ ಸಮಯದಲ್ಲಿ ಕಡಿಗರು ಚಂದನದಾಸನ ಪತ್ನೀಪುತ್ರಾದಿಗಳಂ ನಿರೀಕ್ಷಿಸಿ ಇನ್ನು ಯಾರೂ ಇಲ್ಲಿರಕೂಡದು. ಹೋಗಿರಿ ಎಂದು ಗರ್ಜಿಸುತ್ತಿರಲು; ಆಗ ಆತನ ಸತಿಯು ಉರಸ್ತಾಡನಮಂ ಮಾಡುತ್ತ ಭೂಮಿಯಲ್ಲಿ ಬಿದ್ದು ಹೊರಳುತ್ತಿರಲು; ಆ ಧ್ವನಿಯಂ ರಾಕ್ಷಸನು ಕೇಳಿ ಅಹಹ! ಕಾರ್ಯವು ಮಿಂಚಿ ಹೋಗುವುದೆಂದು ಅತಿವೇಗದಿಂದ ಬಂದು ಆತನ ಪತ್ನಿಯ ಶೋಕಮಂ ನೋಡಿ—

ಎಲೌ ತಾಯೇ, ಅಂಜದಿರಂಜದಿರು. ಶೋಕಮಂ ಬಿಡು. ನಿನ್ನ ಪತಿಯಂ ಬಿಡಿಸಿ ಕಳುಹಿಸುವೆನು ಎಂದು ಹೇಳಿ—

ಎಲೈ ಘಾತುಕರುಗಳಿರಾ, ಪ್ರಭುಗಳಾದ ನಂದರಂ ಕಳಕೊಂಡು ಮಿತ್ರನಂ ವಿಪತ್ತಿಗೆ ಗುರಿಮಾಡಿದ ಪಾಪಿಷ್ಠನಾದ ನನ್ನಂ ಶೂಲಕ್ಕೆ ಹಾಕಬೇಕಲ್ಲದೆ ನಿರಪರಾಧಿಯಾದ ಈ ಚಂದನದಾಸನಂ ಕೊಲ್ಲುವುದುಂಟೇ? ಶೂಲಾರೋಹಣವು ಚಂದನದಾಸನಿಗೆ ನನ್ನ ನಿಮಿತ್ತವಷ್ಟೆ? ಪ್ರಕೃತದಲ್ಲಿ ದಂಡನೆಗೆ ಯೋಗ್ಯನಾದ ನಾನೇ ಬಂದಿರುವಲ್ಲಿ ಅವನಂ ಯಾಕೆ ಬಾಧಿಸಬೇಕು? ಬಿಟ್ಟು ಕಳುಹಿಸಿರಿ ಎಂದು ಶೂಲಾರೋಹಣಕ್ಕೆ ಸಿದ್ಧನಾದ ರಾಕ್ಷಸನಂ ನೋಡಿ ಚಂದನದಾಸನು—

ಸ್ವಾಮಿ ಅಮಾತ್ಯರೇ, ಇಂದಿನವರೆಗೂ ನಾನು ಮಾಡಿದ ಸಾಹಸವೆಲ್ಲಮಂ ವ್ಯರ್ಥಮಾಡಿ ನೀವು ಸಂಕೇತಂಗೆಯ್ದಿದ್ದ ಮಹಾಪ್ರಯತ್ನಮಂ ತೊರೆದು ಈ ಸ್ವಲ್ಪ ಮನುಷ್ಯನಾದ ನನ್ನ ನಿಮಿತ್ತದಿಂದ ನೀವಿಲ್ಲಿಗೆ ಬರಬಹುದೇ? ಬಹು ಜನ ಪೋಷಕರಾದ ನೀವು ಮರಣಕ್ಕೆ ನಿಶ್ಚಯಿಸಬಹುದೇ? ನಾನು ಸತ್ತರೆ ಒಬ್ಬನೇ ಸಾಯುವೆನು. ಹೀಗೆ ತಾವು ದುಡುಕಿದುದು ಉಚಿತವೇ? ಎಂದು ವ್ಯಸನಪಡಲು; ರಾಕ್ಷಸನು—

ಅಯ್ಯಾ ಮಿತ್ರನಾದ ಚಂದನದಾಸನೇ ನನ್ನ ವಿಷಯಕವಾದ ವ್ಯಾಕುಲಮಂ ಬಿಡು. ನೀನು ಮಾಡಿದ ಉಪಕಾರಕ್ಕೆ ಪ್ರತ್ಯುಪಕಾರವನ್ನು ಎಂದಿಗೆ ತಾನೇ ನಾನು ಮಾಡುವೆನು? ಹಿತವನ್ನೇ ಆಚರಿಸಿದೆನು ಎಂದು ಹೇಳಿ ಚಂಡಾಲರಂ ಕುರಿತು—

ಅಧರ್ಮಸ್ಥಾನವಾದ ಈ ಕಲಿಯುಗದಲ್ಲಿ ಬೌದ್ಧಮತಸ್ಥನಾದ ಈ ಚಂದನದಾಸನು ಯಾರ ನಿಮಿತ್ತದಿಂದ ಶಿಬಿರಾಯನಂತೆ ಪ್ರಾಣಮಂ ಬಿಡಲು ಸನ್ನದ್ಧ

ನಾಗಿ ಶಾಶ್ವತಯಶಸ್ಸಂ ಪಡೆದನೋ ಆ ರಾಕ್ಷಸನಾದ ನಾನು ಇದೋ! ಶೂಲಾ ರೋಹಣಕ್ಕೆ ಸಿದ್ಧನಾದೆನು. ಈ ವಾರ್ತೆಯಂ ಚಂದ್ರಗುಪ್ತ ಚಾಣಕ್ಯರಿಗೆ ಹೇಳಿರಿ ಎನಲು; ಘಾತುಕರು—

ಸ್ವಾಮಿ ಅಮಾತ್ಯರೇ, ಪ್ರಭುಗಳ ಅಪ್ಪಣೆ ಹೊರತು ನೀವು ಶೂಲಾರೋಹಣಮಂ ಮಾಡಕೂಡದು. ಚಂದನದಾಸನಂ ಸಹ ನಾವು ಬಿಡಕೂಡದು. ಮಿತ್ರ ವಾತ್ಸಲ್ಯವಿದ್ದರೆ ನೀವೇ ಅರಸುಗಳ ಅಪ್ಪಣೆಯಂ ಮಾಡಿಸಿರಿ. ಆ ವರೆಗೂ ನಾವು ಕೈತಡೆಯುವೆವು. ಚಂದನದಾಸನಂ ನಿಲ್ಲಿಸಿ ನಾವೇ ಮಾರ್ಗಮಂ ತೋರುತ್ತ ಬರುವೆವು ಎನಲು ; ಹಾಗೇ ಆಗಲಿ. ಪತ್ನೀಪುತ್ರ ಸಮೇತನಾದ ಈ ಚಂದನದಾಸನಂ ಮರದ ನೆರಳಿನಲ್ಲಿ ಕುಳ್ಳಿರಿಸಿರಿ ಎಂದು ಹೇಳಿ ರಾಕ್ಷಸನು ಅಲ್ಲಿಂದ ಹೊರಟು ಚಾಣಕ್ಯನ ಪರ್ಣಶಾಲಾಸಮೀಪಕ್ಕೆ ಬರುತ್ತಿರಲು; ಆಗ ಉತ್ತರದಿಕ್ಕಿನಲ್ಲಿ ಪ್ರಳಯಕಾಲ ಮೇಘ ಸಂಘಾತಗಳು ಏಕಕಾಲದಲ್ಲಿ ಉದಯಿಸಿದಂತೆ ಭದ್ರಭಟಾದಿ ಸೇನಾಪತಿಗಳ ವರೂಥಿನೀಪದಹತೋದ್ಧತ ಧೂಳೀನಿಕುರುಂಬವು ದಿಕ್ತಟಗಳಂ ಆಕ್ರಮಿಸುತ್ತಿರಲು; ಭೂಮಿಯು ಇಬ್ಬಾಗವಾಗುವಂತೆ ಉಂಟಾಗುತ್ತಿರುವ ಭೇರೀ ಧ್ವನಿಗಳು ಪ್ರಪಂಚಮಂ ವ್ಯಾಪಿಸುತ್ತಿರಲು; ಶತ್ರುಗಳ ಆಗಮನ ಶಂಕೆಯಿಂದ ಪ್ರಜಾನಿಕರವೆಲ್ಲವೂ ಭಯಭ್ರಾಂತವಾಗಿ ತಲ್ಲಣಂಗೊಳ್ಳುತ್ತಿರಲು; ಅದೆಲ್ಲಮಂ ರಾಕ್ಷಸಂ ನೋಡಿ ಚಂದ್ರಗುಪ್ತನ ಮೇಲೆ ಮಲಯಕೇತುವು ದಂಡೆತ್ತಿ ವೈರಮಂ ಸಾಧಿಸಲೋಸುಗ ಬರುವನೋ! ಎಂದು ಆಲೋಚಿಸುತ್ತ ಪ್ರಾಕಾರದ ಮೇಲೆ ಯುದ್ಧ ಯತ್ನಮಿಲ್ಲದೆ ನಿಶ್ಚಿಂತರಾಗಿ ವಿನೋದಮಂ ನೋಡುತ್ತಿರುವ ಜನರನ್ನೂ ಪರಸ್ಪರಮುಖಾವಲೋಕನದಿಂದ ತಮ್ಮೊಳಗೆ ತಾವೇ ನಗುತ್ತ ಸಂಗಡ ಬರುತ್ತಿರುವ ಚಂಡಾಲರನ್ನೂ ಕಂಡು ಇದು ಏನೋ ಒಂದು ಛದ್ಮನೆಯು. ಕೋಟೆಯ ಮೇಲೆ ಸಮರಸನ್ನಾಹಮಿಲ್ಲದೇ ಇರುವುದರಿಂದ ಈಗ ಬರುವ ಪಡೆಯು ಚಂದ್ರಗುಪ್ತನ ದ್ವೇಷಿಗಳ ಕಡೆಯ ಪಡೆಯಲ್ಲ. ಇದು ಭದ್ರಭಟಾದಿಗಳ ಫೌಜಾಗಿರಬೇಕು. ಈ ಘಾತುಕರು ಬಲಧೂಳಿಯಂ ನಿರೀಕ್ಷಿಸಿ ಅನ್ಯೋನ್ಯವಾದ ನೋಟಗಳಿಂದ ಹರ್ಷಪಡುತ್ತಿದ್ದಾರೆ. ಇದರ ರಹಸ್ಯವು ಈ ಕಡಿಗರಿಗೆ ತಿಳಿದಿರಬೇಕು. ಹೀಗಿದ್ದರೆ ವೇಷಧಾರಿಗಳಾದ ಗೂಢಚಾರರಿವರೇ ಹೌದು ! ತಿಳಿಯಲಾಯಿತು. ಮಲಯಕೇತುವಿನ ಸಮೀಪದಲ್ಲಿ ನಾನಿದ್ದರೆ ಆತನಂ ಹಿಡಿಯುವುದು ಅಶಕ್ಯವಾದುದರಿಂದ ಮೊದಲೇ ಕಪಟಲೇಖನವ್ಯಾಜದಿಂದ ನನ್ನಂ ಹೊರಡಿಸಿ ಆ ಸಮಯದಲ್ಲಿ ಚಿತ್ರವರ್ಮಾದಿಗಳಂ ನಾಶಗೊಳಿಸಿ ಅವರ

ದಳಗಳು ಚದರಿ ಹೋದುದಂ ತಿಳಿದು ವಂಚಕರಾದ ಈ ಚಮೂಪತಿಗಳು ಮಲಯಕೇತುವಂ ಸುತ್ತಿಕೊಂಡು ಪಾಟಲೀಪುರಕ್ಕೆ ತರುವವರಾಗಿರಬೇಕು. ಅಲ್ಲದಿದ್ದರೆ ಈ ಜಯಭೇರೀ ಶಬ್ದಕ್ಕೆ ನಿಮಿತ್ತವಿಲ್ಲ. ಚಾಣಕ್ಯನು ಒಂದು ಕಾರ್ಯವಂ ಯೋಚಿಸಿ ಮಾಡಿದುದಕ್ಕೆ ಎರಡು ಪ್ರಯೋಜನಗಳು ಲಬ್ಧವಾದುವು. ಹಾಗಲ್ಲದೆ ನೀತಿ ಕುಶಲನಾದ ನಾನು ಸಿದ್ಧಾರ್ಥಕ ಶಕಟದಾಸರಂ ಆಪ್ತರೆಂದೆಣಿಸಿ ಮೋಸಹೋದಂತೆ ಮಲಯಕೇತುವು ಬಾಗುರಾಣನಂ ಆಪ್ತನೆಂದು ಭಾವಿಸಿ ಮೋಸಹೋದನು ಎಂದು ನಿಶ್ಚಯಿಸುತ್ತ ಚಾಣಕ್ಯನ ಪರ್ಣಶಾಲಾಸಮೀಪಕ್ಕೆ ಬರಲು; ಚಂಡಾಲರು ದೂರದಲ್ಲೇ ನಿಂತು ಬಾಗಿಲಲ್ಲಿರುವ ಶಿಷ್ಯನಂ ನೋಡಿ ಅಮಾತ್ಯರು ತಮ್ಮ ನೀತಿಪಾಶಬದ್ಧರಾಗಿ ದರ್ಶನಕ್ಕೋಸುಗ ಬಂದಿದ್ದಾರೆ. ಈ ವಿಷಯವಂ ಯಜಮಾನರಿಗೆ ತಿಳುಹಿಸಿರಿ ಎನಲು; ಆ ಮಾತಿಗೆ ಶಿಷ್ಯಂ ಪೋಗಿ ತಿಳುಹಿಸಲು; ಚಾಣಕ್ಯನು ತನ್ನ ನೆರಕೆಯ ಕಂಡಿಯಲ್ಲಿ ಈಕ್ಷಿಸಿ ಈತನೇ ಮಹಾಪುರುಷನಾದ ರಾಕ್ಷಸನೆಂದು ಬಗೆದು ಪರಮಸಂತೋಷದೊಡನೆ ಕೂಡಿ ತನ್ನ ಆಸನದಿಂ ಝುಗ್ಗನೆದ್ದು ಬಂದು ಘಾತುಕರಂ ನೋಡಿ ಇಂತೆಂದನು—

ಎಲೈ, ಪ್ರಜ್ವಲಿಸುವ ಅಗ್ನಿಯಂ ಉಡಿಯಲ್ಲಿ ಕಟ್ಟಿದಂತೆಯೂ ಚಂಡಮಾರುತನಂ ಹಗ್ಗದಲ್ಲಿ ಬಿಗಿದಂತೆಯೂ ಮಹಾಸಿಂಹವಂ ಮೈದಡವಿ ತಂದಂತೆಯೂ ಈ ಮಹಾತ್ಮನಾದ ಅಮಾತ್ಯರಾಕ್ಷಸನಂ ಇಲ್ಲಿಗೆ ಹೇಗೆ ಕರತಂದಿರಿ? ಎನಲು;

ಬುದ್ಧೀ, ಈ ಕಾರ್ಯದಲ್ಲಿ ಪಾದಂಗಳ ನೀತಿಕೌಶಲ್ಯವೇ ಹೊರತು ಮತ್ತೆ ಯಾರು ಶಕ್ತರಾದಾರು? ಎಂದು ಕಡಿಗರು ನುಡಿದರು. ಅದಕ್ಕೆ ಚಾಣಕ್ಯನು—

ಹಾಗಲ್ಲವೈ. ನಂದ ಕುಲ ವಿದ್ವೇಷಿಯಾದ ದೈವವೇ ರಾಕ್ಷಸನಂ ಇಲ್ಲಿಗೆ ಕರತಂದಿತು ಎನಬೇಕು ಎಂಬುದಾಗಿ ಹೇಳುತ್ತಿರಲು; ಆಗ ಅಮಾತ್ಯನು ಚಾಣಕ್ಯನಂ ನೋಡಿ—ಈತನೇ ದುರಾತ್ಮನಾದ ಚಾಣಕ್ಯನಾಗಿರಬೇಕು ಎಂದು ನಿಶ್ಚಯಿಸುತ್ತ ಗುಣದಲ್ಲಿ ದೃಷ್ಟಿಯಿರಿಸಿ ಪುನಃ ಈತನಂ ದುರಾತ್ಮನೆಂದು ಹೇಳಬಾರದು. ಸಕಲ ವಿದ್ಯಾನಿವಾಸ ಭೂತನಾದುದರಿಂದಲೂ ಮಹಾಭ್ಯುದಯಕಾಲದಲ್ಲಿಯೂ ವಿರಕ್ತನಾದುದರಿಂದಲೂ ಈತನಂ ಮಹಾತ್ಮನೆನಬೇಕು. ತೇಜೋವಂತನಾದ ಈ ಬ್ರಾಹ್ಮಣನಂ ಅಪಮಾನಗೊಳಿಸಿದುದರಿಂದಲೇ ನಂದರು ನಷ್ಟರಾದರೆಂದು ಹೇಳಬಹುದು. ಈತನ ಸಾಹಸಕ್ಕೆ ಮೆಚ್ಚದಿದ್ದರೆ ನನ್ನಲ್ಲಿ ಮಾತ್ಸರ್ಯದೋಷಮುಂಟಾದೀತು ಎಂದು ಯೋಚಿಸುತ್ತಿದ್ದನು. ಚಾಣಕ್ಯನಾದರೋ ಈ ಮಹಾ

ಪುರುಷನ ಸಾಹಸ ಚಿಂತೆಯಿಂದಲೇ ನನಗೆ ನಿದ್ರಾಹಾರಂಗಳು ರುಚಿಸದೆ ಚಂದ್ರ
ಗುಪ್ತನ ಸೇನೆಗಳೂ ಸಹ ಮಹಾಯಾಸಪಡುತ್ತಿದ್ದವು. ಇಂದಿಗೆ ಈತಂ
ದೊರಕಿದನು. ಸಂಕಲ್ಪಿಸಿದರ್ಥವು ಎನಗೆ ಕೈಗೂಡಿತೆಂದು ರಾಕ್ಷಸನ ಸಮೀಪ
ಕ್ಕೈತಂದು—

ಸ್ವಾಮೀ ಅಮಾತ್ಯರಾಕ್ಷಸರೇ, ಚಣಕಪುತ್ರನೂ ವಿಷ್ಣುಶರ್ಮನಾಮಕನೂ
ಆದ ನಾನು ನಮಸ್ಕರಿಸುವೆನೆಂದು ನುಡಿಯಲು;

ಅಯ್ಯಾ ಮಹಾತೇಜಸ್ವಿಗಳಾದ ವಿಷ್ಣುಶರ್ಮರೇ, ಚಂಡಾಲಪರಿವಾರದಿಂದ
ದೂಷಿತನಾದ ನನಗೆ ತಮ್ಮಂಥವರು ನಮಸ್ಕರಿಸಬಹುದೇ ? ಎಂದುದಕ್ಕೆ—

ಸ್ವಾಮೀ ಅಮಾತ್ಯರೇ, ಇನ್ನು ಮರೆಮಾಜಿ ಫಲವೇನು ? ತಮ್ಮ ಸಂಗಡ
ಬಂದಿರುವವರು ಚಂಡಾಲರಲ್ಲ. ಚಂಡಾಲ ವೇಷಧಾರಿಗಳು ಎನಲು;

ಹಾಗಾದರೆ ನಾನು ದೂಷಿತನಾಗಲಿಲ್ಲ. ಬ್ರಾಹ್ಮಣೋತ್ತಮರಾದ ತಮಗೆ
ಸಾಷ್ಟಾಂಗವಾಗಿ ನಮಸ್ಕರಿಸುವೆನು. ಮತ್ತಿವರಾರು ? ಎನಲು; ಚಾಣಕ್ಯನು—

ಮೊದಲು ನಿಮ್ಮ ಬಳಿಯಲ್ಲಿದ್ದ ಸಿದ್ಧಾರ್ಥಕನೆಂಬವನೀತನು. ಮತ್ತೊ
ಬ್ಬನು ಸಮಿದ್ಧಾರ್ಥಕನು. ನಿಮ್ಮ ಶಕಟದಾಸನಂ ವಂಚಿಸಿ ಕಾಗದಮಂ ಬರೆಸಿ
ದಾತನೇ ಮೊದಲು ಹೇಳಿದವನು. ನಿಮಗೆ ಮಿತ್ರನಾಗಿದ್ದ ಕ್ಷಪಣಕನೇ ಈ
ಇಂದುಶರ್ಮನೆಂಬ ಬ್ರಾಹ್ಮಣನು. ಇವನು ನನ್ನ ಸಹಾಧ್ಯಾಯಿಯು. ಭಾಗು
ರಾಯಣಾದಿಗಳು ನನ್ನಿಂದಲೇ ಪ್ರೇಷಿತರಾಗಿ ಮಲಯಕೇತುವಿನ ಬಳಿಯಲ್ಲಿ
ಸಮಯಮಂ ನೋಡುತ್ತಿದ್ದವರಾದರು. ಮೂರು ಆಭರಣಸಂಪುಟಗಳನ್ನು ತಮ್ಮ
ಬಳಿಗೆ ಕಳುಹಿಸಿದವನು ನಾನು. ಮೊದಲು ನಂದರಂ ವಂಚಿಸಿದ ಮಾಸೋಪ
ವಾಸಿಯು ಇವನು. ಈ ದಿನ ನಿಮ್ಮೆದುರಿಗೆ ಕೊರಳಿಗೆ ಹಗ್ಗವಂ ಹಾಕಿಕೊಂಡು
ತಮ್ಮೊಡನೆ ಸಂವಾದಮಂ ಮಾಡಿದವನು ಈ ಪಶುಲೋಮಕನು. ಚಂದ್ರಗು
ಪ್ತನು ಸನ್ಮಾರ್ಗಿಯಾಗಿ ನಿರ್ದೋಷಿಯಾಗಿರುವುದರಿಂದಲೂ ನಾನು ವಿರಕ್ತನಾಗಿ
ತಪೋವನಕ್ಕೆ ಹೋಗಬೇಕಾದುದರಿಂದಲೂ ನಿಮಗೂ ಆತನಿಗೂ ಸಂಧಿಯಂ
ರಚಿಸುವುದಕ್ಕೋಸ್ಕರ ಇಷ್ಟು ಕಪಟತಂತ್ರವನ್ನಾಚರಿಸಬೇಕಾಯಿತಲ್ಲದೆ ತಮ್ಮ
ಮೇಲೆ ನನಗೆ ದ್ವೇಷವಿಲ್ಲವೆಂದು ಅಮಾತ್ಯರಾಕ್ಷಸನ ಕೈಯ್ಯನ್ನು ಹಿಡಿದು
ಕೊಂಡು ತನ್ನ ದ್ವಾರಪ್ರಕೋಷ್ಠಶಾಲೆಗೆ ಕರೆದುಕೊಂಡು ಹೋಗಿ ಒಬ್ಬ
ರನ್ನೂ ಒಳಗೆ ಬಿಡಬೇಡವೆಂದು ಶಿಷ್ಯನಾದ ಶಾರ್ಙರವನಿಗೆ ನೇಮಿಸಿ ಅಮಾತ್ಯ
ನಿಗೆ ವೇತ್ರಾಸನವಂ ಕೊಟ್ಟು ಕುಳ್ಳಿರಿಸಿ ತಾನು ದರ್ಭಾಸ್ತರಣಾಸೀನನಾಗಿ

ಅಯ್ಯಾ ಅಮಾತ್ಯರೇ, ನನ್ನ ಯಾವದ್ವೃತ್ತಾಂತಮಂ ಸತ್ಯವಾಗಿ ನಿಮ್ಮಲ್ಲಿ ಅರಿಕೆಮಾಡುವೆನು. ಮನಸ್ಸಿನಲ್ಲಿರುವ ಇತರ ವ್ಯಸನಂಗಳಂ ಬಿಟ್ಟು ಗೋಬ್ರಾಹ್ಮಣಹಿತಾರ್ಥವಾಗಿ ಚೆನ್ನಾಗಿ ಆಲಿಸಿ ನಾನು ಹೇಳಿದ ಮಾತು ಸತ್ಯವೋ ಕಪಟವೋ ? ಎಂಬುವುದನ್ನು ನಿಶ್ಚಯಿಸಿ ತಮ್ಮ ಚಿತ್ತಕ್ಕೆ ಯಥಾರ್ಥವಾಗಿ ತೋರಿದರೆ ಆ ಪ್ರಕಾರ ನಡಸಬಹುದು. ಈ ಕಲಿಯುಗದಲ್ಲಿ ಈ ನವನಂದರೂ ಪರ್ವತರಾಜಚಿತ್ರವರ್ಮಾದಿಗಳಾದ ದುಷ್ಟಕ್ಷತ್ರಿಯರು ಬೌದ್ಧ ಚಾರ್ವಾಕಾದಿ ಪಾಷಂಡಮತಸ್ಥಜನಗಳಲ್ಲಿ ವಿಶ್ವಾಸಮಂ ಇಟ್ಟು ವೇದೋಕ್ತವಾದ ಸದ್ಧರ್ಮಂಗಳಂ ನಡಸದೆ ಸದ್ಬ್ರಾಹ್ಮಣರಂ ಪಾಲಿಸದೆ ದುರ್ಮಾರ್ಗದಿಂ ಭೂಭಾರಕರಾಗಿ ವಿಪ್ರೋತ್ತಮರಾದ ತಮ್ಮಂಥ ಸನ್ಮಂತ್ರಿಗಳಿಗಸಮ್ಮತವಾದ ಕಾರ್ಯಗಳಲ್ಲಿ ಪ್ರವರ್ತಿಸಿ ತಮ್ಮ ಮಾತಿನ ಪ್ರಕಾರ ನಡೆಯದೆ ಇದ್ದುದು ನಿಜಾಂತರಂಗಕ್ಕೆ ವೇದ್ಯವಾಗಿಯೇ ಇದೆ. ಭೃಗುವಂಶೋತ್ಪನ್ನರಾದ ನನ್ನ ಗುರುಗಳು ಇದನ್ನೆಲ್ಲ ನೋಡಿ ಲೋಕಸಂರಕ್ಷಣಾರ್ಥವಾಗಿ ನನಗೆ ದಂಡನೀತಿಯಂ ಚೆನ್ನಾಗಿ ಉಪದೇಶಿಸಿ ದುಷ್ಟರಾದ ಈ ಅರಸುಗಳಂ ಸಂಹರಿಸಿ ಶಿಷ್ಟರಾದವರಿಗೆ ರಾಜ್ಯಪದವಿಯನ್ನುಂಟುಮಾಡಿ ಆ ನೃಪನನ್ನು ತಮ್ಮಧೀನಮಂ ಗೆಯ್ದು ಪಾಷಂಡರು ಸಮುದ್ರಾಂತಕ್ಕೆ ಹೋಗುವಂತೆ ನೆಗಳ್ಚುವುದೇ ನಮಗೆ ಗುರುದಕ್ಷಿಣೆ ಎಂದು ಆಜ್ಞಾಪಿಸಿದುದರಿಂದ ನಾನು ಈ ಕಾರ್ಯಕ್ಕೆ ಪ್ರವರ್ತಿಸಿದೆನು. ನಂದರು ಅಯೋಗ್ಯರಾದರೂ ಅಪಖ್ಯಾತಿಯ ಪರಿಹಾರಕ್ಕೋಸುಗ ಚಂದ್ರಗುಪ್ತನು ಯೋಗ್ಯನೆಂದು ನೀವು ತಿಳಿದಿದ್ದಾಗ್ಯೂ ಆತನಿಗೆ ದ್ರೋಹವನ್ನೆಣಿಸಿದಿರಿ. ಆದರೂ ಧರ್ಮವಿದ್ದ ಕಡೆಗೆ ದೈವಸಹಾಯಮುಂಟಾಗುವುದರಿಂದ ಯಾವ ವಿಷಯದಲ್ಲಿಯೂ ಯಾವ ಕಲ್ಪಕ್ಕೂ ವ್ಯರ್ಥವಾಗದ ತಮ್ಮ ಪೌರುಷವು ನಡೆಯದೆ ಎಲ್ಲದರಲ್ಲಿಯೂ ತಮಗೆ ಸರಿಯಲ್ಲದ ನನ್ನ ನೀತಿಯು ಗುರುವಚನಾನುಸಾರವಾಗಿ ಧರ್ಮಪ್ರವರ್ತಕನಾದುದರಿಂದ ಸಿದ್ಧಿಸಿತು. ಇದರಿಂದ ಮುಖ್ಯವಾಗಿ ತಮಗೆ ಶಾಶ್ವತವಾದ ಕೀರ್ತಿಯೂ ಮಿತ್ರಕಾರ್ಯನಿಮಿತ್ತದಿಂದ ನಿರ್ವಾಹಮಿಲ್ಲದೆ ಚಂದ್ರಗುಪ್ತನ ಮಂತ್ರಿಪದಮಂ ಸಮ್ಮತಿಸಿದರೆಂದು ಅನ್ಯಜನರಿಗೆ ತಿಳಿಯುವಿಕೆಯೂ ಉಂಟಾಯಿತು. ಇನ್ನು ಮೇಲೆ ನೆಪಮಾತ್ರಕ್ಕೆ ಈ ಚಂದ್ರಗುಪ್ತನಂ ಇಟ್ಟುಕೊಂಡು ಸಕಲ ದೇಶದ ಅರಸುಗಳಂ ತಮ್ಮ ಸ್ವಾಧೀನಕ್ಕೆ ತೆಗೆದುಕೊಂಡು ಪಾಷಂಡಾದಿಗಳಂ ನಿಗ್ರಹಿಸಿ ಧರ್ಮಮಂ ಪರಿಪಾಲಿಸಬೇಕು. ನಾನು ಕೃತಕತ್ಯನಾದೆನು. ಗುರುಸನ್ನಿಧಿಗೆ ಹೋಗುವುದಕ್ಕೆ ನನಗೆ ಅಪ್ಪಣೆಯಾಗಬೇಕೆಂದು ಹೇಳಲು ; ಆ ವಾಕ್ಯಮಂ ಕೇಳಿ ಅಮಾತ್ಯರಾಕ್ಷಸನು ಅವರು ಉಸುರಿದರ್ಥವೆಲ್ಲವಂ ನಿಶ್ಚಯಿಸಿ—

ಸ್ವಾಮೀ ತಪೋನಿಧಿಗಳಿರಾ, ತಮ್ಮ ಸೂನೃತ ವಾಕ್ಯಮಂ ಪರ್ಯಾಲೋಚಿಸಿದ ಕಾರಣದಿಂದ ಈಗ ದುಷ್ಟಸಹವಾಸಗಳಿಂದ ಉಂಟಾಗಿದ್ದ ನನ್ನ ಮನಃಕಲ್ಮಷವೆಲ್ಲವೂ ಪರಿಹೃತವಾಯಿತು. ತಮ್ಮ ಆಜ್ಞಾನುಸಾರ ರಾಜತಂತ್ರ ಪ್ರಯುಕ್ತನಾಗಿ ದುಷ್ಟನಿಗ್ರಹ ಶಿಷ್ಟಪರಿಪಾಲನೆಗಳಂ ತಮ್ಮಾಶೀರ್ವಾದ ಬಲದಿಂದ ಲೀಲಾಮಾತ್ರದಿಂ ಗೆಯ್ವೆನು. ಆದರೆ ನನ್ನ ಮಗನು ಬುದ್ಧಿವಂತನಾಗುವ ವರೆಗೂ ಈ ಕಾರ್ಯದಲ್ಲಿ ಪ್ರವರ್ತಕನಾಗಿರುವೆನು. ನನ್ನಲ್ಲಿ ಶಿಷ್ಯಾನುಗ್ರಹವಿಟ್ಟು ಆಗಾಗ್ಗೆ ದಯೆಮಾಡಿ ಚರಣಾರವಿಂದಗಳ ದರ್ಶನಮಂ ಪಾಲಿಸಿ ರಾಜ್ಯತಂತ್ರ ಸಂಬಂಧದಿಂದುಂಟಾದ ಕಲ್ಮಷಗಳಿಂದ ವ್ಯಾಪ್ತವಾದ ಹೃದಯವನ್ನು ತಮ್ಮ ಧರ್ಮೋಪದೇಶರೂಪವಾದ ವಚನಾಮೃತದಿಂದ ಪರಿಶುದ್ಧಿಗೊಳಿಸಬೇಕು. ನನ್ನ ಮಗನು ಈ ಕಾರ್ಯಕ್ಕೆ ಯೋಗ್ಯನಾದ ಮೇಲೆ ತಮ್ಮ ಆಜ್ಞೆಯಂ ಅವನಿಗೆ ಉಪದೇಶಿಸಿ ಭವದೀಯಚರಣಸನ್ನಿಧಿಗೆ ಪತ್ನೀಸಮೇತನಾಗಿ ಬರುವೆನು. ನನಗೆ ಸರ್ವಪಾಪಪರಿಹಾರಪೂರ್ವಕ ಉಪಶಾಂತಿದ್ವಾರಾ ಮುಕ್ತಿಯಾಗುವಂತೆ ಜ್ಞಾನೋಪದೇಶವನ್ನನುಗ್ರಹಿಸುವ ಹಾಗೆ ಅಭಯಮಂ ಕರುಣಿಸಬೇಕೆಂದು ಪ್ರಾರ್ಥಿಸುತ್ತಿರಲು ; ಅಮಾತ್ಯರಾಕ್ಷಸನಿಗೆ ಚಾಣಕ್ಯನು—

ಧರ್ಮಕಾರ್ಯಪ್ರವರ್ತಕರಾಗಿರುವ ನಿಮಗೆ ಪರಾಪೇಕ್ಷೆ ಏತಕ್ಕೆ? ನೀವೇ ಜ್ಞಾನೋಪದೇಶಗಳಂ ಮಾಡುತ್ತ ಪಾಮರಜನಂಗಳಂ ಪರಿಪಾಲಿಸುವಂತೆ ಪರಾತ್ಪರನಾದ ಶ್ರೀಮನ್ನಾರಾಯಣನೇ ಅನುಗ್ರಹಿಸುವನು. ಇದರಲ್ಲಿ ಸಂದೇಹಮಿಲ್ಲ. ನಿಮ್ಮಲ್ಲಿ ವ್ಯಾಸ ಪರಾಶರ ವಾಲ್ಮೀಕ್ಯಾದಿ ಸರ್ವಋಷ್ಯಂಶವಿರುವುದರಿಂದಲೇ ಈ ಕಲಿಯುಗದಲ್ಲಿ ನಿಮಗೆ ಈದೃಶಜ್ಞಾನಮುಂಟಾಗಿರುವುದು. ಆದಾಗ್ಯೂ ನಿಮ್ಮ ಮನಸ್ಸು ಸಂತೋಷಪಡುವಂತೆ ಇಚ್ಛಾನುಸಾರವಾಗಿ ನಿಮಗೆ ನಮ್ಮ ಆಚಾರ್ಯರಿಂದಲೇ ನಡಸಿ ನಾನೂ ನೀವೂ ಮಿತ್ರರಾಗಿರುವ ವಿಷಯದಲ್ಲಿ ಎಷ್ಟು ಮಾತ್ರವೂ ಸಂದೇಹವಿಲ್ಲ. ಇದು ಸತ್ಯವೆಂದೆಣಿಸಬೇಕೆಂಬುದಾಗಿ ಹೇಳಿ ಅಮಾತ್ಯರಾಕ್ಷಸನ ಕೈ ಹಿಡಿದುಕೊಂಡು ಚಂದ್ರಗುಪ್ತನ ಬಳಿಗೆ ಬರಲು ; ಆತನು ಇದಿರೆದ್ದು ಅಭಿಮುಖವಾಗಿ ಬಂದು ಚಾಣಕ್ಯಾಮಾತ್ಯರಾಕ್ಷಸರಿಗೆ ಸಾಷ್ಟಾಂಗಪ್ರಣಾಮಮಂ ಮಾಡಿ ಉಭಯರಿಗೂ ದಿವ್ಯಕನಕಾಸನಂಗಳಂ ಕೊಟ್ಟು ಅರ್ಘ್ಯಪಾದ್ಯಾದ್ಯುಪಚಾರಂಗೆಯ್ದು ಅವರ ಆಜ್ಞಾನುಸಾರವಾಗಿ ತಾನೂ ಪೀಠದ ಮೇಲೆ ಕುಳಿತುಕೊಂಡವನಾದನು. ಆಗ ಚಾಣಕ್ಯನು—

ಅಯ್ಯಾ ರಾಜಕುಮಾರನೇ, ನಿಮ್ಮ ಕುಲಕ್ರಮದಿಂದ ಬಂದವರೂ ಸಕಲ ಬುದ್ಧಿಸಂಪನ್ನರೂ ಸರ್ವತಂತ್ರಸ್ವತಂತ್ರರೂ ಸ್ಥೈರ್ಯ ಧೈರ್ಯ ಶೌರ್ಯ ಪರಾಕ್ರಮಸಮೇತರೂ ಆದ ಅಮಾತ್ಯರಾಕ್ಷಸರು ನಂದವಂಶೋತ್ಪನ್ನನೆಂದು ನಿನ್ನಲ್ಲಿ ಅನುಗ್ರಹವನ್ನಿಟ್ಟು ತಾವಾಗಿ ದಯೆಮಾಡಿದ್ದಾರೆ. ನನ್ನ ಮಂತ್ರಿ ಪ್ರಾಧಾನ್ಯಶಸ್ತ್ರಮಂ ಅವರಿಗೆ ಸಮರ್ಪಿಸಿ ನೀನು ತಂದೆಗೆ ಮಗನೂ ಗುರುವಿಗೆ ಶಿಷ್ಯನೂ ಯಾವ ಪ್ರಕಾರ ವಿಧೇಯರಾಗಿರುವರೋ ಆ ರೀತಿಯಲ್ಲಿ ಇದ್ದುಕೊಂಡು ಅವರಾಜ್ಞೆಯಂ ಸ್ವಲ್ಪವಾದರೂ ಮೀರದೆ ಅವರಿಂದ ಅಭಿವೃದ್ಧಿಗೆ ಬರುವ ಸಕಲ ಸಾಮ್ರಾಜ್ಯಪದವಿಯನ್ನನುಭವಿಸುತ್ತ ಸುಖದಿಂದಿರುವವನಾಗು. ಇಂದು ನಾನು ಕೃತಕೃತ್ಯನಾದೆನು ಎನಲು ; ಚಂದ್ರಗುಪ್ತನು—

ಸ್ವಾಮಿಾ ಯಜಮಾನರೇ, ತಾವು ಅಪ್ಪಣೆ ಕೊಡಿಸಿದ ವಾಕ್ಯವನ್ನು ವೇದವಾಕ್ಯವೆಂದು ಮನಸ್ಸಿನಲ್ಲಿ ತಿಳಿದು ಈ ಶರೀರವಿರುವ ವರೆಗೂ ನಡೆಯುವೆನೆಂದು ಹೇಳಿ ಪ್ರಾಧಾನ್ಯಶಸ್ತ್ರವನ್ನೂ ಅನರ್ಘ್ಯ ವಸ್ತ್ರಭೂಷಣಾದಿಗಳನ್ನೂ ತರಿಸಿ ಅಮಾತ್ಯರಾಕ್ಷಸನ ಮುಂದಿಟ್ಟು ಸಾಷ್ಟಾಂಗಪ್ರಣಾಮಮಂ ಮಾಡುತ್ತಿರುವಲ್ಲಿ ಅಮಾತ್ಯರಾಕ್ಷಸನು—

ಅಯ್ಯಾ ಅರಸೇ, ಜಯಶೀಲನಾಗಿ ಸುಖದಿಂದಿರುವವನಾಗು ಎಂದು ಆಶೀರ್ವಾದಮಂ ಮಾಡಿ ಅವುಗಳಂ ಸ್ವೀಕರಿಸದೆ ಇರಲು ; ಆಗ ಚಂದ್ರಗುಪ್ತನು—ಅಯ್ಯಾ ಅಮಾತ್ಯರೇ, ಯಜಮಾನರಾದ ತಾವೀರ್ವರೂ ನನ್ನ ರಾಜ್ಯತಂತ್ರಮಂ ನಿರ್ವಹಿಸಲುದ್ಯುಕ್ತರಾಗಿರುವಲ್ಲಿ ನಾನು ಜಯಶೀಲನಾಗುವುದಕ್ಕೆ ಸಂಶಯಮುಂಟೇ ? ಎನಲು ; ಆ ಮಾತಿಗೆ—ಈತನು ಜನ್ಮಾರಭ್ಯ ವಿನಯಾದಿಗಳ ಸಂಪನ್ನನು. ಈತನಲ್ಲಿ ಪ್ರಭುತ್ವಲಕ್ಷಣಂಗಳಂ ನೋಡಿ ರಾಜಪದಕ್ಕೆ ಯೋಗ್ಯನೆಂದು ತಿಳಿದಿದ್ದೆನು. ವೃದ್ಧರಾಜನಿಗೆ ಪ್ರಿಯಪೌತ್ರನಾದುದರಿಂ ಸಂದೇಹಮುಂಟಾಗಿತ್ತು. ದೈವಸಂಕಲ್ಪಮಂ ಕಂಡವರಾರು ? ಮರಿಯಾನೆಯೇ ಯೂಥಪತಿಯಾದಂತೆ ಈತನು ಪ್ರಭುವಾದನು. ಮತ್ಸರದಿಂದ ಈ ಚಂದ್ರಗುಪ್ತನಲ್ಲಿ ವಿಕಲ್ಪಂ ತೋರಿತ್ತಲ್ಲದೆ ಅದು ಸಹಜಮಲ್ಲ. ಹಾಗೆಯೇ ಈ ಚಾಣಕ್ಯನು ಯಶೋವಂತನೂ ಬುದ್ಧಿವಂತನೂ ಆದ ಈತನಂ ಪರಿಗ್ರಹಿಸಿದುದರಿಂದ ಖ್ಯಾತಿಯಂ ಪಡೆದನು. ಲೋಕದಲ್ಲಿ ಪ್ರಭುವಾದವನು ಜನಗಳಿಗೆ ಪುರುಷಲಕ್ಷಣಮಂ ತಿಳಿದು ಅಧಿಕಾರಮಂ ನೇಮಿಸಬೇಕು. ಕೆಲವರು ಆಕಾರದಲ್ಲಿ ಸೌಮ್ಯರಾಗಿ ಹೃದಯಶುದ್ಧಿ ಇಲ್ಲದೆ ಇರುವರು. ಕೆಲವರು ಆಕಾರದಲ್ಲಿ ಕುರೂಪಿಗಳಾಗಿ

ಪರಿಶುದ್ಧ ಹೃದಯರಾಗಿರುವರು. ಅದರಿಂದ ಬ್ರಹ್ಮತತ್ವದಂತೆ ಪುರುಷನಿಷ್ಠಗು
ಣಗಳುಂ ತಿಳಿಯಲಶಕ್ಯವಾಗಿರುವುವು. ಸಮಯವಿಶೇಷಗಳಲ್ಲಿ ಕಾಮಲೋ
ಭಾದಿಗಳಿಂದ ದೋಷವೇ ಗುಣದಂತೆಯೂ ಗುಣವೇ ದೋಷದಂತೆಯೂ
ತೋರುವುದು. ಇದರ ನಿಶ್ಚಯಮಂ ಹೀಗೆಂದು ತಿಳಿಯಲಶಕ್ಯಮಾದರೂ
ಉದ್ಯೋಗಮಂ ಕೊಡುವಲ್ಲಿ ಪುರುಷನ ಕುಲಶೀಲ ಸ್ವಭಾವಂಗಳನ್ನು ಪ್ರತ್ಯಕ್ಷ
ಪರೋಕ್ಷಂಗಳಲ್ಲಿ ವಿಚಾರಿಸಿ ತಿಳಿದು ನಿರ್ವಾಹವನ್ನರಿತು ಅಧಿಕಾರಮಂ ನೇಮಿಸಿ
ಕಾರ್ಯಾನುಗುಣವಾದ ಸಂಬಳ ಸನ್ಮಾನಂಗಳಂ ಮಾಡುತ್ತ ಮತ್ತರಾದವರಂ
ಶಿಕ್ಷಿಸುತ್ತ ಮಾನ್ಯರಿಗೆ ಅಪಮಾನವನ್ನಾಚರಿಸದೆ ಅಪೂಜ್ಯರಂ ಪೂಜಿಸದೆ
ಕಾರ್ಯದಲ್ಲಿ ಜನಗಳಿಗೆ ಉತ್ಸಾಹಂ ಹೆಚ್ಚುವಂತೆ ಗೆಯ್ಯುತ್ತ ಅಪ್ರಮತ್ತನೂ
ನೀತಿಜ್ಞನೂ ಆಗಿ ರಾಜ್ಯಭಾರಮಂ ನಿರ್ವಹಿಸುತ್ತಿರುವ ಅರಸು ತಾನು ಸನ್ಮಾರ್ಗ
ದಲ್ಲಿ ನಡೆದು ಜನರಂ ನಡೆಸಿದಂತೆ ಅವರು ಕಾರ್ಯಮಂ ನೆರವೇರಿಸುತ್ತ ಇರು
ವರು. ಆ ಪ್ರಭುವಿನ ಚಿತ್ತಸ್ಥೈರ್ಯದಂತೆ ಸಾಮ್ರಾಜ್ಯಲಕ್ಷ್ಮಿಯೂ ಸ್ಥಿರವಾ
ಗಿರುವಳು. ಹಾಗಲ್ಲದೆ ಜನಗಳ ಶೀಲಸ್ವಭಾವಂಗಳಂ ವಿಚಾರಿಸದೆ ಮನಸ್ಸು
ಬಂದಂತೆ ಕೊಡುತ್ತ ಕಾರ್ಯಮಂ ನೇಮಿಸಿ ಆದಾಯವ್ಯಯಂಗಳನ್ನರಿಯದೆ
ಕರ್ತವ್ಯಮಂಬಿಟ್ಟು ಪ್ರಭುತ್ವಂಗೆಯ್ಯುವ ಅರಸಿನ ರಾಜ್ಯದಲ್ಲಿ ಅಪೂಜ್ಯರಿಗೆ ಬಹು
ಮಾನವೂ ಕಾರ್ಯನಿರ್ವಾಹಿಗಳಿಗಪಮಾನವೂ ಉಂಟಾಗಿ ಪ್ರಜಾಪೀಡೆಯೂ
ದುರ್ಬಿಕ್ಷವೂ ಭಯವೂ ಸಂಭವಿಸಿ ಮತ್ತರಾದ ಜನರು ದ್ರವ್ಯವಂತರಾಗಿ ಸ್ವಾಮಿ
ಯಂ ಲಕ್ಷೀಕರಿಸದೆ ಪ್ರಭುತ್ವವನ್ನೇ ಅಪೇಕ್ಷಿಸುತ್ತ ಶಕ್ಯವಿಲ್ಲದಿದ್ದರೆ ಕಾರ್ಯ
ಗಳಂ ಕೆಡಿಸುತ್ತ ಸ್ವಾಮಿಗೆ ಅಪಯಶಸ್ಸನ್ನೇ ಹಾರೈಸುತ್ತ ಇರುವರು. ಅದ
ರಿಂದ ಪುರುಲಕ್ಷಣವೆಂಬುವುದು ಬಹುವಿಮರ್ಶಾಸಾಧ್ಯವು. ಪ್ರಕೃತವೇನೆಂದರೆ
ಕಿಂಚಿತ್ತಾದರೂ ಶ್ರಮವಿಲ್ಲದೆ ಅನಾಯಾಸವಾಗಿ ದೊರಕಿದ ಬುದ್ಧಿ ಸಂಪನ್ನ
ನಾದ ಚಾಣಕ್ಯನು ಚಂದ್ರಗುಪ್ತನಲ್ಲಿ ಮಂತ್ರಿತ್ವಮಂ ವಹಿಸಿರುವುದು ಈಶ್ವರನ
ಸಂಘಟನೆಯಲ್ಲದೆ ಮನುಷ್ಯಯತ್ನವಲ್ಲ. ನಾನಾದರೋ ವಿವೇಕಶೂನ್ಯನಾದ
ಮಲಯಕೇತುವಂ ಪರಿಗ್ರಹಿಸಿ ಈ ರೀತಿಯಾದೆನು. ಲೋಕದಲ್ಲಿ ಜಯಶೀಲ
ನೂ ಉತ್ಸಾಹವಂತನೂ ವಿವೇಕಶಾಲಿಯೂ ಆದ ಅರಸನನ್ನು ಪರಿಗ್ರಹಿಸಿ ನೀತಿ
ಯಂ ಪ್ರಯೋಗಿಸುವ ಮಂತ್ರಿಗೆ ಖ್ಯಾತಿಯುಂಟಾಗುವುದು. ಪೌರುಷಹೀನನೂ
ಚಪಲಚಿತ್ತನೂ ಆಗಿ ದೂರದೃಷ್ಟಿ ಇಲ್ಲದ ಅರಸು ಉಭಯ ತೀರಂಗಳಂ ಕೆಡ
ಹುತ್ತ ಅಲ್ಲಿನ ವೃಕ್ಷಂಗಳಂ ಮೇಲೆ ಬೀಳಿಸಿಕೊಳ್ಳುತ್ತ ವೇಗದಿಂ ಹೋಗುವ

ಕ್ಷುದ್ರ ನದಿಯಂತೆ ತಾನೂ ಭ್ರಷ್ಟನಾಗಿ ಸೇರಿದವರನ್ನೂ ಕೆಡಿಸಿ ಲೋಕಾಪ ವಾದಕ್ಕೆ ಪಾತ್ರನಾಗುವನು ಎಂದು ರಾಕ್ಷಸನು ಆಲೋಚಿಸುತ್ತ ಇರಲು; ಚಾಣಕ್ಯನು—

ಅಯ್ಯಾ ಅಮಾತ್ಯರೇ, ಚಂದ್ರಗುಪ್ತನು ಸಭೆಯಲ್ಲಿ ನಿಮ್ಮ ಗುಣಪ್ರಶಂಸೆಯಂ ಬಹುವಾಗಿ ಮಾಡಿರುವನಾದುದರಿಂದ ನಿಮ್ಮಲ್ಲಿ ಈತನಿಗೆ ಅನುರಾಗವು ಹೆಚ್ಚಾಗಿರುವುದು. ನೀವು ಬಂದುದು ಬಲು ಚೆನ್ನಾಯಿತು. ವೃದ್ಧರಾಜನಿಗೆ ಪೌತ್ರನಾಗಿ ಯಶೋವಂತನಾದ ಈ ಚಂದ್ರಗುಪ್ತನಲ್ಲಿ ಪೂರ್ವಾಭಿಮಾನವನ್ನಿಟ್ಟು ನೋಡಬೇಕೆಂದು ಬಂದಿರೋ? ಅಥವಾ ಮಿತ್ರನಾದ ಚಂದನದಾಸನ ಕ್ಷೇಮಕ್ಕೋಸುಗ ಬಂದಿರೋ? ಹೇಳಿರಿ ಎನಲು; ರಾಕ್ಷಸನು—

ಅಯ್ಯಾ ಚಾಣಕ್ಯರೇ, ಕ್ಷೇಮದಾಯಕನಾದ ಪ್ರಭುವಿನ ದರ್ಶನವಾದ ಬಳಿಕ ಚಂದನದಾಸನಿಗೆ ಹೇಗೆ ಪರಿಣಾಮಮುಂಟಾಗದೇ ಇರುವುದು? ಎನಲು;

ಆ ಯರ್ಥವು ನಿಮಗೆ ಅಭಿಮತವಾದ ಪಕ್ಷದಲ್ಲಿ ನೀವು ಚಂದ್ರಗುಪ್ತನನ್ನನುಗ್ರಹಿಸಿ ಪ್ರಾಧಾನ್ಯಶಸ್ತ್ರಮಂ ಪರಿಗ್ರಹಿಸಿದರೆ ಚಂದನದಾಸನಿಗೆ ಕ್ಷೇಮಮುಂಟಾಗುವುದು ಎಂದು ಚಾಣಕ್ಯನು ನುಡಿದನು. ಆ ಮಾತಿಗೆ ರಾಕ್ಷಸನು—

ಅಯ್ಯಾ ಚಾಣಕ್ಯರೇ, ಎಲ್ಲದರಲ್ಲಿಯೂ ನನಗಿಂತ ಶತಾಧಿಕರಾದ ತಮ್ಮಿಂ ಪರಿಗ್ರಹಿಸಲ್ಪಟ್ಟಿದ್ದ ಈ ಪ್ರಾಧಾನ್ಯಶಸ್ತ್ರಮಂ ಗ್ರಹಿಸುವುದಕ್ಕೆ ನಾನು ಯೋಗ್ಯನಲ್ಲವೆಂದು ಸ್ವಲ್ಪ ಮಾನಸಿಕ ಮಾಡಿದೆನು ಎನಲು; ಚಾಣಕ್ಯನು—

ಅಯ್ಯಾ ಅಮಾತ್ಯರೇ, ನಿಮ್ಮ ಸಾಹಸಮಂ ನಾವು ಕಂಡು ಕೇಳಿ ಬಲ್ಲೆವು. ಮದಿಸಿದ ಶತ್ರುಗಳ ಗರ್ವಭಂಗಮಂ ಮಾಡುವ ಮಹಾಶೂರರಾದ ನಿಮ್ಮ ಪರಾಕ್ರಮವಿಜೃಂಭಣೆಯಿಂದ ನಮ್ಮ ಸೇನಾಜನರು ಅಶ್ವಾದಿವಾಹನಂಗಳನ್ನೇರಿ ಅನ್ನಾಹಾರಕ್ಕೆ ಸಮಯವಾಗದೆ ನಿಂತಲ್ಲಿ ನಿಲ್ಲುವುದಕ್ಕಿಲ್ಲದೆ ಕಡಿವಾಣ ಜೇನುಗಳಂ ಬದಲಾಯಿಸದೆ ನಿರಂತರಾಗಿ ಸುತ್ತುತ್ತ ಕೃಶಾಂಗರಾಗಿ ಶ್ರಮಪಡುತ್ತಿದ್ದರು. ಹೀಗೆ ಅರಿವಿಜಯಕ್ಕೆ ಆತಂಕವನ್ನುಂಟುಮಾಡುತ್ತಿರುವ ನೀವೇ ಪ್ರಾಧಾನ್ಯಕ್ಕೆ ಯೋಗ್ಯರಲ್ಲದ ಬಳಿಕ ಮತ್ತಾರು ಯೋಗ್ಯರಾದಾರು? ನಿಮ್ಮ ಮಿತ್ರನಾದ ಚಂದನದಾಸನು ಜೀವವಂತನಾಗಿರಬೇಕಾದರೆ ಬದಲು ಮಾತುಗಳಂ ಹೇಳದೆ ನೀವು ಮಂತ್ರಿಪದಕ್ಕೆ ಸಮ್ಮತಿಸಬೇಕು ಎನಲು; ಆ ಮಾತಿಗೆ ರಾಕ್ಷಸನು ತನ್ನ ಮನಸ್ಸಿನಲ್ಲಿ—ನಂದರಿಗೆ ತನ್ನಲ್ಲಿದ್ದ ವಿಶ್ವಾಸಮಂ ಸ್ಮರಿಸಿಕೊಂಡರೆ ಮತ್ತೊಬ್ಬ ಪ್ರಭುವಂ ಸೇವಿಸುವುದಕ್ಕೆ ಮನಸ್ಸು ಒಡಂಬಡದು. ಮಿತ್ರನಾದ

ಚಂದನದಾಸನ ಕ್ಷೇಮಕ್ಕೋಸುಗ ಈ ನಂದವೈರಿಯಾದ ಚಂದ್ರಗುಪ್ತನಂ
ಸೇವಿಸಬೇಕಾಗಿ ಬಂದಿತು. ದೈವಸಂಕಲ್ಪಕ್ಕೆ ಯಾರು ಮಾಡತಕ್ಕದೇನು ?
ಎಂದು ಚಿಂತಿಸುತ್ತ ಚಾಣಕ್ಯರಂ ಕುರಿತು—

ಅಯ್ಯಾ ಚಾಣಕ್ಯರೇ, ಲೋಕದಲ್ಲಿ ಸರ್ವಕಾರ್ಯಗಳಿಗಿಂತಲೂ ಮಿತ್ರ
ಕ್ಷೇಮಲಾಭವೇ ಅತಿಶಯವಾದುದರಿಂದ ಅಂಥ ಸಖನ ಪರಿಣಾಮಲಾಭಕ್ಕೋಸುಗ
ನೀವು ಹೇಳ್ದಂತೆ ಕೇಳುವೆನು ಎಂದು ಅಮಾತ್ಯರಾಕ್ಷಸನು ನುಡಿದು ಬಹು ಮತಿ
ಯೊಡನೆ ಪ್ರಾಧಾನ್ಯಶಸ್ತ್ರಮಂ ಚಂದ್ರಗುಪ್ತನ ಹಸ್ತದಿಂದ ಪರಿಗ್ರಹಿಸಲು; ಆಗ
ಶಂಖ ಭೇರಿ ಕಹಳಾದಿ ನಾನಾವಿಧ ಮಂಗಳಸೂಚಕವಾದ ವಾದ್ಯಂಗಳು ಭೋರಿ
ಡುತ್ತಿರಲು; ಚಂದ್ರಗುಪ್ತನಿಗೆ ಕೈಮುಗಿದು ಇಂದಿಗೆ ನಂದರ ಸ್ಮರಣೆಯು
ಸಮಾಪ್ತವಾಯಿತೆಂದು ತಿಳಿದು ಚಾಣಕ್ಯರಿಗಭಿವಂದಿಸಿ ಉಚಿತಪ್ರಕಾರದಿಂ
ಕುಳ್ಳಿರಲು; ಆ ಸಮಯದಲ್ಲಿ ಭದ್ರಭಟಾದಿಗಳು ಮಲಯಕೇತುವಂ ಕೈಸೆರೆ
ಯಿಂದ ತೆಗೆದುಕೊಂಡು ಬಂದು ಊರುಬಾಗಿಲಲ್ಲಿ ನಿಂತಿದ್ದಾರೆಂಬ ವರ್ತಮಾನ
ಮಂ ಅವರ ಕಡೆಯ ದೂತಂ ಬಂದು ಚಾಣಕ್ಯರಿಗೆ ವಿಜ್ಞಾಪಿಸಲು; ಅವರು
ಅಮಾತ್ಯರಾಕ್ಷಸನಂ ಕುರಿತು—ಮಲಯಕೇತುವಿನ ವಿಷಯದಲ್ಲಿ ಚಂದ್ರಗುಪ್ತನು
ಹೇಗೆ ನಡೆಯಬೇಕೋ ಆ ರೀತಿಯಂ ಆತನಿಗೆ ತಿಳುಹಿಸಬೇಕು ಎನಲು; ಅದಕ್ಕೆ
ಅಮಾತ್ಯರಾಕ್ಷಸನು ಚಂದ್ರಗುಪ್ತನಂ ಕುರಿತು—

ಅಯ್ಯಾ ರಾಜಕುಮಾರನೇ, ಈ ಮಲಯಕೇತುವಿನ ತಂದೆಯು ಆರ್ಯ
ರಾದ ಚಾಣಕ್ಯರ ವಾಕ್ಯಾನುಸಾರವಾಗಿ ನಿನಗೆ ಸಹಾಯಮಂ ಮಾಡಿದುದರಿಂದಲೂ
ನನಗೆ ಪೂರ್ವಮಿತ್ರನಾದುದರಿಂದಲೂ ಈತನು ಬಹಳ ದಿವಸಗಳಿಂದ ನನ್ನನ್ನು
ಸನ್ಮಾನಿಸಿ ರಕ್ಷಿಸಿದುದರಿಂದಲೂ ಅವನು ನಿರ್ದೋಷಿಯಾದುದರಿಂದಲೂ ಕೃತಜ್ಞ
ರಾದ ನಮ್ಮೆಲ್ಲರ ಸನ್ಮಾನಕ್ಕೂ ಯೋಗ್ಯನೆನಲು; ಆಗ ಚಂದ್ರಗುಪ್ತನು ಒಪ್ಪಿ
ಚಾಣಕ್ಯಾಮಾತ್ಯರಾಕ್ಷಸಸಮೇತನಾಗಿ ಪರಿವಾರವನ್ನೊಡಗೊಂಡು ಅತಿಸಂಭ್ರಮ
ದಿಂದ ಎದುರುಗೊಳ್ಳುವುದಕ್ಕೋಸ್ಕರ ಅಂದಳದಲ್ಲಿ ಬರುವ ಮಲಯಕೇತುವಿನ
ಸಮೀಪಕ್ಕೆ ಹೋಗುತ್ತಿರಲು; ಈ ವರ್ತಮಾನಮಂ ಮಲಯಕೇತುವಿಗೆ ಭದ್ರ
ಭಟನು ತಿಳುಹಿಸಿ—ನಾವು ತಮ್ಮ ಸೇವಕರು. ತಮ್ಮ ಚಿತ್ತ ಬಂದಂತೆ ನಡಸ
ಬಹುದು ಎನಲಾಗಿ; ಮಲಯಕೇತುವು ಚಾಣಕ್ಯಚಂದ್ರಗುಪ್ತಾಮಾತ್ಯರಾಕ್ಷಸ
ರುಗಳ ಸದ್ಗುಣದಿಂದ ಪರವಶನಾಗಿ ಭದ್ರಭಟಾದಿ ಸೇನಾನಾಯಕರ ಕೂಡ
ಅಂದಳವನ್ನಿಳಿದು ಕಾಲು ನಡಿಗೆಯಲ್ಲಿಯೇ ತನಗೆದುರಾಗಿ ಬರುವವರ ಬಳಿಗೆ

ಬಂದು ಚಾಣಿಕ್ಯಾಮಾತ್ಯರಾಕ್ಷಸರಿಗೆ ಸಾಷ್ಟಾಂಗಪ್ರಣಾಮಮಂ ಮಾಡಿ ಚಂದ್ರಗುಪ್ತನನ್ನಾಲಿಂಗಿಸಲು; ಮೌರ್ಯಪುತ್ರನೂ ಅದೇ ಪ್ರಕಾರದಿಂ ಪರ್ವತಕ್ಷ್ಮಾಪಾಲತನಯನಂ ತಕ್ಕೈಸಿ ನವರತ್ನಖಚಿತಮಾದ ಎರಡು ಪಲ್ಲಕ್ಕಿಗಳಲ್ಲಿ ಚಾಣಿಕ್ಯಾಮಾತ್ಯರಾಕ್ಷಸರಂ ಕುಳ್ಳಿರಿಸಿ ತಾನೂ ಮಲಯಕೇತುವೂ ಸಹ ದಿವ್ಯ ಗಜಗಳ ಮೇಲೆ ಅಂಬಾರಿಯಲ್ಲಿ ಕುಳಿತುಕೊಂಡು ಅತಿ ಸಂಭ್ರಮದಿಂದ ಆಸ್ಥಾನಕ್ಕೆ ಬಂದು ಆನೆಯಿಂದಿಳಿದು ದಿವ್ಯಸಿಂಹಾಸನದ ಮೇಲೆ ಮಲಯಕೇತುವಂ ಮೂರ್ತಿಗೊಳಿಸಿ ಅನರ್ಘ್ಯವಾದ ಉಚ್ಚಾಸನಗಳಲ್ಲಿ ಚಾಣಿಕ್ಯಾಮಾತ್ಯರಾಕ್ಷಸರಂ ಬಿಜಮಾಡಿಸಿ ತಾನೂ ಪೀಠದ ಮೇಲೆ ಕುಳಿತುಕೊಂಡು ಚಾಣಿಕ್ಯರ ಸಹಾಧ್ಯಾಯಿಯಾದ ಇಂದುಶರ್ಮನಂ ಕರಿಸಿ ಪ್ರತ್ಯುತ್ಥಾನಾಭಿಗಮನ ವಂದನಾಸನಾದಿ ಷೋಡಶೋಪಚಾರದಿಂ ಪೂಜಿಸಲು; ಆಗ ಅಮಾತ್ಯರಾಕ್ಷಸನು—

ಅಯ್ಯಾ ಪರಮಮಹಿಮೆಯುಳ್ಳ ಇಂದುಶರ್ಮರೇ, ಅಮಾತ್ಯರಾಕ್ಷಸನು ಪ್ರಣಮಿಸುವನೆಂದು ಹೇಳಿ ಸಾಷ್ಟಾಂಗವಂದನೆಯಂ ಮಾಡಲು; ಇಂದುಶರ್ಮನು—

ಅಯ್ಯಾ ಅನ್ಯಾದೃಶಪರಾಕ್ರಮಶಾಲಿಗಳಾದ ಅಮಾತ್ಯರಾಕ್ಷಸರೇ, ಈಗ ನಮ್ಮ ಶ್ರಮಗಳೆಲ್ಲ ಸಫಲವಾದುವು ಎಂದು ಹೇಳಿ ಪ್ರತಿ ನಮಸ್ಕಾರಂಗೆಯ್ದು ಕೂತುಕೊಳ್ಳಲು; ಆಗ ಚಾಣಿಕ್ಯನು—

ಅಯ್ಯಾ ಚಂದ್ರಗುಪ್ತನೇ, ಪಾಪಭೂಯಿಷ್ಠವಾದ ಈ ಕಲಿಯುಗದಲ್ಲಿ ಯೂ ಮಿತ್ರಶಿಖಾಮಣಿಯಾಗಿರುವ ಚಂದನದಾಸನಿಗೆ ಸಮಾನನಾದ ಪುರುಷನೋರ್ವನೂ ಹಿಂದೆ ಹುಟ್ಟಲೂ ಇಲ್ಲ. ಈಗಲೂ ಇಲ್ಲ. ಮುಂದೆ ಹುಟ್ಟುವುದೂ ಇಲ್ಲ. ಈತನಂತೆ ಪ್ರಾಣಗಳಂ ತೃಣಕ್ಕೆಣೆಯಾಗಿ ಎಣಿಸಿ ಮಿತ್ರಕಾರ್ಯಮಂ ಮಾಡುವವರಾರು? ಆತನಂ ಬಹಳ ಸನ್ಮಾನದಿಂದ ಈ ಸಭೆಗೆ ಕರಿಸಿ ಬಹು ಮರ್ಯಾದೆಯಂ ಮಾಡಬೇಕೆಂದು ಹೇಳಲು; ಚಂದ್ರಗುಪ್ತನು ದೂತರಂ ಕುರಿತು—

ಎಲೈ ಭಟರುಗಳಿರಾ, ಚಂದನದಾಸನಂ ವಧ್ಯಸ್ಥಾನದಿಂ ಕರತಂದು ಆಯುಷ್ಕರ್ಮ ಮಂಗಳಸ್ನಾನಾದಿಗಳಂ ಮಾಡಿಸಿ ನಮ್ಮ ಬೊಕ್ಕಸದಿಂದ ಅನರ್ಘ್ಯ ವಸ್ತ್ರಭೂಷಣ ಗಂಧಮಾಲ್ಯಾದಿಗಳಂ ತೆಗೆಸಿಕೊಂಡು ಹೋಗಿ ಆತನಂ ಅಲಂಕರಿಸಿ ಆನೆಯ ಮೇಲೆ ಅಂಬಾರಿಯಲ್ಲಿ ಕುಳ್ಳಿರಿಸಿಕೊಂಡು ಸಕಲ ವಾದ್ಯಧ್ವನಿಗಳಿಂದ ಆತನ ಸದ್ಗುಣಗಣಮಂ ಹೊಗಳುತ್ತ ನಮ್ಮ ಆಸ್ಥಾನಕ್ಕೆ ಸಂಭ್ರಮದಿಂದ ಕರತನ್ನಿರಿ ಎನಲು; ಅವರು ಅದೇ ಪ್ರಕಾರವಾಗಿ ಅವನಂ ಕರತರಲು; ಆಗ ಚಂದನ

ದಾಸನು ಚಾಣಕ್ಯಾಮಾತ್ಯರಾಕ್ಷಸರಿಗೂ ಚಂದ್ರಗುಪ್ತ ಮಲಯಕೇತುಗಳಿಗೂ ಸಾಷ್ಟಾಂಗಪ್ರಣಾಮಮಂ ಮಾಡಲು; ಚಂದ್ರಗುಪ್ತನು ಅವನನ್ನಾಲಿಂಗಿಸಿ ಅವನಿಗೆ ಕುಳಿತುಕೊಳ್ಳುವುದಕ್ಕೆ ಪೀಠಮಂ ಕೊಡಿಸಲು; ಚಂದನದಾಸನು—

ಪೂಜ್ಯರಾದ ಈ ಮಹಾತ್ಮರ ಸನ್ನಿಧಿಯಲ್ಲಿಯೂ ಮಹಾ ಪ್ರಭುಗಳ ಸಮ್ಮುಖದಲ್ಲಿಯೂ ಪಾಮರನೂ ಸ್ವಲ್ಪಮನುಷ್ಯನೂ ಆದ ನನಗೆ ತಾದೃಶ ಯೋಗ್ಯತೆಯುಂಟೇ ? ಎನಲು; ಚಾಣಕ್ಯನು—

ಅಯ್ಯಾ ಮಹಾತ್ಮನಾದ ಸೆಟ್ಟಿಯೇ, ನಿನಗೆ ಶಿಬಿಚಕ್ರವರ್ತಿಗುಂಟಾದಂತೆ ಆಚಂದ್ರಾರ್ಕವಾಗಿ ಶಾಶ್ವತವಾದ ಕೀರ್ತಿಯುಂಟಾಯಿತು. ಈ ಪೀಠದಲ್ಲಿ ನೀನು ಕುಳಿತುಕೊಳ್ಳುವುದು ಅತಿಶಯವೇನು ? ಮುಂದೆ ದೇಹಾವಸಾನದಲ್ಲಿ ಸ್ವರ್ಗಲೋಕದೊಳಗೆ ಇಂದ್ರನು ನಿನಗೆ ಕೊಡುವ ಪೀಠದಲ್ಲಿ ಕುಳಿತುಕೊಳ್ಳುವಿ ಎಂದು ಹೇಳಿ ಮೊದಲು ಬೊಕ್ಕಸಕ್ಕೆ ತೆಗೆದುಕೊಂಡಿದ್ದ ಆತನ ಮನೆಯ ಪದಾರ್ಥಂಗಳೆಲ್ಲವನ್ನೂ ಕೊಡಿಸಿದುದಲ್ಲದೆ ಅದಕ್ಕೆ ಶತಾಧಿಕವಾಗಿ ಅನರ್ಘ್ಯ ರತ್ನ ಕನಕ ವಸ್ತ್ರಾಭರಣಾದ್ಯಮೂಲ್ಯ ಪದಾರ್ಥಂಗಳಂ ಕೊಡಿಸಿ ಆತನಂ ಪೀಠದ ಮೇಲೆ ಕುಳ್ಳಿರಿಸಿ ಕನಕಾಭಿಷೇಕಮಂ ಮಾಡಿಸಿ ಪುನಃ ಅದೇ ಗಜಸ್ಕಂಧದ ಮೇಲೆ ಕುಳ್ಳಿರಿಸಿ ಅವನ ಮನೆಗೆ ಕಳುಹಿಸಿ ಮಲಯಕೇತುವಿನೊಡನೆ ರಾಜಯೋಗ್ಯವಾದ ಬೀಡಾರಕ್ಕೆ ಸರ್ವರೂ ಹೋಗಿ ಅವನಂ ಅಲ್ಲಿ ಇಳಿಸಿ ಆತನಾಜ್ಞಾನುಸಾರವಾಗಿ ನಡೆಯುವಂತೆ ಬಾಗುರಾಯಣನಿಗೆ ನೇಮಿಸಿ ಪುನಃ ಆಸ್ಥಾನಕ್ಕೆ ಬಂದು ಚಾಣಕ್ಯನು ಅಮಾತ್ಯರಾಕ್ಷಸನಂ ನೋಡಿ—

ಅಯ್ಯಾ ಸಚಿವರೇ, ಚಂದ್ರಗುಪ್ತನಿಗೆ ಪಟ್ಟಾಭಿಷೇಕಮಂ ಮಾಡಿಸಬೇಕೆಂದು ಮೊದಲು ಸಂಕಲ್ಪಮಂ ಮಾಡಿ ನಿಲ್ಲಿಸಿತ್ತು. ಅದಕ್ಕೆ ನಾಳಿನ ದಿವಸ ಚೆನ್ನಾಗಿರುವುದು. ಶುಭಮುಹೂರ್ತದಲ್ಲಿ ಮೂರ್ಧಾಭಿಷೇಕಮಂ ಮಾಡಿಸಿದರೆ ಆ ಉತ್ಸವಮಂ ನೋಡಿ ಸಂತೋಷಿಸಿ ನಾವು ತಪಸ್ಸಿಗಾಗಿ ನೈಮಿಶಾರಣ್ಯಮಂ ಕುರಿತು ತೆರಳುವೆವೆಂದುಸಿರಿ ಈಗ ಪರ್ಣಶಾಲೆಗೆ ಅಪ್ಪಣೆಯಂ ಕೊಡಿರೆಂಬುದಾಗಿ ಕೇಳಲು; ಆಗ ಅಮಾತ್ಯರಾಕ್ಷಸನು ಚಂದ್ರಗುಪ್ತನೊಡಗೂಡಿ ಬಂದು ಅವರಂ ಅವರ ಗೃಹಕ್ಕೆ ಕಳುಹಿಸಿದ ಮೇಲೆ ಚಂದ್ರಗುಪ್ತನು ತನ್ನ ಅಂತಃಪುರಕ್ಕೆ ಹೋಗಲು; ಆ ಮೇಲೆ ಅಮಾತ್ಯರಾಕ್ಷಸನು ಪುನಃ ಆಸ್ಥಾನಕ್ಕೆ ಬಂದು ಕುಳಿತು—

ನಾಳಿನ ಶುದ್ಧ ೧೫ ದಿವಸ ಪ್ರಾತಃಕಾಲದಲ್ಲಿ ಚಂದ್ರಗುಪ್ತಮಹಾರಾಜರು ಮಹಾಸಿಂಹಾಸನಾರೋಹಣಮಂ ಮಾಡುವುದರಿಂದ ಪುರಮೆಲ್ಲವೂ ಅಲಂಕೃತ

ಮಾಗಲಿ. ಕಾರಾಗೃಹದಲ್ಲಿರುವ ಜನರು ಸೆರೆ ಸಂಕೋಲೆಗಳಂ ವಿಮುಕ್ತರಾಗಿ ಮನಸ್ಸು ಬಂದಂತೆ ಹೋಗಲಿ. ಆಶ್ರಿತ ವಿದ್ವಜ್ಜನಗಳಿಗೂ ಅಧಿಕಾರಿಗಳಿಗೂ ಕಪ್ಪಂಗಳನ್ನೊಪ್ಪಿಸುವ ದೇಶಾಧಿಪತಿಗಳಿಗೂ ಸಹ ಉಚಿತಪ್ರಕಾರವಾಗಿ ಬೊಕ್ಕಸದಿಂದ ವಸ್ತ್ರಭೂಷಣ ಗಂಧಮಾಲ್ಯಾದಿಗಳು ಕೊಡಲ್ಪಡಲಿ. ಸರ್ವಜನಗಳಿಗೂ ಔತಣಂಗಳಾಗಲಿ. ಬ್ರಾಹ್ಮಣ ನಿಕರಕ್ಕೆ ಮೃಷ್ಟಾನ್ನಭೋಜನ ಭೂರಿ ದಕ್ಷಿಣೆಗಳು ನಡೆಯುತ್ತಿರಲಿ. ದೀನಾನಾಥರಿಗೆ ಅನ್ನವಸ್ತ್ರಗಳು ಕೊಡಲ್ಪಡಲಿ. ದೇವಾಲಯಂಗಳಲ್ಲಿ ಉತ್ಸವಗಳು ನಡೆಯಲಿ. ಸೇನೆಗಳೆಲ್ಲವೂ ಅಲಂಕೃತಗಳಾಗಲಿ. ರಾಜವೀಧಿಗಳು ವಾರಾಂಗನಾಚರಣಮಂಜೀರಮನೋಹರ ಸಂಗೀತ ಧ್ವನಿಗಳಂ ಶೋಭಿಸುತ್ತಿರಲಿ. ಗಂಗಾದಿ ಸಕಲ ನದ್ಯುದಕಗಳೂ ಸರ್ವೌಷಧೀರಸಗಳೂ ಛತ್ರ ಚಾಮರಾದಿ ಸರ್ವ ಪಟ್ಟಾಭಿಷೇಕ ಯೋಗ್ಯ ಪದಾರ್ಥಗಳೂ ಸಿದ್ಧವಾಗಲಿ ಎಂದು ಬಾಗುರಾಯಣನಿಗೆ ನೇಮಿಸಲು ; ಆತನು ಒಳ್ಳೆಯದೆಂದು ಹೋಗಿ ಅಲ್ಲಿನ ಅಧಿಕಾರಿಗಳೆಲ್ಲರಿಗೂ ಆಜ್ಞಾಪಿಸಲು ; ಅವರೆಲ್ಲರೂ ಅದೇ ರೀತಿಯಾಗಿ ಮಾಡಿಸುತ್ತಿರಲು ; ಆಗ ರಾಕ್ಷಸನು ಸಾಮಂತ ದೇಶಾಧಿಪತಿಗಳಾದ ಕಾಶೀರಾಜ ಮೊದಲಾದ ಅರಸುಗಳೆಲ್ಲರೂ ಪುತ್ರ ಪರಿವಾರಯುತರಾಗಿ ಕಪ್ಪಂಗಳಂ ತೆಗೆದುಕೊಂಡು ಅಭಿಷೇಕ ಸಮಯದಲ್ಲಿ ಬಂದು ಕಾದುಕೊಂಡಿರುವಂತೆ ಅವರೆಲ್ಲರಿಗೂ ಲೇಖನಮಂ ಬರೆಸಿ ಕಳುಹಿಸಿ ಸಿದ್ಧವಾಗುತ್ತಿರುವ ಸಾಮಗ್ರಿಗಳೆಲ್ಲವಂ ತಾನು ಕಣ್ಣಾರ ನೋಡುತ್ತ ಇನ್ನೂ ಅಧಿಕವಾಗಿ ಒದಗಿಸುತ್ತ ಕಾರ್ಯಗಳಲ್ಲಿ ಜನರಂ ನೇಮಿಸುತ್ತ ಕೋಶಗೃಹದಿಂದ ಧನರತ್ನಗಳಂ ರಾಶಿಗೊಳಿಸುತ್ತ ಪ್ರಾಕಾರವನ್ನೇರಿ ಪುರಾಲಂಕಾರಮಂ ನೋಡುತ್ತ ಅಭಿಷೇಕಕಾರ್ಯದಲ್ಲಿ ತತ್ಪರನಾಗಿರುತ್ತಿರಲು ; ಆಗ ಆಗುವ ಗಂಧೋದಕದ ಚಳೆಯಂಗಳಿಂದಲೂ ಕುರುಜು ಮೇಲುಕಟ್ಟು ತೋರಣಗಳಿಂದಲೂ ಕಾಲಾಗರು ಧೂಮ ಕುಸುಮ ಮೌಕ್ತಿಕ ಸರಗಳಿಂದಲೂ ವಿವಿಧದೀಪ ಪಂಕ್ತಿಗಳಿಂದಲೂ ಅನೇಕ ಫಲವಸ್ತುಗಳ ತಂಡೋಪತಂಡಗಳಿಂದಲೂ ಸಹಸ್ರೋಪಸಹಸ್ರ ಕದಳೀಸ್ತಂಭತೋರಣಗಳಿಂದಲೂ ರಾಜವೀಧಿಗಳೆಲ್ಲವೂ ರಾಜ್ಯಲಕ್ಷ್ಮಿಯ ಪೂಜಾಮಂಟಪದಂತೆಯೂ ಕೆಲವೆಡೆಯಲ್ಲಿ ವಸಂತಾಗಮದಂತೆಯೂ ಎಲ್ಲಿ ನೋಡಿದರೂ ನಂದನವನ ರಾಜಿಯೋ ಎಂಬಂತೆಯೂ ಕೆಲವು ಕಡೆಗಳಲ್ಲಿ ವಿವಿಧವಿಲಾಸಿನೀಮಂಜುಮಂಜೀರಧ್ವನಿಯುತ ಸಂಗೀತದಿಂ ಗಂಧರ್ವಲೋಕವೋ ಎಂಬಂತೆಯೂ ಅನೇಕ ತೂರ್ಯ ಮಹಾಘೋಷದಿಂದ ಸಮುದ್ರಮಥನಸಮಯದಂತೆಯೂ ಕೆಲವೆಡೆಯಲ್ಲಿ

ಭೂಸುರ ಸ್ವಸ್ತಿವಾಚನ ಧ್ವನಿಗಳಿಂ ಬ್ರಹ್ಮಸದನವೇ ಪ್ರತ್ಯಕ್ಷಮಾದಂತೆಯೂ ಮುದಿತ ಭುಜಂಗ ನಿಕರದಿಂ ಭೋಗವತಿಯೇ ಕಂಗೊಳಿಸಿದಂತೆಯೂ ಅನೇಕ ಧಾರಾಯಂತ್ರಗಳಿಂ ವರ್ಷಾಕಾಲವು ಸನ್ನಿಹಿತವಾದಂತೆಯೂ ವಂದಿಮಾಗಧರ ಸ್ತುತಿಪಾಠಂಗಳಿಂ ಲೋಕವೇ ಶಬ್ದಮಯವಾದಂತೆಯೂ ರಾಜಮಾರ್ಗಮೆಲ್ಲವೂ ಕುಸುಮಧೂಳೀಮಯವಾದಂತೆಯೂ ಆಸ್ಥಾನಂಗಳೆಲ್ಲವೂ ರಾಜಕುಲ ಮಕುಟಮಣಿ ಪ್ರಭಾಮಯವಾಗಿಯೂ ಗಗನಾಭೋಗಮೆಲ್ಲವೂ ಕಾಲಾಗರು ಧೂಮಮಯವಾಗಿಯೂ ಪ್ರಾಸಾದವಾತಾಯನಂಗಳೆಲ್ಲವೂ ಕಾಮಿನೀಮುಖ ಪದ್ಮಮಯವಾಗಿಯೂ ಪ್ರಜಾನಿಕರಂಗಳೆಲ್ಲವೂ ಭೂಷಣಮಯವಾಗಿಯೂ ತೋರುತ್ತ ಹೀಗೆ ಪುರಮೆಲ್ಲವೂ ಅಮರಾವತಿಯೋ ಎಂಬ ಹಾಗೆ ಮಂಗಳಕರವಾಗಿ ಶೋಭಿಸುತ್ತಿರಲು ; ಆಗ ಬ್ರಾಹ್ಮಣನಿಕರ ಭುಕ್ತ ಮುಕ್ತಘೃತಶೇಷಗಳು ಮಡುಗಳಂತೆಯೂ ದಧಿಕ್ಷೀರಗಳು ಕಾಲುವೆಗಳಂತೆಯೂ ಭಕ್ಷ್ಯರಾಶಿಗಳು ಪರ್ವತದಂತೆಯೂ ರಾಜಿಸುತ್ತ ಹೀಗೆ ಅತ್ಯಾಶ್ಚರ್ಯಕರವಾದ ಮಹೋತ್ಸವಂ ನಡೆಯುತ್ತಿರಲು ; ಆಗ ಚಂದ್ರಗುಪ್ತನು ತನ್ನ ಪತ್ನಿಯ ಕೈಯ್ಯಲ್ಲಿದ್ದ ರತ್ನಕಲಶೋದಕದಿಂದ ಚಾಣಕ್ಯರ ಪಾದ ಪ್ರಕ್ಷಾಳನಂಗೆಯ್ದು ಮಣಿಸಮೂಹಂಗಳಿಂದ ಅಂಘ್ರಿಗಳಿಗಭಿಷೇಕಮಂ ಮಾಡಿ ಯಥಾವಿಧಿಯಿಂ ಪೂಜಿಸಿ ರತ್ನಪಾದುಕೆಗಳಂ ತಂದು ಅವರಪಾದಗಳಿಗಳವಡಿಸಿ ಆ ಚರಣತೀರ್ಥಮಂ ತಾನು ಸೇವಿಸಿ ಪುರಾತನವಾದ ಅವರ ಪಾದುಕೆಗಳೆರಡಂ ತನ್ನ ಶಿರಸ್ಸಿನಲ್ಲಿ ಇಟ್ಟುಕೊಂಡು ಇದೇ ನಮಗೆ ದೇವತಾಸ್ವರೂಪವು. ಇದಂ ನಾನು ಮಾಡುವ ನಿತ್ಯ ಪೂಜೆಗೋಸ್ಕರ ಕೊಡಬೇಕೆಂದು ಪ್ರಾರ್ಥಿಸಿ ತೆಗೆದುಕೊಂಡು ಅದಕ್ಕೆ ವಜ್ರಕವಚವನ್ನಳವಡಿಸಿ ದೇವತಾಗೃಹದಲ್ಲಿರಿಸಿ ಆಗ ಚಾಣಕ್ಯರ ಅನುಮತಿಯಿಂದ ಮಂಗಳಮಜ್ಜನಂಗೆಯ್ದು ಅನರ್ಘ್ಯವಸ್ತ್ರ ಭೂಷಣಂಗಳಿಂದಲಂಕೃತನಾಗಿ ವಿಪ್ರವರ್ಗಕ್ಕೆ ಷೋಡಶಮಹಾದಾನಂಗಳನ್ನಿತ್ತು ಸಕಲ ಜನಾನುಮತಿಯಿಂದ ಮಹಾಸಿಂಹಾಸನಾರೋಹಣಮಂ ಮಾಡಿ ಮಾಣಿಕ್ಯಮಯವಾದ ಉಷ್ಣೀಷಮಂ ಧರಿಸಿ ನಕ್ಷತ್ರ ಸಮೂಹದಿಂದ ಪ್ರಕಾಶಿಸುವ ಪೂರ್ಣಚಂದ್ರನಂತೆ ರಾಜಮಂಡಲ ಪರಿವಾರಮಧ್ಯದಲ್ಲಿ ಚಂದ್ರಗುಪ್ತನು ಹರಿಪೀಠಾಗ್ರದಲ್ಲಿ ಒಪ್ಪುತ್ತಿರಲು ; ಆಗ ಭೂಸುರನಿಕರವು ಆಶೀರ್ವಾದ ಮಂತ್ರಾಕ್ಷತೆಗಳಿಂ ಚಂದ್ರಗುಪ್ತನ ಶಿರಸ್ಸಿನಲ್ಲಿ ತಳಿಯಲು ; ಸುವಾಸಿನಿಯರು ರತ್ನದಾರತಿಗಳಂ ಮಂಗಳಾರತಿಗಳಂ ಪಿಡಿದು ನಿಂತಿರಲು ; ಜಯ ! ರಾಜಾಧಿರಾಜ ! ಕುರುಕುಲಾಬ್ಧಿಚಂದ್ರ ! ಜಯ ಚಂದ್ರಗುಪ್ತಸಾರ್ವಭೌಮರೇ !

ಎಂದು ವಂದಿಮಾಗಧರು ಹೊಗಳುತ್ತಿರಲು ; ಬಾಗುರಾಯಣನು ಶ್ವೇತಾತಪತ್ರ
ಮಂ ಪಿಡಿದು ನಿಂತಿರಲು ; ಭದ್ರಭಟ ರಾಜಸೇನರುಗಳು ಧವಳಚಾಮರಂಗಳಂ
ಗ್ರಹಿಸಿ ಬೀಸುತ್ತಿರಲು ; ಆಗ ಅಮಾತ್ಯರಾಕ್ಷಸನು ಚಂದ್ರಗುಪ್ತನಂ ಪುಷ್ಪಗಳಿಂ
ಪೂಜಿಸಿ ರತ್ನಕಾಣಿಕೆಗಳಂ ಒಪ್ಪಿಸಲು ; ಹಾಗೇ ಕಾಶೀರಾಜನು ಶಿರಸ್ಸಂಬಾಗಿಸಿ
ನಿಂತು ಕಪ್ಪಂಗಳಂ ಸಮರ್ಪಿಸಲು ; ಆ ಬಳಿಕ ಮತ್ಸ್ಯ ಮೈಥಿಲ ಬಂಗಾಳ
ಕಳಿಂಗ ಭೋಜ ಪಾಂಚಾಲ ಸೌರಾಷ್ಟ್ರ ಒಢ್ರಾದಿದೇಶಾಧಿಪತಿಗಳು ವಿವಿಧ
ಭೂಷಣ ವಸ್ತುವಾಹನ ರತ್ನಂಗಳಂ ಒಪ್ಪಿಸಿ ಕೈಗಳಂ ಜೋಡಿಸಿಕೊಂಡು ಓಲೈ
ಸುತ್ತಿರಲು ; ಅವರೆಲ್ಲರಂ ದಿವ್ಯ ಭೂಷಣ ವಸ್ತ್ರಗಂಧಮಾಲ್ಯಾದಿಗಳಂ ಕರ್ಪೂ
ರವೀಳೆಯಂಗಳಿಂದುಪಚರಿಸಿ ಕುಳ್ಳಿರಿಸಲು ; ಆಗ ದಿಕ್ಕುಗಳೆಲ್ಲವೂ ಪ್ರಸನ್ನಮಾಗಿ
ಕಾಣುತ್ತಿರಲು ; ಸೌರಭ್ಯದಿಂದ ಕೂಡಿಕೊಂಡು ಮಂದಮಾರುತಂ ಬೀಸುತ್ತಿ
ರಲು ; ಆ ದಿವಸವು ಅಮೃತಾವಿರ್ಭಾವ ದಿನದಂತೆಯೂ ಗಿರಿಜಾಕಲ್ಯಾಣ ಸಮ
ಯದಂತೆಯೂ ಸಕಲಜನನಿಕರಕ್ಕೆಲ್ಲ ಆನಂದಮಯವಾಗಿರುತ್ತಿರಲು ; ಅದೇ
ಲಗ್ನದಲ್ಲಿ ಚಾಣಕ್ಯನು ರಾಕ್ಷಸನ ಅಭಿಮತಾನುಸಾರವಾಗಿ ಸಮಾನ ರಾಜಕುಲ
ಸಂಜಾತ ಕನ್ಯಾರತ್ನಮಂ ಆ ಚಂದ್ರಗುಪ್ತನಿಗೆ ಪುನಃ ವಿವಾಹಮಂ ಮಾಡಿಸಲು ;
ಆ ರಾಜಪುತ್ರನು ಆಗ ಬೊಕ್ಕಸದಿಂದ ಕೋಟಿದ್ರವ್ಯಂಗಳಂ ತರಿಸಿ ಬ್ರಾಹ್ಮಣರಿಗೆ
ಭೂದಾನ ಶಾಸನಂಗಳಂ ಬರೆಸಿ ಧನಸಹಿತ ಕೊಡುತ್ತಿರಲು ; ಹಾಗೇ ಚಾಣಕ್ಯನು
ರತ್ನ ಭೂಷಣಂಗಳಿಂದ ವಿಪ್ರನಿಕರಕ್ಕೆ ಸಂತೋಷಂಗೆಯ್ಯುತ್ತಿರಲು ; ಅದೇಪ್ರ
ಕಾರ ರಾಕ್ಷಸನು ಧನಂಗಳಂ ಭೂಸುರರಿಗೆ ಹೊರಿಸಿ ಕಳುಹಿಸಲು ; ವಕ್ರನಾ
ಸನು ವಸ್ತ್ರಗಳನ್ನೂ ಸುಮತಿಯು ವಾಹನಂಗಳನ್ನೂ ಬಾಗುರಾಯಣನು
ಗೋಲಕ್ಷಂಗಳನ್ನೂ ರುಕ್ಮನೆಂಬುವನು ಬೇಕಾದ ವಸ್ತುಗಳನ್ನೂ ಕೊಡುತ್ತಿ
ರಲು ; ಸಕಲರೂ ಸಂತುಷ್ಟರಾಗಿ ಮಹಾರಾಜಾಧಿರಾಜನಾದ ಚಂದ್ರಗುಪ್ತನಂ
ಯಶೋವಂತನಾಗಿ ಸುಖದಿಂದಿರುವವನಾಗು ಎಂದು ಹರಸುತ್ತಿರಲು ; ಆಗ
ಬಡತನವೆಂಬುವುದು ಸ್ತ್ರೀಜನದ ಮಧ್ಯಪ್ರದೇಶದಲ್ಲಿಯೂ ವಕ್ರಭಾವವು
ಅವರ ಕುಡಿಹುಬ್ಬುಗಳಲ್ಲಿಯೂ ಕಾಠಿಣ್ಯವು ಕುಚಕುಟ್ಮಲಂಗಳಲ್ಲಿಯೂ
ಕೊಲೆಗಳೆಂಬುವುದು ಅಕ್ಷಕ್ರೀಡೆಯಲ್ಲಿಯೂ ಚಾಂಚಲ್ಯವೆಂಬುವುದು ಯುವ
ತೀಜನನೇತ್ರಾಂಚಲದಲ್ಲಿಯೂ ಕೌಟಿಲ್ಯವೆಂಬುವುದು ಅವರ ಕುಂತಲಪ್ರದೇ
ಶದಲ್ಲಿಯೂ ನಿಗ್ರಹವೆಂಬುವುದು ಇಂದ್ರಿಯಂಗಳಲ್ಲಿಯೂ ಇರುತ್ತಿದ್ದುವಲ್ಲದೆ
ಇನ್ನೆಲ್ಲಿಯೂ ಇಲ್ಲವು. ಈ ರೀತಿಯಲ್ಲಿ ಸಕಲಜನಾನಂದಕರಮಾದ ಚಂದ್ರ
ಗುಪ್ತನ ಪಟ್ಟಾಭಿಷೇಕಮಾದುದಂ ನೋಡಿ ಚಾಣಕ್ಯನು ತಾನು ಕೃತಾರ್ಥನಾ

ದೆನೆಂದು ತಿಳಿದು ಆಗ ಸಕಲರಾಜಮಂಡಲಸಮೇತನಾದ ಚಂದ್ರಗುಪ್ತನನ್ನು
ಮಹಾ ಗಜಾರೋಹಣಮಂ ಮಾಡಿಸಲು ; ದಿವ್ಯವೈಭವದಿಂದ ರಾಜವೀಧಿಗಳಲ್ಲಿ
ಮೆರವಣಿಗೆಯಾಗಿ ಬಂದು ಚಾಣಕ್ಯರ ಪಾದಂಗಳಿಗೆ ನಮಸ್ಕರಿಸುತ್ತಿರುವ
ಮೌರ್ಯಾತ್ಮಜನಂ ಕುರಿತು—

ಅಯ್ಯಾ ರಾಜಾಧಿರಾಜನಾದ ಚಂದ್ರಗುಪ್ತನೇ, ನನಗಿಂತಲೂ ಅಧಿಕನಾದ
ರಾಕ್ಷಸನು ನಿನಗೆ ಶ್ರೇಯಸ್ಸನ್ನಪೇಕ್ಷಿಸುವ ಅಮಾತ್ಯನಾದನು. ಸಕಲ ನೃಪ
ಮಂಡಲವೂ ನಿನ್ನ ಪರಿವಾರವಾಯಿತು. ನೀನು ಸಾರ್ವಭೌಮನೆಂದೆನಿಸಿಕೊಂಡವ
ನಾದೆ. ಇನ್ನು ಮೇಲೆ ಯಶೋವಂತನಾಗಿರುವವನಾಗು ಎಂದು ಹೇಳಿ ನಾನು
ತಪಸ್ಸನ್ನಾರ್ಜಿಸುವುದಕ್ಕೆ ಋಷ್ಯಾಶ್ರಮಂಗಳಂ ಹೊಂದುವೆನು. ಗಮನಕ್ಕನು
ಮತಿಸುವವನಾಗು ಎನಲು ; ಆ ಮಾತಿಗೆ ಚಂದ್ರಗುಪ್ತನು ಪುತ್ರನಲ್ಲಿ ರಾಜ್ಯ
ಭಾರಮಂ ನಿಲ್ಲಿಸಿ ವಿರಕ್ತನಾಗಿ ತಪಸ್ಸಿಗೆ ವನವನ್ನೈದುತ್ತಿರುವ ತಂದೆಯನ್ನ
ಗಲಿರಲಾರದೆ ದುಃಖಪಡುವ ಅರಸನಂತೆ ಕಂಬನಿಗಳಂ ತುಂಬುತ್ತ ಅಂಜಲಿಬಂಧ
ಯುಕ್ತನಾಗಿ ಚಾಣಕ್ಯರಂ ಕುರಿತು—

ಮಹಾನುಭಾವರಾದ ಯಜಮಾನರೇ, ವಿಪತ್ಪ್ರವಾಹಮಗ್ನನಾಗಿದ್ದ ನನ್ನ
ನ್ನು ಉದ್ಧಾರಮಂ ಮಾಡಿ ರಾಜಾಧಿರಾಜನೆಂದೆನಿಸಿದಿರಿ. ನನಗೆ ತಾವು ಸಾಕ್ಷಾ
ದಿಷ್ಟದೇವತೆಯಾದುದರಿಂದ ನಾನು ಮಾಡುವ ಸ್ತುತಿಗಳೆಲ್ಲವೂ ಸೂರ್ಯನಿಗೆ ದೀಪೋ
ಪಚಾರದಂತೆಯೂ ಸರಸ್ವತಿಯಂ ಪ್ರಾಕೃತವಾಕ್ಯಗಳಂ ಸ್ತುತಿಸಿದಂತೆಯೂ
ಮೇರುಪರ್ವತಕ್ಕೆ ಸುವರ್ಣಪುಷ್ಪಮಂ ಸಮರ್ಪಿಸಿದಂತೆಯೂ ತೋರುವುದು.
ನಿಮ್ಮಂ ಸೇವಿಸುತ್ತ ವಾಸಮಾಡಿಕೊಂಡಿದ್ದ ಅರಣ್ಯವೂ ಮಹಾ ರಾಜ್ಯಾ
ಧಿಪತ್ಯದಲ್ಲಿದ್ದಂತೆ ನನಗೆ ಸುಖಕರವಾಗಿದ್ದಿತು. ನಿಮ್ಮನ್ನಗಲಿ ಮಾಡುವಂಥ
ಸಾಮ್ರಾಜ್ಯವಾದರೂ ನನಗೆ ಸುಖವನ್ನುಂಟುಮಾಡಲಾರದು. ಆದರೆ ಇನ್ನು ಮೇಲೆ
ಯೂ ನಿಮ್ಮಂ ನಿರ್ಬಂಧಿಸುವುದಕ್ಕೆ ನಾನು ಹೇಗೆ ಸಮರ್ಥನಾದೇನು ? ಈ ರಾಜ್ಯ
ವಿಚಾರದಲ್ಲಿ ಪ್ರಮಾದವಿಲ್ಲದಂತೆ ನಡೆದುಕೊಳ್ಳುವುದಕ್ಕಾಗಿ ಬುದ್ಧಿ ನೀತಿಗಳಂ
ಅಪ್ಪಣೆ ಕೊಡಿಸಬೇಕೆಂದು ಪ್ರಾರ್ಥಿಸಲು ಆ ಮಾತಿಗೆ ಚಾಣಕ್ಯನು—

ಅಯ್ಯಾ ಅರಸೇ, ಅನಾದಿಕಾಲದಿಂದಲೂ ನಡೆದುಕೊಂಡು ಬಂದಿರುವ ದೇಶ
ಮರ್ಯಾದೆಗಳಿಗೆ ಓಸರ ಬಾರದಂತೆ ರಕ್ಷಿಸಿಕೊಂಡು ಬರುತ್ತಿರುವುದೇ ರಾಜ್ಯ
ಭಾರನಿರ್ವಾಹವೆಂದು ತಿಳಿಯಬೇಕು. ಅದು ಬಹುವಾದ ಸನ್ನೆಗಳ ಸಹಾಯದಿಂದ
ಎತ್ತಿ ನಿಲ್ಲಿಸಿದ ಭಾರವಾಸಿಯಾದ ಸ್ತಂಭವು ಓಸರ ಬಾರದಂತೆ ತಿದ್ದುವ ಪುರುಷನ

ವಶವರ್ತಿಯಾಗಿ ನಿಂತಿರುವಂತೆಯೂ ಸಮುದ್ರದಲ್ಲಿ ಸಂಚರಿಸುತ್ತಿಪ್ಪ ಹಡಗು ಗಳು ಈ ಕ್ಷಪಣಕನ ವಶವಾಗಿರುವಂತೆಯೂ ಪೂರ್ಣತಟಾಕವು ನೀರುಗಂಟಿಯ ಸ್ವಾಧೀನವಾಗಿರುವಂತೆಯೂ ಪೂರ್ವಮರ್ಯಾದೆಗೆ ಹೆಚ್ಚು ಕಡಿಮೆಯಾಗದಂತೆ ವಿಚಾರಿಸುತ್ತಿರುವ ಪುರುಷನಿಂದ ರಾಜ್ಯವು ನಿರ್ವಹಿಸಲ್ಪಡುವುದು. ಮರ್ಯಾದೆ ಎಂಬುವುದಾವುದೆಂದರೆ—ಪ್ರಜೆಗಳಲ್ಲಿ ವರ್ಣಾಶ್ರಮಧರ್ಮಂಗಳೊಳ್ ವ್ಯತ್ಯಾಸ ಮುಂಟಾಗದಂತೆ ವಿಚಾರಿಸಿ ನಿಗ್ರಹಾನುಗ್ರಹಮಂ ಮಾಡುತ್ತಿರುವುದೇ ಮರ್ಯಾದಾಪಾಲನೆಯು, ಅದಂ ಅಪೇಕ್ಷಿಸಿದರೆ ಸ್ವಾಮಿಭೃತ್ಯತ್ವವು ನಿಲ್ಲದೆ ಧರ್ಮಕ್ಕೆ ಹಾನಿಯುಂಟಾಗಿ ಲೋಕವು ನಷ್ಟಪ್ರಾಯವಾಗುವುದರಿಂದ ಪೂರ್ವದಲ್ಲಿ ಮಹಾರಾಜರುಗಳೆಲ್ಲರೂ ಮರ್ಯಾದೆಗೆ ವ್ಯತ್ಯಸ್ತಬಾರದಂತೆ ರಾಜ್ಯಮಂ ಸುಲಭವಾಗಿ ನಿರ್ವಹಿಸುತ್ತ ಯಶೋವಂತರಾದರು. ಇದರಿಂದ ಇಹಪರಂಗಳಲ್ಲಿ ಶ್ರೇಯೋಲಾಭಮುಂಟಾಗುವುದು ಸತ್ಯವೆಂದು ತಿಳಿಯುವವನಾಗು. ನೀನು ವಿಹಿತದಿಂದ ನಡೆಯುವುದಂ ನೋಡಿ ಸಕಲ ಪ್ರಜೆಗಳೂ ತಮ್ಮ ವಿಹಿತಮಾರ್ಗದಿಂದಲೇ ನಡೆದುಕೊಳ್ಳುವವರಾದುದರಿಂದ ನಿನ್ನ ರಾಜ್ಯದಲ್ಲಿ ಧರ್ಮವು ಅಧಿಕವಾಗಿ ಆತಂಕರಹಿತವಾಗಿರುವುದರಿಂದ ಪುಷ್ಟರಾದ ಪ್ರಜೆಗಳಿಂದ ಬಂದ ಧನಗಳು ನಿನ್ನ ಕೋಶಗೃಹದಲ್ಲಿ ತುಂಬಿದುವುಗಳಾಗಿ ರಾಜ್ಯತಂತ್ರಕ್ಕೆ ಉಪಯೋಗಿಸಲ್ಪಡುತ್ತ ಇಹದಲ್ಲಿ ಹೇಗೆ ನಿನಗೆ ಶ್ರೇಯಸ್ಸನ್ನುಂಟುಮಾಡುವುವೋ ಅದೇ ರೀತಿಗೆ ಪ್ರಜಾಪರಿಪಾಲನೆಯಿಂದುಂಟಾದ ಪುಣ್ಯರಾಶಿಗಳು ಪರಲೋಕದಲ್ಲಿ ನಿನಗೆ ಶ್ರೇಯಸ್ಸನ್ನುಂಟುಮಾಡುವುವು. ಇದಕ್ಕಿಂತಲೂ ಪ್ರಭುವಿಗೆ ಧರ್ಮವೆಂಬುವುದು ಬೇರೆ ಯಾವುದೂ ಇಲ್ಲ. ಆದರಿಂದ ನಿನ್ನ ದೇಹಮಂ ರಕ್ಷಿಸುವಂತೆ ವರ್ಣಾಶ್ರಮ ಮರ್ಯಾದೆಯಂ ರಕ್ಷಿಸುವವನಾಗಿ ಇದಕ್ಕೆ ವ್ಯತ್ಯಾಸವಾಗಿ ನಡೆದು ರಾಜ್ಯಭ್ರಷ್ಟರಾಗಿ ಲೋಕಾಪವಾದಕ್ಕೆ ಪಾತ್ರರಾದವರಂ ವೇಳೆವೇಳೆಗಳಲ್ಲಿ ಸ್ಮರಿಸುತ್ತಿರುವವನಾಗು. ಮತ್ತು ನಿನ್ನ ಸಂಪತ್ತಿಗೆ ಸಾಧನವಾದ ಪ್ರಜಾನಿಕರದ ಯೋಗಕ್ಷೇಮಮಂ ನಿನ್ನ ಬಾಲಕರ ಯೋಗಕ್ಷೇಮದಂತೆ ವಿಚಾರಿಸುತ್ತ ನಿನ್ನಲ್ಲಿ ಅವರಿಗೆ ಭಯ ವಿಶ್ವಾಸಗಳುಂಟಾಗುವಂತೆ ಮಾಡುತ್ತಿರುವವನಾಗು. ವಿಹಿತಮಂ ಮೀರಿ ನಡೆಯುವವರಂ ಯೋಗ್ಯತೆಯರಿತು ದಂಡಿಸುವವನಾಗು. ನಿನ್ನ ದಯಾದಾಕ್ಷಿಣ್ಯಗಳು ಸಾಧುಸಜ್ಜನರಲ್ಲಿಯೇ ಸ್ಥಿರವಾಗಿರಲಿ. ನೀನು ನ್ಯಾಯಪಕ್ಷಪಾತಿಯಾಗಿರು. ಲೋಕಾಪವಾದಕ್ಕೆ ಅಂಜಿ ನಡೆಯುವವನಾಗು. ನೀತಿ ಮಾರ್ಗಮಂ ಬಿಟ್ಟು ನಡೆಯಬೇಡ. ಅಪೂಜ್ಯರಂ ಪೂಜ್ಯರಂತೆ ಕಾಣಬೇಡ. ವಿಹಿತವಾಗಿ ಖಂಡಿತಮಂ ಹೇಳುವವರಂ ಆಪ್ತಬಂಧುಗಳೆಂದು ಎಣಿಸುವವನಾಗು. ಕಾರ್ಯ

ಗಳಂ ವಿಮರ್ಶೆಯಿಂದ ಮಾಡುವವನಾಗು. ಪಾಪ ಭೀರುಗಳಾದ ವಿದ್ವಜ್ಜನಗಳಂ ಸೇವಿಸುವವನಾಗು. ಕಾರ್ಯದಕ್ಷರ ಮುಂದೆ ಹೇಡಿಗಳಂ ಸನ್ಮಾನಗೊಳಿಸದಿರು. ವಂಚಕರ ವಾಕ್ಯಮಂ ಗಣನೆಗೆ ತರಬೇಡ. ಇಂದು ಮಾಡುವುದಂ ನಾಳೆ ಎಂದೆನಬೇಡ. ಮುಂದೆ ಮಾಡತಕ್ಕ ಕಾರ್ಯಕ್ಕೆ ತ್ವರೆಪಡಬೇಡ. ನೀನು ಮಾಡುವುದಂ ಭೃತ್ಯರಿಗೆ ನೇಮಿಸಬೇಡ. ಅನ್ಯರು ಮಾಡುವ ಕೆಲಸಕ್ಕೆ ನೀನು ಮನಂಗೊಡಬೇಡ. ಪಶ್ಚಾತ್ತಾಪಕರವಾದ ಕಾರ್ಯಂಗಳನ್ನಾರಂಭಿಸಲೇ ಬೇಡ. ಆರಂಭಿಸಿದ ಮಹಾಕಾರ್ಯಕ್ಕೆ ಇದೇ ಫಲವೆಂದು ಜನಗಳಿಗೆ ತೋರ್ಪಡಿಸಬೇಡ. ಬೀಜಾವಾಪವಾಗಿ ವೃದ್ಧಿಯಂ ಪಡೆದು ವಿಸ್ತಾರವಾಗುವ ಉದ್ಯಾನ ವೃಕ್ಷಮಂ ರಕ್ಷಿಸುವಂತೆ ಪುಣ್ಯಕೀರ್ತಿದಾಯಕವಾದ ಕಾರ್ಯಮಂ ಆದಿಯಲ್ಲಿ ಸ್ವಲ್ಪವಾಗಿ ಆರಂಭಿಸಿ ಅದು ವಿಸ್ತಾರವಾದ ಬಳಿಕ ತಗ್ಗಿಬಾರದಂತೆ ನಿರ್ವಹಿಸುತ್ತಿರುವವನಾಗು. ಪುರುಷಸ್ವಭಾವಮಂ ವಿಚಾರಿಸದೆ ಕೆಲಸಮಂ ನೇಮಿಸಬೇಡ. ಕರ್ಮಾನುಸಾರವಾಗಿ ಜೀವನಮಂ ಕಲ್ಪಿಸುವವನಾಗು. ಹಿತೈಷಿಗಳೂ ಕಾರ್ಯದಕ್ಷರೂ ಆದವರಿಗೆ ಉತ್ಸಾಹಂ ಹೆಚ್ಚಿ ಬರುವಂತೆ ಮಾಡುತ್ತಿರುವವನಾಗು. ಸಾಧುಗಳಾಗಿರುವ ದೀನಾನಾಥರಿಗೆ ಆಧಾರವಾಗಿರುವವನಾಗು. ಉದಯಿಸಿ ಬರುವ ಪೂರ್ಣಚಂದ್ರನಂತೆ ಸಕಲರಿಗೂ ಸಂತೋಷಕರನಾಗಿರುವವನಾಗು. ವಸಂತಾದಿ ಋತುಗಳಲ್ಲಿ ವಿಜೃಂಭಿಸುವ ಕಿರಣಸಮೂಹದಿಂದ ಭೂಮಿಯ ಜಾಡ್ಯಂಗಳಂ ಪರಿಹರಿಸಿ ಪುನಃ ಅದೇ ಮಯೂಖಂಗಳಂ ವೃಷ್ಟಿಯಂ ಕಲ್ಪಿಸಿ ಜೀವನವನ್ನುಂಟುಮಾಡಿ ಹೆಚ್ಚಿದ ಭೂಮಿಯ ಜಾಡ್ಯಮಂ ತನ್ನ ಕರಗಳಿಂದಲೇ ಆಕರ್ಷಿಸುತ್ತ ಲೋಕಕ್ಕೆ ಕ್ಷೇಮದಾಯಕನಾಗಿರುವ ಸೂರ್ಯನಂತೆ ಧನವಂತರಾದವರ ಕಡೆಯಿಂದ ನ್ಯಾಯಪೂರ್ವಕವಾಗಿ ದ್ರವ್ಯವನ್ನಾರ್ಜಿಸಿ ರಿಕ್ತರಾದ ಪ್ರಜೆಗಳನ್ನದರಿಂದ ಪೋಷಿಸಿ ಮೀರಿ ಹೆಚ್ಚದಂತೆಯೂ ತಗ್ಗದಂತೆಯೂ ಸಮಸ್ಥಿತಿಯಿಂದ ರಾಷ್ಟ್ರವಾಸಿಗಳಂ ಪಾಲಿಸುವವನಾಗು. ದೇಶ ಕಾಲ ಗುಣ ದೋಷಂಗಳನ್ನರಿತು ಕಾರ್ಯವನ್ನಾರಂಭಿಸುವವನಾಗು. ಹೀಗೆ ರಾಜ್ಯಭಾರಮಂ ನಿರ್ವಹಿಸುತ್ತಿದ್ದರೆ ಶತ್ರುಗಳೆಲ್ಲರೂ ನಿನ್ನ ಪಾದಾಕ್ರಾಂತರಾಗಿರುವರು. ಪ್ರಜೆಗಳೆಲ್ಲರೂ ಕ್ಷುದ್ರಕರ್ಮಂಗಳಂ ಬಿಡುವರು. ಹೇಡಿಗಳೂ ಕಾರ್ಯದಕ್ಷರಾಗಿ ಪ್ರಭುವಂ ಸೇವಿಸುವರು. ಇದರಿಂದ ಈ ಕಲಿಯುಗವೂ ಕೃತಯುಗದಂತೆ ಆತಂಕರಹಿತವಾಗಿ ಪುಷ್ಟವಾದ ಪ್ರಜಾಪಶುಗಳಂ ಸಮೃದ್ಧವಾಗಿ ಲೋಕಕ್ಕೆ ಕ್ಷೇಮವುಂಟಾಗುವುದು. ಹೀಗೆ ನ್ಯಾಯನೀತಿಗಳಂ ತಪ್ಪದೆ ಸ್ತ್ರೀ ಮದ್ಯದ್ಯೂತಾದಿಗಳಿಗೆ ವಶನಾಗದೆ ರಾಜ್ಯಮಂ ಪಾಲಿಸುತ್ತಿರುವ ನಿನ್ನ ಚಿತ್ತಸ್ಥೈರ್ಯದಂತೆ ಸಾಮ್ರಾಜ್ಯ

ಲಕ್ಷ್ಮಿಯೂ ಸ್ಥಿರವಾಗಿ ನಿನ್ನನ್ನಗಲದೆ ಇರುವಳು. ಈ ಯರ್ಥವೆಲ್ಲವೂ ದಂಡನೀತಿಜ್ಞರಾದ ಪಂಡಿತರಿಗಭಿಮತವು. ಧರ್ಮಾದಿ ಪುರುಷಾರ್ಥ ಸಾಧನಂಗಳು ಕೈಸೇರುವುವು. ಈ ನೀತಿಯಂ ಪಠಿಸುವವನು ಅಲ್ಪಮೇಧಾವಿಯಾದವನಾದರೂ ಬುದ್ಧಿಸಂಪನ್ನನಹನು. ಇದಂ ಮನನಕ್ಕೆ ತಂದವನು ಲೋಕವ್ಯವಹಾರವನ್ನರಿವನು. ಇದೇ ವ್ಯಾಸಂಗದಲ್ಲಿರುವವನು ರಾಜವಲ್ಲಭನಾಗಿ ಶ್ರೇಯೋವಂತನಾಗುವನು. ಇದು ನೀತಿಶಾಸ್ತ್ರವಾದುದರಿಂದ ನೀನು ಪ್ರೀತಿಪಾತ್ರನೂ ಅಧಿಕಾರಿಯೂ ಅದಕಾರಣ ನಿನಗೆ ತಿಳುಹಿಸಿದೆನು. ಇದೆಲ್ಲವಂ ಮನಸ್ಸಿಗೆ ತರುವವನಾಗು. ಈ ನೀತಿಯು ರಾಜ ಮಂತ್ರಿಗಳಿಂದ ಅವಶ್ಯಕವಾಗಿ ತಿಳಿದು ಆಚರಿಸಲ್ತಕ್ಕುದು ಎಂದು ಹೇಳುತ್ತಿರುವ ಚಾಣಕ್ಯನ ವಾಕ್ಯಮಂ ಕೇಳಿ ಚಂದ್ರಗುಪ್ತನು ಸಂತೋಷಭರಿತನಾಗಿ ಇಂತೆಂದನು—

ಮಹಾನುಭಾವರಾದ ಯಜಮಾನರೇ, ತಾವು ಉಪದೇಶಂಗೆಯ್ದ ನೀತಿ ರಹಸ್ಯದಿಂದ ಅಂಧಕನಿಗೆ ನೇತ್ರಪ್ರಕಾಶಮುಂಟಾದಂತೆ ನನ್ನ ಮನಸ್ಸು ಸಂಶಯ ಧ್ವಾಂತದಿಂದ ಮುಕ್ತವಾಯಿತು. ಆಜ್ಞಾನುಸಾರವಾಗಿ ನಡೆದುಕೊಳ್ಳುವೆನು ಎಂದು ಅವರನ್ನಗಲಲಾರದೆ ಕಂಬನಿಗಳಂ ತುಂಬುತ್ತಿರಲು; ಅದಂ ನೋಡಿ ಚಾಣಕ್ಯನು—

ಅಯ್ಯಾ ರಾಯನೇ, ಯಾಕೆ ವ್ಯಸನಪಡುವೆ? ನಿನಗೆ ಪುತ್ರೋತ್ಸವವಾದುದಂ ಕೇಳಿ ಇನ್ನೊಮ್ಮೆ ನಾವೆಲ್ಲರೂ ಬರುವೆವು. ಇನ್ನು ನಮಗೆ ತಪೋವನ ಗಮನಕ್ಕನುಕೂಲನಾಗು. ಮುಂದೆ ನೀನು ಅಮಾತ್ಯರಾಕ್ಷಸರ ಆಜ್ಞಾನುಸಾರವಾಗಿ ನಡೆದುಕೊಂಡು ಸಾಮ್ರಾಜ್ಯಪದವಿಯನ್ನನುಭವಿಸುತ್ತ ಸುಖದಿಂದಿರು ಎಂದು ಆಶೀರ್ವದಿಸಿ ಹೊರಡಲು ; ಆಗ ಅಮಾತ್ಯರಾಕ್ಷಸನು ಶಿಷ್ಯ ಸಮೇತನಾದ ಇಂದುಶರ್ಮನಿಗೆ ಅಪರಿಮಿತಧನಕನಕಾದಿಗಳನ್ನೂ ಸ್ಫಟಿಕಕಮಂಡುಲು ಮೃದುಕೃಷ್ಣಾಜಿನ ಕೌಪೀನ ಕಾಷಾಯಂಗಳನ್ನೂ ಹೇರಳವಾಗಿ ಕೊಟ್ಟು ಮಣಿಮಯರಥಂಗಳಂ ತರಿಸಿ ನಿಲ್ಲಿಸಲು ; ಅರಸಿನ ಪ್ರಾರ್ಥನೆಯಿಂದ ಚಾಣಕ್ಯ ಮುಖ್ಯರಾದವರೆಲ್ಲರೂ ರಥಂಗಳನ್ನೇರುತ್ತಿರಲು ; ಆಗ ಮಲಯಕೇತು ಮುಖ್ಯರಾದ ಮಂಡಲಾಧಿಪತಿಗಳೆಲ್ಲರೂ ಚಾಣಕ್ಯರಿಗೆ ನಮಸ್ಕರಿಸಿ ಸ್ತೋತ್ರಂಗಳಂ ಮಾಡುತ್ತಿರಲು ; ಅವರೆಲ್ಲರಿಗೂ ಉಪಚಾರೋಕ್ತಿಗಳಿಂದ ಚಂದ್ರಗುಪ್ತನಿಗೆ ನಿಯಮ್ಯರಾಗಿ ನಡೆದುಕೊಳ್ಳುವಂತೆ ಚಾಣಕ್ಯನು ಹೇಳಿ ಕಳುಹಿಸುತ್ತಿರಲು ; ಆಗ ಅಮಾತ್ಯರಾಕ್ಷಸಸಮೇತನಾಗಿ ಚಂದ್ರಗುಪ್ತನು ರಥವನ್ನೇರಿ ಮಂಡಲಾಧಿ

ಪತಿಗಳ ಪರಿವಾರದಿಂ ಕೂಡಿ ಚಾಣಕ್ಯರಂ ಪ್ರಸ್ಥಾನಂಗೆಯ್ಯುತ್ತಿರಲು ; ಪುತ್ರನಾದ ದೇವೇಂದ್ರನ ಅಭ್ಯುದಯಮಂ ನೋಡುವುದಕ್ಕೆ ಬಂದ ತಂದೆಯಾದ ಕಶ್ಯಪಮಹಾಮುನೀಶ್ವರರಂ ಆಶ್ರಮಕ್ಕೆ ಕಳುಹಿಸುತ್ತಿರುವ ಪಾಕಶಾಸನಪರಿವಾರದಂತೆ ಚಂದ್ರಗುಪ್ತನ ಫೌಜು ಕಂಗೊಳಿಸುತ್ತಿರಲು ; ಆಗ ಚೆಲ್ಲುತ್ತಿರುವ ಪುಷ್ಪಧನ ರತ್ನವಸ್ತ್ರಗಳ ವೃಷ್ಟಿಯಿಂದ ರಾಜಮಾರ್ಗಮೆಲ್ಲವೂ ತುಂಬುತ್ತಿರಲು ; ಪ್ರಾಸಾದವಾತಾಯನಸ್ಥ ನಾರೀನಿಕುರುಂಬ ನಯನಾಪಾಂಗೇಕ್ಷಣಂಗಳಿಂ ಮಂಡಲಾಧಿಪತಿಗಳ ಛತ್ರ ಪಙ್ತಿಗಳೆಲ್ಲವೂ ಮಯೂರ ಪಿಂಛಿಕಾನಿರ್ಮಿತಂಗಳಾದಂತೆ ಕಂಗೊಳಿಸುತ್ತಿರಲು ; ಆಗ ಪುರದ್ವಾರಮಂ ದಾಟಿ ನೈಮಿಶಾರಣ್ಯಾ ಮುಖವಾಗಿ ಚಾಣಕ್ಯರ ರಥವು ಮುಂದೆ ನಡೆಯುತ್ತಿರಲು ; ಚಂದ್ರಗುಪ್ತನು ತನ್ನ ಸಂಗಡ ಬರುತ್ತಿರುವ ಮಂಡಲಾಧಿಪತಿಗಳೆಲ್ಲರಿಗೂ ಹಿಂದೆ ನಿಲ್ಲುವಂತೆ ಆಜ್ಞಾಪಿಸಿ ತಾನು ರಾಕ್ಷಸ ಸಮೇತನಾಗಿ ಚಾಣಕ್ಯರ ಸಂಗಡಲೇ ನೈಮಿಶಾರಣ್ಯಮಂ ಹೊಂದಿ ಇಂದುಶರ್ಮನ ಮಂದಿರದಲ್ಲಿ ನಾಲ್ಕಾರು ದಿನಗಳ ವರೆಗೂ ಇದ್ದು ಆತಂ ಮಾಡಿದ ಆತಿಥ್ಯಮಂ ಸ್ವೀಕರಿಸಿ ಚಾಣಕ್ಯರಂ ಆ ಯಾಶ್ರಮದಲ್ಲಿ ಬಿಟ್ಟು ಅವರಿಗೆ ಸಾಷ್ಟಾಂಗಪ್ರಣಾಮವನ್ನಾಚರಿಸಿ ಅವರ ಆಶೀರ್ವಾದಮಂ ಶಿರಸ್ಸಿನೊಳಾಂತು ಅಮಾತ್ಯ ಸಮೇತನಾಗಿ ಹಿಂದಿರಿಗಿ ಪಾಟಲೀಪುರಕ್ಕೆ ಬಂದು ಆಸ್ಥಾನದಲ್ಲಿ ಕುಳಿತು ಪೃಥ್ವೀಸಾಮ್ರಾಜ್ಯಂಗೆಯ್ಯುತ್ತಿರುವಲ್ಲಿ ಅಮಾತ್ಯರಾಕ್ಷಸನು ಚಂದ್ರಗುಪ್ತ ಮಹಾರಾಜನಂ ನೋಡಿ—

ಅಯ್ಯಾ ಕುಮಾರನೇ, ಆರ್ಯ ಚಾಣಕ್ಯಂ ಮಾಡಿದ ಉಪಕಾರಕ್ಕೆ ನಾವು ಯಾವ ಪ್ರತ್ಯುಪಕಾರಮಂ ಮಾಡಬಲ್ಲೆವು? ಅವರ ಸ್ಮರಣೆಗೋಸ್ಕರ ನಿನ್ನ ಆಜ್ಞೆಯಾದಲ್ಲಿ ಅವರು ವಿಶ್ರಮಿಸಿಕೊಂಡಿದ್ದ ಪರ್ಣಶಾಲಾಸ್ಥಳದಲ್ಲಿ ವಿಷ್ಣ್ವಾಲಯಮಂ ಕಟ್ಟಿಸಿ ಅಲ್ಲಿ ಶ್ರೀ ಲಕ್ಷ್ಮೀನೃಸಿಂಹ ದೇವರಂ ಪ್ರತಿಷ್ಠೆ ಮಾಡಿಸಿ ಆ ದೇವರ ಸನ್ನಿಧಿಯಲ್ಲಿ ನಮ್ಮ ಆರ್ಯವಿಷ್ಣುಗುಪ್ತರ ವಿಗ್ರಹಮಂ ಪ್ರತಿಷ್ಠಿಸಿ ಅತಿ ಸಂಭ್ರಮದಿಂದ ನಿತ್ಯೋತ್ಸವ ಪಕ್ಷೋತ್ಸವ ಮಾಸೋತ್ಸವ ಸಂವತ್ಸರೋತ್ಸವಗಳಿಗೆ ಸರ್ವಮಾನ್ಯಂಗಳಂ ಮಾಡಿ ಅವರು ಕುಳಿತಿದ್ದ ಕಡೆಯಲ್ಲೆಲ್ಲವೂ ಅನ್ನಸತ್ರಂಗಳಂ ಕಟ್ಟಿಸಿ ಅವರು ಸಂಚರಿಸಿದ ಪ್ರದೇಶಗಳಲ್ಲಿ ಅಗ್ರಹಾರ, ತಟಾಕ ಕೂಪಾರಾಮಂಗಳಂ ನಿರ್ಮಿಸಿ ನೈಮಿಶಾರಣ್ಯಮಾರ್ಗಂಗಳಂ ಅರವಟಿಗೆ ಸಾಲು ತೋಪು ಸರೋವರ ಪುಷ್ಪವಾಟಿ ಇವುಗಳಿಂದಲಂಕೃತಗಳಂ ಗೆಯ್ಯುವೆನು ಎನಲು;

ಸ್ವಾಮೀ ಯಜಮಾನರೇ, ನನ್ನ ಪಿತಾಮಹರಾದ ಸರ್ವಾರ್ಥಸಿದ್ಧಿರಾಜರೂ ನನ್ನ ತಂದೆಯಾದ ಮೌರ್ಯನೂ ನನ್ನ ಆಚಾರ್ಯರಾದ ಚಾಣಕ್ಯರೂ

ಇವರೆಲ್ಲರ ಸ್ಥಾನಕ್ಕೆ ತಾವೇ ಪ್ರತಿನಿಧಿಗಳಾಗಿರುವುದರಿಂದ ಈ ದಿನ ಮೊದಲ್ಗೊಂಡು ಯಾವ ಕೆಲಸಗಳಂ ಹೇಗೆ ನಡಸಬೇಕೋ ನನ್ನಂ ಕೇಳದೆ ತಾವೇ ಆ ರೀತಿಯಲ್ಲಿ ನಡಸಬೇಕು ಎಂದು ಹೇಳಲು ; ಅಮಾತ್ಯರಾಕ್ಷಸನು ಆ ರೀತಿಯಾಗಿ ನಡೆಯುವಂತೆ ಅಧಿಕಾರಸ್ಥರಿಗೆ ನೇಮಿಸಿ ಅತಿ ಸಂಭ್ರಮದಿಂದ ಚಂದ್ರಗುಪ್ತ ಸಮೇತನಾಗಿ ಮಲಯಕೇತುವಿನ ಬೀಡಾರಕ್ಕೆ ಬಂದು ಅನರ್ಘ್ಯ ವಸ್ತ್ರಾಭರಣಂಗಳಿಂ ಆ ರಾಜಪುತ್ರನನ್ನಲಂಕರಿಸಿ ಉಭಯರಾಜ್ಯವೂ ತಮ್ಮದಾಗಿಯೇ ಇದೆ. ತಾವು ಇಲ್ಲಿಗೆ ದಯಮಾಡಿಸಿದುದರಿಂದ ತಮ್ಮ ಪಟ್ಟಣದಲ್ಲಿ ಸರ್ವರೂ ವ್ಯಸನಪಡುವರು. ಜಾಗ್ರತೆಯಿಂದ ದಯಮಾಡಬಹುದು ಎಂದು ಹೇಳಿ ಭದ್ರಭಟಾದಿ ಸೇನೆಗಳಂ ಸಂಗಡ ಕೊಟ್ಟು ಕಳುಹಿಸಿ ಸಕಲ ರಾಜ್ಯತಂತ್ರಮಂ ಮೊದಲಿಗಿಂತ ಅತಿಶಯವಾಗಿ ವಿಚಾರಿಸುತ್ತ ಇರುವುದರಿಂದ ಆ ಮಹಾರಾಜನು ಸಂತೋಷದಿಂ ಸಾಮ್ರಾಜ್ಯಪದವಿಯನ್ನನುಭವಿಸುತ್ತಿದ್ದನೆಂಬಲ್ಲಿಗೆ ಶ್ರೀಮದ್ರಾಜಾಧಿರಾಜಮಾರ್ತಾಂಡನಪ್ರತಿಮವೀರ ನರಪತಿಬಿರುದೆಂತೆಂಬರಗಂಡ ಲೋಕೈಕವೀರ ಯದುಕುಲಪಯಃಪಾರಾವಾರಕಳಾನಿಧಿ ಶಂಖ ಚಕ್ರಾದ್ಯನೇಕ ಬಿರುದಾಂಕಿತ ಶ್ರೀ ಚಾಮರಾಜ ಮಹೀಪಾಲ ಧರ್ಮಪತ್ನಿ ಕೆಂಪನಂಜಮ್ಮಾಂಬಾಗರ್ಭಸುಧಾಂಬುಧಿರಾಕಾಸುಧಾಕರಾಯಮಾನ ಶ್ರೀ ಚಾಮುಂಡಿಕಾಂಬಾ ವರಪ್ರಸಾದೋದ್ಭವರಾದ ಅತ್ರೇಯಗೋತ್ರಸಂಭೂತ ಆಶ್ವಲಾಯನ ಸೂತ್ರಾನುವರ್ತಿಗಳಾದ ಶ್ರೀಮನ್ಮಹೀಶೂರ ಪುರವರಾಧೀಶ ಶ್ರೀಮತ್ಕೃಷ್ಣರಾಜೇಂದ್ರಾಶ್ರಿತ ಹೊಯಿಸಳಿಗ ಕುಲಸಂಜಾತ ಶ್ರೀನಾರಾಯಣ ಶರ್ಮವಿರಚಿತಮಪ್ಪ ಮುದ್ರಾಮಂಜೂಷಮೆಂಬ ಚಂಪೂಗ್ರಂಥದಲ್ಲಿ ಚಂದ್ರಗುಪ್ತ ರಾಜ್ಯಾಭಿಷೇಕ ಕಥನವೆಂಬ ಅಷ್ಟಾದಶಾಶಯವು ಸಮಾಪ್ತವಾದುದು.

ಶ್ಲೋ || ಚಿರಂಜೀವತುರಾಜೇಂದ್ರ | ತನೂಜಃಕೃಷ್ಣಭೂಮಿಪಃ ||
ಯತ್ಕಟಾಕ್ಷಾಂಕುರಸ್ತೋಮಃ | ಕವಿಕಲ್ಪದ್ರುಮಾಯತೇ ||

ಆರ್ಯ || ಶಾಲಿವಾಹನ ಶರತ್ಸು ಗತಾಸು ಬಾಣಯುಗ ಮುನೀಂದು ಸಂಖ್ಯಾಸು |
ನಾರಾಯಣೇನರಚಿತಂ ಮುದ್ರಾಮಂಜೂಷಾಹ್ವಯಂ ಕಾವ್ಯಂ ||
ಪರಗುಣಶೀಕರಮುದಧಿಂ ಕೃತ್ವಾ ತತ್ರೈವ ಖೇಲದ್ಭ್ಯಃ |
ಅಜ್ಞಾತಮತ್ಸರೇಭ್ಯಃ ಸದ್ಭ್ಯಸ್ತೇಭ್ಯೋನಮೋಸ್ತು ವಿದ್ವದ್ಭ್ಯಃ ||

ಮುದ್ರಾಮಂಜೂಷನಾಮಕ ಗ್ರಂಥವು ಸಂಪೂರ್ಣವಾದುದು.

---